C-No - 638

# ಶ್ರೀ ಶಿವಬಸವ ಪ್ರಕಾಶ

★

ಲಿಂ. ಶ್ರೀ. ನಿ. ಪ್ರ. ಶಿವಬಸವಮಹಾಸ್ವಾಮಿಗಳು
ಹುಕ್ಕೇರಿಮಠ, ಹಾವೇರಿ
ಅವರ
ಸ್ಮಾರಕ ಗ್ರಂಥ

033,6x1
K2U

★

೧೯೬೨

CC-0. Jangamwadi Math Collection. Digitized by eGangotri

ಶ್ರೀ ಬಿದರಿ ಕುಮಾರೇಶ್ವರ ಗ್ರಂಥಮಾಲೆ, ೭ನೆಯ ಪುಷ್ಪ.

# ಶ್ರೀ ಶಿವಬಸವ ಪ್ರಕಾಶ

ಪ್ರಕಾಶಕರು :

ಶ್ರೀ. ನಿ. ಪ್ರ. ಕುಮಾರಸ್ವಾಮಿಗಳು, ಕಲ್ಮಠ, ಸವದತ್ತಿ.

ಹಾವೇರಿ ಶ್ರೀ ಶಿವಬಸವೇಶ್ವರ ಸ್ಮಾರಕಗ್ರಂಥ ಪ್ರಕಾಶನ ಸಮಿತಿ.

ಸಂಪಾದಕರು :

ಪ್ರೊ. ಜಿ. ಎಂ. ಉಮಾಪತಿ ಶಾಸ್ತ್ರಿ, ಎಂ.ಎ.

೧೯೬೨

ಬೆಲೆ : ಐದು ರೂಪಾಯಿಗಳು

CC-0. Jangamwadi Math Collection. Digitized by eGangotri

ಪ್ರಕಾಶಕರು :

ಶ್ರೀ. ನಿ. ಪ್ರ. ಕುಮಾರಸ್ವಾಮಿಗಳು, ಕಲ್ಮಠ, ಸವದತ್ತಿ.

ಹಾವೇರಿ ಶ್ರೀ ಶಿವಬಸವೇಶ್ವರ ಸ್ಮಾರಕಗ್ರಂಥ ಪ್ರಕಾಶನ ಸಮಿತಿ.

033,6x1
K2U

[ ಸರ್ವಾಧಿಕಾರ ಸುರಕ್ಷಿತವಾಗಿದೆ. ]

SRI JAGADGURU VISHWARADHYA
JNANA SIMHASAN JNANAMANDIR
LIBRARY
Jangamawadi Math, Varanasi
Acc. No. 638

ಮುದ್ರಕರು :

ಶ್ರೀ. ಬಿ. ಎನ್. ಜಂಗಮಶೆಟ್ಟಿ,

ಮ್ಯಾನೇಜರ,

ಶ್ರೀ ಬಸವೇಶ್ವರ ವಿದ್ಯಾವರ್ಧಕ ಸಂಘದ

ಶ್ರೀ ಬಸವಲಿಂಗ ಮುದ್ರಣಾಲಯ, ಬಾಗಲಕೋಟೆ.

CC-0. Jangamwadi Math Collection. Digitized by eGangotri

11.2.7

# ಪರವಿಡಿ

## ಪ್ರಕಾಶ : ಒಂದು

### (ಜೀವನಚರಿತ ಪ್ರಕಾಶ)



CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

## ಪ್ರಕಾಶ : ಎರಡು

### (ವಾಙ್ಮಯ ಪ್ರಕಾಶ)



---

## ಭಾವಚಿತ್ರಗಳ ಸೂಚಿ



CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

# ಮುನ್ನುಡಿ

ಕ್ವಚಿತ್ ಕಂಥಾಧಾರೀ ಕ್ವಚಿದಪಿ ಚ ದಿವ್ಯಾಂಬರಧರಃ
ಕ್ವಚಿದ್ ಭೂಮೀಶಯ್ಯಾ ಕ್ವಚಿದಪಿ ಚ ಪರ್ಯಂಕಶಯನಃ ।
ಕ್ವಚಿದ್ ಭಿಕ್ಷಾವೃತ್ತಿಃ ಕ್ವಚಿದಪಿ ಚ ಮೃಷ್ಟಾಶನರುಚಿಃ
ಮಹಾತ್ಮಾ ಯೋಗಜ್ಞೋ ನ ಗಣಯತಿ ನ ದುಃಖಂ ನ ಚ ಸುಖಂ ॥

ಭೂಃ ಪರ್ಯಂಕೋ ನಿಜಭುಜಲತಾಗೇಂದುಕಃ ಖಂ ವಿತಾನಂ
ದೀಪಶ್ಚಂದ್ರೋ ವಿರತಿವನಿತಾಲಬ್ಧಯೋಗಪ್ರಮೋದಃ ।
ದಿಕ್‌ಕನ್ಯಾನಾಂ ವ್ಯಜನಪವನೈರ್ವೀಜ್ಯಮಾನೋಽನುಕೂಲೈಃ
ಭಿಕ್ಷುಶ್ಶೇತೇ ನೃಪ ಇವ ಸದಾ ವೀತರಾಗೋ ಜಿತಾತ್ಮಾ ॥

ದೃಷ್ಟ್ವಾ ವೇದ್ಯಂ ಪರಮಥ ಪದಂ ಸ್ವಾತ್ಮಬೋಧಸ್ವರೂಪಂ
ಬುಧ್ವಾತ್ಮಾನಂ ಸಕಲವಪುಷಾಮೇಕಮಂತರ್ಬಹಿಸ್ಥಮ್ ।
ಭೂತ್ವಾ ನಿತ್ಯಂ ಸದುದಿತತಯಾ ಸ್ವಪ್ರಕಾಶಸ್ವರೂಪಂ
ನಿಸ್ತ್ರೈಗುಣ್ಯೇ ಪಥಿ ವಿಚರತಃ ಕೋ ವಿಧಿಃ ಕೋ ನಿಷೇಧಃ ॥*

ಭಾರತವು ಮಹಾಪುರುಷರ, ತಪಸ್ವಿಗಳ ಆಗರವಾಗಿದೆ. ದೈವೀಶಕ್ತಿಯನ್ನು ಅಳವಡಿಸಿಕೊಂಡು ಮಾನವರ ಕಲ್ಯಾಣಕ್ಕಾಗಿ ಮಹಾಪುರುಷರು ಈ ಪುಣ್ಯ ಭೂಮಿಯಲ್ಲಿ ಮೇಲಿಂದ ಮೇಲೆ ಅವತರಿಸುವರೆಂದು ಭಾರತೀಯರಲ್ಲಿ ಅತಿ ಪ್ರಾಚೀನ ಕಾಲದಿಂದ ದೃಢವಾದ ನಂಬುಗೆಯು ನೆಲಸಿದೆ. ಅದರಂತೆ ನಮ್ಮ ಪವಿತ್ರ ಭೂಮಿಯಾದ ಕನ್ನಡ ನಾಡಿನಲ್ಲಿಯೂ ಅನೇಕ ಮಹಾತ್ಮರು ಜನಿಸಿ ನಮ್ಮ ಪುಣ್ಯಮಯವಾದ ಈ ಭೂಮಿಯನ್ನು ಪುಣ್ಯತಮವನ್ನಾಗಿ ಮಾಡಿರುವರು. ಅವರು ತಮ್ಮ ಸಾತ್ವಿಕ ಆಚರಣೆಯಿಂದ ಲೋಕಕ್ಕೆ ಮಾರ್ಗದರ್ಶಕರಾಗಿ ಮಾನವ ಜೀವನದ ಗುರಿಯತ್ತ ಜನತೆಯನ್ನು ಒಯ್ದ ಉದಾಹರಣೆಗಳು ನಮ್ಮ ನಾಡಿನಲ್ಲಿ ವಿಪುಲವಾಗಿವೆ. ಅಂತಹ ಮಹಾನುಭಾವರ ಪಂಕ್ತಿಯಲ್ಲಿ ಹಾವೇರಿ, ಹುಕ್ಕೇರಿ ಮಠಾಧಿಪತಿಗಳಾಗಿದ್ದ ಪೂಜ್ಯ ಲಿಂಗೈಕ್ಯ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಶಿವಬಸವ ಮಹಾಸ್ವಾಮಿಗಳವರು ಒಬ್ಬರು. ಅವರ ಬಗೆಗೆ ಹೇಳಬೇಕಾದರೆ ಷಟ್‌ಸ್ಥಲ ಸಾರ್ವಭೌಮ ಚೆನ್ನವೃಷಭೇಂದ್ರ ಶಿವಯೋಗಿಗಳು ಸ್ವಲೀಲಾನಂದ ಶಿವಯೋಗಿಯ ಸ್ಥಿತಿಯನ್ನು ಬಣ್ಣಿಸುವಾಗ ಹೇಳಿದ ಮಾತುಗಳು ಸ್ಮರಣೆಗೆ ಬರುವವು. ಅವರು ಹೇಳಿರುವುದು :—

---

* सुभाषितरत्नभाण्डागारम् , प्रकरण– ६, पृ. ३६९, श्लोक ३९, ६०, ७१. निर्णयसागर मुद्रणालय, मुम्बई, प्रकाशन, सन् १९३५;

CC-0. Jangamwadi Math Collection. Digitized by eGangotri

" ವರಪರ ಬ್ರಹ್ಮದೊಳು ಬೆರೆದಾ
ವರಿಸಿ ಚಿದ್ಘನ ಲಿಂಗವಾ ನೆಂ
ಬುರುತರೋತ್ಕಟ ಭಾವಚಿದಹಂಕಾರದರಿವರಿತು ।
ನಿರುತ ನಿಜಮಂ ಮರೆಯದಂತ
ಲ್ಲಿರುತೆ ಬಾಹ್ಯಾಭ್ಯಂತರಂಗ
ಸ್ಫುರದಖಂಡಿತ ಲಿಂಗಮಾಗಿ ವಿರಾಜಿಸುತ್ತಿಹನು ॥§

ವೀರಶೈವ ಧರ್ಮಗುರುಗಳಿಗೆ ಸಾಮಾನ್ಯವಾಗಿ ಶಿವಯೋಗಿಗಳೆಂದು ಕರೆಯುವ ವಾಡಿಕೆಯಿದೆ. ಅವರು ಶಿವಯೋಗದಲ್ಲಿ ಬಲ್ಲಿದರಿರುವದರಿಂದಲೇ ಅವರಿಗೆ ಈ ಗೌರವ ಪದವಿ ಪ್ರಾಪ್ತವಾಗಿದೆ. ಅತಿ ಪ್ರಾಚೀನ ಕಾಲದಿಂದ ಅಂದರೆ ಸುಮಾರು ಎರಡು ಸಾವಿರ ವರುಷಗಳಿಂದಲೂ ಶೈವಾಚಾರ್ಯರು ಯೋಗವಿದ್ಯೆಯಲ್ಲಿ ನಿಷ್ಣಾತರಾಗಿ ಸಿದ್ಧಿಯನ್ನು ಪಡೆದು ಸಿದ್ಧಪುರುಷರಾಗಿ ಪರಿಗಣಿಸಲ್ಪಟ್ಟಿದ್ದಾರೆಂದು ಸಾವಿರಾರು ಶಿಲಾ ಶಾಸನಗಳಿಂದ ಧ್ವನಿತವಾಗುತ್ತದೆ. ಶೈವಧರ್ಮದ ವಿಶಿಷ್ಟ ಸ್ವರೂಪ, ಅದು ಯೋಗಕ್ಕೆ ಕೊಟ್ಟ ಮಹತ್ವ. ಈ ಪರಂಪರೆಯನ್ನು ವೀರಶೈವಾಚಾರ್ಯರು ಉಳಿಸಿಕೊಂಡು ಬಂದಿರುವರು. ಅವರು ಅನುಸರಿಸಿದ ಯೋಗಮಾರ್ಗವು ಶಿವಯೋಗವೆಂದು ಹೆಸರಾಗಿದೆ. ಪಾತಂಜಲ ಮಹರ್ಷಿಗಳು ಯೋಗವನ್ನು ಮಂತ್ರ-ಲಯ-ಹಠ-ರಾಜ ಯೋಗವೆಂದು ನಾಲ್ಕು ತೆರನಾಗಿ ವಿಭಾಗಿಸಿ ರಾಜಯೋಗವು ಎಲ್ಲಕ್ಕೂ ಶ್ರೇಷ್ಠವಾದುದೆಂದು ಸಾರಿರುವರು. ವೀರಶೈವಾಚಾರ್ಯರಾದ ಚೆನ್ನಸದಾಶಿವಯೋಗೀಂದ್ರರು ರಾಜಯೋಗಕ್ಕೂ ಶಿವಯೋಗವು ಮೇಲ್ತರಗತಿಯದೆಂದು ನಿರ್ಣಯಿಸಿರುವರು :

ನ ಭೇದಶ್ಶಿವಯೋಗಸ್ಯ ರಾಜಯೋಗಸ್ಯ ತತ್ವತಃ ।
ಶಿವಾರ್ಥಿನಾಂ ತಥಾಪ್ಯೇವಮುಕ್ತೋ ಬುದ್ಧೇಃ ಪ್ರವೃದ್ಧಯೆ ॥
ಪ್ರತಿಪಾದ್ಯಸ್ತಯೋರ್ಭೇದಸ್ತಥಾ ಶಿವರತಾತ್ಮನಾಂ ।
ತಸ್ಮಾನ್ಮನೀಷಿಭಿರ್ಗ್ರಾಹ್ಯಶ್ಶಿವಯೋಗಸ್ತು ಕೇವಲಃ ॥
ಜ್ಞಾನಂ ಶಿವಮಯಂ ಭಕ್ತಿಶ್ಶೈವೀಧ್ಯಾನಂ ಶಿವಾತ್ಮಕಂ ।
ಶೈವವ್ರತಂ ಶಿವಾರ್ಚೇತಿ ಶಿವಯೋಗೋ ಹಿ ಪಂಚಧಾ ॥*

ನಿಜಗುಣ ಶಿವಯೋಗಿಗಳು ಕೂಡ ಪಾರಮಾರ್ಥ ಪ್ರಕಾಶಿಕೆಯಲ್ಲಿ ಈ ವಿಷಯವನು ಮಾರ್ಮಿಕವಾಗಿ ವಿವರಿಸಿರುವರು. ಅದು ಹೀಗಿದೆ :—

---

§ ಕ್ಷೇತ್ರಜ್ಞ ಸುಮನೋವಾದ; ೨೧ನೆಯ ಸಂಧಿ; ಪದ್ಯ ೨; ಹುಬ್ಬಳ್ಳಿಯ ಶ್ರೀ ಜ. ಮೂರುಸಾವಿರಮಠ ಗ್ರಂಥಮಾಲೆ—೧೮;

* ಶಿವಯೋಗ ಪ್ರದೀಪಿಕೆ, ಪಟಲ : ೧, ಶ್ಲೋಕಗಳು : ೧೩—೧೫;

ಸಂ. ಎನ್. ಆರ್. ಕರಿಬಸವ ಶಾಸ್ತ್ರಿಗಳು, ೧೯೦೩

CC-0. Jangamwadi Math Collection. Digitized by eGangotri

" ಮತ್ತಮಾ ರಾಜಯೋಗದಿಂದುತ್ತರಮಾದ ಶಿವಯೋಗಮುಂಟಾದೊಡಾ ಶಿವಯೋಗಕ್ಕು ರಾಜಯೋಗಕ್ಕು ಪರಮಾರ್ಥದಿಂ ಬೇಧವಿಲ್ಲದಂತಾದೊಡಂ ನಿಜ ಮೋಕ್ಷಮಂ ಬಯಸುವಧಿಕಾರಿಗಳ ಬುದ್ಧಿ ಸೌಕರ್ಯಕ್ಕೋಸುಗಮುಪಚಾರ ಭೇದ ಮುಂಟದೆಂತೆನೆ-ಪಾತಂಜಲಾದಿ ಯೋಗಶಾಸ್ತ್ರಂಗಳಲ್ಲಿ ಕಾರ್ಯರೂಪವಾದ ಗುಣತ್ರಯ ಸಾಕ್ಷಾತ್ಕಾರವೇ ತಾರಕತ್ರಯವೆಂದು, ಕಾರಣಮಾದ ಪ್ರಕೃತಿಯಲ್ಲಿ ಮನೋಲಯವೇ ಅಮನಸ್ಕವೆಂದು ಪ್ರಕೃತಿ ತತ್ತ್ವೋರ್ಧ್ವದ ಪುರುಷ ಸಾಕ್ಷಾತ್ಕಾರವೇ ರಾಜಯೋಗ ವೆಂದು ಪೇಳುವುದರಿಂದ ರಾಜಯೋಗಂ ಶಿವಯೋಗವೆನಿಸಲರಿಯದು. ಮತ್ತಾವುದು ಶಿವಯೋಗಮೆನೆ – ಶಿವಶಕ್ತಿ ಸಂಪುಟಾಧಾರಮಾದ ಮಹಾಕುಂಡಲಿಜನಿತಂಗಳಾದ ತಾರಕತ್ರಯ ಸಾಕ್ಷಾತ್ಕಾರ ದ್ವಾರದಿಂದಾ ಶಕ್ತಿಯಲ್ಲಿ ವೃತ್ತಿಜ್ಞಾನವಳಿದು ಸರ್ವತೋ ಮುಖವಾಗಿ ನಿಜತತ್ವಾಭಿವ್ಯಕ್ತಿಯೇ ಶಿವಯೋಗವೆನಿಸುವುದಾಗಿ ವಿವೇಕಿಗಳಿಂ ಸಕಲ ತತ್ತ್ವತಾತ್ತ್ವಿಕ ವಿಲಕ್ಷತೆಯಿಂ ಕೈವಲ್ಯ ಸ್ವರೂಪಮಾದ ಶಿವಯೋಗವೇ ಸ್ವೀಕೃತ ಮಕ್ಕುಂ "†

ಈ ಶಿವಯೋಗಕ್ಕೆ ಐದು ಸಾಧನಗಳುಂಟು. ಅವು (೧) ಯೋಗ ಸಂಜ್ಞೆಯುಳ್ಳ ವಾದ ನುತಾಂತರ ಜ್ಞಾನನಿಷೇಧದಿಂ ಶಿವವಿಷಯಮಾದ ಜ್ಞಾನವು. (೨) ಅನ್ಯ ದೇವತಾನಿರಸನದಿಂ ಶಿವಸಂಬಂಧಮಾದ ಭಕ್ತಿಯು. (೩) ಬಿಂದುನಾದಾದಿ ರೂಪದಿಂ ಶಿವಾತ್ಮಕವಾದ ಧ್ಯಾನಂ. (೪) ಶಿವತೇಜೋಮಯವಾದ ಭಸಿತ ಧಾರಣ ರೂಪವ್ರತಂ. (೫) ಶಿವಾರ್ಚನಂ. ಶಿವಾರ್ಚನೆಯು ಉಳಿದ ನಾಲ್ಕನ್ನು ಗರ್ಭೀ ಕರಿಸಿಕೊಂಡಿರುವದರಿಂದ ಮುಖ್ಯವೆನಿಪ ಶಿವಯೋಗಮಾಗಿರುವುದು. ಶಿವಾರ್ಚನೆ ಇಲ್ಲದೆ ಮುಕ್ತಿ ಘಟಿಸದು. ಶಿವಾರ್ಚನಮಿಲ್ಲದಾತನೆ ಶಕ್ತಿಪಾತಚಿಹ್ನವಿಲ್ಲವಾಗಿ ಆಣವಾಂಧನಪ್ಪುದರಿಂ ಪಶುವೆನಿಸಿಕೊಂಬಾತನು ಈ ಗರ್ಭ, ಜರಾ, ವ್ಯಾಧಿ, ಮರಣ, ನಿರಯಾದಿ ರೂಪ ಸಂಸಾರ ಚಕ್ರದಲ್ಲಿ ತಿರುಗುತ್ತಿರ್ಪನು. ಶಿವಾರ್ಚನೆಯಿಂದ ಅರಿವುಂಟಾಗಿ ಶಿವತತ್ವ ಸ್ವರೂಪವನ್ನು ಹೊಂದಿ ಶ್ರೀಗುರು ಪ್ರಸಾದದಿಂದ ಮಲತ್ರಯ ಗಳನ್ನು ಜಯಿಸಿ ತನ್ನ ಹೃತ್‌ಕಮಲ ಕರ್ಣಿಕಾ ಮಧ್ಯದಲ್ಲಿ ಶಿವನನ್ನು ಧ್ಯಾನಿಸುವುದು ಶಿವಾರ್ಚನೆ ಅಥವಾ ಶಿವಪೂಜೆ. ಇದು ಶಿವಯೋಗದ ಸಾಧನೆ. ಇದಕ್ಕೆ ಇಷ್ಟಲಿಂಗ ಪೂಜೆ ಅಥವಾ ಲಿಂಗಾನುಸಂಧಾನವೆಂದು ಹೆಸರು. ಆದುದರಿಂದ ವೀರಶೈವರು ಶಿವ ಯೋಗ ಸಾಧಕರು.

" ಬಳಿಕೀ ಪೂರ್ವೋಕ್ತ ಪ್ರಕಾರದಿಂ ಸರ್ವಾತ್ಮರಲ್ಲಿ ವ್ಯಾಪಿಸಿರ್ದ ಹಂಸವರ್ಣ ದ್ವಯಸ್ವರೂಪನಾದ ಪರಿಪೂರ್ಣ ದಿವ್ಯನಾದಾತ್ಮಕನಾದ ನಿತ್ಯಾಧಿಷ್ಠಾನಮಾದ

---

†ಪಾರಮಾರ್ಥ ಪ್ರಕಾಶಿಕೆ–ಪ್ರಥಮ ಪರಿಚ್ಛೇದ, ಪುಟ ೧೩, ಶಿವಯೋಗಮಂದಿರದ ಸುಕುಮಾರ ಗ್ರಂಥಮಾಲೆ, ೪ ನೆಯ ಪುಷ್ಪ;

CC-0. Jangamwadi Math Collection. Digitized by eGangotri

ಕುಂಡಲಿನಿ ಶಕ್ತ್ಯಾಕಾರನಾದಾ ಮೂಲ ಪ್ರಕೃತಿಗುತ್ತರನಾದ ನಿತ್ಯನಿರ್ಮಲನಾದ ಪರಶಿವನನು ಸ್ನಾನವಿಧಿಯಲ್ಲಿ ಕೇವಲ ಕುಂಭಕದಿಂ ಪರಿಶುದ್ಧಮಾದ ಪ್ರಾಣವೆಂಬುದಕದಿಂ ಪೂಜಿಸಲ್ವೇಳ್ಕುಂ.§" ಎಂದು ಶಿವಪೂಜೆಯನ್ನು ವಿವರಿಸಿರುವರು. ಇದೇ ಪ್ರಕಾರ ಶಿವಪೂಜೆಯಲ್ಲಿ ಯೋಗದ ಅಷ್ಟಾಂಗಗಳಾದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ ಸಮಾಧಿಗಳು ಅಡಕವಾಗಿವೆ. ಹಠಯೋಗರೂಪಮಪ್ಪ ಅಷ್ಟಾಂಗಗಳನ್ನು ನಿರಾಲಸ್ಯದಿಂದ ಎಡೆಬಿಡದೆ ಮಾಡಿದಾತಂಗೆ "ಮೊದಲನೆಯ ವರುಷದಲ್ಲಿ ನಿರೋಗಿಯಾಗಿ ಸಕಲಜನ ಪ್ರೀತನಾಗುವನು. ಎರಡನೆಯ ವರುಷದಲ್ಲಿ ಸಂಸ್ಕೃತ ಭಾಷೆಯಿಂ ಕವಿತ್ವಮಂ ಮಾಡುವನು. ಮೂರನೆಯ ವರುಷದಲ್ಲಿ ಸರ್ಪಾದಿ ದುಷ್ಟಪ್ರಾಣಿಗಳಿಂ ಬಾಧಿಸಿಕೊಳ್ಳುತ್ತಿರನು. ನಾಲ್ಕನೆಯ ವರುಷದಲ್ಲಿ ಹಸಿವು, ತೃಷೆ, ನಿದ್ರೆ, ಶೋಕ ಮೋಹಾದಿಗಳಿಂ ಬಿಡಲ್ಪಡುವನು. ಐದನೆಯ ವರುಷದಲ್ಲಿ ದೂರಶ್ರವಣ, ವಾಕ್ಸಿದ್ಧಿ, ಪರಕಾಯಪ್ರವೇಶಾದಿಕವುಳ್ಳಾತನಹನು. ಆರನೆಯ ವರುಷದಲ್ಲಿ ವಜ್ರಾದ್ಯಾಯುಧಂಗಳಿಂ ಭೇಧಿಸಲ್ಪಡದಾತನಾಗಿ ಶೀಘ್ರಗಾಮಿಯಾಗಿ ದೂರದರ್ಶನವುಳ್ಳಾತನಹನು. ಏಳನೆಯ ವರುಷದಲ್ಲಿ ಖೇಚರಗಾಮಿಯಹನು. ಎಂಟನೆಯ ವರುಷದಲ್ಲಿ ಅಣಿಮಾದ್ಯಷ್ಟೈಶ್ವರ್ಯ ಸಂಪನ್ನನಹನು. ಒಂಬತ್ತನೆಯ ವರುಷದಲ್ಲಿ ಸ್ವೇಚ್ಛಾಗಮನಿಯಾಗಿ ವಜ್ರಶರೀರಿಯಹನು. ಹತ್ತನೆಯ ವರುಷದಲ್ಲಿ ಮನೋವೇಗಿಯಾಗಿ ಇಚ್ಛಾವಿಷಯಂಗಳಂ ಪಡೆಯುತ್ತಿಹನು. ಹನ್ನೊಂದನೆಯ ವರುಷದಲ್ಲಿ ಸಕಲ ಲೋಕಂಗಳಿಗಾಜ್ಞಾಕರ್ತೃವಹನು. ಹನ್ನೆರಡನೆಯ ವರುಷದಲ್ಲಿ ಶಿವಸಮಾನನಾಗಿ ಸೃಷ್ಟಿ ಸ್ಥಿತಿ ಸಂಹಾರಂಗಳಂ ಮಾಡುತಿರ್ಪಂ.*"

ಹಠಯೋಗಿಗಳು ಸಾಧಿಸುವ ಈ ಎಲ್ಲ ಸಿದ್ಧಿಗಳು ಶಿವಯೋಗ ಸಾಧನದಿಂದ ಪ್ರಾಪ್ತವಾಗಿ ಹಠಯೋಗಿಗಳು ಸಾಧಿಸಲು ಸಾಧ್ಯವಿಲ್ಲದ ಅತ್ಯುಚ್ಚ ಸ್ಥಾನವು ಶಿವಯೋಗಿಗೆ ಪ್ರಾಪ್ತವಾಗುವದೆಂದು ಚೆನ್ನಸದಾಶಿವಯೋಗಿಗಳು, ನಿಜಗುಣ ಶಿವಯೋಗಿಗಳು ಸಾರುವರು:

ಯದಿ ಯೋ ಯೋಗಸಮುದ್ಯತೋಽವನಿತಳೇ ಯಾತ್ಯಂತರಾವಾಪದಂ
ಶಿವಲೋಕಂ ಸಮವೇತ್ಯ ಶಾಶ್ವತಸುಖಂ ತತ್ರಾನುಭೂಯ ಸ್ವಯಂ ।
ಅಭಿಜಾಯೇತ ಮನಸ್ವಿನಾಂ ಶ್ರುತಿಮತಂ ಯಸ್ಮಿನ್ ಕುಲೇ ಯೋಗಿನಾಂ
ಸ ತು ಸಂಪ್ರಾಪ್ಯ ನಿವರ್ತಯತ್ಯಭವಯೋಗಂ ತಂ ಶಿವಾಖ್ಯಂ ಪುನಃ ॥
ಬ್ರಹ್ಮಣಿ ಪರೇ ಹೃದಯಮಪಿ ಯಸ್ಯ ಲೀನಂ
ತಸ್ಯ ಪಿತರಾವಿಹಪರೇಽತಿಚರಿತಾರ್ಥೌ ॥

---

§ ಪಾರಮಾರ್ಥ ಪ್ರಕಾಶಿಕೆ; ದ್ವಿತೀಯ ಪರಿಚ್ಛೇದ, ಪುಟ: ೪೨

* ಪಾರಮಾರ್ಥ ಪ್ರಕಾಶಿಕೆ–ತೃತೀಯ ಪರಿಚ್ಛೇದ, ಯೋಗಾಭ್ಯಾಸಿಗಾಗುವ ಸಿದ್ಧಿಗಳು, ಪುಟ:೫೪–೫೫

CC-0. Jangamwadi Math Collection. Digitized by eGangotri

ತಸ್ಯ ಕುಲಜಾಸ್ಸ್ಯರನಘಾ ಜಗತಿ ಸರ್ವೇ
ತಸ್ಯ ಪದಸಂಘಟಿತಭೂರತಿ ಪವಿತ್ರಾ ||§

ಬಳಿಕೀ ಯೋಗೀಶ್ವರನ ಯೋಗಸಾಮರ್ಥ್ಯದಿಂದನೇಕರು ಕೃತಾರ್ಥರಪ್ಪರ ಮಂತೆನೆ-- ಆವಾತನ ಮನವು ಪರಮಾತ್ಮಸ್ವರೂಪಮಾದ ನಾದಬ್ರಹ್ಮದಲ್ಲಿ ಲಯ ವನೆಯ್ದುತ್ತಿಹುದಾತನ ತಂದೆ ತಾಯಿಗಳಿಹಪರಂಗಳಲ್ಲಿ ಕೃತಾರ್ಥರುಗಳು. ಆತನು ಭಯಕುಲದಲ್ಲಿ ಹುಟ್ಟಿದ ಸಮಸ್ತರೂ ಪಾಪರಹಿತರುಗಳು. ಯೋಗೀಶ್ವರನ ಪಾದ ಸೋಂಕಿಂದ ಭೂಮಿ ಪರಮ ಪವಿತ್ರವಾ ಶಿವಯೋಗೀಶ್ವರನೆಲ್ಲಿ ಜನಿಸಿದನಲ್ಲಿ ತನ್ನಿಂ ಪೂರ್ವಮಾದ ದಶಕುಲವನು ತನ್ನಿಂದುತ್ತರಮಾದ ದಶಕುಲವನು ಕೃತ ಕೃತ್ಯರಂ ಮಾಡಿ ತಾನಿರ್ದ ಭೂಮಿಯಂ ಪುಣ್ಯಕ್ಷೇತ್ರಮಂ ಮಾಡುತಿರ್ಪನೆಂಬುದು ಶ್ರುತಿಪುರಾಣಾಗಮ ಸಿದ್ಧಮಕ್ಕುಂ.*

ಆದರೆ ಈ ಯೋಗಸಿದ್ಧಿ ಎಲ್ಲರಿಗೂ ಸಾಧ್ಯವಾಗದು. ಭಗವದ್ಗೀತೆಯಲ್ಲಿ ಹೇಳಿದಂತೆ---

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಮ್ ವೇತ್ತಿ ತತ್ತ್ವತಃ ||

ಸಾವಿರಾರು ಮನುಷ್ಯರಲ್ಲಿ ಒಬ್ಬನು ಸಿದ್ಧಿಗಾಗಿ ಪ್ರಯತ್ನಿಸುವನು. ಆ ಸಿದ್ಧರಲ್ಲಿ ಯಾವನೋ ಒಬ್ಬನು ಪರಮಾತ್ಮನನ್ನು ಕಾಣುವನು. ಈ ಶಿವಯೋಗವನ್ನು ಸಾಧಿಸಿ ಸಿದ್ಧಿಯನ್ನು ಪಡೆದ ಮಹಾತ್ಮರಾದ ಪೂಜ್ಯ ಲಿಂಗೈಕ್ಯ ಶ್ರೀ. ನಿ. ಪ್ರ. ಶಿವಬಸವ ಮಹಾಸ್ವಾಮಿಗಳವರು ತಮ್ಮ ತಪಶ್ಶಕ್ತಿ, ಲಿಂಗನಿಷ್ಠೆ, ಪರಿಶುದ್ಧವಾದ ಆಚರಣೆ ಇವುಗಳಿಂದ ಶಿಷ್ಯಕೋಟಿಯನ್ನು ಉದ್ಧರಿಸಿರುವರು. ವೀರಶೈವ ಧರ್ಮಗುರುಗಳ ಜೀವನದ ಮುಖ್ಯವಾದ ಧ್ಯೇಯಗಳಲ್ಲಿ ತಮ್ಮ ಭಕ್ತರಿಗೆ ಶಾಂತಿಯನ್ನು ಸುಖವನ್ನು ದಯಪಾಲಿಸಿ ಅವರನ್ನು ಉದ್ಧರಿಸುವದು ಒಂದಾಗಿದೆ. ಇದು ವೀರಶೈವ ಧರ್ಮಗುರುಗಳ ವೈಶಿಷ್ಟ್ಯ. ಪೂಜ್ಯ ಮಹಾಸ್ವಾಮಿಗಳು ಶಕ ೧೮೬೭ ಪುಷ್ಯ ಶುದ್ಧ ದಶಮಿಯ ದಿವಸ ಲಿಂಗೈಕ್ಯರಾದರು. ಶ್ರೀಗಳವರ ಜನನ ಶಕ ೧೭೭೮ ಆನಂದನಾಮ ಸಂವತ್ಸರ ಮಾಘ ಬಹುಳ ಶುಕ್ರವಾರ ಶಿವರಾತ್ರಿ. ಶಕ ೧೭೭೮ ರಿಂದ ೧೮೬೭ ರ ವರೆಗೆ ಅಂದರೆ ಸುಮಾರು ೯೦ ವರುಷ ಬಾಳಿ ಪೂಜ್ಯ ಮಹಾಸ್ವಾಮಿಗಳು ಶಿವಯೋಗ ಸಾಧನೆಯಲ್ಲಿ ಮಗ್ನರಾಗಿ ಸಮಾಜವನ್ನೂ ಲೋಕವನ್ನೂ ಉದ್ಧಾರ ಮಾಡಿದ್ದಾರೆ. ಇವರೂ ಪೂಜ್ಯ ಲಿಂಗೈಕ್ಯ ಶ್ರೀ. ನಿ. ಪ್ರ. ಹಾನಗಲ್ ಕುಮಾರ ಸ್ವಾಮಿಗಳವರೂ

§ ಶಿವಯೋಗ ಪ್ರದೀಪಿಕೆ, ಪಟಲ : ೫, ಶ್ಲೋಕ: ೫೫-೫೬.

* ಪಾರಮಾರ್ಥ ಪ್ರಕಾಶಿಕೆ, ಪರಿಚ್ಛೇದ ೫;ಪುಟ : ೯೬;

CC-0. Jangamwadi Math Collection. Digitized by eGangotri

ಒಮ್ಮನಸ್ಸಿನಿಂದ ದುಡಿದು ಶಿವಯೋಗಮಂದಿರದಂಥ ಸಂಸ್ಥೆಯನ್ನು ಸ್ಥಾಪಿಸಿ ಊರ್ಜಿತ ಸ್ಥಿತಿಗೆ ತಂದಿರುವರು. ಪೂಜ್ಯ ಹಾನಗಲ್ ಶ್ರೀಗಳವರು ಲಿಂಗೈಕ್ಯರಾದ ಮೇಲೆ ಶಿವಯೋಗಮಂದಿರದ ಭಾರವನ್ನೆಲ್ಲ ಹೊತ್ತುಕೊಂಡು ಸಂಸ್ಥೆಯ ಅಧ್ಯಕ್ಷರಾಗಿ ಅದನ್ನು ತಮ್ಮ ಆಯುಷ್ಯದ ಕೊನೆಯ ವರೆಗೂ ಕಾಪಾಡಿಕೊಂಡು ಬಂದಿರುವರು. ಪೂಜ್ಯ ಶ್ರೀಗಳವರ ಸ್ವಭಾವ, ದಯಾರ್ದ್ರತೆ, ಧರ್ಮನಿಷ್ಠೆ ಮೊದಲಾದವುಗಳನ್ನು ಅವರ ಶಿಷ್ಯ ಪ್ರಶಿಷ್ಯರೂ ಅವರನ್ನು ಸಮೀಪದಿಂದ ಕಂಡವರೂ ಬಲ್ಲರು.

ಪೂಜ್ಯ ಮಹಾಸ್ವಾಮಿಗಳವರ ಅವತಾರದಿಂದ ಇಲ್ಲಿಯ ವರೆಗೆ ಸುಮಾರು ೧೦೫ ವರ್ಷಗಳು ಗತಿಸಿವೆ. ಅವರ ಸ್ಮರಣೆಯು ಶಾಶ್ವತವಾಗಿರಲೆಂಬುದ್ದೇಶದಿಂದ **ಶ್ರೀ. ನಿ. ಪ್ರ. ಬಸವಲಿಂಗ ಸ್ವಾಮಿಗಳವರು, ಗವಿಮಠ, ನವಿಲುಗುಂದ** ಅವರ ನೇತೃತ್ವದಲ್ಲಿ ಒಂದು ಸಮಿತಿಯು ಏರ್ಪಟ್ಟು "**ಶ್ರೀ ಶಿವಬಸವ ಪ್ರಕಾಶ**" ಎಂಬ ಸ್ಮಾರಕ ಗ್ರಂಥವನ್ನು ಪ್ರಕಟಿಸಬೇಕೆಂಬುದನ್ನು ನಿರ್ಣಯಿಸಿ ವಿದ್ವಾಂಸರಿಂದ ಲೇಖನಗಳನ್ನು ಸಂಗ್ರಹಿಸಿ ಈ ಹೊತ್ತಿಗೆಯನ್ನು ಪ್ರಕಟಿಸಲಾಗಿದೆ. ಇದರಲ್ಲಿ ಪೂಜ್ಯ ಮಹಾಸ್ವಾಮಿಗಳವರ ನಿಕಟವರ್ತಿಗಳಾದ ಅನೇಕ ಮಹನೀಯರು ತಮ್ಮ ಭಕ್ತಿಯನ್ನೂ ಅನುಭವಗಳನ್ನೂ ಲೇಖನ ಮೂಲಕವಾಗಿ ಪ್ರಕಟಿಸಿರುವರು. ವಿಖ್ಯಾತ ವಿದ್ವಾಂಸರೂ ಒಳ್ಳೇ ಮನನೀಯವಾದ ಬರಹಗಳನ್ನು ಬರೆದಿರುವರು. ಆದುದರಿಂದ ಈ ಸ್ಮಾರಕ ಕೃತಿಯ ಮಹತ್ವವು ವಿಶೇಷವಾಗಿದೆ.

ಕನ್ನಡ ಸಾಹಿತ್ಯದಲ್ಲಿ ಇತ್ತಿತ್ತಲಾಗಿ ನವಚೈತನ್ಯ ತುಂಬಿಬರಹತ್ತಿದೆಯೆಂಬುದಕ್ಕೆ ಈಗಾಗಲೇ ಬೆಳಕಿಗೆ ಬಂದಿರುವ ಮತ್ತು ಬರುತ್ತಲಿರುವ ಗ್ರಂಥಗಳು ಸ್ಪಷ್ಟ ದ್ಯೋತಕ ವಾಗಿವೆ. ಇವುಗಳಲ್ಲಿ ಬಹು ಮಹತ್ವದ, ವಿಚಾರ ಪರಿಪ್ಲುತವಾದ ಮತ್ತು ಸಂಶೋಧನಾತ್ಮಕ ಲೇಖನಗಳನ್ನು ವಿದ್ವಾಂಸರು ಪರಿಶ್ರಮಪಟ್ಟು ಬರೆಯುತ್ತಲಿರುವರು. ಆದುದರಿಂದ ಸಾಹಿತ್ಯದ ಅನೇಕ ಅಂಗೋಪಾಂಗಗಳು ಪರಿಪುಷ್ಟವಾಗುತ್ತಲಿರುವವು. ಇದು ಸ್ವಾಗತಾರ್ಹವಾಗಿದೆ.

'ಶ್ರೀ ಶಿವಬಸವ ಪ್ರಕಾಶ'ದಲ್ಲಿ ಮುಖ್ಯವಾಗಿ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಪೂಜ್ಯ ಮಹಾಸ್ವಾಮಿಗಳವರ ಜೀವನಕ್ಕೆ ಸಂಬಂಧಿಸಿದ ವಿಷಯಗಳನ್ನು ಅವರ ನಿಕಟವರ್ತಿಗಳಿಂದ ಸಂಗ್ರಹಿಸಲಾಗಿದೆ. ಈ ಭಾಗವನ್ನು ಓದಿದವರ ಮನದಲ್ಲಿ ಪೂಜ್ಯ ಮಹಾಸ್ವಾಮಿಗಳವರ ಜೀವನಚರಿತಾಮೃತ, ದಿವ್ಯದೃಷ್ಟಿ, ಪರಿಪೂರ್ಣ ಶಿವಯೋಗ, ವೈರಾಗ್ಯ ಸಂಪತ್ತು, ಲಿಂಗಪೂಜಾಲೋಲತೆ, ವೀರಶೈವ ಧರ್ಮದ ಬಗೆಗೆ ಕಳಕಳಿ, ದಯಾಳುತೆ ಮೊದಲಾದ ವಿಷಯಗಳು ಸ್ಪಷ್ಟವಾಗಿ ಒಡಮೂಡುವವು.

ಎರಡನೆಯ ಭಾಗದಲ್ಲಿ ಉಪಯುಕ್ತವಾದ ಕೆಲವು ಲೇಖನಗಳನ್ನು ಸಂಗ್ರಹಿಸಲಾಗಿದೆ. ಅವು ಮುಖ್ಯವಾಗಿ ವೀರಶೈವ ಧರ್ಮ, ಸಂಸ್ಕೃತಿ ಮತ್ತು ದರ್ಶನ ಇವುಗಳ

CC-0. Jangamwadi Math Collection. Digitized by eGangotri

ಮೇಲೆ ಬೆಳಕನ್ನು ಚೆಲ್ಲುತ್ತವೆ. ಆದುದರಿಂದ 'ಶ್ರೀ ಶಿವಬಸವ ಪ್ರಕಾಶ'ದ ಎರಡೂ ಭಾಗಗಳೂ ಸಾಮಾನ್ಯರಿಗೂ ಕೂಡ ಹೃದಯಂಗಮವಾಗಿ ಬುದ್ಧಿಯ ವಿಕಾಸವನ್ನು ಪಡೆಯಲು ಉಪಯುಕ್ತವಾಗಿವೆ. ಕನ್ನಡ ಸಾಹಿತ್ಯಕ್ಕೂ ಇದೊಂದು ಕಾಣಿಕೆಯಾಗಿದೆ. ಪೂಜ್ಯ ಮಹಾಸ್ವಾಮಿಗಳವರ ಭಕ್ತರೂ, ಸಾಹಿತಿಗಳೂ ಈ ಗ್ರಂಥವನ್ನು ಸ್ವಾಗತಿಸುವರೆಂದು ನಮ್ಮ ಭರವಸೆ.

ಈ ಸ್ಮಾರಕ ಸಮಿತಿಯ ಸದಸ್ಯರು ಒಳ್ಳೇ ಪರಿಶ್ರಮದಿಂದ ಉತ್ತಮ ಲೇಖನಗಳನ್ನು ಸಂಗ್ರಹಿಸಿರುವರು. ಈ ಕಾರ್ಯ ಎಷ್ಟು ಕಷ್ಟತಮವಾದುದೆಂಬುದು ಇಂತಹ ಕಾರ್ಯಗಳಲ್ಲಿ ಪರಿಶ್ರಮವಹಿಸಿದವರಿಗೇ ತಿಳಿಯುವುದು. ಸಾಮಾನ್ಯವಾಗಿ ಲೇಖನಗಳನ್ನು ಹೇಗೋ ಬರೆದು ಬೇಡಿಕೆಯನ್ನು ಪೂರೈಸುವದು ಸುಲಭ. ಆದರೆ ಒಂದು ನಿರ್ದಿಷ್ಟ ವಿಷಯವನ್ನು ಆರಿಸಿಕೊಂಡು ಅದರ ಮೇಲೆ ಬೆಳಕನ್ನು ಕೆಡಹುವಂತಹ ಸಂಶೋಧನಾತ್ಮಕ ಲೇಖನಗಳನ್ನು ಬರೆಯುವದು ಬಲು ಕಠಿನ. ಅದಕ್ಕೆ ಸಾಕಷ್ಟು ಕಾಲಾವಕಾಶ ಮತ್ತು ಗ್ರಂಥಸಾಧನ ಬೇಕಾಗುವುದು. ಈ ಗ್ರಂಥದಲ್ಲಿ ಬಂದ ಲೇಖನಗಳಲ್ಲಿ ಕೆಲವು ಇಂತಹ ಉಚ್ಚಮಟ್ಟದವಾಗಿವೆ. ಆದುದರಿಂದ ಸಮಿತಿಯ ಸದಸ್ಯರನ್ನೂ ಬರೆಹಗಾರರನ್ನೂ ಮನಸಾ ಅಭಿನಂದಿವೆ.

ಬಾಗಿಲುಕೋಟೆ,
೧-೧-೧೯೬೨.

ಡಾ. ಶಿ. ಚೆ. ನಂದೀಮಠ,
ಎಂ.ಎ., ಪಿಎಚ್.ಡಿ. (ಲಂಡನ್)

CC-0. Jangamwadi Math Collection. Digitized by eGangotri

# ಪ್ರಕಾಶಕರ ಮಾತು

ಭಾರತ ಭೂಮಿಯಲ್ಲಿ ಅನೇಕ ಜನ ಸಾಧು–ಸತ್ಪುರುಷರು ಜನ್ಮವೆತ್ತಿದ್ದಾರೆ. ಅದರಲ್ಲಿಯೂ ನಮ್ಮ ಕರ್ನಾಟಕದಲ್ಲಿ ಜನಹಿತಕ್ಕಾಗಿ ತಮ್ಮ ಜೀವನವನ್ನೆ ಮುಡು ಪಾಗಿಟ್ಟ ಅನೇಕ ಮಹಾಪುರುಷರು ಅವತರಿಸಿದ್ದಾರೆ. ಅವರಲ್ಲಿ ಇಪ್ಪತ್ತನೆಯ ಶತಮಾನದ ಯುಗಾವತಾರಿ ಶಿವಯೋಗಿಗಳವರಲ್ಲಿ ಹಾವೇರಿ ಹುಕ್ಕೇರಿಮಠದ ಲಿಂಗೈಕ್ಯ ಶ್ರೀ. ನಿ. ಪ್ರ. ಶಿವಬಸವ ಮಹಾಸ್ವಾಮಿಗಳವರು ಅಗ್ರಗಣ್ಯರು. ಅವರು ಮಹಾ ತಪಸ್ವಿಗಳೂ ಕರುಣಾಮೂರ್ತಿಗಳೂ ಆಗಿದ್ದರು. ಅಂತಹ ಮಹಾ ಶಿವ ಯೋಗಿಗಳವರ ಸ್ಮಾರಕವು ನಡೆಯಬೇಕಾದುದು ಅತ್ಯವಶ್ಯವಾಗಿದ್ದಿತು. ಶ್ರೀಗಳ ವರು ಲಿಂಗೈಕ್ಯರಾಗಿ ಹದಿನೈದು ವರ್ಷಗಳಾದವು. ಹದಿನಾರನೆಯ ವರ್ಷದ ಪುಣ್ಯತಿಥಿಯ ಶುಭಸಮಯದಲ್ಲಿ ಪೂಜ್ಯರ ಸ್ಮಾರಕವಾಗಿ ಗ್ರಂಥವನ್ನು ಪ್ರಕಟಿ ಸುವ ಯೋಜನೆಯಾಯಿತು. ಪೂಜ್ಯರ ಶಿಷ್ಯರೆಲ್ಲರೂ ಈ ಪುಣ್ಯಕಾರ್ಯಕ್ಕೆ ನೆರವು ನೀಡಲು ಮುಂದಾದರು. ಅವರಲ್ಲಿ ಮುಖ್ಯವಾಗಿ ನವಿಲುಗುಂದ ಗವಿಮಠದ ಶ್ರೀ. ನಿ. ಪ್ರ. ಬಸವಲಿಂಗ ಮಹಾಸ್ವಾಮಿಗಳವರು ಪೂಜ್ಯರ ಸ್ಮಾರಕ ಗ್ರಂಥವನ್ನು ಪ್ರಕಟಿಸಲು ಪ್ರೇರಿಸಿ ಕಾರ್ಯಕ್ಕೆ ಉತ್ಸಾಹ ತುಂಬಿದರು. ಅವರು ತಮ್ಮ ಶ್ರೀ ಮಠದಲ್ಲಿಯೇ "ಶ್ರೀ ಶಿವಬಸವೇಶ್ವರ ಸ್ಮಾರಕ ಗ್ರಂಥ ಪ್ರಕಟನೆಯ ಸಮಿತಿ"ಯನ್ನು ಕರೆದರು. ಲೇಖಕರ ಪಟ್ಟಿಯನ್ನು ತಯಾರಿಸಿ ಅವರಿಗೆಲ್ಲ ಕಾಗದ ಬರೆಯಿಸಿ ದರು. ಸರ್ವ ಪ್ರಥಮವಾಗಿ ಒಂದುನೂರ ಒಂದು ರೂಪಾಯಿಗಳ ಗುರುಕಾಣಿಕೆ ಯನ್ನು ಅರ್ಪಿಸಿ ಈ ಗ್ರಂಥದ ಪ್ರಕಟನೆಯ ಕಾರ್ಯಕ್ಕೆ ಶ್ರೀಕಾರವನ್ನು ಹಾಕಿ ದರು. ಪ್ರೊ. ಜಿ. ಎಂ. ಉಮಾಪತಿ ಶಾಸ್ತ್ರಿ, ಎಂ. ಎ. ಅವರನ್ನು ಈ ಗ್ರಂಥ ಪ್ರಕ ಟನಾ ಸಮಿತಿಯ ಕಾರ್ಯದರ್ಶಿಗಳನ್ನಾಗಿ ಮತ್ತು ಸ್ಮಾರಕ ಗ್ರಂಥದ ಸಂಪಾದಕ ರನ್ನಾಗಿ ನೇಮಿಸಲಾಯಿತು. ಅವರು ಪೂಜ್ಯರ ಈ ಸೇವೆಗೆ ಸಹರ್ಷ ಒಪ್ಪಿ ಕೊಂಡರು. ಕಾರ್ಯಕ್ಕೆ ಮೊದಲಾಯಿತು. ಲೇಖಕರು ಸಕಾಲಕ್ಕೆ ಬರೆಹಗಳನ್ನು ಕಳಿಸಿ ಸಹಕರಿಸಿದರು.

ಈ ಸ್ಮಾರಕ ಗ್ರಂಥಕ್ಕಾಗಿ ಪೂಜ್ಯ ಹಾವೇರಿ ಶ್ರೀಗಳವರಿಂದ ಅನುಗ್ರಹ ಮತ್ತು ಅಧಿಕಾರ ಹೊಂದಿದವರೂ ಅವರಲ್ಲಿ ಪರಮ ಭಕ್ತಿಯುಳ್ಳವರೂ ಆದ ಹಾಲಕೆ ರೆಯ ಶ್ರೀ. ನಿ. ಪ್ರ. ಅನ್ನದಾನೀಶ್ವರ ಮಹಾಸ್ವಾಮಿಗಳು, ಹಾನಗಲ್ಲ ಶ್ರೀ. ನಿ. ಪ್ರ. ಸದಾಶಿವ ಮಹಾಸ್ವಾಮಿಗಳು ಮೊದಲಾದ ಮಹಾಸ್ವಾಮಿಗಳವರು ಸಹಾಯ ಧನವನ್ನೂ ದಯಪಾಲಿಸಿದರು. ಮೊದಲು ಹಾವೇರಿಯಲ್ಲಿ ಗ್ರಂಥಪ್ರಕಟನೆಯ ನಿಧಿ ಸಂಗ್ರಹ ನಡೆಯಿತು. ಆಗ ದಾವಣಗೆರೆಯ ವೇ. ಚಂದ್ರಶೇಖರ ಶಾಸ್ತ್ರಿ ಗಳು, ಶ್ರೀ ಜಡೆಶೆಟ್ಟರ ಬಸವ ಶೆಟ್ಟೆಪ್ಪನವರು, ಶ್ರೀ ದೇವಶೆಟ್ಟರು ಮೊದಲಾದವರು

CC-0. Jangamwadi Math Collection. Digitized by eGangotri

ಊರ ಭಕ್ತರೂ ಬಹು ಆಸ್ಥೆಯಿಂದ ದುಡಿದರು. ನಗರದ ಭಕ್ತರೆಲ್ಲ ಭಕ್ತಿಯಿಂದ ಕಾಣಿಕೆಗಳನ್ನು ಸಲ್ಲಿಸಿದರು. ಪೂಜ್ಯರ ಪರಮ ಭಕ್ತರಾದ ಶ್ರೀ ಚನ್ನಪ್ಪನವರು ಚೌಶೆಟ್ಟಿ ಅವರು ಹಾವೇರಿಯ ಸುತ್ತಮುತ್ತಲ ಭಾಗದಲ್ಲಿ, ಅಕ್ಕಿಆಲೂರು, ಹಾನಗಲ್ಲ, ಆರಳೇಶ್ವರ, ಸವಣೂರು ಮೊದಲಾದ ಕಡೆ ಸಂಚರಿಸಿ ನಿಧಿಯನ್ನು ಸಂಗ್ರಹಿಸಿ ಕೊಟ್ಟಿರುವರು. ಪೂಜ್ಯರಲ್ಲಿ ನಿಷ್ಠೆಯುಳ್ಳ ಇಟಗಿ, ಜಕ್ಕಲಿ, ಗದಗ, ಹುಬ್ಬಳ್ಳಿ, ನರಗುಂದ ಮೊದಲಾದ ನಗರಗಳ ಭಕ್ತರು ತಮ್ಮ ತಮ್ಮ ಭಕ್ತಿಯ ಧನವನ್ನು ಅರ್ಪಿಸಿರುವರು. ಈ ನಿಧಿ ಸಂಗ್ರಹ ಕಾರ್ಯದಲ್ಲಿ ಹಾವೇರಿ ಶ್ರೀಗಳವರ ಅನುಗೃಹೀತ ಶಿಷ್ಯರಾದ ಗದಗಿನ ಹಿಡಕಿಮಠದ ಶ್ರೀ ಚೆನ್ನವೀರ ಶಾಸ್ತ್ರಿಗಳು ಬಹಳವಾಗಿ ನೆರವಾದರು; ಇಟಗಿಯಲ್ಲಿ ಶ್ರೀಗಳವರ ಪರಮ ಶಿಷ್ಯರಾದ ಶ್ರೀ ಅನ್ನದಾನಯ್ಯನವರು, ಹುಬ್ಬಳ್ಳಿಯಲ್ಲಿ ಶ್ರೀ. ಸಿ. ಎಸ್. ಹಿರೇಮಠ, ಶ್ರೀ ಗಂಗಾಧರ ಶಾಸ್ತ್ರಿಗಳು ಕಳ್ಳೀಮಠ, ಶ್ರೀ ಜಿ. ಮಹಾದೇವಪ್ಪನವರು; ಬಾಗಿಲುಕೋಟೆಯಲ್ಲಿ ಶ್ರೀ ಬಸೆಟ್ಟೆಪ್ಪನವರು ಹಲಕುರ್ಕಿ ( ಶ್ರೀ ಬಿ.ವ್ಹಿ.ವ್ಹಿ.ಸಂಘದ ಚೇರಮನ್ನರು ), ಶ್ರೀ ಎಸ್. ಎಸ್. ಶಾಬಾದಿ ಮೊದಲಾದವರು ಬಹಳ ಉತ್ಸಾಹದಿಂದ ಭಕ್ತಿಯಿಂದ ದುಡಿದವರಾಗಿದ್ದಾರೆ.

ಈ ಗ್ರಂಥಕ್ಕೆ ಬೇಕಾಗುವ ಭಾವಚಿತ್ರಗಳನ್ನು ಚವ್ಹಾಣ, ಚಿತ್ರ ಸ್ಟುಡಿಯೋ ಹಾವೇರಿ; ಶ್ರೀ. ಎಸ್. ಕೆ. ಇಟ್ನಾಳಮಠ ಅಥಣಿ; ಶ್ರೀ. ಶಿವಲಿಂಗಪ್ಪ ಪಾವಡದ, ನೇರಲಗಿ; ಶ್ರೀ. ಮುರಗೆಯ್ಯ ಕಾಡಯ್ಯ ಕೃಷ್ಣಾ ಕಿತ್ತೂರ ಮೊದಲಾದವರು ಕಳಿಸಿ, ಚಿತ್ರಗಳನ್ನು ತೆಗೆಯುವಲ್ಲಿ ಶ್ರಮವಹಿಸಿ ಸಹಕರಿಸಿ ನೆರವಾಗಿದ್ದಾರೆ.

ಪ್ರೊ. ಜಿ. ಎಂ. ಉಮಾಪತಿ ಶಾಸ್ತ್ರಿಗಳವರು ತಮ್ಮ ಕಾರ್ಯಬಾಹುಲ್ಯದಲ್ಲಿ ವೇಳೆಯುಳಿಸಿಕೊಂಡು ಸ್ವಾಮಿಯ ಕಾರ್ಯಕ್ಕಾಗಿ, ಶಿವಯೋಗಮಂದಿರದ ಅಭಿವೃದ್ಧಿಗಾಗಿ, ಸಾಹಿತ್ಯದ ಬೆಳವಣಿಗೆಗಾಗಿ ದುಡಿದಿದ್ದಾರೆ, ದುಡಿಯುತ್ತಿದ್ದಾರೆ.

ಈ ಗ್ರಂಥಕ್ಕೆ ಒಪ್ಪುವಂತಹ ವಿದ್ವತ್ಪೂರ್ಣವಾದ ಮುನ್ನುಡಿಯನ್ನು ಬಾಗಿಲುಕೋಟೆಯ ಬಸವೇಶ್ವರ ಕಾಲೇಜಿನ ಪ್ರಿನ್ಸಿಪಾಲರೂ, ಶ್ರೀ ಶಿವಯೋಗಮಂದಿರ ಸಂಸ್ಥೆಯ ಪರಮ ಹಿತೈಷಿಗಳೂ ಟ್ರಸ್ಟಿಗಳೂ ಆಗಿರುವ ಡಾ. ಶಿ. ಚೆ. ನಂದೀಮಠ, ಎಂ.ಎ., ಪಿಎಚ್.ಡಿ.(ಲಂಡನ್) ಅವರು ಅನೇಕಾನೇಕ ಕಾರ್ಯಗಳಲ್ಲಿ ಬಿಡುವು ಮಾಡಿಕೊಂಡು ಬರೆದುಕೊಟ್ಟಿರುವರು; ಹಾಗೂ ಈ ಗ್ರಂಥಕ್ಕೆ ಶುಭಸಂದೇಶಗಳನ್ನು ಹುಬ್ಬಳ್ಳಿಯ ಮೂರುಸಾವಿರಮಠದ ಶ್ರೀಮನ್ಮಹಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಮತ್ತು ನಮ್ಮ ರಾಜ್ಯದ ಮುಖ್ಯಮಂತ್ರಿಗಳಾದ ಶ್ರೀ. ಬಿ. ಡಿ. ಜತ್ತಿಯವರೂ ದಯಪಾಲಿಸಿರುವರು.

ಈ ಪ್ರಕಾರ ಅನೇಕರು ಅನೇಕಮುಖವಾಗಿ ತನು - ಮನ - ಧನಗಳಿಂದ 'ಶ್ರೀ ಶಿವಬಸವ ಪ್ರಕಾಶ'ದ ಪ್ರಕಟನೆಗೆ ಸಹಾಯ ನೀಡಿದ್ದಾರೆ. ಅವರೆಲ್ಲರ

CC-0. Jangamwadi Math Collection. Digitized by eGangotri

ಸಹಾಯ-ಸಹಾನುಭೂತಿಯಿಂದ ಈ ಗ್ರಂಥ ಪ್ರಕಟವಾಗಿದೆ. ಅವೆರೆಲ್ಲರಿಗೂ ಸ್ಮಾರಕ ಗ್ರಂಥ ಸಮಿತಿಯು ಚಿರಋಣಿಯಾಗಿದೆ.

ಈ ಗ್ರಂಥದ ಅಚ್ಚಿನ ಕಾರ್ಯವನ್ನು ನವಿಲುಗುಂದ ಶ್ರೀಗಳವರ ಅಪ್ಪಣೆಯಂತೆ ಯಂತೆ ಬಾಗಿಲುಕೋಟೆಯ ಶ್ರೀ ಬಸವೇಶ್ವರ ವಿದ್ಯಾವರ್ಧಕ ಸಂಘದ ಶ್ರೀ ಬಸವಲಿಂಗ ಮುದ್ರಣಾಲಯಕ್ಕೆ ಒಪ್ಪಿಸಲಾಯಿತು. ಈ ಮುದ್ರಣಾಲಯದ ವ್ಯವಸ್ಥಾಪಕರಾದ ಶ್ರೀ. ಬಿ. ಎನ್. ಜಂಗಮಶೆಟ್ಟರು ಮತ್ತು ಉಳಿದ ಕೆಲಸಗಾರರೂ ಬಹು ಆಸ್ಥೆಯಿಂದ ದುಡಿದು ಈ ಗ್ರಂಥವನ್ನು ಸಕಾಲಕ್ಕೆ ಸರ್ವಾಂಗಸುಂದರವಾಗಿ ಒದಗಿಸಿ ಕೊಟ್ಟಿದ್ದಾರೆ. ಇವರೆಲ್ಲರಿಗೂ ಮಹಾತಪಸ್ವಿ ಶ್ರೀ ಶಿವಬಸವೇಶ್ವರರು ಸನ್ಮಂಗಲವನ್ನೀಯಲೆಂದು ಹಾರೈಸಲಾಗಿದೆ.

| | |
|---|---|
| ಸವದತ್ತಿ, | ಶ್ರೀ. ನಿ. ಪ್ರ. ಕುಮಾರಸ್ವಾಮಿಗಳು, ಕಲ್ಮಠ |
| | ಕಾರ್ಯಾಧ್ಯಕ್ಷರು: |
| ೨೫-೧೨-೧೯೬೧. | ಶ್ರೀ ಶಿವಬಸವೇಶ್ವರ ಸ್ಮಾರಕಗ್ರಂಥ ಪ್ರಕಾಶನ ಸಮಿತಿ. |

## ಅರಿಕೆ

ಪರಮಪೂಜ್ಯ ಲಿಂಗೈಕ್ಯ ಹಾವೇರಿ ಶ್ರೀ ಶಿವಬಸವ ಮಹಾಸ್ವಾಮಿಗಳವರ ಈ ಸ್ಮಾರಕ ಸಂಪುಟವನ್ನು ಪ್ರಕಟಿಸುವ ಹೊಣೆಗಾರಿಕೆಯಲ್ಲಿ ನನಗೂ ಅಳಿಲು ಸೇವೆಯ ಭಾಗ ದೊರೆತುದು ಮಹಾಭಾಗ್ಯವೆಂದು ಭಾವಿಸುತ್ತೇನೆ. ನವಿಲುಗುಂದದ ಗವಿಮಠಾಧ್ಯಕ್ಷ ಶ್ರೀ. ನಿ. ಪ್ರ. ಬಸವಲಿಂಗ ಮಹಾಸ್ವಾಮಿಗಳವರ ಅಪ್ಪಣೆ ಮತ್ತು ಸವದತ್ತಿಯ ಕಲ್ಮಠದ ಶ್ರೀ. ನಿ. ಪ್ರ. ಕುಮಾರ ಮಹಾಸ್ವಾಮಿಗಳವರ ಪ್ರೇರಣೆಯಿಂದ ನಾನೀ ಕಾರ್ಯದಲ್ಲಿ ಪ್ರವೃತ್ತನಾಗಿ ಅವರ ಮಾರ್ಗದರ್ಶನದಲ್ಲಿಯೇ ಈ ಸ್ಮಾರಕ ಗ್ರಂಥವನ್ನು ಸಾಧ್ಯವಿದ್ದಮಟ್ಟಿಗೂ ಸರ್ವಾಂಗಸುಂದರವಾಗುವಂತೆ ಮಾಡಲು ಪ್ರಯತ್ನಿಸಿದ್ದೇನೆ. ಮಹಾತ್ಮರ ಚರಿತೆಯನ್ನು ಅರಿಯುವದೇ ಕಷ್ಟ. ಅದರಲ್ಲಿಯೂ ಅವರ ಚರಿತೆಯನ್ನು ಗ್ರಂಥ ರೂಪದಲ್ಲಿ ಸಮರ್ಪಕವಾಗಿ ಸಂಗ್ರಹಿಸುವದಂತೂ ಕಷ್ಟತರ. ಅದನ್ನು ನಾನೆಷ್ಟರ ಮಟ್ಟಿಗೆ ನಿರ್ವಹಿಸಿರುವೆನೆಂಬುದನ್ನು ಸಹೃದಯ ಓದುಗರೇ ನಿರ್ಣಯಿಸಬಲ್ಲರು.

"ತಂ ಸಂತಃ (ಜ್ಞಾ)ತುಮರ್ಹಂತಿ ಸದಸದ್ವ್ಯಕ್ತಿಹೇತವಃ"

ಎಂಬ ಮಹಾಕವಿ ಕಾಳಿದಾಸನ ಸೂಕ್ತಿಯನ್ನು ನೆನೆದು ಈ ನನ್ನ ಕಿರಿಯ ಅರಿಕೆಯನ್ನು ಮುಗಿಸುತ್ತೇನೆ.

| | |
|---|---|
| ಬಾಗಿಲುಕೋಟೆ, | ಜಿ. ಎಂ. ಉಮಾಪತಿಶಾಸ್ತ್ರಿ, ಎಂ.ಎ. |
| | ಸಂಪಾದಕ |
| ೧೦-೧-೧೯೬೨. | 'ಶ್ರೀ ಶಿವಬಸವ ಪ್ರಕಾಶ' |

CC-0. Jangamwadi Math Collection. Digitized by eGangotri

## ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು
## ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು
## ಮೂರುಸಾವಿರ ಮಠ, ಹುಬ್ಬಳ್ಳಿ, ಅವರ

# ಶುಭ ಸಂದೇಶ

ವೀರಶೈವ ಶಿವಯೋಗಿಗಳ ಮಾಲಿಕೆಯಲ್ಲಿ ಹಾವೇರಿಯ ಪರಮಪೂಜ್ಯ ಲಿಂಗೈಕ್ಯ ಶಿವಬಸವ ಮಹಾಸ್ವಾಮಿಗಳವರು ಮುಕುಟ ಮಣಿಯಂತೆ ರಾರಾಜಿಸಿದ್ದಾರೆ. ಅವರ ತೆರಹಿಲ್ಲದ ನಡೆ, ನುಡಿ, ಸಂಭಾಷಣೆಯ ಸುಖ, ನಂಬುಗೆ, ಸ್ವಾನುಭಾವ, ಮಹಿಮೆ, ವಿಚಾರಗಳು ಅವರ ನಿಜೈಕ್ಯದ ಸ್ಥಿತಿಯನ್ನು ಪ್ರತ್ಯಕ್ಷವಾಗಿ ಮುಮುಕ್ಷುಗಳಿಗೆ ತೋರುವಂತಿದ್ದವು. ಅವರ ಶಿವಲಿಂಗ ಪೂಜೆಯ ಸಮರತಿ-ಸಮಕಳೆ ಅನ್ಯಾದೃಶ್ಯವಾಗಿದ್ದವು. ಅವರ "ಕಾಯಕವೇ ಕೈಲಾಸವಾಯಿತ್ತು; ತನುವೇ ಲಿಂಗವಾಯಿತ್ತು; ಮನವೇ ಸೆಜ್ಜೆಯಾಯಿತ್ತು." ಅವರೊಬ್ಬ ಪರಿಪೂರ್ಣ ಸಿದ್ಧರಾಗಿದ್ದರು; ಅಂತೆಯೆ ಘನ ಮಹಿಮರಾಗಿದ್ದರು. ಹೃದಯಕಮಲ ಮಧ್ಯದಲ್ಲಿ ನಿಜವ ನೆಲೆಗೊಳಿಸಿದ ಮಹಾ ಶಿವಯೋಗಿಯಾಗಿದ್ದರು. ನಿರಂಜನ ಜ್ಯೋತಿಯಾಗಿ ಬೆಳಗುವ ಮಹಾಪ್ರಭುವಾಗಿದ್ದರು. ಸತ್ತು ಹುಟ್ಟುವರಲ್ಲದ, ಕಾಯವಂಚಕರಲ್ಲದ, ಜೀವವಂಚಕರಲ್ಲದ, ನಿರಂತರ ಸಹಜರಾದ ಶಂಕೆಯಿಲ್ಲದ ಮಹಿಮರಾದ, ಶ್ರೀಗಳವರು ಉಪಮಾತೀತರೆಂದು ಶರಣರ ಭಾಷೆಯಲ್ಲಿ ಹೇಳಬಹುದಾಗಿದೆ.

ಶಿವಲಿಂಗ ಪ್ರಕಾಶದಲ್ಲಿ, ಬಸವನ ಭಕ್ತಿಭಾವದಲ್ಲಿ ಸದಾ ಸನ್ನಿಹಿತರಾಗಿದ್ದು ತೊಳಗಿ ಬೆಳಗಿದ್ದ ಪರಮಪಾವನಮೂರ್ತಿಗಳವರು. ಇಂತಹ ಮಹಾಮಹಿಮರ ಸ್ಮಾರಕವನ್ನು ಆಚರಿಸುವದು ಬಹು ಸ್ತುತ್ಯವಾದ ಕಾಯಕವಾಗಿದೆ, ಮಹತ್ಕಾರ್ಯವಾಗಿದೆ. "ಶ್ರೀ ಶಿವಬಸವೇಶ ಪ್ರಕಾಶ"ವು ಶ್ರೀಗಳವರ ದಿವ್ಯ ಜೀವನ ಪ್ರಭೆಯ ಪ್ರತೀಕವಾಗಿ ಎಲ್ಲರಿಗೂ ಅದು ಬಾಳಬಟ್ಟೆಯ ಕೈದೀಪವಾಗಿ ಬೆಳಗಲೆಂದು ಹಾರೈಸಲಾಗಿದೆ.

ಲಿಂ. ಹಾವೇರಿಯ ಶ್ರೀಗಳವರು ಮತ್ತು ಲಿಂ. ಹಾನಗಲ್ಲ ಶ್ರೀಗಳವರು ಇಪ್ಪತ್ತನೆಯ ಶತಮಾನದಲ್ಲಿ ಸಮಾಜದ ಸುಧಾರಣೆಗಾಗಿ ಅನೇಕ ಮಹತ್ಕಾರ್ಯಗಳನ್ನು ಮಾಡಿದ ಯುಗಾವತಾರಿ ಕಾರಣಿಕ ಪುರುಷರು. ಶಿವಯೋಗಮಂದಿರವೆಂಬ ಮಹಾ ಸಂಸ್ಥೆಯ ಸಂಸ್ಥಾಪನೆಗೆ ಮತ್ತು ಅದರ ಸರ್ವತೋಮುಖ ಅಭಿವೃದ್ಧಿಗೆ ಹಾವೇರಿ ಶ್ರೀಗಳವರು ಹಾನಗಲ್ಲ ಶ್ರೀಗಳವರ ಬಲಗೈಯಾಗಿ ದುಡಿದವರು. ಅವರು ತಮ್ಮ ತಪಃಶ್ಶಕ್ತಿಯಿಂದಲೇ ಮಂದಿರಕ್ಕೆ ಆಗಾಗ ಬಂದೊದಗಿದ ಅನೇಕ ವಿಪತ್ತುಗಳನ್ನು ಕಳೆದು ಅದು ಸತ್ತ್ವಯುತವಾಗಿ ಬಾಳಿ ಬೆಳಗುವಂತೆ ಕರುಣಿಸಿದ ಸಿದ್ಧ ಶಿವಯೋಗಿಗಳು. ಪರಮ ಗುರುಗಳಾದ ಅವರನ್ನು ನೆನೆದು ಅವರ ಧ್ಯೇಯಗಳನ್ನು ಕಾರ್ಯರೂಪಕ್ಕಿಳಿಸುವುದು ಅವರ ಶಿಷ್ಯರಾದ ನಮ್ಮೆಲ್ಲರ ಪರಮ ಕರ್ತವ್ಯವಾಗಿದೆ. ಅದುವೇ ಶ್ರೀಗಳವರ ನಿಜವಾದ ಸ್ಮಾರಕವು.

*****

CC-0. Jangamwadi Math Collection. Digitized by eGangotri

ಬಿ. ಡಿ. ಜತ್ತಿ,
ಮುಖ್ಯ ಮಂತ್ರಿ.



" ವಿಧಾನ ಸೌಧ "
ಬೆಂಗಳೂರು-೧.
ದಿನಾಂಕ: ೩-೮-೧೯೬೦

ಮೈಸೂರು ಸರ್ಕಾರ

ಹಾವೇರಿ ಹುಕ್ಕೇರಿ ಮಠದ ಶ್ರೀ. ನಿ. ಪ್ರ. ಶಿವಬಸವ ಸ್ವಾಮಿಗಳ
ಸ್ಮಾರಕ ಗ್ರಂಥ ಪ್ರಕಟಣಾ ಸಮಿತಿಯ ಕಾರ್ಯಾಧ್ಯಕ್ಷರು,
ಶ್ರೀ. ನಿ. ಪ್ರ. ಕುಮಾರಸ್ವಾಮಿಗಳು, ಕಲ್ಮಠ, ಸವದತ್ತಿ
ಜಿಲ್ಲಾ - ಬೆಳಗಾಂವ

ಇವರ ಸನ್ನಿಧಿಗೆ—

## ಸಂದೇಶ

ಹಾವೇರಿ ಹುಕ್ಕೇರಿ ಮಠದ ಶ್ರೀ. ನಿ. ಪ್ರ. ಲಿಂ. ಶಿವಬಸವಸ್ವಾಮಿಗಳ ಸ್ಮಾರಕ ಗ್ರಂಥವನ್ನು ಪ್ರಕಟಿಸಲು ಸ್ಮಾರಕ ಸಮಿತಿಯವರು ಏರ್ಪಡಿಸಿರುವರೆಂಬುದನ್ನು ಕೇಳಿ ನನಗೆ ಮಹದಾನಂದವುಂಟಾಗಿದೆ. ಶಿವಯೋಗಮಂದಿರದ ಪೋಷಕರೂ, ಷಟ್‌ಸ್ಥಲಧ್ಯಾನೈಕಪರಾಯಣರೂ, ಶಿವಾದ್ವೈತನಿಷ್ಠರೂ ಆದ ಶ್ರೀ ಶ್ರೀಗಳವರ ದಿವ್ಯ ಜೀವನ ಸಂದೇಶವನ್ನು ಜನರ ಮನಸ್ಸಿಗೆ ತಂದು ತನ್ಮೂಲಕ ಅವರು ಪಾರಮಾರ್ಥಿಕ ಜೀವಿಗಳೂ, ಸಮಾಜ ಸೇವಾನಿರತರೂ ಆಗುವಂತೆ ಮಾಡಲು ಮಹತ್ವಪೂರ್ಣ ಲೇಖನಗಳನ್ನೊಳಗೊಂಡ ಒಂದು ಗ್ರಂಥದ ಪ್ರಕಟನೆಯು ಅತ್ಯಾವಶ್ಯಕವಾಗಿದೆ. ಗುರುಭಕ್ತರಾದ ಸಮಿತಿ ಸದಸ್ಯರು ಈ ಮಹಾ ಕಾರ್ಯವನ್ನು ಕೈಗೊಂಡಿರುವುದಕ್ಕಾಗಿ ಅವರನ್ನು ಅಭಿನಂದಿಸುತ್ತೇನೆ.

ಈ ಸಮಾಜವು ಎಚ್ಚತ್ತು ಏಕೀಕರಿಸಿ ಸಂಯುಕ್ತ ಕರ್ನಾಟಕದ ಮತ್ತು ನವ ಭಾರತದ ಪುನರ್ನಿರ್ಮಾಣ ಕಾರ್ಯದಲ್ಲಿ ತ್ರಿಕರಣಪೂರ್ವಕವಾಗಿ ಸೇವೆಗೈದು ಇತರ ಸಮಾಜಗಳಿಗೆ ಮಾರ್ಗದರ್ಶಿಯಾಗುವಂತೆ ಪ್ರಚೋದಿಸುವ ಸ್ಫೂರ್ತಿಯುತ ಬರವಣಿಗೆಗಳನ್ನು ಲೇಖಕರು ಸ್ಮಾರಕ ಗ್ರಂಥದಲ್ಲಿ ಕಳುಹಿಸಿರುವುದಕ್ಕಾಗಿ ಅವರನ್ನೂ ಅಭಿನಂದಿಸುತ್ತೇನೆ.

*B. D. Jatti,*
ಮುಖ್ಯ ಮಂತ್ರಿ.

CC-0. Jangamwadi Math Collection. Digitized by eGangotri



ಪರಮ ತಪಸ್ವಿಗಳಾದ

**ಲಿಂ. ಶ್ರೀ. ನಿ. ಪ್ರ. ಶಿವಬಸವ ಮಹಾಸ್ವಾಮಿಗಳವರು, ಹಾವೇರಿ.**

ಜನನ: ಶಕ–೧೭೭೯] [ಲಿಂಗೈಕ್ಯ: ಶಕ–೧೮೩೮

CC-0. Jangamwadi Math Collection. Digitized by eGangotri

# ಶ್ರೀ ಶ್ರೀಗಳವರ ಪರಿಪೂರ್ಣ ಜೀವನ

## ಶ್ರೀ. ನಿ. ಪ್ರ. ಬಸವಲಿಂಗ ಸ್ವಾಮಿಗಳು, ಗವಿಮಠ, ನವಿಲುಗುಂದ.

ಕೂಡಲಸಂಗನಾದ ಶಿವ, ಸಂಗನ ಕರುಣೆಯು ಕಂದನಾದ ಬಸವ, ಇವರಿಬ್ಬರ ಚಿದಂಶವೇ ಶಿವಬಸವನಾಮವಾಂತು ಭೂಮಿಗೈತಂದು, ಧರೆಯಮಾನವರನ್ನು ಪಾವನ ಗೊಳಿಸಿದ ಪರಮಪೂಜ್ಯ ಹಾವೇರಿ ಹುಕ್ಕೇರಿ ಮಠಾಧ್ಯಕ್ಷ ಲಿಂ. ಶಿವಬಸವ ಮಹಾಸ್ವಾಮಿಗಳವರು ಕನ್ನಡ ನಾಡಿನಲ್ಲಿ ಬೆಳಗಿಬಾಳಿದ ಶಿವಯೋಗಿಸಂಕುಲದಲ್ಲಿ ಓರ್ವರು. ಶಿವಯೋಗಿಗಳು ತಾವು ಮಾನವದೇವರಾಗಿದ್ದರಷ್ಟೇ ಅಲ್ಲ, ತಮ್ಮನ್ನು ಅನನ್ಯಗತಿಯಿಂದ ಮೊರೆಹೊಕ್ಕ ಮಾನವರಿಗೆ, ಜೀವದೇವರ ಸಂಬಂಧವನ್ನು ತಿಳಿಸಿ ಹೊಂದಾಣಿಕೆಯ ಹಾದಿಯನ್ನು ತೋರಿಸಿ ಕೃಪೆಗೈದವರು. ಅಂತೆಯೇ ಅವರಿಗೆ ಒಂದು ಮಹತ್ವದ ಸ್ಥಾನವಿದೆ, ಮಾನವಿದೆ. ಒಬ್ಬನಾಗಿ ಉಂಡ ಊಟ ಹಬ್ಬವಲ್ಲ, ಎಂಬ ಹಾಗೆ ಪೂಜ್ಯ ಶ್ರೀಗಳವರು ತಾವೊಬ್ಬರೇ ಲಿಂಗಾಂಗಸಾಮರಸ್ಯ ಸೌಖ್ಯ ವನ್ನುಣ್ಣಬಯಸುತ್ತಿರಲಿಲ್ಲ. ಅವರ ದಿವ್ಯ ಜೀವನದ ಪರಿಚಯು ಹನ್ನೆರಡು ವರ್ಷಗಳ ನಿರಂತರ ಸೇವೆಯಿಂದ ನಮಗೆ ತುಂಬ ಅನುಭವಪೂರ್ಣವಾಗಿದೆ. ಅವರ ಶಿವಪೂಜೆ, ಶಿವಧ್ಯಾನಗಳು ಶಿವನಿಗಾಗಿ ಮಾತ್ರವೇ ಹೊರತು ಐಹಿಕ ಭೋಗ ಭಾಗ್ಯಗಳಿಗಾಗಿ ಇರಲಿಲ್ಲವೆಂಬುದು ಎಷ್ಟೋ ಸಲ ಮನವರಿಕೆಯಾದ ಮಾತು. ಅರ್ಥ ಪ್ರಾಣಾಭಿಮಾನದಲ್ಲಿ ಶುಚಿಯಾಗಿ ಅಂತಸ್ಸತ್ವವನ್ನು ಬಹುಮುಖವಾಗಿ ಬೆಳೆಯಿಸಿ ಕೊಂಡಿದ್ದರವರು. ಹಲಕೆಲವರಂತೆ ಸ್ವಾಮಿತ್ವದ ತೋರಿಕೆಯ ಪ್ರಭಾವವನ್ನು ಬೀರುವ ಮೂಲಕ ಅವರು ಪ್ರಸಿದ್ಧಿ ಪಡೆಯಲಿಲ್ಲ. ಎಲೆಯ ಮರೆಯ ಕುಸುಮ ದಂತಿದ್ದು ತಮ್ಮ ಅಂತಶ್ಶಕ್ತಿಪ್ರಭಾವದ ಸೌಗಂಧವನ್ನು ಸೂಸುವರಾಗಿದ್ದರು. ಸೂರ್ಯೋದಯಕ್ಕೆ ಕಮಲವರಳುವಂತೆ, ಪವಾಡ ಪ್ರತ್ಯಕ್ಷಗಳು ಭಕ್ತಿಬಗೆಯುಳ್ಳ ವರಿಗೆ ಸಹಜವಾಗಿ ಕಾಣಿಸಿಕೊಳ್ಳುತ್ತಿದ್ದವೇ ಹೊರತು, ಮಾಡಿತೋರಿಸಿ ದೊಡ್ಡ ವರೆನ್ನಿಸಿಕೊಳ್ಳುವ ಚಾಪಲ್ಯವವರಿಗಿದ್ದಿಲ್ಲ. "ಎನ್ನನಲ್ಲದೆ ನೋಡರೆನ್ನಭಕ್ತರ್ ಗಿರಿಜೆ! ಎನ್ನನಲ್ಲದೆ ಬಯಸರೆನ್ನಭಕ್ತರ್ ಗಿರಿಜೆ!" ಎಂದು ಶಿವಕವಿ ಹರಿಹರ ಹೇಳಿದ ಹಾಗೆ ಲಿಂಗಪೂಜೆ, ಲಿಂಗರತಿ, ಲಿಂಗಮೋಹಿಗಳಾಗಿ ಜೀವನದ ಕಳಪೆಲ್ಲ ವನ್ನು ಕಳೆದುಕೊಂಡು ಶುದ್ಧ ಅಪರಂಜಿಯಾಗಿ ಬಾಳಿದ ಮಹಿಮರವರು. "ಎನ ಗುಳ್ಳವಂ ನೀನು, ನಿನಗುಳ್ಳವಂ ನಾನು" ಎಂದು ನುಡಿದ ಕನ್ನಯ್ಯನ ಕಡು ನಂಬಿಗೆ ಅವರ ನಿತ್ಯಾಚರಣೆಯಲ್ಲಿ ನೆಲೆಗೊಂಡಿತ್ತು. ಆ ಸಮರತಿ ಸಮರಸಾನಂದ ದಲ್ಲಿ ಬಾಹ್ಯ ವ್ಯವಹಾರವನ್ನೇ ಮರೆತ ಒಂದು ಪರವಶ ಸ್ಥಿತಿಯು ಅವರನ್ನು ಆವರಿ ಸುತ್ತಿತ್ತು. ಪೂಜ್ಯ ಹಾನಗಲ್ಲ ಶ್ರೀಗಳವರು ಜಗತ್ತಿನಲ್ಲಿ ಶಿವನನ್ನು ಕಾಣುತ್ತಿದ್ದರೆ,

CC-0. Jangamwadi Math Collection. Digitized by eGangotri

ಪೂಜ್ಯ ಹಾವೇರಿ ಶ್ರೀಗಳವರು ಶಿವರೂಪಿ ಲಿಂಗದಲ್ಲಿ ಜಗತ್ತನ್ನು ನೋಡುತ್ತಿದ್ದರು. ಇಬ್ಬರ ಗುರಿ ಒಂದೇ. ದೃಷ್ಟಿ ದಾರಿ ಮಾತ್ರ ಬೇರೆ. ಉಭಯ ಶ್ರೀಗಳ ತೋರಿಕೆಯು ಶರೀರ ಬೇರೆ ಬೇರೆ ಕಂಡರೂ ಸೂಕ್ಷ್ಮ ಶರೀರ ದೃಷ್ಟಿಯಿಂದ ಇಬ್ಬರೂ ಒಂದೇ ಆಗಿದ್ದರು.

ಮಾನವ ಕೋಟಿಯ ಸುಖಶಾಂತಿಗೆ ಸಾಧನವಾದ ಯೋಗಸಾಧನೆಯ ಮಹತ್ವವು ಕರ್ನಾಟಕದಲ್ಲಿ ಮೂಡಿ ಬೆಳೆದು ಬರಬೇಕೆಂದು ಹಂಬಲಿಸಿ, ಹಾತೊರೆದು ಪ್ರಯತ್ನಮಾಡಿದ ಮಹಾಪುರುಷರಲ್ಲಿ ಪೂಜ್ಯ ಶ್ರೀಗಳವರಿಗೆ ಒಂದು ಮಹತ್ವದ ಸ್ಥಾನವುಂಟು. ಯೋಗವು ಬರಿ ಹೇಳುವಿಕೆಯಿಂದ ತಿಳಿಯತಕ್ಕ ಅಥವಾ ಆಚರಿಸತಕ್ಕ ವಿಷಯವಲ್ಲ. ಅರಿತು ಆಚರಿಸಿ ಅನುಭವಿಸಿದ ಗುರುವಿನ ಕೈದೋರಿಕೆಯಿಂದ ಪಡೆಯುತಕ್ಕ ವಿದ್ಯೆ, ವಿಷಯ. ಆದ್ದರಿಂದ ಶಿಷ್ಯಸಾಧಕರ ಹಿತಕ್ಕಾಗಿ, ಉದ್ಧಾರಕ್ಕಾಗಿ ಪೂಜ್ಯ ಶ್ರೀ ಶ್ರೀಗಳವರು ಪ್ರಪ್ರಥಮ ಸಾಧಕರಾಗಿ ಸಾಧನ ಮಾಡಿದರು. ಆಸನಸಿದ್ಧಿ, ಷಟ್ಕರ್ಮಾಚರಣೆ, ದೃಷ್ಟಿಯೋಗ, ಲಿಂಗಾನುಸಂಧಾನಗಳಲ್ಲಿ ತಾವು ಮೇಲುಗೈಯಾಗಿ, ಮೊಟ್ಟಮೊದಲು ಯೋಗಸಾಧನದ ಓನಾಮ ಕಲಿಯುತ್ತಿದ್ದ ನಮ್ಮೆಲ್ಲರಿಗೂ ಮಾರ್ಗ ದರ್ಶನ ಮಾಡುತ್ತಿದ್ದರು. ಯೋಗಸಾಧನಾಪೇಕ್ಷೆಯುಳ್ಳ ಸ್ವಮತಪರಮತ ಮುಮುಕ್ಷುಗಳಿಗೂ ಶಿವಯೋಗಮಂದಿರದಲ್ಲಿ ಆಗ ಅವಕಾಶ ಕೊಟ್ಟ ವಿಷಯ ಗಮನಾರ್ಹವಾಗಿದೆ. ಪೂಜ್ಯ ಹಾನಗಲ್ಲ ಶ್ರೀಗಳವರು ಶಿವಯೋಗಮಂದಿರದ ಭವ್ಯ ಭವಿತವ್ಯವನ್ನು ಹಗಲಿರುಳೂ ಚಿಂತಿಸಿ, ದೇಶಾಟನಮಾಡಿ ಜನ–ಧನ ಅಷ್ಟೇ ಅಲ್ಲ, ಯೋಗಾನುಭವವನ್ನೂ ಸಹ ಸಂಗ್ರಹಿಸಿ ತಂದುಕೊಟ್ಟು ತಂದೆಯಂತೆ ವಟುವೃಂದವನ್ನು ಕಾಪಾಡಿದರೆ, ಪೂಜ್ಯ ಹಾವೇರಿ ಶ್ರೀಗಳು ವಟುಗಳ ಸುಖದುಃಖದಲ್ಲಿ ಪಾಲುಗಾರರಾಗಿ ತಾಯಿಯಂತೆ ಸಲಹುತ್ತಿದ್ದರು. ಶಿವಯೋಗಮಂದಿರದಲ್ಲಿ ನಾವಿದ್ದ ಕಾಲದಲ್ಲಿ ಹಠಯೋಗಪ್ರದೀಪಿಕೆ, ಯೋಗಸೂತ್ರಗಳನ್ನು ಓದುತ್ತಿರುವಾಗ ಅರೆತಿಳುವಳಿಕೆಯಿಂದ ನಾವು ಆತುರಪಟ್ಟು ಕೆಲಸಾಧನಗಳನ್ನು ಮಾಡಿ ಪಾಟುಪಟ್ಟದ್ದುಂಟು. ಆಗ ಶ್ರೀಗಳವರು ಆಯಾಯ ಸಾಧನಗಳ ಬಗೆಗೆ ಹೇಳಿ ತಪ್ಪನ್ನು ತೋರಿಸಿ, ಒಪ್ಪನ್ನು ತಿಳಿಸಿ ನಿಜವಾದ ಹಾದಿಗೆ ಹಚ್ಚುತ್ತಿದ್ದರು. ಪೂಜ್ಯ ಶ್ರೀಗಳವರಿಗೆ ಹಠಯೋಗ ಸಾಧನೆಗಿಂತಲೂ ಶಿವಾರ್ಚನೆಯೇ ಮುಖ್ಯವೆನಿಸಿಪ ಶಿವಯೋಗದಲ್ಲಿ ಆಸಕ್ತಿ ಹೆಚ್ಚು. "ಕಾಯ ಬಲಿದರೆ ಮಾಯೆ ಬಲಿವುದು, ಮಾಯೆ ಬಲಿದರೆ ಛಾಯೆ ಬಲಿವುದು, ಕಾಯ ಮಾಯಾ ಛಾಯೆ ಬಲಿದರೆ ಸಿದ್ಧನವನಲ್ಲ." ಎಂಬ ಶ್ರೀ ಪ್ರಭುವಿನ ಉಕ್ತಿಯನ್ನು ಚೆನ್ನಾಗಿ ಅರಿತ ಪರಿಣಾಮವಾಗಿ, ಮಂಚ ಮಂಚದ ಕಾಲಿನಂತೆ, ಮಂತ್ರ–ಲಯ–ಹಠ ರಾಜಯೋಗಗಳನ್ನೊಳಗೊಂಡಿರುವ ಶಿವಯೋಗವು ಅವರಿಗೆ ಅಚ್ಚುಮೆಚ್ಚಿನದಾಗಿತ್ತು. ಅನುದಿನವೂ ಆಚರಿಸತಕ್ಕ ಕ್ರಿಯೆಯಾಗಿತ್ತು. ಕಟ್ಟಿಗೆಯೊಳಗಿರುವ ಬೆಂಕಿಯು ಮಥನದಿಂದ ಹೊರಬಿದ್ದು ಕಟ್ಟಿಗೆಯನ್ನೇ ಸುಟ್ಟು ಬೆಂಕಿಯಾಗುವಂತೆ, ಜೀವನಲ್ಲಿದ್ದ

CC-0. Jangamwadi Math Collection. Digitized by eGangotri

ಶಿವಾಂಶವು ಸಂಸ್ಕಾರ ಬಲದಿಂದ ಇಷ್ಟಪ್ರಾಣ ಭಾವಲಿಂಗರೂಪವಾಗಿ ಹೊರಗೆ ಬಂದು, ಅಂಗವಿಕಾರಗಳೆಲ್ಲವನ್ನೂ ಕಳೆದು ಲಿಂಗಕಳೆ ಲಿಂಗಗುಣ ವ್ಯಾಪ್ತಿಯಾಗಿರುವದೇ ಶಿವಯೋಗದ ಚರಮಸಿದ್ಧಿಯು. ಇಂತಪ್ಪ ಶಿವಯೋಗಿಯ ಕ್ರಿಯಾಚರಣೆಯು ಬೆಂದ ನುಲಿಯಂತೆ, ಭಿತ್ತಿ ಚಿತ್ರದಂತೆ ಇರುವದಾಗಿದೆ. ದೃಶ್ಯದಿಂದ ಅದೃಶ್ಯದವರೆಗೆ ಹಂತಹಂತವಾಗಿ ಜೀವನದುದ್ದಕ್ಕೂ ಹೇಗೆ ಸಾಗಬಹುದೆಂಬುದನ್ನು ಪೂಜ್ಯ ಶ್ರೀಗಳವರ ದಿವ್ಯ ಜೀವನದ ಯಥಾರ್ಥ ಕಲ್ಪನೆಯಿಂದ ನಾವು ಕಂಡುಕೊಳ್ಳಬಹುದಾಗಿದೆ. ಅವರ ನಿತ್ಯಾಚರಣೆ, ನಡೆನುಡಿಗಳನ್ನೆಲ್ಲ ಒಳಗಂಣಿನಿಂದ ನಿರುಕಿಸಿದ ಪೂಜ್ಯ ಹಾನಗಲ್ಲ ಶ್ರೀಗಳವರು, ಸಮಯೋಚಿತವಾಗಿ ಅವರ ಅಂತರಾಳದಿಂದ ಹೊರ ಹೊಮ್ಮಿದ ನುಡಿಗಡಣವನ್ನು, ಪ್ರಮಥರ ಉಕ್ತಿಯಂತೆ ಹೆಚ್ಚಳ ಪಡೆದಿವೆಯೆಂದು ಹೇಳುತ್ತಿದ್ದರು. ಒಟ್ಟಾರೆ, ಹಾವೇರಿಯ ಶ್ರೀಶಿವಬಸವ ಶಿವಯೋಗಿಗಳು ತಮ್ಮ ನಡೆನುಡಿಯಿಂದ ಮಾನವಕುಲಕೋಟಿಯನ್ನು ಕಲ್ಯಾಣದತ್ತ ಕರೆದೊಯ್ಯುವ ಮಹಾಮಹಿಮರು. ಇಂತಹ ಪುಣ್ಯ ಪುರುಷರನ್ನು ಹೆತ್ತ ಕನ್ನಡತಾಯಿ ಧನ್ಯಳು.

CC-0. Jangamwadi Math Collection. Digitized by eGangotri

# ಶ್ರೀಗಳವರ ಚರಿತಾಮೃತ

## ಶ್ರೀ. ನಿ. ಪ್ರ. ಕುಮಾರ ಸ್ವಾಮಿಗಳು, ಕಲ್ಮಠ, ಸವದತ್ತಿ-ಬಿದರಿ.

ನಮ್ಮೀ ಭಾರತಭೂಮಿಯಲ್ಲಿ ಅನೇಕ ಸಾಧು-ಸತ್ಪುರುಷರು, ಮಹಾಯೋಗಿಗಳು ಜನಿಸಿ ಜನಜೀವನವನ್ನು ಪಾವನಗೊಳಿಸಿರುವದು ಸರ್ವವೇದ್ಯವಾದ ವಿಷಯು. ಕನ್ನಡನಾಡಂತೂ ಶತಮಾನಗಳಿಂದ ಬಹುಜನ ಯೋಗಿಗಳಿಗೆ, ತ್ಯಾಗಿಗಳಿಗೆ, ವೀರರಗೆ ಕಲೆಗಾರರಿಗೆ ತವರುಮನೆಯಾಗಿದೆ. ಅವರೆಲ್ಲರು ಕಾಲಕಾಲಕ್ಕೆ ಅವತರಿಸಿ ಜನಮನದ ಮಾಲಿನ್ಯವನ್ನು ಕಳೆದು ಹೊಸ ಕಳೆಯನ್ನು ಶಿವಮಯಚೈತನ್ಯವನ್ನು ತುಂಬಿದ ಮಹಾಕಾರ್ಯವೆಸಗಿದ್ದಾರೆ. ಅಂತಹರಲ್ಲಿ ರೇಣುಕಾದಿ ಆಚಾರ್ಯರು, ಬಸವಾದಿ ಪ್ರಮಥರು ಚಿರಸ್ಮರಣೀಯರು. ಹನ್ನೆರಡನೆಯ ಶತಮಾನದಲ್ಲಿ ಬಸವ, ಚೆನ್ನಬಸವ, ಪ್ರಭುದೇವ, ಅಕ್ಕಮಹಾದೇವಿ, ಸಿದ್ಧರಾಮ ಮೊದಲಾದ ಜಗದ್ವಿಭೂತಿಗಳು ಉದಯಿಸಿ ಜನತೆಗೆ ವಚನಾಮೃತಸವಿಯನುಣಿಸಿದರು, ಜಗವನುದ್ಧರಿಸಿದರು. ಹದಿನಾಲ್ಕನೆಯ ಶತಮಾನದಲ್ಲಿ ನೂರೊಂದು ವಿರಕ್ತರು ಧರ್ಮಜಾಗ್ರತಿಯನ್ನುಂಟುಮಾಡಿದರು. ಹದಿನಾರನೆಯ ಶತಮಾನದಲ್ಲಿ ಎಡೆಯೂರ ಶ್ರೀ ತೋಂಟದ ಸಿದ್ಧಲಿಂಗಯತಿವರೇಣ್ಯರು ಅವರ ಶಿಷ್ಯಕೋಟಿಯೂ ಅನೇಕ ಬಗೆಯಾಗಿ ಧರ್ಮ-ಸಾಹಿತ್ಯಗಳನ್ನು ಬೆಳಗಿಸಿದ ಮಹತ್ಕಾರ್ಯ ಮಾಡಿದ್ದಾರೆ. ಇಪ್ಪತ್ತನೆಯ ಶತಮಾನದಲ್ಲಿಯೂ ಬಿದರಿಯ ಶ್ರೀಕುಮಾರ ಶಿವಯೋಗಿಗಳು, ಹಾನಗಲ್ಲ ಶ್ರೀಕುಮಾರ ಮಹಾಸ್ವಾಮಿಗಳು, ಬೀಳೂರ ಶ್ರೀಗುರುಬಸವ ಮಹಾಸ್ವಾಮಿಗಳು ಮೊದಲಾದ ಪೂಜ್ಯರು ತಮ್ಮ ತಪಃಸಾಮರ್ಥ್ಯದಿಂದ ಅನೇಕ ಬಗೆಯ ಲೋಕಹಿತದ ಮಹಾಕಾರ್ಯಗಳನ್ನು ಮಾಡಿರುವರು. ಸೊಲ್ಲಾಪುರದ ಶ್ರೀ ವೀರೇಶ್ವರ ಶಿವಶರಣರೂ, ಸಿರಸಂಗಿಯ ಶ್ರೀ ಲಿಂಗರಾಜರಂಥ ಉದಾರಿ ದಾನಿಗಳೂ ಆಗಿ ಹೋಗಿದ್ದಾರೆ. ಪೂಜ್ಯ ಶಿವಯೋಗಿಗಳ ಮಾಲಿಕೆಯಲ್ಲಿ ಹಾವೇರಿಯ ಹುಕ್ಕೇರಿ ಮಠದ ಲಿಂ. ಶ್ರೀ ಶಿವಬಸವ ಮಹಾಸ್ವಾಮಿಗಳವರು ತಪೋನಿಷ್ಠರೂ, ವೈರಾಗ್ಯಸಂಪನ್ನರೂ, ಕರುಣಾಳುಗಳೂ ಆಗಿದ್ದು ಜಗದ್ವಂದ್ಯರಾಗಿದ್ದಾರೆ. ಅವರು ಶಿವಯೋಗವನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಮಹಾಶಿವಯೋಗಿಗಳಾದರು. ಅಷ್ಟೇ ಅಲ್ಲದೆ, ಶಿವಯೋಗದ ರಹಸ್ಯವನ್ನು ಸಾಧಕರಿಗೆ ಅರುಹಲು ಶಿವಯೋಗಮಂದಿರದಂಥ ಆಧ್ಯಾತ್ಮ ಸಂಸ್ಥೆಯ ಸಂಸ್ಥಾಪಕರಲ್ಲೊಬ್ಬರಾಗಿದ್ದರು. ಆ ಮಹಾಸಂಸ್ಥೆಯ ಅಂಗವಾಗಿ ಉದಯಿಸಿದ ಅನೇಕ ಶಾಖಾಮಂದಿರಗಳು ಹಾವೇರಿ ಶ್ರೀಗಳವರ ತಪಃಸಾಮರ್ಥ್ಯದ ಹೆಗ್ಗುರುತಾಗಿವೆ. ಅವರಲ್ಲಿದ್ದ ಸಮಾಜ ಕಲ್ಯಾಣ ಭಾವನೆ, ಅದಕಾಗಿ ಅವರು ತೋರಿದ ವಿರತಿ, ವ್ಯಕ್ತಿಯ ಉದ್ಧಾರ

CC-0. Jangamwadi Math Collection. Digitized by eGangotri

ಕ್ಕಾಗಿಯೇ ಇದ್ದ ಅವರ ಕೃಪಾಬಲ, ಭಕ್ತವೃಂದದ ಮೇಲೆ ಅವರಿಟ್ಟ ಪ್ರೀತಿ ಮೊದಲಾದವು ಚಿರಸ್ಮರಣೀಯವಾದವು. ಸಾಧಕವೃತ್ತಿಯಲ್ಲಿ ಎಂಟು-ಹತ್ತು ವರ್ಷ ಪೂಜ್ಯರ ಸೇವೆಯನ್ನು ಮಾಡುವ ಭಾಗ್ಯ ನನಗೆ ಲಭಿಸಿತ್ತು. ಪೂಜ್ಯರ ವಿಷಯವಾಗಿ ಕೆಲವು ಚರಿತ್ರಾತ್ಮಕ ಅನುಭವಗಳನ್ನು ಇಲ್ಲಿ ವಿವರಿಸುವೆ.

## ಜನ್ಮ

ಬೆಳಗಾಂವ ಜಿಲ್ಲೆಯ ಅಥಣಿ ತಾಲೂಕಿನಲ್ಲಿ ಸಪ್ತಸಾಗರವೆಂಬ ಗ್ರಾಮ. ಅಲ್ಲಿಯ ಹಿರಿಯಮಠದ ಶಿವಗಂಗಮ್ಮ, ಗಿರಿಮಲ್ಲಯ್ಯನವರೆಂಬ ಮಾಹೇಶ್ವರ ದಂಪತಿಗಳ ಪವಿತ್ರ ಉದರಾಂಬುಧಿಯಲ್ಲಿ 'ಶಿವಬಸವ' ಎಂಬ ಶಿಶುರತ್ನ ಶಾ. ಶಕ ೧೮೦೪ ಆನಂದನಾಮ ಸಂವತ್ಸರ, ಮಾಘ ಬ. ೧೪ ಶುಕ್ರವಾರ ಶಿವರಾತ್ರಿ ಯಂದು ಅಶ್ವಿನೀ ನಕ್ಷತ್ರ ಬೆಳಗುಜಾವದ ೪ ಗಂಟೆಗೆ ಉದಯಿಸಿತು. ಶಿವಪೂಜಾ ಪ್ರೇಮಿ ಶಿವಗಂಗವ್ವ ತಾಯಿಗೆ ಮೊದಲೇ ತಪಸ್ವಿ ಶಿವಯೋಗಿಯೊಬ್ಬರು ಜನಿಸುವ ಶಿಶು ಸಾಮಾನ್ಯ ಮಾನವನಾಗದೆ 'ಪರಮವಿರಾಗಿ ಲೋಕೋದ್ಧಾರಿ ಶಿವಯೋಗಿ' ಎಂದು ಭವಿಷ್ಯ ನುಡಿದಿದ್ದರಂತೆ. ಮಹಾತಾಯಿ ಈ ಲೋಕೋತ್ತರ ಶಿಶುವನ್ನು ಹೆಚ್ಚಿನ ಮಮತೆ ಮತ್ತು ಭಕ್ತಿಯಿಂದ ಸಲಹಿದಳು. ಶಿವಬಸವೇಶನ ಬಾಲ ಲೀಲೆಗಳನ್ನು ಕಂಡು ಸಪ್ತಸಾಗರದ ಸಮಸ್ತ ಜನರೂ ಅಚ್ಚರಿ ಪಡುತ್ತಿದ್ದರು.

## ಬಾಲ್ಯ

ಐದು ವರ್ಷದ ಶಿವಬಸವೇಶನು ಕನ್ನಡ ಓದು ಮಠದಲ್ಲಿ ಪ್ರವೇಶ ಪಡೆದನು. ಬಾಲಕ ಶಿವಬಸವೇಶನ ಬುದ್ಧಿ, ಜ್ಞಾಪಕಶಕ್ತಿಯನ್ನು ಗುರುಗಳು ಕಂಡು ಮೆಚ್ಚಿದರು. ಉಳಿದ ಬಾಲಕರಂತೆ ಅವನಿಗೆ ಸಲ್ಲದ ಆಟನೋಟಗಳಲ್ಲಿ ಆಸಕ್ತಿಯಿರಲಿಲ್ಲ. ಓದಿನಲ್ಲಿ ಮುಂದುವರಿದಂತೆ ಶಿವಬಸವೇಶನು ಶಾರೀರಿಕ ಚಟುವಟಿಕೆಗಳಲ್ಲಿಯೂ ಮೇಲಾಗಿದ್ದನು. ಸುಂದರವಾದ ಮೈಕಟ್ಟು, ಗಟ್ಟಿಮುಟ್ಟಾದ ಆಳು. ಕುಸ್ತಿಯಾಡುವದೆಂದರೆ ಶಿವಬಸವೇಶನಿಗೆ ಬಲು ಹಿಗ್ಗು. ತನಗಿಂತಲೂ ಮಿಗಿಲಾದ ಹುಡುಗರನ್ನು ಸ್ಪರ್ಧೆಯಲ್ಲಿ ಸೋಲಿಸದೆ ಬಿಡುತ್ತಿರಲಿಲ್ಲ. ಎಲ್ಲ ಸರಿಕರಲ್ಲಿ ಪ್ರೀತಿಯಿಂದ ವರ್ತಿಸುವದು ಶಿವಬಸವೇಶನ ಗುರುಗಳಿಗೆ ಬಹಳ ಸಂತೋಷವನ್ನುಂಟು ಮಾಡಿತ್ತು. ವಿದ್ಯೆ, ಬುದ್ಧಿ, ಸದ್ಗುಣಗಳಿಂದ ಶೋಭಿಸುವ ಮಗುವನ್ನು ಕಂಡು ತಂದೆತಾಯಿಗಳಿಗೆ ಸಂತೋಷವಾಯಿತು, ಗ್ರಾಮಸ್ಥ ಜನರಿಗೆ ಹೆಮ್ಮೆಯೆನಿಸಿತು. ಶಿವಬಸವೇಶ ಎಲ್ಲರ ಕಣ್ಮಣಿಯಾಗಿದ್ದ.

## ಶಿಕ್ಷಣ

ಶಿವಬಸವೇಶ ಕುಲಕೋಟಿಯನ್ನು ಉದ್ಧರಿಸಲು ಅವತರಿಸಿದ ಮಹಾಪುರುಷನೆಂದು ಭಕ್ತರೆಲ್ಲ ಬಗೆದಿದ್ದರು. ಬಾಲ್ಯದಲ್ಲಿಯೇ ಅವನ ವಿಲಕ್ಷಣ ಲೀಲೆಗಳನ್ನು ಕಂಡು ಜನ ಅವನನ್ನು ಸಾಮಾನ್ಯ ಬಾಲಕನೆಂದು ಎಣಿಸಿರಲಿಲ್ಲ.

CC-0. Jangamwadi Math Collection. Digitized by eGangotri

ಒಂದು ದಿನ ಪರಮ ಶಿವಯೋಗಿಗಳಾದ ಅಥಣಿಯ ಶೆಟ್ಟರಮಠದ ಶ್ರೀ ಮುರುಘಸಿದ್ಧ ಮಹಾಸ್ವಾಮಿಗಳವರು ಸಪ್ತಸಾಗರಕ್ಕೆ ದಯಮಾಡಿಸಿದರು. ಹಿರಿಯಮಠದಲ್ಲಿ ಶಿವಲಿಂಗಾರ್ಚನೆಗೆ ಗಿರಿಮಲ್ಲಯ್ಯನವರು ಎಲ್ಲವನ್ನು ಅಣಿ ಮಾಡಿದ್ದರು. ಅರ್ಚನೆ-ಅರ್ಪಿತ-ಅನುಭವಗಳನ್ನು ಮುಗಿಸಿ ಭಕ್ತರ ಕ್ಷೇಮವನ್ನು ವಿಚಾರಿಸುತ್ತಿರುವಾಗ ಮುಗ್ಧ ಬಾಲ ಶಿವಬಸವೇಶನ ಮೇಲೆ ಪೂಜ್ಯರ ದೃಷ್ಟಿ ಹರಿಯಿತು. ಅವನ ಮುದ್ದಾದ ಮಾತುಗಳು, ವಿನೀತ ನಡೆ ಶ್ರೀಗಳವರ ಮನವನ್ನು ಸೆಳೆದವು. ಆ ಬಾಲಕನಲ್ಲಿ ಶಿವಯೋಗಿಯಾಗುವ ಲಕ್ಷಣಗಳನ್ನು ದಿವ್ಯದೃಷ್ಟಿಯಿಂದ ತಿಳಿದ ಶ್ರೀಗಳವರು ಭಕ್ತರನ್ನು ತಂದೆ-ತಾಯಿಗಳನ್ನು ಒಪ್ಪಿಸಿ ಶಿವಬಸವೇಶನನ್ನು ಕರೆದುಕೊಂಡು ಅಥಣಿಗೆ ದಯಮಾಡಿಸಿದರು.

ಶ್ರೀ ಮುರುಘಸಿದ್ಧ ಶಿವಯೋಗಿಗಳೇ ಶಿವಬಸವೇಶನ ತಂದೆ-ತಾಯಿಯಾದರು. ಶಿವಬಸವೇಶನು ಗುರುವಿನ ಕೃಪಾಶ್ರಯದಲ್ಲಿ ಬೆಳೆಯಹತ್ತಿದ. ಗುರುಕುವರ ಶಿವಬಸವೇಶ ಕನ್ನಡ ಪ್ರಾಥಮಿಕ ಶಿಕ್ಷಣ ಪಡೆಯ ಹತ್ತಿದ. ಹತ್ತನೆಯ ವರ್ಷದಲ್ಲಿ ಶ್ರೀಗಳವರು ಅಡಹಳ್ಳಿಯ ಹಿರಿಯಮಠದ ಗುರುಗಳಿಂದ ವಿಧಿಪ್ರಕಾರ ಶಿವದೀಕ್ಷೆಯನ್ನು ಕೊಡಿಸಿದರು. ಬಿಳಿಯ ಟೊಪ್ಪಿಗೆ ಕಪನಿಗಳನ್ನು ಧರಿಸಿ ಶಿವಬಸವಾರ್ಯ ಗುರುವಿಗೆ ತಕ್ಕ ಶಿಷ್ಯನಾಗುವ ರೀತಿ-ನೀತಿಗಳನ್ನು ಕಲಿಯಹತ್ತಿದ. ತಪ್ಪದೆ ಶುಚಿಯಾಗಿ ಶಿವಲಿಂಗಪೂಜೆಯನ್ನು ಮಾಡಿಕೊಳ್ಳುವದು, ವಿನಯದಿಂದ ವರ್ತಿಸುವದು, ಜೀವಿಗಳಲ್ಲಿ ದಯೆ ತೋರುವದು, ಸತ್ಯ-ಕ್ಷಮೆ-ದಮೆಗುಣಗಳನ್ನು ಒಂದೊಂದನ್ನಾಗಿಯೇ ಗುರೂಪದಿಷ್ಟ ರೀತಿಯಲ್ಲಿ ಸಾಧಿಸುವದು- ಹೀಗೆ ಶಿವಬಸವಾರ್ಯನ ಸಾಧನೆಯ ಮಾರ್ಗವಾಯಿತು.

ಶಿವಬಸವಾರ್ಯರಿಗೆ ದೈವದತ್ತವಾದ ಮಂಜುಳ ಕಂಠವಿತ್ತು. ಶಿವಪೂಜೆಯ ಕಾಲದಲ್ಲಿ, ಪ್ರತಿನಿತ್ಯ ಮುಂಜಾನೆ ಏಳುವಾಗಲೂ ಮಲಗುವಾಗಲೂ ಮಂಜುಳವಾಗಿ ನಿಜಗುಣ-ಸರ್ಪಭೂಷಣ-ಘನಮಠಾರ್ಯರ ಅನುಭವದ ಹಾಡುಗಳನ್ನು ಹಾಡುವದು ಶಿವಬಸವಾರ್ಯರ ನೇಮವಾಗಿತ್ತು. ಮಠದಲ್ಲಿ ಇನ್ನು ಅನೇಕ ಶಿಷ್ಯರು, ವಟುಗಳು ಇದ್ದರು. ಅವರೆಲ್ಲರಲ್ಲಿ ಶಿವಬಸವಾರ್ಯರು ಹಿರಿಯ ಮಣಿಯಂತೆ ಬೆಳಗುತ್ತಿದ್ದರು; ಶ್ರೀಗಳವರ ನೆಚ್ಚಿನ ಗುರುಕರಜಾತರಾಗಿದ್ದರು.

ಶ್ರೀಗಳವರ ಅಪ್ಪಣೆಯಂತೆ ಶಿವಬಸವದೇವರು ಕೆಲವು ವರ್ಷ, ಮಿರಜಿಯಲ್ಲಿದ್ದು ಸಂಗೀತಶಾಸ್ತ್ರವನ್ನು ಕಲಿತರು; ಪ್ರೌಢ ವಿದ್ಯೆಯ ವ್ಯಾಸಂಗಕ್ಕಾಗಿ ಬಳ್ಳಾರಿಯಲ್ಲಿಯ ಸಕ್ಕರಿ ಶ್ರೀಕರಡೆಪ್ಪ ಮಹಾಶಿವಶರಣರ ಸಂಸ್ಕೃತ ಪಾಠಶಾಲೆಗೆ ಬಂದರು; ಅಲ್ಲಿ ಕನ್ನಡ-ಸಂಸ್ಕೃತ ಕಾವ್ಯಗಳನ್ನು ಚೆನ್ನಾಗಿ ಅಭ್ಯಾಸಮಾಡಿ ೧೯೦೦ ರಲ್ಲಿ ಸಂಸ್ಕೃತದಲ್ಲಿ ಹೆಚ್ಚಿನ ವಿದ್ವತ್ತನ್ನು ಸಂಪಾದಿಸಲು ಕಾಶಿಗೆ ದಯಮಾಡಿಸಿದರು.

CC-0. Jangamwadi Math Collection. Digitized by eGangotri

ಭಕ್ತರು ತಮಗೆ ಕಳಿಸುತ್ತಿದ್ದ ಹಣದಲ್ಲಿ ಮಿತವಾಗಿ ಇದ್ದು, ಉಳಿದುದನ್ನು ಬಡ ವಿದ್ಯಾರ್ಥಿಗಳಿಗೆ ಕೊಟ್ಟು ಶಿವಬಸವದೇವರು ಕಾಶಿಯಲ್ಲಿ ಆದರ್ಶ 'ಶಾಸ್ತ್ರಿ'* ಗಳೆಂದು ಹೆಸರಾಗಿದ್ದರು. ಶ್ರೀ ಶಿವಬಸವದೇವರು ಆರು ವರ್ಷಗಳವರೆಗೆ ಕಾಶಿಯಲ್ಲಿದ್ದು ವ್ಯಾಕರಣ–ಅಲಂಕಾರ ಶಾಸ್ತ್ರಗಳನ್ನು ಚೆನ್ನಾಗಿ ಅಭ್ಯಾಸಮಾಡಿ ದೇಶಕ್ಕೆ ಮರಳಿದರು.

ಶ್ರೀಮರುಳಸಿದ್ಧ ಶಿವಯೋಗಿಗಳು ತಮ್ಮ ನೆಚ್ಚಿನ ಶಿಷ್ಯನ ಬರವನ್ನೆ ನಿರೀಕ್ಷಿಸಿದ್ದರು. ಅವರಿಗೆ ಆಗಲೆ ಮುಪ್ಪು ಆವರಿಸಿತ್ತು. ಶಾರೀರಿಕ ಬಲ ಉಡುಗಿತ್ತು. ಆಗ ಅವರ ಅನುಗ್ರಹವನ್ನು ಪಡೆದ ಬಿದರಿಯ ಶ್ರೀಕುಮಾರ ಮಹಾಸ್ವಾಮಿಗಳವರು ಅಥಣಿಗೆ ದಯಮಾಡಿದರು; ಗುರುವರ್ಯರ ಅನುಜ್ಞೆಯಂತೆ ಶಿವಬಸವದೇವರಿಗೆ ಅನುಗ್ರಹ-ಅಧಿಕಾರಗಳನ್ನು ಕೊಡುವ ಹೊಣೆಯನ್ನು ಹೊತ್ತರು. ಶ್ರೀಮರುಳಸಿದ್ಧ ಶಿವಯೋಗಿಗಳು ಲಿಂಗೈಕ್ಯವಾದರು. ಗುರುವಿನ ಕೃಪೆಗೆ ಪಾತ್ರರಾದ ಉಭಯ ಗುರುಕರಜಾತರೂ ಬಹುವಾಗಿ ಪರಿತಪಿಸಿದರು. ಗುರುವಿನ ಉಪದೇಶವನ್ನು ನೆನೆದು ಮುಂದಿನ ಸಾಧನೆಗೆ ಸನ್ನದ್ಧರಾದರು. ಬಿದರಿ ಶ್ರೀಗಳವರು ಬಹುವಾಗಿ ಸಂತಯಿಸಿ ಶಿವಬಸವದೇವರ ದುಃಖವನ್ನು ಕಳೆದರು; ಕೆಲವು ಕಾಲ ಅಥಣಿಯಲ್ಲಿಯೇ ವಾಸವಾಗಿದ್ದರು. ನಂತರ ಶಿವಬಸವದೇವರು ಬಿದರಿ ಶ್ರೀಗಳವರ ಸೇವೆಯಲ್ಲಿಯೇ ನಿಂತರು. ಗುರುವಿನ ಸೇವೆಯನ್ನು ಮನಮುಟ್ಟಿ ಮಾಡುತ್ತ ಬಿಡುವಿನ ವೇಳೆಯಲ್ಲಿ ವೀರಶೈವ ಸಿದ್ಧಾಂತ ಮತ್ತು ಶಿವಾನುಭವಶಾಸ್ತ್ರವನ್ನು ಗುರುಮುಖವಾಗಿ ತಿಳಿದು ಆಚರಿಸಹತ್ತಿದರು.

ಬಿದರಿ ಶ್ರೀಕುಮಾರ ಮಹಾಸ್ವಾಮಿಗಳು ಸವದತ್ತಿ ಗ್ರಾಮದ ತಮ್ಮ ಮಠದಲ್ಲಿ ಭೀಮಕವಿಯ 'ಬಸವ ಪುರಾಣ'ವನ್ನು ಪ್ರಾರಂಭಿಸಬೇಕೆಂದು ವಿಚಾರ ಮಾಡಿದರು. ಅದಕ್ಕೆ ಭಕ್ತರೆಲ್ಲ ಒಪ್ಪಿದರು; ಶ್ರೀಮಠದಲ್ಲಿ ವಿಶಾಲವಾದ ಮಂಟಪವನ್ನು ನಿರ್ಮಿಸಿದರು ಪುರಾಣವನ್ನು ಶ್ರೀ ಶಿವಬಸವದೇವರೇ ಹೇಳಬೇಕೆಂದು ಶ್ರೀಗಳವರ ಅಪ್ಪಣೆಯಾಗಿತ್ತು. ಕಾರ್ತಿಕ ಮಾಸದ ಶುದ್ಧ ಪ್ರತಿಪದೆಯಿಂದ ಪುರಾಣವು ಪ್ರಾರಂಭವಾಗಿ ಅಖಂಡ ಆರು ತಿಂಗಳು ನಡೆಯಿತು. ಶ್ರೀಶಿವಬಸವದೇವರ ಸಂಸ್ಕೃತ-ಕನ್ನಡ ಸಾಹಿತ್ಯಗಳ ಆಳವಾದ ಅಭ್ಯಾಸ, ವೀರಶೈವ ಸಿದ್ಧಾಂತಗಳ ಮನನ, ಸಂಗೀತದ ಮೇಳ ಎಲ್ಲವೂ ಅವರ ಪುರಾಣ ಹೇಳುವ ಕಲೆಗೆ ಬಹು ಮೆರಗನ್ನು ತಂದು ಕೊಟ್ಟಿದ್ದವು. ಭಕ್ತರ ಆನಂದಕ್ಕೆ ಮೇರೆ ಇರಲಿಲ್ಲ. ಶ್ರೀಗಳವರೂ ಪುರಾಣ ಸಮಾಪ್ತಿಯ ಕಾಲಕ್ಕೆ ಶಿವಬಸವದೇವರಿಗೆ ಅನುಗ್ರಹವನ್ನು ಮಾಡಿ ನಿರಂಜನ ಚರಪಟ್ಟಾಧಿಕಾರವನ್ನು ಕೊಟ್ಟು ಲಿಂಗಾಂಗಸಾಮರಸ್ಯ ರಹಸ್ಯವನ್ನು ಸಕೀಲವಾಗಿ

---

*ಕನ್ನಡ ನಾಡಿನಿಂದ ಕಾಶಿಗೆ ಸಂಸ್ಕೃತ ಶಾಸ್ತ್ರಾಭ್ಯಾಸ ಮಾಡಲು ಹೋದ ಮಠಾಧಿಪತಿ ವಿದ್ಯಾರ್ಥಿಗಳನ್ನು ಅಲ್ಲಿಯ ಜನರು 'ಶಾಸ್ತ್ರಿ' ಗಳೆಂದು ಕರೆಯುವದು ವಾಡಿಕೆ. ಸಂ.

CC-0. Jangamwadi Math Collection. Digitized by eGangotri

ಅರುಹಿದರು. ಶ್ರೀಶಿವಬಸವದೇವರು ಗುರುದೇವನ ಕರುಣೆಯಿಂದ ಗುರುಸ್ವರೂಪವೇ ಆದರು; ನಿರಂಜನ ಪ್ರಣವಸ್ವರೂಪಿಗಳಾದರು– ಶ್ರೀಶಿವಬಸವ ಸ್ವಾಮಿಗಳೆಂದು ಸಂಪೂಜ್ಯರಾದರು. ಯೋಗ್ಯ ಗುರುಗಳಿಗೆ ಯೋಗ್ಯ ಶಿಷ್ಯರು. ಕುಂದಣಕ್ಕೆ ಸುಗಂಧವಿಟ್ಟಂತೆ ಅಪೂರ್ವ ಕಳೆ ಬಂದಿತು.

ಶ್ರೀಶಿವಬಸವ ಸ್ವಾಮಿಗಳವರ ವೀರ ವಿರತಿ, ಶಿವಲಿಂಗ ಪೂಜಾನುರಕ್ತಿ, ಭಕ್ತಾನುಗ್ರಹಶಕ್ತಿ, ಮೊದಲಾದ ಸಾತ್ತ್ವಿಕ ಗುಣಗಳನ್ನು ಕಂಡು ಶ್ರೀ ಕುಮಾರ ಮಹಾಸ್ವಾಮಿಗಳು ಮೆಚ್ಚಿದರು. ತಮ್ಮ ಗುರುಗಳಿಗೆ ಯೋಗ್ಯತಾ ಸಂಪನ್ನರಾದ ಉತ್ತಮ ಶಿಷ್ಯರೆಂದು ಬಗೆದು ಶ್ರೀಶಿವಬಸವಸ್ವಾಮಿಗಳವರನ್ನು ಪೂಜ್ಯ ಗುರುಗಳ ಅಪ್ಪಣೆ ಪಡೆದು ಹಾನಗಲ್ಲ ಪ್ರಾಂತಕ್ಕೆ ಕರೆದುಕೊಂಡು ಬಂದರು. ಶ್ರೀಶಿವಬಸವ ಮಹಾಸ್ವಾಮಿಗಳವರ ಉಪದೇಶಾಮೃತವನ್ನು ಸವಿದು ಭಕ್ತರು ಸಂತಸಗೊಂಡರು.

ಹಾವೇರಿಯಲ್ಲಿ ಹುಕ್ಕೇರಿ ವಿರಕ್ತಮಠವು ಬಹು ಪ್ರಸಿದ್ಧವಾದ ವಿರಕ್ತಪೀಠ. ಅದಕ್ಕೆ ಬಹುವರ್ಷಗಳಿಂದ ಯೋಗ್ಯ ಅಧಿಕಾರಿಗಳಿರಲಿಲ್ಲ. ಶ್ರೀಮಠದ ಭಕ್ತರು ಬಹಳ ಚಿಂತೆಯಲ್ಲಿದ್ದರು. ಶ್ರೀಗಳವರ ಸಾತ್ವಿಕವೃತ್ತಿ ಮತ್ತು ಲಿಂಗಪೂಜಾನಿಷ್ಠೆಯ ಕೀರ್ತಿವಾರ್ತೆಯನ್ನು ಕೇಳಿದ ಹಾವೇರಿಯ ಸದ್ಭಕ್ತರೆಲ್ಲ ಹಾನಗಲ್ಲ ಶ್ರೀಗಳವರಲ್ಲಿ ವಿನಯದಿಂದ ಬಿನ್ನಯಿಸಿಕೊಂಡರು. ಭಕ್ತರ ಆಗ್ರಹಕ್ಕೆ ಮೆಚ್ಚಿ ಹಾನಗಲ್ಲ ಶ್ರೀಗಳವರು ಯಕ್ಕುಂಡಿಯ ಶ್ರೀಮುರಘೇಂದ್ರ ಮಹಾಸ್ವಾಮಿಗಳವರನ್ನು ಕರೆಯಿಸಿ ಅವರ ಸನ್ನಿಧಿಯಲ್ಲಿ ಹಾವೇರಿ ಹುಕ್ಕೇರಿಮಠದ ನಿರಂಜನ ಚರಪಟ್ಟಾಧಿಕಾರ ಮಹೋತ್ಸವವನ್ನು ೧೯೦೫ ರಲ್ಲಿ ಬಹು ವಿಜೃಂಭಣೆಯಿಂದ ನೆರವೇರಿಸಿದರು; 'ಧರ್ಮೋತ್ತೇಜಕ ಸಭೆ' ಯನ್ನು ಈ ಪ್ರಸಂಗದಲ್ಲಿ ಏರ್ಪಡಿಸಿ ಆದರ ಮುಖಾಂತರ ನೀತಿ ಮತ್ತು ಧರ್ಮಗಳ ಉಪದೇಶವು ಭಕ್ತರಿಗೆ ದೊರಕುವಂತೆ ಮಾಡಿದರು. ಶ್ರೀಶಿವಬಸವಸ್ವಾಮಿಗಳು ಅಧಿಕಾರದ ಉತ್ಸವದಲ್ಲಿ ಭಕ್ತರಿಂದ ಬಂದ ಕಾಣಿಕೆಯನ್ನು ಮಠದಲ್ಲಿ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಲು ವಿನಿಯೋಗಿಸಿದರು; ತಮ್ಮ ನೂತನ ಗುರುಗಳ ಉದಾರ ಹೃದಯವನ್ನು ಸಮಾಜ ಸೇವಾಭಾವವನ್ನು ಕಂಡು ಹಾವೇರಿಯ ಭಕ್ತರು ಬಹು ಹಿಗ್ಗಿದರು.

ಹಾನಗಲ್ಲ ಮತ್ತು ಹಾವೇರಿಯ ಉಭಯ ಶ್ರೀಗಳವರು ಒಂದು ಹೃದಯ, ಎರಡು ಶರೀರವಾಗಿದ್ದರು. ಉಭಯ ಶ್ರೀಗಳವರು ಒಂದು ಗೂಡಿ ಅನೇಕ ಸಮಾಜ ಕಾರ್ಯಗಳನ್ನು ನೆರವೇರಿಸಿದರು. ಈ ಕಾರ್ಯಗಳಲ್ಲಿ ಹಾವೇರಿಯ ಶ್ರೀಗಳವರು ಹಾನಗಲ್ಲ ಶ್ರೀಗಳವರಿಗೆ ಬಲಭುಜವಾಗಿದ್ದರು. ಈ ಮಹಾ ಕಾರ್ಯಗಳಲ್ಲಿ ೧೯೦೯ ರಲ್ಲಿ ಶ್ರೀಮದ್ವೀರಶೈವ ಶಿವಯೋಗಮಂದಿರ ಸಂಸ್ಥೆಯ ಸ್ಥಾಪನೆಯು ಬಹುಮುಖ್ಯವಾದುದು. ಆದೇ ಸ್ಥಾಪಿತವಾಗಿದ್ದ ಶಿವಯೋಗಮಂದಿರವೆಂಬ 'ಶಿಶು'

CC-0. Jangamwadi Math Collection. Digitized by eGangotri



ಪರಮಪೂಜ್ಯ ಗುರುವರ್ಯ
ಲಿಂ. ಶ್ರೀ. ನಿ. ಪ್ರ. ಮರುಳಸಿದ್ಧ ಮಹಾಸ್ವಾಮಿಗಳವರು
ಶೆಟ್ಟರಮಠ, ಅಥಣಿ.

...ಣ್ಣಿಸಿದೆ.

CC-0. Jangamwadi Math Collection. Digitized by eGangotri



ಪರಮಪೂಜ್ಯ ಗುರುವರ್ಯ

ಲಿಂ. ಶ್ರೀ. ನಿ. ಪ್ರ. ಕುಮಾರಮಹಾಸ್ವಾಮಿಗಳವರು, ಬಿದರಿ.

CC-0. Jangamwadi Math Collection. Digitized by eGangotri

ಎಗೆ ಹಾನಗಲ್ಲ ಶ್ರೀಗಳವರು ತಂದೆಯಾಗಿದ್ದರೆ ಹಾವೇರಿಯ ಶ್ರೀಗಳವರು ತಾಯಿಯಂತಿದ್ದರು. ಅವರೀರ್ವರ ಸತ್‌ಪ್ರಯತ್ನಗಳ ಪರಿಣಾಮವಾಗಿ ಆ ಸಂಸ್ಥೆಯು ಮಹೋದ್ದೇಶಗಳ ಸಾಧನೆಗಾಗಿ ವಿಶಾಲವಾಗಿ ಬೆಳೆಯಿತು.

ಕ್ರಿ. ಶ. ೧೯೧೧ ರಲ್ಲಿ ಪರಮಪೂಜ್ಯ ಬಿದರಿಯ ಶ್ರೀಕುಮಾರ ಮಹಾಸ್ವಾಮಿಗಳವರು ಮುಪ್ಪಿನ ತಮ್ಮ ಅನಾರೋಗ್ಯವನ್ನು ಕಂಡು ತಮ್ಮ ಪ್ರಿಯ ಶಿಷ್ಯರಾದ ಉಭಯ ಶ್ರೀಗಳವರನ್ನು ಕರೆಯಿಸಿದರು. ಖಿಲವಾಗುತ್ತಿರುವ ಸಮಾಜದ ಉದ್ಧಾರಕ್ಕಾಗಿ ಇನ್ನು ಹೆಚ್ಚು ಪ್ರಯತ್ನಿಸುವಂತೆ ಅನುಗ್ರಹಿಸಿ ತಮ್ಮ ತರುವಾಯ ಮಠಕ್ಕೆ ಅಪ್ಪಯ್ಯದೇವರನ್ನು ಅಧಿಕಾರಿಗಳನ್ನಾಗಿ ಮಾಡುವಂತೆ ಅಪ್ಪಣೆ ಕೊಡಿಸಿ ಪುಷ್ಯ ಶು. ೫ ಯಂದು ಲಿಂಗೈಕ್ಯರಾದರು. ಉಭಯ ಶ್ರೀಗಳವರು ಗುರುವರ್ಯರನ್ನು ಅಗಲಿ ಬಹುವಾಗಿ ನೊಂದುಕೊಂಡರು; ಆದರೆ ಅವರ ಧ್ಯೇಯಮೂರ್ತಿಯನ್ನು ತಮ್ಮ ಹೃದಯಮಂದಿರದಲ್ಲಿರಿಸಿಕೊಂಡು ಧೈರ್ಯ ತಂದುಕೊಂಡರು. ಅವರ ಉಪದೇಶಗಳನ್ನು ಕಾರ್ಯರೂಪದಲ್ಲಿ ತರಲು ಪ್ರಯತ್ನಿಸಿದರು. ಉಭಯ ಶ್ರೀಗಳವರು ನಾಡಿನ ತುಂಬೆಲ್ಲ ಸಂಚರಿಸಿ ಭಕ್ತರಲ್ಲಿ ಅರುವಿನ ಬೆಳಗನ್ನು ಮೂಡಿಸಿದರು; ಮಂದಿರದ ಅಭಿವೃದ್ಧಿಗಾಗಿ ಧನವನ್ನು ಶೇಖರಿಸಿದರು; ಅಲ್ಲಲ್ಲಿ ಶಾಖಾಮಂದಿರಗಳನ್ನು ಸ್ಥಾಪಿಸಿ ಅವುಗಳ ಮುಖಾಂತರ ಧಾರ್ಮಿಕ ವಿಚಾರಗಳ ಪ್ರಚಾರವನ್ನು ಮಾಡಿದರು; ಶತಮಾನಗಳಿಂದ ಸಮಾಜದಲ್ಲಿ ಕವಿದ ಮೌಢ್ಯದ ಮಬ್ಬನ್ನು ಕರಗಿಸಲು ಜ್ಞಾನದ ತಿಳಿಬೆಳಗು ಮೂಡುವಂತಾಯಿತು. ೧೯೩೦ ರಲ್ಲಿ ಹಾನಗಲ್ಲ ಶ್ರೀಕುಮಾರ ಮಹಾಸ್ವಾಮಿಗಳವರು ಲಿಂಗೈಕ್ಯರಾದ ಮೇಲೆ ಶಿವಯೋಗಮಂದಿರದ ಭಾರವೆಲ್ಲ ಶ್ರೀಗಳವರ ಮೇಲೆ ಬಿದ್ದಿತು. ಹಾನಗಲ್ಲ ಶ್ರೀಗಳವರ ಇಚ್ಛೆಯಂತೆ ಅವರೇ ಆ ಸಂಸ್ಥೆಯ ಆಜೀವ ಅಧ್ಯಕ್ಷರಾಗಿದ್ದು ಬಿಕ್ಕಟ್ಟಿನ ಪ್ರಸಂಗಗಳಲ್ಲಿಯೂ ಸಂಸ್ಥೆಗೆ ಯಾವ ಕೊರತೆಯೂ ಬಾರದಂತೆ ನಡೆಯಿಸಿಕೊಂಡು ಬಂದರು.

ಶ್ರೀಗಳವರು ಭಕ್ತರ ಮನೋಭೀಷ್ಟಗಳನ್ನು ಪೂರೈಸುತ್ತ ಅಲ್ಲಲ್ಲಿ ಪ್ರಶಾಂತವಾದ ಸ್ಥಾನಗಳಲ್ಲಿ ಅನುಷ್ಠಾನಮಾಡಿ ಅನೇಕ ಶಾಖಾ ಶಿವಯೋಗಮಂದಿರಗಳು ತಾವಾಗಿಯೇ ಬೆಳೆದು ಬರುವಂತೆ ಅನುಗ್ರಹಿಸಿದರು; ಆ ಪುಣ್ಯಾಶ್ರಮಗಳಲ್ಲಿ ಅನೇಕರು ಶಿವಯೋಗ ಸಾಧನೆ ಮಾಡಿ ಸಿದ್ಧಿಪಡೆದರು; ತಮ್ಮ ಕೊನೆಯುಸಿರವರೆಗೂ ಅವರು ಭಕ್ತರ ಹಿತಕ್ಕಾಗಿ, ಶಿವಯೋಗಮಂದಿರದ ಶ್ರೇಯಸ್ಸಿಗಾಗಿ ಹೆಣಗಿದರು. ಲಿಂಗಪೂಜೆಯೇ ಅಧ್ಯಾತ್ಮಸಾಧನೆಯೇ ಜೀವನದ ಸಾರಸರ್ವಸ್ವವೆಂದು ಜನರಿಗೆ ತೋರಿದ ಮಹಾಮಹಿಮರವರು. ಶ್ರೀಗಳವರು ತಮ್ಮ ೮೯ ನೆಯ ವಯೋಮಾನದಲ್ಲಿ ಶಾ. ಶಕ ೧೮೬೮ ರ ಪುಷ್ಯ ಶು. ೧೧ ಯಂದು ಹಾವೇರಿಯ ಹುಕ್ಕೇರಿ ಮಠದಲ್ಲಿ ಉರಿಯೊಳಗೈದ ಕರ್ಪೂರದಂತೆ ನಿಜಲಿಂಗದೊಳೈಕ್ಯವಾದರು. ಅವರ ಮಹಾಜೀವನದ ಕೆಲವು ಅಂಶಗಳನ್ನು ಮುಂದೆ ಕೊಡಲು ಪ್ರಯತ್ನಿಸಿದೆ.

CC-0. Jangamwadi Math Collection. Digitized by eGangotri

## ಲಿಂಗಪೂಜಾನಿಷ್ಠೆ

ಶ್ರೀಗಳವರಿಗೆ ಲಿಂಗಪೂಜೆಯೆಂದರೆ ಮಹದಾನಂದ. ಬಿಲ್ವಪತ್ರ ಪುಷ್ಪಗಳ ಬನ, ನದಿ-ಜರಿಗಳ ಸೊಂಪಾದ ತಾಣಗಳನ್ನು ಕಂಡು ಶ್ರೀಗಳವರ ಅನುಷ್ಠಾನ ಮಾಡುವ ಲವಲವಿಕೆ ಹೆಚ್ಚುತ್ತಿತ್ತು. ಅಲ್ಲಿಯೇ ಒಂದು ಪರ್ಣಕುಟಿಯನ್ನು ಕಟ್ಟಿ ಶಿವಯೋಗಾನಂದದಲ್ಲಿ ತಲ್ಲೀನರಾಗಿ ಬಿಡುವರು. ಎಂತಹ ರೋಗ ಬಂದರೂ ಜಾಡ್ಯ ಬಂದರೂ ಅವರು ಲಿಂಗಪೂಜೆಯನ್ನು ಬಿಡುತ್ತಿರಲಿಲ್ಲ. ಅವರು ಪೂಜೆ ಯಲ್ಲಿ ಅಂಗೈಯೊಳಗಣ ಲಿಂಗಯ್ಯನನ್ನು ನೆಟ್ಟ ದೃಷ್ಟಿಯಿಂದ ನೋಡುತ್ತ ಗಂಟೆ ಗಟ್ಟಲೆ ನಿಶ್ಚಲವಾಗಿ ಬಿಡುತ್ತಿದ್ದರು. ದೃಷ್ಟಿಯೋಗದಲ್ಲಿ ಅವರು ಸಿದ್ಧಿಯನ್ನು ಪಡೆದಿದ್ದರು. ಶಿವಯೋಗ ಸಿದ್ಧಿಗೆ ದೃಷ್ಟಿಯೋಗ ತಳಹದಿಯೆಂದು ಅವರು ಮಂದಿರದ ಸಾಧಕರಿಗೆ ಪದೇ ಪದೇ ಅಪ್ಪಣೆಕೊಡಿಸುತ್ತಿದ್ದರು. ಎಲ್ಲಿಯಾದರೂ ಪ್ರಯಾಣ ಮಾಡುವಾಗ ಮಾರ್ಗದಲ್ಲಿ ಜಲಪತ್ರಿ-ಪುಷ್ಪಗಳಿಂದ ಸಮೃದ್ಧವಾದ ನಿಸರ್ಗವನ್ನು ಕಂಡರೆ ಸಾಕು, ಅಲ್ಲಿಯೇ ಉಳಿದು ಶಿವಾರ್ಚನೆಯನ್ನು ಮನದುಂಬಿ ಮುಗಿಸಿ ಮುಂದೆ ಪ್ರಯಾಣ ಬೆಳೆಸುವದು ಶ್ರೀಗಳವರ ಸ್ವಭಾವವಾಗಿದ್ದಿತು. ಒಂದು ಸಲ ಶಿವಯೋಗಮಂದಿರದಲ್ಲಿ ಬೆಳಗು ಮುಂಜಾನೆ ಮಹಾಕೂಟದ ಕಡೆ ಸಂಚಾರ ಹೊರಟಾಗ, ಅಲ್ಲಿಯ ಪ್ರಶಾಂತ ಸ್ಥಾನವನ್ನು ಕಂಡು ಶಿವಾರ್ಚನೆಯನ್ನು ಮಾಡಬೇಕೆಂದು ಬಯಿಸಿದರು; ಅಂದವಾದ ಸುಗಂಧಮಯ ಪುಷ್ಪಗಳು, ಕೋಮಲವಾದ ಬಿಲ್ವದಳಗಳು, ಜುಳುಜುಳು ಹರಿಯುವ ನಿರ್ಮಲ ಜಲಧಾರೆ - ಮತ್ತೇನು ಬೇಕು ಶಿವನಿಗೆ ? ಸ್ನಾನಮಾಡಿ ಅಲ್ಲಿಯೇ ಒಂದು ಮರದಡಿ ಶಿವಪೂಜೆ ಯನ್ನುಮನದಣಿ ಮಾಡಿದರು,ಅಷ್ಟರಲ್ಲಿ ಅವರ ಲಿಂಗನಿಷ್ಠೆಯಿಂದ ಬಂದ ಶಿವಪ್ರಸಾದ ವನ್ನು ಸೇವಿಸಿ ಮಂದಿರಕ್ಕೆ ದಯಮಾಡಿಸಿದರು. ಅವರ ಲಿಂಗಪೂಜೆಯ ಪ್ರಭಾವ ದಿಂದಲೇ ಕಪನಳ್ಳಿಯ ಶಿವಯೋಗಾಶ್ರಮ, ಕೊಪ್ಪದ ಶಾಖಾ ಶಿವಯೋಗಮಂದಿರ, ಹಿರೇಹಾಳ-ಬದಾಮಿಯ ಶಾಖಾಮಂದಿರಗಳು, ತೊದಲಬಗಿ ಹಳ್ಳದ ದಂಡೆಯ ಆಶ್ರಮ–ಮೊದಲಾದವು ಶಿವಯೋಗಿಯಿರ್ದ ಕ್ಷೇತ್ರಗಳಾಗಿ ಭಕ್ತರನ್ನು ಆಕರ್ಷಿಸಿವೆ.

ಶಿವಲಿಂಗ ಪೂಜೆಯು ಭವರೋಗಕ್ಕೆ ಸಿದ್ಧೌಷಧಿಯೆಂದು ಶ್ರೀಗಳವರು ಅಪ್ಪಣೆ ಕೊಡಿಸುತ್ತಿದ್ದರು. ಅನುವು ಆಪತ್ತುಗಳಿಂದ ಬಳಲಿ ಬಂದ ಭಕ್ತರಿಗೆ " ಲಿಂಗಪೂಜೆ ಮಾಡಿರಪ್ಪ ! ನಿಮ್ಮ ಕಷ್ಟಪರಿಹಾರವಾಗುವದು. " ಎಂದು ಕೃಪಾ ದೃಷ್ಟಿ ಬೀರಿ ಸಂತೈಸುತ್ತಿದ್ದರು.

" ಕರದೊಳ್ ತಾಳ್ದ ನಿಜೇಷ್ಟಲಿಂಗದೆ ಮನಂ ಪಂಚಾಕ್ಷರಂ ವಕ್ತ್ರದೊಳ್
ಕೊರಳೊಳ್ ತಳ್ತ ಶಿವಾಕ್ಷ ಮಾಲೆ ಭಸಿತಾಲೇಪಂ ಲಲಾಟಾಗ್ರದೊಳ್ ।

CC-0. Jangamwadi Math Collection. Digitized by eGangotri

ಗುರುಪಾದಾಂಬುಜಸೇವೆ ಕಾಯದೊಳೊಡಂಬಟ್ಟಿರ್ದ ಭಕ್ತಂಗದಾರ್
ಸರಿ ನೀನಾತನಧೀನನಲ್ತೆ ಸತತಂ ಶ್ರೀಶೈಲಜಾವಲ್ಲಭಾ ॥ "

ಎಂದು ಶಿವಕವಿಯೊಬ್ಬರು ಹೇಳಿದಂತೆ ಲಿಂಗನಿಷ್ಠೆಯಿಂದಾಗಿ ಶ್ರೀಗಳವರಿಗೆ ಎಂದೂ ಯಾವುದೂ ಕೊರತೆಯಾಗಿ ನಿಲ್ಲಲಿಲ್ಲ. ಮಹಾನುಭಾವಿ ಶ್ರೀ ಮಗ್ಗೆಯ ಮಾಯಿ ದೇವರು §' ಶತಕತ್ರಯ 'ದಲ್ಲಿ :

" ಲಿಂಗದೊಳಿಟ್ಟ ದೃಷ್ಟಿ ನಿಜದೃಷ್ಟಿಯೊಳಿಟ್ಟಮನಂ ಮನಸ್ಸಿನೊ
ಳ್ಪಿಂಗದೆ ನಿಂದ ಭಾವಮದರೊಳ್ನೆಲೆಗೊಂಡ ಶಿವಾತ್ಮಲಿಂಗವಾ
ಲಿಂಗದೊಳಿರ್ದು ನಿತ್ಯಸುಖಿಯಾಗಿ ವಿರಾಜಿಸುವಂಗೆ ಬಾಹ್ಯ ಕ
ರ್ಮಂಗಳವೇತಕಯ್ಯ ಪರಮಪ್ರಭುವೇ ಮಹದೈಪುರೀಶ್ವರಾ "

ಎಂದು ಹೇಳಿರುವಂತೆ ಶ್ರೀಗಳವರು ಅಂಗವೇ ಲಿಂಗಾವಾಗಿರುವ ಚಿಃಪರಿಣಾಮಿಯ ನಿಬ್ಬೆರಗಿನ ಸ್ಥಿತಿಯನ್ನು ತನ್ಮಯತೆಯನ್ನು ಪಡೆದು ಅನುಪಮ ಸುಖಿಗಳಾಗಿರುತ್ತಿದ್ದರು.

ಮನದ ಮುಂದಿರುವ ಹೊನ್ನು-ಹೆಣ್ಣು-ಮಣ್ಣುಗಳ ಆಶೆಯೆಂಬ ಮಾಯೆಯನ್ನು ಗೆಲಿದ ಮಹಾತ್ಮರು ಎಲ್ಲಿಯೋ ಒಬ್ಬಿಬ್ಬರು. ಅಂತಹರಲ್ಲಿ ಶ್ರೀಗಳವರೂ ಒಬ್ಬರು. ಅವರೊಬ್ಬ 'ಸಮಲೋಷ್ಟಾಶ್ಮಕಾಂಚನ' ರಾದ ಸ್ಥಿತ ಪ್ರಜ್ಞರು, ವೀರ ವಿರಾಗಿಗಳು. ಪ್ರತಿನಿತ್ಯ ಸಾವಿರಾರು ಜನ ಶ್ರೀಗಳವರ ದರ್ಶನಕ್ಕೆ ಬಂದು ಕಾಣಿಕೆಗಳನ್ನು ಅರ್ಪಿಸುತ್ತಿದ್ದರು. ಶ್ರೀಗಳವರು ಅವನ್ನೆಂದೂ ಗಣನೆಗೆ ತಂದವರಲ್ಲ. ಹಣವನ್ನು ಎಂದೂ ಮುಟ್ಟಿ ಎಣಿಕೆ ಮಾಡಿದವರಲ್ಲ; ಕಷ್ಟದಲ್ಲಿದ್ದ ಭಕ್ತನಿಗೆ, ಬಡ ವಿದ್ಯಾರ್ಥಿಗೆ ಆ ಕಾಣಿಕೆ ಮೀಸಲು; ಬೇಡಿದವರಿಗೆ ಶ್ರೀಗಳವರು ಬೊಗಸೆ ತುಂಬ ಕೊಟ್ಟು ಕಳುಹುವರು. ಬೇಕೆಂದು ಅವರೆಂದೂ ಕೂಡಿಟ್ಟವರಲ್ಲ. ತಂದಿಕ್ಕುವ ಶಿವನೇ ಅವರ ಮನೋಮಂದಿರದಲ್ಲಿ ವಾಸವಾಗಿರುವಾಗ, ಇಂದು-ನಾಳೆಗೆಂದು ಅವರೇಕೆ ಚಿಂತಿಸಬೇಕು ? ನಿಸ್ಪೃಹತೆಯೇ ಶ್ರೀಗಳವರ ರೂಪದಲ್ಲಿ ಮೈದಾಳಿ ಬಂದಂತಿತ್ತು. ಹೊನ್ನು-ಹೆಣ್ಣು-ಮಣ್ಣುಗಳ ರೂಪದಲ್ಲಿ ಮಾಯೆಗೆ ನಿಜೇಷ್ಟಲಿಂಗದಲ್ಲಿ ನೆಟ್ಟ ಅವರ ದೃಷ್ಟಿಯನ್ನು ಸೆಳೆಯುವದು ಸಾಧ್ಯವಾಗದೆ ಹೋಯಿತು. ಇಂದ್ರಿಯ ನಿಗ್ರಹದಿಂದಾಗಿ ಅವರ ಮನ ನಿಶ್ಚಲವಾಗಿತ್ತು. ದೃಢವಾದ ಅವರ ಮನವನ್ನು ಕಲಕುವ ಶಕ್ತಿ ಯಾವ ಪ್ರಾಪಂಚಿಕ ಆಕರ್ಷಣೆಯಲ್ಲಿಯೂ ಇರಲಿಲ್ಲ. ಅವರೆಂದೂ ಹೆಣ್ಣು ಮಕ್ಕಳ ಪಾಕವನ್ನು, ಸಾಧಕರ ಮಾರ್ಗದರ್ಶನಕ್ಕಾಗಿ, ಮುಟ್ಟಿದವರಲ್ಲ. ಕಾಮಿನಿ-ಕಾಂಚನಗಳನ್ನು ಅವರೆಂದೂ ತನುವಿನಿಂದ ಸೋಂಕಲಿಲ್ಲ, ಮನದಲ್ಲಿ ನೆನೆಯಲಿಲ್ಲ.

---

§ ಶತಕತ್ರಯವು ( ಮಹದೈ ಪುರೀಶ್ವರ ಶತಕ-ಪದ್ಯ:೫೨ ); ಸಂ: ವೈ. ವಿರುಪಾಕ್ಷಯ್ಯ, ಸ್ಟಾರ್ ಆಫೀಸ್, ಮೈಸೂರು; 1925.

CC-0. Jangamwadi Math Collection. Digitized by eGangotri

ಹೆಣ್ಣನ್ನು ಹೊನ್ನನ್ನು। ಹಣ್ಣಾದ ಮರಗಳನು।
ಕಣ್ಣಿನಲಿ ಕಂಡು ಮನದಲ್ಲಿ ಬಯಸದಿಹ।
ಅಣ್ಣಗಳು ಯಾರು ಸರ್ವಜ್ಞ ॥*

ಎಂದು ಸರ್ವಜ್ಞಕವಿಯು ಹೇಳಿದಂತೆ ಎಲ್ಲರೂ ಮಾತಿನಲ್ಲಿ ಶುಚಿ-ವೀರ-ಸಾಧುಗಳು; ನಿಜವಾಗಿಯೂ ಕಾಮಿನಿಯನ್ನು ಗೆಲಿದ ವಿರಾಗಿಗಳು ಬಹಳ ಅಪರೂಪ. ಆದರೆ ಶ್ರೀಗಳವರು ಹೆಣ್ಣನ್ನು ಪ್ರತ್ಯಕ್ಷ ದೇವತೆ, ತಾಯಿಯೆಂಬ ಪವಿತ್ರ ಭಾವನೆಯನ್ನು ತಳೆದ ಮಹಾನುಭಾವಿಗಳಾಗಿದ್ದರು.

ಮಣ್ಣನ್ನು ಅವರು ಕೈಯಿಂದ ಮುಟ್ಟಿದವರಲ್ಲ. ಯಾವ ಆಸ್ತಿ-ಪಾಸ್ತಿಗಳಿಗೂ ಮನಸ್ಸು ಮಾಡಿದವರಲ್ಲ; ಅವರೆಲ್ಲಿಯೂ ಬಹಳ ದಿನವಿರುತ್ತಿರಲಿಲ್ಲ. ಭಕ್ತರನ್ನು ಉದ್ಧರಿಸುತ್ತ ಸಂಚರಿಸುವದೇ ಲೇಸೆಂದು ಅವರು ಬಗೆದಿದ್ದರು. ಜಂಗಮರೂಪ ದಲ್ಲಿ ಪರಶಿವನು ಸಾಕಾರನಾಗಿ ಅತಿಥಿರೂಪದಲ್ಲಿ ಸಂಚರಿಸುವನೆಂದು ಆಗಮಗಳು ಹೇಳುತ್ತಿವೆ.† ಅಂತಹ ನಿರಾಭಾರ ಜಂಗಮತ್ವವನ್ನು ಶ್ರೀಗಳವರು ಪಡೆದಿದ್ದರು, ಸರ್ವಜನ ಸಂಪೂಜ್ಯರಾಗಿದ್ದರು. ಮಠವನ್ನು ಹಿಡಿದು ಕುಳಿತವರಲ್ಲ. ಸ್ವಂತ ಮಠದ ಏಳ್ಗೆಗಾಗಿಯಲ್ಲ, ಸಮಾಜವೆಂಬ ಸುದೃಢವಾದ ಮಹಾಮಠವನ್ನು ಕಟ್ಟಲು ಹೆಣಗಿದರು. ಹಾವೇರಿಯ ನೂತನ ಮಠವನ್ನು ಭಿಕ್ಷೆ ಬೇಡಿ ದುಡ್ಡು ತಂದು ಕಟ್ಟಿಸಲಿಲ್ಲ. ಅದನ್ನು ಶಿವನೇ ಭಕ್ತರ ರೂಪದಲ್ಲಿ ಬಂದು ಕಟ್ಟಿರಬೇಕು.

ಜಿತಕಾಮಾ ಜಿತಕ್ರೋಧಾ ಮೋಹಗ್ರಂಥಿವಿಭೇದಿನಃ।
ಸಮಲೋಷ್ಟಾಶ್ಮಕನಕಾಃ ಸಾಧವಃ ಶಿವಯೋಗಿನಃ॥
ಸಮಾಃ ಶತ್ರೌ ಚ ಮಿತ್ರೇ ಚ ಸಾಕ್ಷಾತ್ಕೃತಶಿವಾತ್ಮಕಾಃ।
ನಿಃಸ್ಪೃಹಾ ನಿರಹಂಕಾರಾ ವರ್ತಂತೇ ಶಿವಯೋಗಿನಃ॥§

ಎಂದು 'ಸಿದ್ಧಾಂತ ಶಿಖಾಮಣಿ' ಯಲ್ಲಿ ಹೇಳಿರುವ ನಿರಾಭಾರಿ ಜಂಗಮದ ಲಕ್ಷಣ ಗಳೆಲ್ಲ ಶ್ರೀಗಳವರ ವೀರವಿರಕ್ತಿಯ ದಿವ್ಯ ಜೀವನದಲ್ಲಿ ಅನ್ವಯಿಸುತ್ತಿದ್ದವು.

---

* ಸರ್ವಜ್ಞ ವಚನಗಳು: ಚನ್ನಪ್ಪ ಉತ್ತಂಗಿ; ೧೯೫೭, ೯ನೆಯ ಮುದ್ರಣ; ವ.೧೨೭೦

† ಸದ್ಭಕ್ತಾನುಗ್ರಹಾರ್ಥಾಯ ಪರ್ಯಟಾಮಿ ಮಹೀತಲೇ।
ತಸ್ಮಾದ್ಭಕ್ತ್ಯಾ ಯಥಾಶಕ್ತಿ ಪೂಜಯೇಚ್ಛಿವಯೋಗಿನಃ॥
—ಪಾರಮೇಶ್ವರ ತಂತ್ರ, ನಾರದಗ್ರಂಥ ಮಾಲಾ ೯; ೧೯೦೪, ಪಟಲ:೫ ಶ್ಲೋಕ:೮೬

§ ವೀರಶೈವ ಸಿದ್ಧಾನ್ತ ಶಿಖಾಮಣಿಃ (ವೀರಶೈವ ಗ್ರಂಥ ಪ್ರಕಾಶಿಕಾ ಗ್ರಂಥಾವಳಿ, ನಂ. ೧೧); ಎನ್. ಆರ್. ಕರಿಬಸವ ಶಾಸ್ತ್ರಿ; 1914; ಪರಿಚ್ಛೇದ: ೧೧; ಶ್ಲೋಕ: ೩೯-೪೦;

CC-0. Jangamwadi Math Collection. Digitized by eGangotri

## ದಯಾಪರತೆ

ಕಷ್ಟದಲ್ಲಿ ಬಿದ್ದ ಪ್ರತಿಯೊಂದು ಪ್ರಾಣಿಯಲ್ಲಿ ಶ್ರೀಗಳವರು ದಯಾರ್ದ್ರ ಭಾವನೆಯುಳ್ಳವರಾಗಿದ್ದರು. ಮೌನಿಯೂ ಭೂತದಯಾಯುಕ್ತನೂ ಆದ ನಿರಾಭಾರನೇ ನಿಜ ಜಂಗಮನೆಂಬ *ಆಗಮವಚನಕ್ಕೆ ಶ್ರೀಗಳವರ ದಯಾಳು ಭಾವ ಸರಿದೂಗುವಂತಿತ್ತು. ಬಡವರಿಗೆ ಆರ್ತರಿಗೆ ಕೈಲಾದ ಮಟ್ಟಿಗೆ ಸಹಾಯ ನೀಡುವದು ಶ್ರೀಗಳವರ ಸ್ವಭಾವವಾಗಿದ್ದಿತು. ಶ್ರೀಗಳವರ ಉದಾರತೆಯಿಂದ ಕೃತಾರ್ಥರಾದ ಶಾಸ್ತ್ರಿಗಳೆಷ್ಟೋ ? ಭಕ್ತರೆಷ್ಟೋ ? ದೀನ-ದರಿದ್ರರೆಷ್ಟು ಜನರೋ ?

ನಾನು ಹಾವೇರಿಯಲ್ಲಿ ಶ್ರೀಗಳವರ ಸೇವೆಯಲ್ಲಿದ್ದಾಗ ನಡೆದ ಪ್ರಸಂಗ. ಪ್ರಾತಃಕಾಲ ಶ್ರೀಗಳವರು ಬಹಿರ್ದೇಶಕ್ಕೆ ದಯಮಾಡಿಸಿದ್ದರು. ಚಳಿಗಾಲ. ಮೈ ಕೊರೆಯುವ ಶೀತಗಾಳಿ ಬೀಸುತ್ತಿತ್ತು. ಒಬ್ಬ ಬಡರೋಗಿ ಮೈಯಲ್ಲಿ ಹೊದಿಕೆಯಿಲ್ಲದೆ ಗದಗದ ನಡುಗುತ್ತಿದ್ದ. ಶ್ರೀಗಳವರು ಅವನಿಗೆ ತಮ್ಮ ಖಾದಿಯ ಶಾಲನ್ನೆ ಹೊದಿಯಲು ದಯಪಾಲಿಸಿ ಅವನ ಶುಶ್ರೂಷೆಯ ಅನುಕೂಲತೆಯನ್ನು ಭಕ್ತರ ಮುಖಾಂತರ ಕಲ್ಪಿಸಿದರು.

ಒಂದು ದಿನ ಶ್ರೀಗಳವರು ಶಿವಯೋಗಮಂದಿರದ ಭಿಕ್ಷೆಗಾಗಿ ಗುಳೇದಗುಡ್ಡಕ್ಕೆ ದಯಮಾಡಿಸಿದ್ದರು. ಒಬ್ಬ ಬಡ ಜಂಗಮ ಬಂದು ತನ್ನ ಮಗನ ಲಗ್ನಕ್ಕೆ ಎರಡು ನೂರು ರೂಪಾಯಿಗಳು ಬೇಕಾಗಿವೆಯೆಂದು ಬಹು ಅಂಗಲಾಚಿ ಬೇಡಿಕೊಂಡ. ಆಗ ಶ್ರೀಗಳವರು ಕಾರಕೂನನನ್ನು ಕರೆದು ಜಂಗಮನ ಇಚ್ಛೆಯನ್ನು ಪೂರೈಸುವಂತೆ ಅಪ್ಪಣೆ ಮಾಡಿದರು. ಕಾರಕೂನನು ಎದುರಿನಲ್ಲಿ 'ಹೂಂ' ಎಂದು ಜಂಗಮನಿಗೆ ಸಹಾಯ ನೀಡಲಿಲ್ಲ. ಅದು ಶ್ರೀಗಳವರಿಗೆ ತಿಳಿಯಿತು. ಕಾರಕೂನನನ್ನು ಕರೆಯಿಸಿ ತಪ್ಪಿದುದಕ್ಕೆ ಮತ್ತೆ ಐವತ್ತು ಹೆಚ್ಚಿಗೆ ರೂಪಾಯಿಗಳನ್ನು ಕೊಡಿಸಿ "ಶಿವನದನ್ನು ಶಿವನಿಗೆ ಕೊಡಲು ಸಂಕೋಚವೇಕೆ ?" ಎಂದು ಅಪ್ಪಣೆ ಮಾಡಿದರು. ಆರ್ತರ ಕೊರಗಿನಲ್ಲಿ ಶಿವನ ಕರೆಯನ್ನು ಕೇಳುತ್ತಿದ್ದ ಮಹಾತ್ಮರವರು. ಎಷ್ಟೋ ಜನ ಭಕ್ತರು ವ್ಯಾಪಾರ ಉದ್ಯೋಗಗಳನ್ನು ಮಾಡಲು ಶ್ರೀಗಳವರಿಂದ ಸಾವಿರಾರು ರೂಪಾಯಿಗಳ ನೆರವನ್ನು ಪಡೆದ ನೂರಾರು ಉದಾಹರಣೆಗಳಿವೆ. ಕೊಟ್ಟುದನ್ನು ತಿರುಗಿ ಕೇಳುವದು ಶ್ರೀಗಳವರ ಸ್ವಭಾವವಾಗಿರಲಿಲ್ಲ. ಕೆಲವರು ಮರಳಿ ಕೊಟ್ಟವರುಂಟು. ಆದರೆ, ಕೊಡದವರೇ ಬಹಳ. ಶ್ರೀಗಳವರು ಆ ಬಗೆಗೆ ಕನಸುಮನಸಿನಲ್ಲಿಯೂ ಯೋಚಿಸಿದವರಲ್ಲ.

---

* मौनी भूतदयायुक्तो निराभार इति स्मृतः.... ॥ ७८ ॥
–सूक्ष्मागम ( पटलः ७ ) वारदग्रंथमाला २, १९०१;

CC-0. Jangamwadi Math Collection. Digitized by eGangotri

ಶ್ರೀಗಳವರು ಶಿವಯೋಗಮಂದಿರದ ಸ್ಥಾಪನೆಯ ಕಾಲದಲ್ಲಿ ಸಂಸ್ಥೆಯ ಆಕಳು-ದನ-ಕರುಗಳನ್ನು ತಾವೇ ಸ್ವತಃ ಮೇಯಿಸಿ ಜೋಪಾನ ಮಾಡಿದ್ದು ಅವರ ಪ್ರಾಣಿ ದಯಾಪರತೆಯ ಕುರುಹಾಗಿದೆ. 'ದಯೆಯೆ ಧರ್ಮದ ಮೂಲವಯ್ಯ' ಎಂಬ ಬಸವಣ್ಣನವರು ಹೇಳಿದ ತತ್ತ್ವದ ಮರ್ಮವನ್ನು ಅರಿತು ಶ್ರೀಗಳವರು ಆದರ್ಶ ದಯಾಳುವಾಗಿ ಬಾಳಿ ಬೆಳಗಿದರು.

## ಬ್ರಹ್ಮಚರ್ಯ

ಶ್ರೀಗಳವರು ಚಿಕ್ಕಂದಿನಿಂದಲೂ ಗುರುಶುಶ್ರೂಷೆಯಲ್ಲಿ ಕಾಲಕಳೆಯುತ್ತ ಆಜನ್ಮ ಬ್ರಹ್ಮಚರ್ಯ ಪಾಲಿಸುತ್ತ ಬಂದರು. ಬ್ರಹ್ಮಚರ್ಯದ ಕಳೆಯು ಮುಖದಲ್ಲಿ ಹೊರಸೂಸುತ್ತಿತ್ತು. ಸಾತ್ತ್ವಿಕ ವೃತ್ತಿಯಿಂದ ಆಹಾರಾದಿಗಳಲ್ಲಿ ಸಂಯಮ ಪಾಲಿಸಿ ಬ್ರಹ್ಮಚರ್ಯವನ್ನು ಸಾಧಿಸಿ ಸಿದ್ಧಿ ಪಡೆದವರು. 'ಆಹಾರ ಶುದ್ಧೌ ಸತ್ತ್ವಶುದ್ಧಿಃ'- ಆಹಾರ ಶುದ್ಧಿಯು ಸಾಧಿಸಿದರೆ ಬ್ರಹ್ಮತತ್ತ್ವವು ತಾನೇ ನೆಲೆಗೊಳ್ಳುವದು. ಶ್ರೀಗಳವರು ಅಂತರಂಗದಲ್ಲಿ ಬಹಿರಂಗದಲ್ಲಿಯೂ ಬ್ರಹ್ಮಚರ್ಯವನ್ನು ಆಚರಿಸಿದವರು. ಮನವೇ ಬಂಧ ಮೋಕ್ಷಗಳಿಗೆ ಕಾರಣ. ಅಂತೆಯೆ "ಜಿತಂ ಜಗತ್ ಕೇನ? ಮನೋ ಹಿ ಯೇನ" -ಮನವನ್ನು ನಿಗ್ರಹಿಸಿದವನೇ ಜಗತ್ತನ್ನು ಗೆಲ್ಲುವನೆಂದು ಹೇಳಿದೆ. ಮನಸ್ಸು ಬಹು ಚಂಚಲವಾದುದು; ವಿಕಾರವನ್ನುಂಟುಮಾಡುವದು, ಬಲವುಳ್ಳದು; ಬಿರುಗಾಳಿಯನ್ನು ಹಿಡಿದು ನಿಲ್ಲಿಸುವಂತೆ ಮನೋನಿಗ್ರಹ ಬಹು ಕಠಿಣವಾದುದು ದುಷ್ಕರವಾದುದೆಂದು ಅರ್ಜುನನು ಕೇಳಿದ ಮಾತಿಗೆ- ಭಗವಂತನು "ಚಂಚಲವಾದ ಮನಸ್ಸನ್ನು ಅಭ್ಯಾಸದಿಂದಲೂ ವೈರಾಗ್ಯದಿಂದಲೂ ನಿಗ್ರಹಿಸಲು ಸಾಧ್ಯವಿದೆ. ಮನೋನಿಗ್ರಹವನ್ನು ಸಾಧಿಸದವನಿಗೆ ಯೋಗವು ಸಿದ್ಧಿಸದು"* ಎಂದು ಹೇಳಿರುವ ಮಾತು ನಿಜಕ್ಕೂ ಬಹು ತಾತ್ತ್ವಿಕವಾಗಿದೆ.

ಇಂದ್ರಿಯಾಣಾಂ ವಿಚರತಾಂ ವಿಷಯೇಷ್ವಪಹಾರಿಷು ।
ಸಂಯಮೇ ಯತ್ನಮಾತಿಷ್ಠೇದ್ವಿದ್ವಾನ್ ಯಂತೇವ ವಾಜಿನಾಂ ॥
........ ........ ........
ವಶೇ ಕೃತ್ವೇಂದ್ರಿಯಗ್ರಾಮಂ ಸಂಯಮ್ಯ ಚ ಮನಸ್ತಥಾ ।
ಸರ್ವಾನ್ ಸಂಸಾಧಯೇದರ್ಥಾನಕ್ಷಿಣ್ವನ್ ಯೋಗತಸ್ತನುಮ್ ॥

ಸಾರಥಿಯು ರಥದ ಕುದುರೆಗಳನ್ನು ತನ್ನ ವಶದಲ್ಲಿಟ್ಟುಕೊಂಡಿರುವಂತೆ, ತಿಳಿದವನು ವಿಷಯಗಳತ್ತ ಹರಿಯುವ ಇಂದ್ರಿಯಗಳನ್ನು ನಿಗ್ರಹಿಸಲು ಪ್ರಯತ್ನಿಸ

* ಭಗವದ್ಗೀತಾ : ಅಧ್ಯಾಯ ೬; ಶ್ಲೋಕಗಳು : ೩೪-೩೫-೩೬;

CC-0. Jangamwadi Math Collection. Digitized by eGangotri

ಬೇಕು; ಇಂದ್ರಿಯಗಳೆನ್ನೆಲ್ಲ ತನ್ನ ವಶದಲ್ಲಿಟ್ಟುಕೊಂಡು, ಮನವನ್ನು ನಿಗ್ರಹಿಸಿ, ಕಾಯಕ್ಲೇಶವಿಲ್ಲದೆ, ಈ ಮನೋಯೋಗದಿಂದ ಎಲ್ಲ ಧ್ಯೇಯಗಳನ್ನು ಸಾಧಿಸಬೇಕು.§ ಎಂದು ಮಹಾಜ್ಞಾನಿ ಮನುವು ಹೇಳಿರುವಂತೆ ವಿಷಯಗಳಲ್ಲಿ ಹರಿದಾಡುವ ಮನ ವನ್ನು ಶ್ರೀಗಳು ಲಿಂಗದಲ್ಲಿ ಲೀನವಾಗಿರಿಸಿದರು, ಇಂದ್ರಿಯಗಳನ್ನೆಲ್ಲ ಅಂತರ್ಮುಖ ವಾಗಿರಿಸಿದರು. ಮಹಾಕವಿ ಚಾಮರಸನು ಹೇಳಿದಂತೆ ಅವರು 'ಕರಣದಲ್ಲಿ ಕಾಳಗ' ಮಾಡಿ ವಿಜಯಶಾಲಿಗಳಾದ ಅಧ್ಯಾತ್ಮ ವೀರರು. ಶ್ರೀಗಳವರು ಶಿವಯೋಗ ಸಾಧನೆಯಿಂದ ಕರಣಗಳನ್ನೆಲ್ಲ ಲಿಂಗಕಿರಣಗಳನ್ನಾಗಿ ಮಾರ್ಪಡಿಸಿದರು, 'ಸರ್ವಾಂಗ ಲಿಂಗಮಯ ಶಿವಯೋಗಿ' ಯಾದರು. ಮೂಗಿನಿಂದ ಗಂಧವನ್ನು ಆಚಾರಲಿಂಗ ಮುಖವಾಗಿ, ನಾಲಿಗೆಯಿಂದ ರುಚಿಯನ್ನು ಗುರುಲಿಂಗ ಮುಖವಾಗಿ, ಕಣ್ಣಿನಿಂದ ರೂಪವನ್ನು ಶಿವಲಿಂಗ ಮುಖವಾಗಿ, ಕಿವಿಯಿಂದ ಶಬ್ದವನ್ನು ಪ್ರಸಾದ ಲಿಂಗ ಮುಖವಾಗಿ, ಚರ್ಮದಿಂದ ಸ್ಪರ್ಶವನ್ನು ಜಂಗಮಲಿಂಗ ಮುಖವಾಗಿ - ಹೀಗೆ ಶ್ರೀಗಳವರ ಸರ್ವಾಂಗಗಳಲ್ಲಿ ಲಿಂಗಮುಖವಾಗಿಯೇ ನಿಜತೃಪ್ತಿಯನ್ನು ಪಡೆದವರು. ಶ್ರೀಗಳವರ ಇಂದ್ರಿಯಗಳೆಲ್ಲ ಯಾವಾಗಲೂ ಬ್ರಹ್ಮದಲ್ಲಿ ಮಹಾ ಲಿಂಗದಲ್ಲಿ ಚರಿಸುತ್ತಿದ್ದುದರಿಂದ ಅವರಾಚರಿಸಿದ ಬ್ರಹ್ಮಚರ್ಯ ಸಾಧಕರಿಗೆ ಪರಮಾದರ್ಶವಾಗಿದ್ದಿತು.

### ತಪೋಜೀವನ

ಮಾಡಲಿಲ್ಲವೆ ತಪವ ಮಾಡಲಿಲ್ಲವೆ
ಕೂಡೆ ಸುಗುಣದೊಡನೆ ತಿಳಿದು ನೋಡಿ ತ್ರಿವಿಧ ಕರಣದಲ್ಲಿ ॥ ಪ ॥

ಗುರುಭಜನೆ ಸುಕರ್ಮವೃತ್ತಿ
ಹರನ ಪೂಜೆ ಶರಣ ಸೇವೆ
ಪರಮ ಸಾತ್ವಿಕಂಗಳೆಂಟು ನೆರೆದು ನೆಲಸಿ ತನುವಿನಲ್ಲಿ ॥ ೧ ॥

ವಿನಯವನ್ಯಹಿತವತರ್ಕ-
ವನಪಶಬ್ದವಚಲಿತಾರ್ಥ-
ವನಘಮಂತ್ರವಾಗಮಂಗಳನಿತುವಿಡಿದು ವಚನದಲ್ಲಿ ॥ ೨ ॥

ಶಮೆ ವಿವೇಕವಾತ್ಮವಿದ್ಯೆ
ದಮೆ ದಯಾವಿರಕ್ತಿಯೋಗ-
ವಮಳರೂಪು ಶಂಭುಲಿಂಗವಮರ್ದು ತೋರಿ ಸುಮನದಲ್ಲಿ ॥ ೩ ॥*

---

§ ಮನುಸ್ಮೃತಿ : ಅ. ೨, ಶ್ಲೋ. ೮೮–೧೦೦;

* ಕೈವಲ್ಯಪದ್ಧತಿ (ಸಟೀಕ): ಗಂಗಾಧರ ಮಡಿವಾಳೇಶ್ವರ ಅವರಿಂದ ಶೋಧಿಸ ಲ್ಪಟ್ಟದ್ದು; 1879; ನೀತಿಕ್ರಿಯಾಚರ್ಯ ಪ್ರತಿಪಾದನ ಸ್ಥಲ; ಪದ್ಯ–೨೧.

CC-0. Jangamwadi Math Collection. Digitized by eGangotri

ಎಂದು ನಿಜಗುಣ ಶಿವಯೋಗಿಗಳು ಅಪ್ಪಣೆ ಕೊಡಿಸಿದಂತೆ ಶ್ರೀಗಳವರು ಪ್ರತಿನಿತ್ಯ ಪ್ರಾತಃಕಾಲ ಎದ್ದು ಗುರುಸ್ತೋತ್ರವನ್ನು ಮಧುರ ಕಂಠದಿಂದ ಭಕ್ತಿಭಾವದಿಂದ ಹಾಡುತ್ತಿದ್ದರು; ಗುರುಸೇವೆ ಮೊದಲಾದ ಸಾತ್ತ್ವಿಕಾಚರಣೆಯಲ್ಲಿ ನಿಷ್ಠೆಯುಳ್ಳವರು; ಲಿಂಗಪೂಜೆಯನ್ನು ಜೀವನದ ಮುಖ್ಯ ಧ್ಯೇಯವನ್ನಾಗಿಟ್ಟುಕೊಂಡವರು; ಅಥಣಿಯ ಶ್ರೀಮುರುಘಸಿದ್ಧ ಶಿವಯೋಗಿಗಳು ಮತ್ತು ಬಿದರಿಯ ಶ್ರೀ ಕುಮಾರ ಶಿವಯೋಗಿಗಳಂತಹ ಮಹಾತ್ಮರ ಸೇವೆಯನ್ನು ಭಕ್ತಿಪೂರ್ವಕವಾಗಿ ಮಾಡಿ ತನುತಪಸ್ಸನ್ನು ಸಾಧಿಸಿದರು; ವಿನಯಶೀಲರು ಮತ್ತು ಪರೋಪಕಾರಿಗಳೂ ಆಗಿದ್ದು ಯಾರ ಮನವನ್ನೂ ಬಿರುನುಡಿಗಳಿಂದ ನೋಯಿಸದೆ, ಷಡಕ್ಷರಮಂತ್ರಾನುರಾಗಿಗಳಾಗಿ, ಆದ್ಯರ ವಚನಗಳನ್ನು ಹೇಳುವಲ್ಲಿ ಕೇಳುವಲ್ಲಿ ಅನುರಕ್ತಿಯುಳ್ಳವರಾಗಿದ್ದು ವಾಚಿಕ ತಪವನ್ನು ಮಾಡಿದರು; ಅಂತರ್ಬಹಿರಿಂದ್ರಿಯ ನಿಗ್ರಹವನ್ನು ಸಾಧಿಸಿ, ಸ್ವಸ್ವರೂಪಜ್ಞಾನ-ದಯೆ-ಅಪರಿಗ್ರಹ-ಶಿವಯೋಗ ಮೊದಲಾದ ಸದ್ಗುಣಗಳನ್ನು ಪಡೆದು ಮಾನಸತಪವನ್ನು ಮಾಡಿದರು.

ಲಿಂಗದಲಿ ಮನವಾಗಿ । ಲಿಂಗದಲಿ ನೆನಹಾಗಿ ।
ಲಿಂಗದಲಿ ನೋಟ ನುಡಿಕೂಟವಾದವನು ।
ಲಿಂಗವೇ ಅಕ್ಕು ಸರ್ವಜ್ಞ ॥†

ಎಂಬಂತೆ ಶ್ರೀಗಳವರು ಶಿವನಾಗಿಯೇ ಶಿವನನ್ನು ತ್ರಿವಿಧವಾಗಿ ಅರ್ಚಿಸಿ ಜೀವನ್ಮುಕ್ತರಾಗಿದ್ದರು. ಅವರ ಇಡಿಯ ಜೀವನವೇ ತಪೋಮಯವಾಗಿದ್ದಿತು.

## ಲಿಂಗಭೋಗೋಪಭೋಗ

ಬಯಸಿ ಬಂದುದು ಅಂಗಭೋಗ, ಬಯಸದೇ ಬಂದುದು ಲಿಂಗಭೋಗವೆಂದು ಶರಣರು ಬೋಧಿಸಿರುವರು. ತದೇಕಭಾವದಿಂದ ಲಿಂಗಪೂಜೆಯಲ್ಲಿ ತಲ್ಲೀನರಾದ ಶ್ರೀಗಳವರಿಗೆ ಶಿವನು ಯಾವುದಕ್ಕೂ ಕೊರತೆಯನ್ನುಂಟು ಮಾಡಲಿಲ್ಲ. ಅವರು ಬಯಸದೇ ಲಿಂಗಾರ್ಪಿತಕ್ಕೆ ಬೇಕಾದ ವಸ್ತುಗಳು ಸಕಾಲಕ್ಕೆ ಒದಗುತ್ತಿದ್ದವು. ಶಿವನೇ ಯಾವುದೋ ನೆವದಿಂದ ಅವನ್ನು ಪೂರೈಸುವಂತಿತ್ತು. ಅಂತೆಯೇ ಭಗವದ್ಗೀತೆಯಲ್ಲಿ :

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥

---

† ಸರ್ವಜ್ಞ ವಚನಗಳು (ತಿದ್ದಿದ ಹೊಸ ಆವೃತ್ತಿ–೧೯೫೭) ಸಂ. ಚನ್ನಪ್ಪ ಉತ್ತಂಗಿ, ಲಿಂಗಪದ್ಧತಿ : ವಚನ– ೧೨೫

CC-0. Jangamwadi Math Collection. Digitized by eGangotri

## ಶಿವಯೋಗಿತ್ರಯರು



ಮಧ್ಯದಲ್ಲಿ ಲಿಂ. ಬಿದರಿ ಕುಮಾರೇಶ್ವರರು,
ಎಡಗಡೆ ಲಿಂ. ಹಾವೇರಿ ಶ್ರೀಗಳು ಮತ್ತು ಬಲಗಡೆ ಲಿಂ. ಹಾನಗಲ್ಲ ಶ್ರೀಗಳವರು.

CC-0. Jangamwadi Math Collection. Digitized by eGangotri



ಶ್ರೀ ಶಿವಯೋಗ ಮಂದಿರದ ಸ್ಥಾಪನೆಯ ಕಾಲಕ್ಕೆ ೧೯೦೯ ರಲ್ಲಿ ಇದ್ದ ಏಳು ಜನ ಸಾಧಕರು :–
ಎಡದಿಂದ ಬಲಕ್ಕೆ :- ೧. ಶ್ರೀ ಬಸವಲಿಂಗ ದೇವರು, (ಈಗಿನ ನವಿಲಗುಂದ ಗವಿಮಠಾಧ್ಯಕ್ಷರು), ೨. ಶ್ರೀ ಆಪ್ಪಯ್ಯ ದೇವರು, ೩. ಶ್ರೀ ಕಂಚಗಲ್ಲ ಬಿದರೆಯ ಶ್ರೀ ಪ್ರಭುಕುಮಾರ ಪಟ್ಟಾಧ್ಯಕ್ಷರು, ೪. ಶ್ರೀ ಮಹಾದೇವ ದೇಶಿಕರು ( ಈಗಿನ ಕುರವತ್ತಿ ಶ್ರೀಗಳು), ೫. ಶ್ರೀ ಶಿವಮೂರ್ತಿದೇವರು ( ಬಾಗಲಕೋಟೆಯ ಚರಂತಿಮಠದ ಲಿಂ. ಶ್ರೀಗಳು), ೬. ಶ್ರೀ ಗುರುಸಿದ್ಧ ದೇವರು ಮುಮದಾಪುರ, ೭. ವ್ಯಾಕರಣಾಳ ಲಿಂ. ಶ್ರೀ ಸಿದ್ಧಲಿಂಗ ಪಟ್ಟಾಧ್ಯಕ್ಷರು.

[ ಭಾವಚಿತ್ರ ಶ್ರೀ ವ್ಹಿ. ಬಿ. ಸಾಸನೂರ ಅವರ ಕೃಪೆಯಿಂದ ]

CC-0. Jangamwadi Math Collection. Digitized by eGangotri

ಎಂದು ಹೇಳಿರುವಂತೆ ಲಿಂಗಯ್ಯನೇ ಶ್ರೀಗಳವರ ಯೋಗಕ್ಷೇಮವನ್ನು ವಹಿಸಿಕೊಂಡಿದ್ದನು. ಶ್ರೀಗಳವರು ಮಾತ್ರ ನಿಷ್ಕಾಮರಾಗಿ ಶಿವಪೂಜೆಯಲ್ಲಿ ತನ್ಮಯರಾಗಿರುತ್ತಿದ್ದರು. ಅನಿರೀಕ್ಷಿತವಾಗಿ ಭಕ್ತರು ಬಗೆಬಗೆಯ ಪಡಿಪದಾರ್ಥಗಳನ್ನು ಶ್ರೀಗಳವರ ಪ್ರಸಾದವಿನಿಯೋಗಕ್ಕೆಂದು ತಂದು ನೀಡುವರು. ಶ್ರೀಗಳವರು ಹಣ್ಣಿನ ಹೊರತಾಗಿ ಲಿಂಗತೃಪ್ತಿಗೆ ಏನನ್ನೂ ಬಯಸುತ್ತಿರಲಿಲ್ಲ. ಒಂದು ದಿನ ಹಿರೇಹಾಳು ಎಂಬ ಗ್ರಾಮದ ಮುಕ್ಕಾಮಿನಲ್ಲಿ ಶಿವಪೂಜೆ ಮುಗಿದು ಅರ್ಪಿತದ ವೇಳೆಯಾಗಿತ್ತು. 'ಇಂದಿನ ಪ್ರಸಾದಕ್ಕೆ ಹಣ್ಣು ಇಲ್ಲವಾಯಿತಲ್ಲ' ಎಂದು ನಾನು ಯೋಚನೆಯಲ್ಲಿದ್ದೆ. ಶ್ರೀಗಳವರು ತಾವಾಗಿಯೇ ಅದನ್ನರಿತು 'ಅದಕೇಕೆ ಯೋಚನೆ ? ತಂದಿಕ್ಕುವ ಶಿವಂಗೆ ಬಡತನವೆ ?' ಎಂದು ಅಪ್ಪಣೆ ಮಾಡುವಷ್ಟರಲ್ಲಿ ಅನಿರೀಕ್ಷಿತವಾಗಿ ಬಾಗಿಲುಕೋಟೆಯಿಂದ ಮ್ಯಾನೇಜರ ಶ್ರೀ. ಬಳ್ಳಾರಿ ಬಸಪ್ಪನವರು ಹಣ್ಣು-ಕಾಯಿಪಲ್ಲೆಯ ಬುಟ್ಟಿಯನ್ನು ತೆಗೆದುಕೊಂಡು ದರ್ಶನಕ್ಕೆ ಬಂದರು.

ಲಿಂಗನೇ ದರುಶನವು । ಲಿಂಗವೇ ಪರುಶನವು ।
ಲಿಂಗ ಸಹೆ ಸರ್ವಸುಖಭೋಗವಾದವನು ।
ಲಿಂಗ ಕಾಣಯ್ಯ ಸರ್ವಜ್ಞ ॥*

ಎಂಬ ಸರ್ವಜ್ಞಕವಿಯ ಮಾತು ಶ್ರೀಗಳವರ ಲಿಂಗಭೋಗೋಪಭೋಗಿ ದಿವ್ಯ ಜೀವನಕ್ಕೆ ಅನ್ವಯಿಸುತ್ತದೆ.

## ಶಿವಯೋಗಮಂದಿರದ ಅಭ್ಯುದಯ

ಪರಮಪೂಜ್ಯ ಹಾನಗಲ್ಲ ಶ್ರೀ ಕುಮಾರ ಮಹಾಸ್ವಾಮಿಗಳು ಮತ್ತು ಹಾವೇರಿ ಶ್ರೀಗಳವರ ತಪಃಪ್ರಭಾವದ ಪರಿಣಾಮವಾಗಿ ಶ್ರೀಮದ್ವೀರಶೈವ ಶಿವಯೋಗ ಮಂದಿರ ಸಂಸ್ಥೆಯು ಸ್ಥಾಪನೆಯಾಯಿತು. ಪ್ರಾರಂಭದಲ್ಲಿ ಮಂದಿರದಲ್ಲಿ ಏಳು ಜನ ಸಾಧಕರಿದ್ದರು. (೧. ವ್ಯಾಕರಣಾಳ ಶ್ರೀ ಸಿದ್ಧಲಿಂಗ ಪಟ್ಟಾಧ್ಯಕ್ಷರು; ೨. ಶ್ರೀ ಅಪ್ಪಯ್ಯದೇವರು; ೩. ಕಂಚಗಲ್ಲ ಬಿದರೆಯ ಶ್ರೀ ಪ್ರಭುಕುಮಾರ ಪಟ್ಟಾಧ್ಯಕ್ಷರು; ೪. ಶ್ರೀ ಮಹಾದೇವ ದೇಶಿಕರು [ಈಗ ಕುರವತ್ತಿ ಶ್ರೀಗಳು]; ೫. ಮಮದಾಪುರದ ಶ್ರೀಗುರುಸಿದ್ಧದೇವರು; ೬. ಶ್ರೀ ಬಸವ ಲಿಂಗದೇವರು, ನವಿಲುಗುಂದ [ಈಗ ಗವಿಮಠಾಧ್ಯಕ್ಷರು]; ೭. ಶ್ರೀ ಶಿವಮೂರ್ತಿದೇವರು ಚರಂತಿಮಠ, ಬಾಗಿಲುಕೋಟೆ) ಹಾವೇರಿ ಶ್ರೀಗಳವರೇ ಇವರೆಲ್ಲರ ಯೋಗಕ್ಷೇಮವನ್ನು ವಹಿಸಿದ್ದರು. ನಿಬಿಡವಾದ ಕಾಡಿನಲ್ಲಿ ಕಲ್ಲು-ಮುಳ್ಳುಗಳನ್ನು ತೆಗೆದು ಪರ್ಣಕುಟೀರಗಳನ್ನು

---
* ಸರ್ವಜ್ಞ ವಚನಗಳು (ಹೊಸ ಆವೃತ್ತಿ) : ಚೆ. ಉತ್ತಂಗಿ; ಲಿಂಗಪದ್ಧತಿ : ವಚನ–೧೫೦;

CC-0. Jangamwadi Math Collection. Digitized by eGangotri

ನಿರ್ಮಿಸಿ ಸಾಧಕರಿಗೆ ಯಾವ ತೆರನಾದ ತೊಂದರೆಯೂ ಆಗದಂತೆ ನೋಡಿಕೊಳ್ಳು ತ್ತಿದ್ದರು. ಹಾನಗಲ್ಲ ಶ್ರೀಗಳವರು ತಂದೆಯಂತೆ ನಾಡಿನ ಮೂಲೆ ಮೂಲೆಯಲ್ಲಿ ಸಂಚರಿಸಿ ಧರ್ಮಜಾಗ್ರತಿಯೊಂದಿಗೆ ಮಂದಿರಕ್ಕಾಗಿ ಭಿಕ್ಷೆಯನ್ನು ಮಾಡಿದರು. ಹಾವೇರಿ ಶ್ರೀಗಳವರು ತಾಯಿಯಂತೆ ಪ್ರೀತಿಯಿಂದ ಮಂದಿರದ ವಟುಗಳನ್ನು ಸಾಧಕರನ್ನು ಸಲಹಿದರು; ಮೊದಮೊದಲು ಮಂದಿರದಲ್ಲಿ ಕಟ್ಟಡಗಳಿಗಾಗಿ ಗುಡ್ಡ ದಿಂದ ಕಲ್ಲು-ಕಟ್ಟಿಗೆಗಳನ್ನು ತಾವೇ ಸ್ವತಃ ಸಾಧಕರೊಂದಿಗೆ ಹೊತ್ತು ತಂದರು. ಗ್ರಂಥ ಸಂಗ್ರಹ, ಕೀರ್ತನಕಾರರು ಮತ್ತು ಗವಾಯಿಗಳ ಶಿಕ್ಷಣ ಮುಂತಾಗಿ ಎಲ್ಲ ವ್ಯವಸ್ಥೆಯನ್ನು ಮಾಡಿದರು; ತಂದೆತಾಯಂದಿರನ್ನು ಅಗಲಿದ ಚಿಕ್ಕ ಚಿಕ್ಕ ವಟು ಗಳ ಮನವು ಮನೆಯತ್ತ ಹರಿಯದೆ, ಓದು-ಬರೆಹ ಮತ್ತು ಯೋಗಸಾಧನೆಯಲ್ಲಿ ಹತ್ತುವಂತೆ ತಕ್ಕ ಏರ್ಪಾಟು ಮಾಡಿದರು. ಸಾಧಕರು ಹಿತ-ಮಿತ-ಸಾತ್ವಿಕಾಹಾರ-ವಿಹಾರದೊಂದಿಗೆ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ ಸಮಾಧಿಯೆಂಬ ಅಷ್ಟಾಂಗಯೋಗದ ಸಾಧನೆಯೊಂದಿಗೆ ದೃಷ್ಟಿ ಯೋಗವನ್ನು ಸಾಧಿಸಿ ಶಿವಯೋಗದಲ್ಲಿ ಪರಿಣತರಾಗುವಂತೆ ಶ್ರೀಗಳವರು ಯೋಜಿ ಸಿದರು. ಶ್ರೀಗಳವರ ಪ್ರಯತ್ನಗಳಿಂದಾಗಿ ಮಂದಿರವು ಪ್ರಶಾಂತವಾದ ಆಶ್ರಮ ವಾಗಿ, ಆದರ್ಶ ಧಾರ್ಮಿಕ ವಿದ್ಯಾಕೇಂದ್ರವಾಗಿ ರೂಪುಗೊಂಡಿತು. ಶ್ರೀಗಳವರ ಕಾರ್ಯಕ್ಷಮತೆಯನ್ನು ಕಂಡೇ ಹಾನಗಲ್ಲ ಪೂಜ್ಯರು ಇವರನ್ನು ಶಿವಯೋಗ ಮಂದಿರ ಸಂಸ್ಥೆಯ ಆಜೀವ ಅಧ್ಯಕ್ಷರನ್ನಾಗಿ ಮಾಡಿದ್ದರು.* ಹಾನಗಲ್ಲ ಶ್ರೀಗಳ

* “ ಶ್ರೀಮನ್ನಿರಂಜನ ಹಾನಗಲ್ಲ ಕುಮಾರ ಮಹಾಸ್ವಾಮಿಗಳು ಶ್ರೀಮನ್ನಿರಂ ಜನ ಹಾವೇರಿ ಶಿವಬಸವ ಮಹಾಸ್ವಾಮಿಗಳವರ ಸಹಾಯದಿಂದ ಬಂದ ಭಿಕ್ಷ ಹಾಗೂ ಕಾಣಿಕಾ ರೂಪದಿಂದ ಕೂಡಿದ ಹಣದಿಂದ ಶಿವಯೋಗ ಹಾಗೂ ಶಿವಧರ್ಮದ ಪ್ರಸಾರ ವಾಗಬೇಕೆಂಬ ಉದಾತ್ತ ವಿಚಾರದಿಂದ ಈ ಸಂಸ್ಥೆಯನ್ನು ಸ್ಥಾಪಿಸಿರುತ್ತಾರೆ. ಅವರ ತಪಃಪ್ರಭಾವದಿಂದಲೂ ಅವರ ಮೇಲಿದ್ದ ದೃಢ ಭಕ್ತಿ ಮುಂತಾದವುಗಳಿಂದಲೂ ಈ ಸಂಸ್ಥೆ ಗಾಗಿ ಧಾರ್ಮಿಕ ಬುದ್ಧಿಯಿಂದ ಜನರು ಸಹಾಯ ಮಾಡಿರುತ್ತಾರೆ. ಈ ಸಂಸ್ಥೆಯ ಯಾವತ್ತು ಕಾರ್ಯಗಳು ಸುವ್ಯವಸ್ಥೆಯಿಂದಲೂ ಸುಸಂಘಟಿತ ರೀತಿಯಿಂದಲೂ ನಡೆಯ ಬೇಕೆಂಬ ವಿಚಾರದಿಂದ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಶ್ರೀ ಹಾವೇರಿ ಸ್ವಾಮಿ ಗಳವರ ಅನುಮತಿಯನ್ನು ಪಡೆದು ಒಂದು ಟ್ರಸ್ಟ ಕಮೀಟಿಯನ್ನು (ಬೋರ್ಡ ಆಫ್ ಟ್ರಸ್ಟೀಜ್) ನೇಮಿಸಿ ತಮ್ಮಲ್ಲಿದ್ದ ಯಾವತ್ತೂ ಹಕ್ಕು, ಅಧಿಕಾರಗಳನ್ನು ಸದರಿ ಬೋರ್ಡಿನ ಸ್ವಾಧೀನದಲ್ಲಿ ಕೊಟ್ಟ ಪ್ರಕಾರ ಆ ಬೋರ್ಡಿನ ಸ್ಥಾನದಲ್ಲಿದ್ದ ಈಗಿರುವ ಟ್ರಸ್ಟಕಮೀಟಿಯು ಈ ಸಂಸ್ಥೆಯ ಯಾವತ್ತೂ ವ್ಯವಸ್ಥೆಯನ್ನು ಮಾಡತಕ್ಕದ್ದು.

ಶ್ರೀಮನ್ನಿರಂಜನ ಹಾವೇರಿ ಶಿವಬಸವ ಮಹಾಸ್ವಾಮಿಗಳವರು ಟ್ರಸ್ಟಕಮೀಟಿಯ ಆಜೀವ ಅಧ್ಯಕ್ಷರಾಗಿರತಕ್ಕದ್ದು. ಅವರ ಪಶ್ಚಾತ್ ಅವರು ಈ ಸಂಸ್ಥೆಯ ಏಳಿಗೆಯ ಬಗ್ಗೆ ತ್ರಿಕರಣಪೂರ್ವಕವಾಗಿ ಪ್ರಯತ್ನಿಸತಕ್ಕ ಮತ್ತು ಆಶ್ರಮ ಧರ್ಮಕ್ಕನುಸಾರವಾಗಿ ನಡೆಯತಕ್ಕ ಧರ್ಮನಿಷ್ಠ ಹಾಗೂ ಆಚಾರ ಸಂಪನ್ನರಾದಂಥ ಶಿವಯೋಗಮಂದಿರದಲ್ಲಿ-

CC-0. Jangamwadi Math Collection. Digitized by eGangotri

ವರು ಲಿಂಗೈಕ್ಯರಾದ ಮೇಲೆ ಶ್ರೀಗಳವರು ಸ್ವತಃ ಭಿಕ್ಷೆ ಮಾಡಿ ಶಿವಯೋಗಮಂದಿರದ ಸರ್ವತೋಮುಖ ಅಭಿವೃದ್ಧಿಯನ್ನು ಲಿಂಗೈಕ್ಯರಾಗುವವರೆಗೂ ಸಾಧಿಸಿದರು.

## ವಟುವಾತ್ಸಲ್ಯ

ಶ್ರೀಗಳವರದು ಮಾತೃಹೃದಯ. ಮಂದಿರದ ವಟುಗಳನ್ನು ಸಾಧಕರನ್ನು ಬಹು ಪ್ರೀತಿಯಿಂದ ಸಾಕಿ ಸಲಹಿದರು. ವಟುಗಳ ಸಾಧಕರ ಶಾರೀರಿಕ ಪೋಷಣೆಯೊಂದಿಗೆ ಅವರ ಬೌದ್ಧಿಕ ಮತ್ತು ಆಧ್ಯಾತ್ಮ ವಿಕಾಸಕ್ಕೂ ಅವರು ಕಾರಣರಾದರು. ತಪ್ಪಿದಾಗ ಒಮ್ಮೊಮ್ಮೆ ಸಿಟ್ಟು ಮಾಡಿದರೂ, ಅವರ ಸ್ವಭಾವ 'ಕುಸುಮಾದಪಿ ಮೃದು'ವಾಗಿತ್ತು. "ಉಷ್ಣತ್ವಮಗ್ನ್ಯಾತಪಸಂಪ್ರಯೋಗಾತ್ ಶೈತ್ಯಂ ಹಿ ಯತ್ ಸಾ ಪ್ರಕೃತಿರ್ಜಲಸ್ಯ" ಎಂದು ಮಹಾಕವಿ ಕಾಳಿದಾಸನು ಹೇಳುವಂತೆ ಶ್ರೀಗಳವರ ಸ್ವಭಾವ, ಬೆಂಕಿ-ಬಿಸಿಲುಗಳ ಸಂಪರ್ಕದಿಂದ ನೀರು ಕೆಲವು ಕ್ಷಣ ಕಾದರೂ ಅದು ಆರಿ ತನ್ನ ಸಹಜ ಗುಣದಂತೆ ತಣ್ಣಗಾಗುವ ಹಾಗೆ ದಯಾರ್ದ್ರವಾಗಿದ್ದಿತು. ಸಾಧಕರಿಗೆ ತಮ್ಮ ಕಟು ಅನುಭವಗಳನ್ನು ವಿವರಿಸಿ, ಹೇಗೆ ಇಂದ್ರಿಯನಿಗ್ರಹವನ್ನು ಸಾಧಿಸಬೇಕು, ಶಿವಯೋಗಾನುಷ್ಠಾನವನ್ನು ಮಾಡಬೇಕೆನ್ನುವದನ್ನು ಹೃದಯಕ್ಕೆ ತಾಕುವಂತೆ ಆತ್ಮೀಯತೆಯಿಂದ ತಿಳಿಸಿ ಹೇಳುತ್ತಿದ್ದರು. ಅದೆಷ್ಟೋ ಶಿವಯೋಗ ಸಾಧಕರು ಶ್ರೀಗಳವರಿಂದ ಸ್ಫೂರ್ತಿ ಪಡೆದು ಶಿವಯೋಗದ ಸಾಧನೆಯಲ್ಲಿ ತೊಡಗಿ ಸಿದ್ಧಿ ಪಡೆದರು.

## ಉಭಯ ಶ್ರೀಗಳವರ ಪರಸ್ಪರ ಪ್ರೇಮಭಾವ

ಶ್ರೀಗಳವರಲ್ಲಿ ಹಾನಗಲ್ಲ ಶ್ರೀಗಳವರ ಬಗೆಗೆ ಅಪಾರವಾದ ಪ್ರೀತಿ ವಿಶ್ವಾಸಗಳಿದ್ದವು. ಉಭಯ ಶ್ರೀಗಳವರು 'ಪರಸ್ಪರಂ ಭಾವಯಂತಃ' ಪರಮ ಶ್ರೇಯಸ್ಸನ್ನು ಪಡೆದವರು. ಹಾನಗಲ್ಲ ಶ್ರೀಗಳವರೂ ಹಾವೇರಿ ಶ್ರೀಗಳವರ ಇಚ್ಛೆಗೆ ತಪಸ್ಸಿಗೆ ಯಾವ ಆತಂಕವೂ ಬಾರದಂತೆ ವ್ಯವಹರಿಸುತ್ತಿದ್ದರು; ಯಾವ ಕಾರ್ಯಕ್ಕೂ ಹಾವೇರಿ ಶ್ರೀಗಳವರ ಅನುಮತಿಯಿಲ್ಲದೆ ಕೈಹಾಕುತ್ತಿರಲಿಲ್ಲ. ಉಭಯ ಶ್ರೀಗಳವರು ಶಿವಯೋಗಮಂದಿರ ಪುರುಷನ ಎರಡು ಕಣ್ಣುಗಳಂತೆ ಅಗಲದೆ ಇದ್ದು ಸಮಾಜದ ಆಗು-ಹೋಗುಗಳನ್ನು ನಿರುಕಿಸಿ ಉಪಾಯಗಳನ್ನು ಕಂಡು ಹಿಡಿದರು. ಸಾಧಕರ ಅಧಿಕಾರ-ಅನುಗ್ರಹ ಕಾರ್ಯಗಳನ್ನು ಹಾನಗಲ್ಲ ಶ್ರೀಗಳವರು ಹಾವೇರಿ ಶ್ರೀಗಳವರಿಗೇ ಒಪ್ಪಿಸಿ ಬಿಡುವರು. ನವಿಲುಗುಂದ ಶ್ರೀಗಳ ಮತ್ತು ಶ್ರೀ ಅಪ್ಪಯ್ಯಸ್ವಾಮಿಗಳ ಅನುಗ್ರಹಕಾರ್ಯ ಹಾವೇರಿ

---

–ಶಿಕ್ಷಣ ಪಡೆದು ಆಮರಣ ಶಿವಯೋಗಮಂದಿರದ ಸೇವೆ ಮಾಡತಕ್ಕಂಥವರಲ್ಲಿ ಯೋಗ್ಯರಾದ ಸ್ವಾಮಿಗಳನ್ನು ಅಧ್ಯಕ್ಷ ಸ್ಥಾನಕ್ಕೆ ಮೂರು ವರ್ಷಗಳ ವರೆಗೆ ನೇಮಿಸತಕ್ಕದ್ದು."

–ಶ್ರೀಮದ್ವೀರಶೈವ ಶಿವಯೋಗಮಂದಿರ ಸಂಸ್ಥೆಯ ನಿಯಮಗಳು (೧೯೩೩), ನಿಯಮಗಳು ೨೦-೨೧.

CC-0. Jangamwadi Math Collection. Digitized by eGangotri

ಶ್ರೀಗಳವರಿಂದ ಹಾನಗಲ್ಲ ಶ್ರೀಗಳವರ ಪ್ರೇರಣೆಯಿಂದ ನೆರವೇರಿತು. ಹಾನಗಲ್ಲ ಶ್ರೀಗಳವರು ಅವಿರಾಮ ಸಮಾಜ ಸೇವೆಯನ್ನು ಮಾಡಿ ಬಳಲಿದ್ದರು. ಮುದೇನೂರಿನಿಂದ ಕಾಯಿಲೆಯಾಗಿ ಶ್ರೀಗಳವರು ಹಾವೇರಿಗೆ ದಯಮಾಡಿಸಿದರು. ಆಗ ಹಾವೇರಿ ಶ್ರೀಗಳವರು ಶ್ರೀಗಳವರ ಶುಶ್ರೂಷೆಯನ್ನು ಬಹುವಾಗಿ ನಿರ್ವಹಿಸಿದರು; ಸಮಾಜದ ಉದ್ಧಾರಕ ಮಹಾವಿಭೂತಿಯು ಇನ್ನು ಅರಕಳಿಯಾಗಿ ಉಳಿದ ಮಹತ್ಕಾರ್ಯಗಳ ಸಂಪೂರ್ತಿಗಾಗಿ ಉಳಿಯಬೇಕೆಂದು ಬಗೆದು ಶ್ರೀಗಳವರು ಸರ್ವ ಪ್ರಯತ್ನಗಳನ್ನು ಮಾಡಿದರು; ಎಲ್ಲ ಸಾತ್ತ್ವಿಕ ಔಷಧೋಪಚಾರಗಳನ್ನು ಮಾಡಿಸಿದರು. ಆದರೆ ಶ್ರೀಗಳವರ ಪ್ರಕೃತಿ ಗುಣಮುಖವಾಗಲಿಲ್ಲ. ಹಾನಗಲ್ಲ ಶ್ರೀಗಳವರಿಗೆ ತಮ್ಮ ದೇಹಾಲಸ್ಯದ ಯೋಚನೆಯಿರಲಿಲ್ಲ. ಸಮಾಜದ ಉದ್ಧಾರವಾಗುವ ಬಗೆಗೆ, ಸಮಾಜದಲ್ಲಿ ಪರಸ್ಪರ ತಿಳಿವಳಿಕೆ ಐಕ್ಯಭಾವ ಮೂಡಿ ಬರುವ ಬಗೆಗೆ ಬಹು ಯೋಚನೆಯಲ್ಲಿದ್ದರು; ಆಗ ಹಾವೇರಿ ಶ್ರೀಗಳವರು ಸಾಧ್ಯವಿದ್ದ ಮಟ್ಟಿಗೂ ಅವರ ಮಹಾಕಾರ್ಯಗಳನ್ನು ಕೈಗೂಡಿಸಲು ಪ್ರಯತ್ನಿಸುವದಾಗಿಯೂ ಶಿವಯೋಗ ಮಂದಿರದ ಭಾರವನ್ನು ನಿರ್ವಹಿಸುವದಾಗಿಯೂ ಭರವಸೆಯಿತ್ತು ಹಾನಗಲ್ಲ ಶ್ರೀಗಳವರ ಕೊನೆಯ ಇಚ್ಛೆಯಂತೆ ಅವರನ್ನು ಶಿವಯೋಗಮಂದಿರಕ್ಕೆ ಕಾರಿನಲ್ಲಿ ಕರೆತಂದರು; ಶ್ರೀಗಳವರ ಶೀಲಾಚರಣೆಗೆ ಸ್ವಲ್ಪವೂ ಚ್ಯುತಿ ಬಾರದಂತೆ ಅಂತ್ಯವಿಧಿಗಳನ್ನು ಮಾಡಿಸಿದರು; ಶ್ರೀಗಳವರು ಲಿಂಗೈಕ್ಯರಾದುದಕ್ಕೆ ಶರೀರರೂಪದಿಂದ ಅಗಲಿದುದಕ್ಕೆ ಸಮಾಧಿಯ ಗುದ್ದಲಿಯನ್ನು ಎತ್ತಿದಾಗ ನನ್ನ ಬಲಗೈ ಹೋಯಿತೆಂದು ಬಹುವಾಗಿ ಪರಿತಪಿಸಿದರು; ಆದರೂ ಧೈರ್ಯ ತಂದುಕೊಂಡು ಮಂದಿರದ ಅಭ್ಯುದಯವನ್ನು ತನ್ಮೂಲಕ ಸಮಾಜದ ಹಿತವನ್ನು ಮಾಡಿ ಶ್ರೀಗಳವರ ಧ್ಯೇಯವನ್ನು ಸಾಧಿಸಲು ಪ್ರಯತ್ನಿಸಿದರು.

## ಗುರುನಿಷ್ಠೆ

ಶ್ರೀಗಳವರು ಅಥಣಿ ಶೆಟ್ಟರ ಮಠದಿಂದಲೇ ಉದ್ಧಾರವಾದೆನೆಂಬ ಪವಿತ್ರ ಭಾವನೆಯಿಂದ ಮರುಳಸಿದ್ಧ ಶಿವಯೋಗಿಗಳವರಲ್ಲಿ ಬಹು ಭಕ್ತಿಯುಳ್ಳವರಾಗಿದ್ದರು. ಅದರಿಂದ ಆಗಾಗ ಅಥಣಿಗೆ ದಯಮಾಡಿಸಿ ಶ್ರೀ ಮರುಳಸಿದ್ದೇಶ್ವರ ಗದ್ದುಗೆಯ ಒಳಗೆ ಹೋಗಿ ತಮ್ಮ ಮನದಳಲನ್ನು ಒಪ್ಪಿಸಿ ಬರುತ್ತಿದ್ದರು. ಒಮ್ಮೊಮ್ಮೆ ಅಲ್ಲಿಯೇ ಮನಬೆರಸಿ ಗುರುಸ್ತೋತ್ರ ಮಾಡುತ್ತ ಕುಳಿತುಬಿಡುವರು. ಆ ಮಠದ ಅಭಿವೃದ್ಧಿಯ ಬಗೆಗೆ ಬಹಳ ಆಸ್ಥೆ ವಹಿಸುತ್ತಿದ್ದರು. ಆ ಮಠದ ವಾತಾವರಣ, ನೀರು ಶ್ರೀಗಳವರ ಪ್ರಕೃತಿಗೆ ಅನುಕೂಲವಾಗಿದ್ದವು; ತಿಂಗಳುಗಟ್ಟಲೆ ಅಲ್ಲಿಯೇ ಪೂಜಾಲೋಲರಾಗಿ ಉಳಿದು ಬಿಡುವರು. ೧೯೪೬ ರಲ್ಲಿ ಲಿಂಗೈಕ್ಯರಾಗುವ ಮುನ್ನ ಶ್ರೀ ಶೆಟ್ಟರ ಮಠದಲ್ಲಿ ತಮ್ಮ ಶಿಷ್ಯರಾದ ಮುಧೋಳದ ಶ್ರೀ ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳವರನ್ನು ಕರೆಯಿಸಿ, ಅವರಿಂದ ಆರು ತಿಂಗಳವರೆಗೆ 'ಪ್ರಭುಲಿಂಗ

CC-0. Jangamwadi Math Collection. Digitized by eGangotri



ಲಿಂ. ಶ್ರೀ. ನಿ. ಪ್ರ. ಅಪ್ಪಯ್ಯಸ್ವಾಮಿಗಳವರು ಕಲ್ಮಠ,
ಬಿದರಿ - ಸವದತ್ತಿ.

CC-0. Jangamwadi Math Collection. Digitized by eGangotri



ಶ್ರೀ. ನಿ. ಪ್ರ. ಬಸವಲಿಂಗಮಹಾಸ್ವಾಮಿಗಳು,
ಗವಿಮಠ, ನವಿಲುಗುಂದ.

CC-0. Jangamwadi Math Collection. Digitized by eGangotri

ಲೀಲೆ ' ಯ ಪುರಾಣವನ್ನು ಹೇಳಿಸಿದರು. ಗುರುಗಳ ಗದ್ದುಗೆಯಲ್ಲಿ ರುದ್ರಾಭಿಷೇಕ ಮತ್ತು ಗಣತೃಪ್ತಿಯನ್ನು ನೆರವೇರಿಸಿ ಭಕ್ತರಲ್ಲಿ ಧಾರ್ಮಿಕ ಜಾಗ್ರುತಿಯನ್ನುಂಟು ಮಾಡಿದರು.

ಅನುಗ್ರಹ ಗುರುಗಳಾದ ಬಿದರಿ ಶ್ರೀಕುಮಾರ ಶಿವಯೋಗಿಗಳವರಲ್ಲಿ ಶ್ರೀಗಳ ವರು ಅಪಾರ ಭಕ್ತಿ–ವಿಶ್ವಾಸಗಳನ್ನಿಟ್ಟಿದ್ದರು. ಗುರುಗಳು ಲಿಂಗೈಕ್ಯರಾದ ಮೇಲೆ ಪ್ರತಿ ವರ್ಷವೂ ತಪ್ಪದೆ ಬಿದರಿಗೆ ದಯಮಾಡಿಸಿ ಮಠದ ಆಗು-ಹೋಗುಗಳನ್ನೆಲ್ಲ ನೋಡುತ್ತಿದ್ದರು. ೧೯೨೧ರಲ್ಲಿ ಗುರುಗಳ ಕೃಪಾಪಾತ್ರರಾದ ಶ್ರೀ ಅಪ್ಪಯ್ಯ ದೇವರಿಗೆ ಅನುಗ್ರಹ ಅಧಿಕಾರಿಗಳನ್ನು ದಯಪಾಲಿಸಿದರು. ಒಡಕು-ಹೊಳೆ (ನವಿಲುತೀರ್ಥ) ಯಲ್ಲಿ ಶ್ರೀ ಅಪ್ಪಯ್ಯ ಸ್ವಾಮಿಗಳವರು ಅನುಷ್ಠಾನಕ್ಕೆ ಕುಳಿತಾಗ ಪದೇ ಪದೇ ಬಂದು ಅವರ ಶಿವಯೋಗಸಾಧನೆಯ ಬಗೆಗೆ ಮಾರ್ಗದರ್ಶನ ನೀಡುತ್ತಿದ್ದರು. ಅಕಾಲ ದಲ್ಲಿಯೇ ಅವರು ಲಿಂಗೈಕ್ಯರಾಗಲು ಅವರ ಸ್ಥಾನದಲ್ಲಿ ತಮ್ಮ ಸೇವೆಯನ್ನು ಬಹು ವಾಗಿ ಮಾಡಿದ ನಮಗೆ (ಶ್ರೀ ಮಹಾಲಿಂಗದೇವರಿಗೆ) ೧೯೪೬ ರಲ್ಲಿ ಸವದತ್ತಿ-ಬಿದರಿ ಮಠಗಳ ಉತ್ತರಾಧಿಕಾರವನ್ನು ವಹಿಸಿಕೊಟ್ಟು ಗುರುಪೀಠದ ಸತ್ಪರಂಪರೆ ಯನ್ನು ಉಳಿಸಿದರು.

## ಜಂಗಮಪ್ರೇಮ

ವೀರಶೈವ ಸಿದ್ಧಾಂತದಲ್ಲಿ ಜಂಗಮಕ್ಕೆ ಬಹು ಹೆಚ್ಚಿನ ಮಹತ್ವವಿದೆ. ಪರ ಶಿವನು ಗುರು-ಲಿಂಗ-ಜಂಗಮ ರೂಪದಲ್ಲಿ ಭಕ್ತನ ಭಕ್ತಿಯನ್ನು ಕೈಕೊಳ್ಳಲು ಸಾಕಾರನಾಗಿದ್ದಾನೆ. ವೀರಶೈವನಿಗೆ ಇವು ಮೂರು ಆರಾಧ್ಯ ದೇವತೆಗಳು. ವೀರಶೈವನು ಗುರುವಿನ ಸೇವೆಯನ್ನು ತನು ಮುಟ್ಟಿಮಾಡಬೇಕು, ಮನಮುಟ್ಟಿ ಲಿಂಗ ವನ್ನು ಪೂಜಿಸಬೇಕು. ಜಂಗಮಕ್ಕೆ ಧನವನ್ನು ಅರ್ಪಿಸಬೇಕು, ಹೀಗೆ ತ್ರಿಕರಣ ಪೂರ್ವಕವಾಗಿ ಗುರು-ಲಿಂಗ-ಜಂಗಮರ ಆರಾಧನೆಯನ್ನು ಮಾಡಬೇಕೆಂದು ಹೇಳಿದೆ. ಜಂಗಮಕ್ಕೆ ಬಹು ವ್ಯಾಪಕವಾದ ಅರ್ಥವಿದೆ. ' ಜಂ ಗಚ್ಛತೀತಿ ಜಂಗಮಃ ' ಬ್ರಹ್ಮವನ್ನು ಹೊಂದುವವನು ಬ್ರಹ್ಮಜ್ಞಾನವನ್ನು ತಿಳಿಯುವವನೇ ಜಂಗಮನು. ' ಸಿದ್ಧಾಂತ ಶಿಖಾಮಣಿ 'ಯಲ್ಲಿಯೂ ಜಂಗಮದ ಮಹಾತ್ಮ್ಯೆಯನ್ನು ಬಹುವಾಗಿ ಹೇಳಿದೆ ಗುರುಶಿಷ್ಯರ ಇಷ್ಟಪ್ರಾಣಭಾವಗಳಲ್ಲಿ ತಾದಾತ್ಮ್ಯದಿಂದ ಕೂಡಿರುವ ಲಿಂಗದ ಮಹತ್ವವನ್ನು ತಿಳಿಯುವದರಿಂದ ಜಗವೆಲ್ಲ ಶಿವಶಕ್ತಿರೂಪವಾದುದೆಂಬ ಅರಿವನ್ನು ಸ್ವಾನುಭವದಿಂದ ಪಡೆದಿರುವದರಿಂದ ಜಂಗಮನು ಅಧಿಕನು, ಶ್ರೇಷ್ಠ ಶಿವಜ್ಞಾನಿಯು. ತನ್ನ ಜ್ಞಾನಕ್ರಿಯಾಶಕ್ತಿಗಳಿಂದ, ಜಗತ್ತನ್ನು ಬೆಳಗತಕ್ಕ ಪರ ಶಿವನಿಂದ ತಾನು ಬೇರೆ ಅಲ್ಲವೆಂಬ ದೃಢವಾದ ನಂಬುಗೆಯಿಂದ ಸ್ವಸ್ವರೂಪ ವನ್ನು ತಿಳಿದುಕೊಂಡಿವವರು ಜಂಗಮರು; ಅಣವಾದಿ ಮಲತ್ರಯ ದೋಷವನ್ನು

CC-0. Jangamwadi Math Collection. Digitized by eGangotri

ತೊಳೆದು ನಿರ್ಮಲಾತ್ಮರಾಗಿ ಲಿಂಗಾಂಗ ಸಾಮರಸ್ಯರೂಪ ಶಿವಯೋಗದಿಂದ ಜಗವೆಲ್ಲವನ್ನು ಶಿವಮಯವೆಂದು ಭಾವಿಸಿ ಆಚರಿಸುವ ಶಿವಯೋಗಿಗಳೇ ಜಂಗಮರು; ಘೋರವಾದ ಸಂಸಾರವೆಂಬ ಕತ್ತಲೆಯನ್ನು ಕಳೆಯುವ ಶಿವಜ್ಞಾನವೆಂಬ ಬೆಳಗನ್ನು ಪಡೆದ ಜಂಗಮರು ಶಿವಯೋಗಿಗಳೇ ಆಗಿರುತ್ತಾರೆ.* 'ಅಂತರಂಗದ ಸುಜ್ಞಾನವೇ ಜಂಗಮ' 'ಅಚೇತನ ಲಿಂಗಕ್ಕೆ ಚೈತನ್ಯ ಜಂಗಮ ಸಾಹಿತ್ಯ ನೋಡಾ' ಎಂದು ಚೆನ್ನಬಸವಣ್ಣನವರು ಹೇಳಿದ್ದಾರೆ.§ ಅಂತಹ ಜಂಗಮ ಮೂರ್ತಿಯಲ್ಲಿ ಶ್ರೀಗಳವರಿಗೆ ಅಪಾರವಾದ ಭಕ್ತಿ. ಪೂಜ್ಯರು ಜಂಗಮದಲ್ಲಿ 'ಹಿರಿಯ ಕಿರಿಯ' ಎಂಬ ಭೇದಭಾವನೆಯನ್ನು ಮಾಡದೆ, ವಯೋಮಾನದಲ್ಲಿ ಕಿರಿಯರಾದ ವಿರಕ್ತ ಜಂಗಮ ಮೂರ್ತಿಗಳನ್ನು ಸಹ ಗದ್ದುಗೆಯ ಮೇಲೆ ಕೂಡ್ರಿಸಿ ಭಕ್ತಿಯಿಂದ ಪಡೆದುಕೊಳ್ಳುತ್ತಿದ್ದರು. ಮೂರ್ತಿಗಳು ಸಂಕೋಚಮಾಡಿದರೆ 'ಎಂದು ನೀವು ಜಂಗಮತ್ವವನ್ನು ಪಡೆಯುವದು? ನೀವು ಹಿರಿಯರು ಬನ್ನಿ ಪಾದ ಕೊಡಿ' ಎಂದು ಅವರಲ್ಲಿ ಚೈತನ್ಯವನ್ನು ತುಂಬುವರು. ಒಂದು ಸಲ ಶ್ರಾವಣಮಾಸದಲ್ಲಿ ಶಿವಯೋಗಮಂದಿರದಲ್ಲಿ ಬಿಡಾರವಿದ್ದಾಗ, ಲಕ್ಷ ಬಿಲ್ವಪತ್ರಗಳಿಂದ ಜಂಗಮ ಮೂರ್ತಿಯ ಪಾದಾರ್ಚನೆಯನ್ನು ಮಾಡಬೇಕೆಂದು ಇಚ್ಛಿಸಿದರು; ಶಿರ್ಶಿ ಬಣ್ಣದ ಮಠದ ಶ್ರೀ ನಿ. ಪ್ರ. ಗುರುಸಿದ್ಧಸ್ವಾಮಿಗಳವರನ್ನು ಸಿಂಗರಿಸಿದ ಮಂಟಪದಲ್ಲಿ ಉಚ್ಚಾಸನದಲ್ಲಿ ಮುಹೂರ್ತ ಮಾಡಿಸಿ ಶ್ರೀಗಳವರೇ ಸ್ವತಃ ಸಹಸ್ರಶಿವನಾಮ ಪಠನದೊಂದಿಗೆ ಪಾದಪೂಜೆಯನ್ನು ಮಾಡಿ ಪಾದೋದಕ ಪ್ರಸಾದಗಳನ್ನು ಪಡೆದುಕೊಂಡರು. ಈ ಪ್ರಸಂಗದಲ್ಲಿ ಶ್ರೀಗಳವರು ನಮಗೆಲ್ಲ ಸಾಧಕರಿಗೆ ಶ್ರೀ ಚೆನ್ನಬಸವಣ್ಣನವರ ಈ ವಚನವನ್ನು ನೆನಪಿಗೆ ತಂದು ಕೊಟ್ಟದುಂಟು :

"ಭೂತಪ್ರಾಣಿಯ ಕಳೆದು, ಲಿಂಗಪ್ರಾಣಿಯ ಮಾಡಿದ ಬಳಿಕ ಶಿಷ್ಯನೇ ಜಂಗಮವಾಗಿ ಗುರುವಿನ ಮಠಕ್ಕೆ ನಡೆದು ಬಂದರೆ, ಗುರುವೆಂಬ ಹೆಮ್ಮೆಯಿಲ್ಲದೆ, ಪರಮಗುರುವೆಂದು ಪಾದಾರ್ಚನೆಯಂ ಮಾಡುವುದು ಆಚಾರ. ನಾಚಿ ಮಾಡದಿರ್ದಡೆ ನಾಯಕನರಕ. ಆ ಜಂಗಮ ಶಂಕೆಯಿಲ್ಲದೆ ಪಾದಾ

---

* ಗುರು ಶಿಷ್ಯಸಮಾರೂಢಲಿಂಗ ಮಾಹಾತ್ಮ್ಯಸಂಪದಃ
ಸರ್ವಚಿದ್ರೂಪ ವಿಜ್ಞಾನಾಜ್ಜಂಗಮಾಧಿಕ್ಯಮುಚ್ಯತೇ ॥ ೩೫ ॥
ಜಾನಂತ್ಯತಿಶಯಾದ್ಯೇ ತು ಶಿವಂ ವಿಶ್ವಪ್ರಕಾಶಕಂ ।
ಸ್ವಸ್ವರೂಪತಯಾ ತೇ ತು ಜಂಗಮಾ ಇತಿ ಕೀರ್ತಿತಾಃ । ॥ ೩೬ ॥
ಯೇ ಪಶ್ಯಂತಿ ಜಗಜ್ಜಾಲಂ ಚಿದ್ರೂಪಂ ಶಿವಯೋಗತಃ
ನಿರ್ಧೂತಮಲಸಂಸ್ಪರ್ಶಾಸ್ತೇ ಸ್ಮೃತಾಃ ಶಿವಯೋಗಿನಃ ॥ ೩೭ ॥
—ಸಿದ್ಧಾಂತ ಶಿಖಾಮಣಿಃ (ಕಾಶೀ ಶ್ರೀಜಗದ್ಗುರು ವಿಶ್ವಾರಾಧ್ಯಗುರುಕುಲ ವಿದ್ವತ್‌ಸಂಘ ಪ್ರಕಾಶನ) ೧೯೩೭; ಏಕಾದಶ ಪರಿಚ್ಛೇದ;

§ ಚೆನ್ನಬಸವ ಸಾಹಿತ್ಯ (ಚೆನ್ನಬಸವ ವಚನಾಮೃತ, ವ. ೧೨೦ ಮತ್ತು ೧೨೪) ಸಂ. ಅನ್ನದಾನಯ್ಯ ಪುರಾಣಿಕ, ಸಹಜೀವನ ಪ್ರಕಾಶನ, ಲಿಂಗಂಪಲ್ಲಿ.

CC-0. Jangamwadi Math Collection. Digitized by eGangotri

ರ್ಚನೆಯ ಮಾಡಿಸಿ ಕೊಂಬುವುದು ಕರ್ತವ್ಯ. ಶಂಕೆಗೊಂಡರೆ ಪಂಚಮಹಾ ಪಾತಕ. ಹೀಗಲ್ಲದೆ ಗುರುವೆಂಬ ಹೆಮ್ಮೆ, ಶಿಷ್ಯನೆಂಬ ಶಂಕೆಯುಳ್ಳನ್ನಕ್ಕರ ರೌರವ ನರಕದಲ್ಲಿಕ್ಕುವ ಕೂಡಲ ಚೆನ್ನಸಂಗಮದೇವಯ್ಯ."†

ಶ್ರೀಗಳವರು ಜಂಗಮದ ವಿಷಯದಲ್ಲಿ ಯಾವ ಸಂಕುಚಿತ ಮನೋಭಾವನೆಯನ್ನು ಎಂದೂ ತಾಳಿದವರಲ್ಲ. ಒಮ್ಮೆ ಚಿತ್ರದುರ್ಗದ ಲಿಂ. ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮಹಾಸ್ವಾಮಿಗಳವರನ್ನು ಹಾವೇರಿಯಲ್ಲಿ ತಮ್ಮ ಮಠಕ್ಕೆ ಉತ್ಸವದಿಂದ ಬಿಜಯಂಗೈಸಿಕೊಂಡು ಸ್ವತಃ ಪೂಜಿಸಿ ತೃಪ್ತಿಪಡಿಸಿದರು. ಶ್ರೀಗಳವರು ಸಮಯಭೇದವನ್ನು ಎಂದೂ ಗಣನೆಗೆ ತಂದವರಲ್ಲ.

ಒಮ್ಮೆ, ಗದುಗಿನ ಆನಂದಾಶ್ರಮದಲ್ಲಿ ಶ್ರೀಗಳವರಿಗೆ ಜಾಡ್ಯವಾಗಿತ್ತು. ಆಗ ಅಲ್ಲಿಯೇ ಇದ್ದ ಅಮೀನಗಡದ ಗಚ್ಚಿನಮಠದ ಶ್ರೀ ಪ್ರಭುಸ್ವಾಮಿಗಳವರನ್ನು ಗದ್ದುಗೆಯ ಮೇಲೆ ಕುಳ್ಳಿರಿಸಿ ಸ್ವತಃ ತಾವೇ ಪಾದಪೂಜೆ ಮಾಡಿ ಪಾದೋದಕ-ಪ್ರಸಾದಗಳನ್ನು ಪಡೆದರು. ನಾನೇ ಸೇವೆಯ:ಲ್ಲಿದ್ದೆ. ಅಮೀನಗಡದ ಶ್ರೀಗಳವರು ವಯದಲ್ಲಿ ಕಿರಿಯರಾದರೂ ಶ್ರೀಗಳವರು ಅದನ್ನು ಗಮನಿಸಲಿಲ್ಲ. 'ಪಾದೋದಕ ಪ್ರಸಾದ ಕೊಟ್ಟು ನನ್ನನ್ನು ಉದ್ಧರಿಸಿದೆಯಪ್ಪಾ' ಎಂದು ಶ್ರೀಗಳವರು ಅಮೀನಗಡ ಶ್ರೀಗಳವರನ್ನು ಕುರಿತು ಆಡಿದಾಗ ನಮಗೆ ರೋಮಾಂಚವೆನಿಸಿತು. ಪೂಜ್ಯರದು ಎಂತಹ ವಿಶಾಲಭಾವನೆ, ಎಂತಹ ಉಚ್ಚಮಟ್ಟದ ಸಮರಸಭಾವ! ಜಡೆಯ ಶ್ರೀಗಳವರನ್ನು ಅಂತ್ಯಕಾಲದವರೆಗೂ ಕ್ರಿಯಾಮೂರ್ತಿಗಳನ್ನಾಗಿ ಮಾಡಿಕೊಂಡಿದ್ದರು. ಜಂಗಮವೆಂದರೆ ಸಾಕ್ಷಾತ್ ಶಿವನೆಂದೇ ಭಾವಿಸುತ್ತಿದ್ದ ಮಹಿಮರವರು.

ಜಂಗಮರಿಗೇನಾದರೂ ವಿಪತ್ತು ಬಂದರೆ ಶ್ರೀಗಳವರು ಅದನ್ನು ನಿವಾರಿಸಲು ಪ್ರಯತ್ನಿಸುತ್ತಿದ್ದರು. ಸವದತ್ತಿಯ ಹೊಸಮಠದ ಲಿಂ. ಶ್ರೀ ಪಂಚಾಕ್ಷರಿ ಸ್ವಾಮಿಗಳು ಮಾಡಿದ ಸಾವುಕಾರ ಶಂಕರರಾಯರ ತೋಟದ ಲಾವಣಿ ಹಣದ ಬಗ್ಗೆ ರಾಯರು ಹೊಸಮಠದ ಹಾಲಭಾವಿ ತೋಟವನ್ನು ಲಿಲಾವಿನಲ್ಲಿ ತೆಗೆದುಕೊಂಡರು. ಮುಂದಿನ ಅಧಿಕಾರಿಗಳಾದ ಶ್ರೀ ಗಂಗಾಧರ ದೇವರು ತಮ್ಮ ಮಠದ ಆಸ್ತಿಯು ಈ ರೀತಿಯಾಗಿ ಕೈಬಿಟ್ಟು ಹೋದ ಸ್ಥಿತಿಯನ್ನು ಶ್ರೀಗಳವರಲ್ಲಿ ಬಿನ್ನಯಿಸಿಕೊಂಡರು. ಶ್ರೀಗಳವರು ಪದಕಿ ಸಾವುಕಾರರನ್ನು ಊರ ಪ್ರಮುಖರಾದ ಶ್ರೀ ಜಕಾತಿ ಬಸಪ್ಪನವರನ್ನೂ ಕರೆಯಿಸಿ ವಿಚಾರಿಸಿದರು. ಪದಕಿ ಸಾವುಕಾರರು ಮಠದ ತೋಟವನ್ನು ಉದಾರವಾಗಿ ಬಿಟ್ಟುಕೊಡುವದಾಗಿ ಒಪ್ಪಿದರು. ಆದರೆ ಶ್ರೀಗಳವರು

† ಚೆನ್ನಬಸವ ಸಾಹಿತ್ಯ (ಚೆನ್ನಬಸವ ವಚನಾಮೃತ, ವ. ೧೧೬) ಸಂ. ಅ. ಕ. ಪುರಾಣಿಕ;

CC-0. Jangamwadi Math Collection. Digitized by eGangotri

ಭಕ್ತರ ಹಾನಿಯು ಆಗಬಾರದು, ಮಠದ ಆಸ್ತಿಯೂ ಉಳಿಯಬೇಕು ಹೀಗೆ ಒಂದು ಉಪಾಯ ಮಾಡಿದರು. ಶ್ರೀ ಜಕಾತಿ ಬಸಪ್ಪನವರಿಗೆ ಹೇಳಿ ಕಲ್ಮಠದಿಂದ ಲಿಲಾವಿನ ಅರ್ಧ ಹಣ ಕೊಡಿಸಿ ಮಠದ ಆಸ್ತಿಯನ್ನು ಉಳಿಸಿಕೊಳ್ಳುವಂತೆ ಮಾಡಿದರು. ಯಾರಾದರೂ ಜಂಗಮರು ತಮ್ಮ ಆಶ್ರಮಕ್ಕೆ ತಕ್ಕಂತೆ ನಡೆಯದಿದ್ದರೆ ಅವರನ್ನು ಕರೆಯಿಸಿ ಒಳ್ಳೇ ಕನಿಕರದಿಂದ ಬುದ್ಧಿ ಹೇಳಿ ಸನ್ಮಾರ್ಗಕ್ಕೆ ತರುತ್ತಿದ್ದರು.

ಶ್ರೀಗಳವರು ಭಕ್ತರ ಮತ್ತು ಜಂಗಮರ ಮನವನ್ನು ನೋಯಿಸುತ್ತಿರಲಿಲ್ಲ. ಒಂದು ದಿನ ಸವದತ್ತಿಯ ಮುಕ್ಕಾಮಿನಲ್ಲಿ ಪೂಜೆಯಾಗಿ ಅರ್ಪಿತ ನಡೆದ ವೇಳೆಗೆ ಸರಿಯಾಗಿ ಗೊರವನಕೊಳ್ಳದ ಆಚಾರ ನಿಷ್ಠರಾದ ರಾಚಯ್ಯ ಮಾಸ್ತರರು ಭಕ್ತಿಯಿಂದ ಪಡಿಪದಾರ್ಥಗಳನ್ನು ಮಾಡಿಕೊಂಡು ನಾಲ್ಕು ಮೈಲು ನಡೆದು ಬಂದರು. ಶ್ರೀಗಳವರಿಗೆ ಸಾಷ್ಟಾಂಗವೆರಗಿ ನಿಂತರು. ಶ್ರೀಗಳವರು ತಂದ ಪ್ರಸಾದವನ್ನು ಎಡೆ ಮಾಡುವಂತೆ ಅಪ್ಪಣೆ ಮಾಡಿದರು. ಅವರು ತಂದ ಪ್ರಸಾದ ಲಿಂಗಕ್ಕೆ ನೈವೇದ್ಯವಾಗಿಲ್ಲವೆಂದ ಮೇಲೆ ಅದನ್ನು ಸ್ವೀಕರಿಸುವದು ಹೇಗೆ ಎಂಬುದು ಅಲ್ಲಿಯೇ ಇದ್ದ ಪಂ. ಸೋಮನಾಥ ಶಾಸ್ತ್ರಿಗಳವರ ತರ್ಕವಾಗಿತ್ತು. ಶ್ರೀಗಳವರು ನಕ್ಕು "ಶಾಸ್ತ್ರಿಗಳೆ, ಮಾಸ್ತರರು ಜಂಗಮ ತೃಪ್ತಿಯನ್ನು ಮಾಡಿಸಬೇಕೆಂದು ಸಂಕಲ್ಪ ಮಾಡಿದಾಗಲೇ ಅದು ಮಹಾಲಿಂಗಕ್ಕೆ ನೈವೇದ್ಯವಾದಂತೆ. ಬಿಸಿಲಿನಲ್ಲಿ ನಡೆದು ಬಂದ ಅವರ ಭಕ್ತಿಭಾವವನ್ನಾದರೂ ನೋಡಿರಿ. ಪಾಪ, ಜಂಗಮ ನೊಂದರೆ ಲಿಂಗಕ್ಕೆ ತೃಪ್ತಿಯಾಗುವದೇ ? ಸಮಯಕ್ಕೆ ಬಂದ ಭಕ್ತಿಯು ಶಿವನಿಗೆ ಸಲ್ಲುವದು." ಎಂಬ ಅನುಭಾವದ ಸೊಲ್ಲನ್ನು ಕೇಳಿ ಶಾಸ್ತ್ರಿಗಳವರು ನಿರುತ್ತರವಾಗಿ ಬಿಟ್ಟರು.

## ಭಕ್ತವಾತ್ಸಲ್ಯ

ಶ್ರೀಗಳವರ ದರ್ಶನಕ್ಕೆ ಅನೇಕ ಭಕ್ತರು ಬರುತ್ತಿದ್ದರು. ಬಂದವರ ಯೋಗಕ್ಷೇಮವನ್ನು ಕೇಳಿ ಅವರಿಗೆ ಬಂದಿರುವ ಕಷ್ಟಗಳ ಪರಿಹಾರವನ್ನು ಹೇಳುತ್ತಿದ್ದರು. ಅವರ ನುಡಿ, ಅವರ ಕರುಣಾಕಟಾಕ್ಷ, ಅವರ ಸ್ಪರುಶನ–ದರುಶನ ಮಾತ್ರದಿಂದಲೇ ಎಷ್ಟೋ ಜನರ ತಾಪತ್ರಯಗಳು ತೊಲಗುತ್ತಿದ್ದವು. ಯಾರಾದರೂ ಭಕ್ತರು ಅಕಸ್ಮಾತ್ತಾಗಿ ಬಹುದಿನಗಳ ಮೇಲೆ ಭೆಟ್ಟಿಯಾದರೆ ಅವರ ಅಜ್ಜ-ಮುತ್ತಜ್ಜಂದಿರ ಇಡಿಯ ಪರಿಚಯವನ್ನೇ ಹೇಳಿ ಬಿಡುವರು. ಕೇಡು ಬಗೆದವರಿಗೂ ಪ್ರೀತಿಯಿಂದ ಕರೆದು ಪ್ರಸಾದ ಕರುಣಿಸಿ ಕಳಿಸುವರು. 'ಉದಾರಚರಿತಾನಾಂ ತು ವಸುಧೈವ ಕುಟುಂಬಕಂ' ಎಂಬಂತೆ ಶ್ರೀಗಳವರು ಲೋಕೋತ್ತರಚರಿತರು, ಅವರ ಹೃದಯ ಶುದ್ಧ ಹಾಲಿನಂತಹದು; ಅವರೊಬ್ಬ 'ಪತಿತಪಾವನ' ರಾದ ಮಹಾ ಸಂತರಾಗಿದ್ದರು.

CC-0. Jangamwadi Math Collection. Digitized by eGangotri

## ಕಡೆಯ ನುಡಿ

ಒಟ್ಟಾರೆ, ಶ್ರೀಗಳವರು ಅಸಾಧಾರಣ ಶಕ್ತಿಯುಳ್ಳವರೂ ಪರಮ ವಿರಾಗಿಗಳೂ, ಮಹಾವಿಭೂತಿಗಳೂ ಆಗಿದ್ದರು. ೧೯೩೭ ರಿಂದ ೧೯೪೫ರ ವರೆಗೆ ನನಗೆ ಪೂಜ್ಯರ ಸೇವೆಯನ್ನು ಮಾಡುವ ಭಾಗ್ಯ ದೊರಕಿತ್ತು. ಈ ಅವಧಿಯ ಸೇವೆಯಲ್ಲಿ ಅನೇಕ ಲೋಪದೋಷಗಳು ನನ್ನಿಂದ ಸಂಭವಿಸುವದು ಸಹಜವಾಗಿತ್ತು. ಶ್ರೀಗಳವರು ತಪ್ಪಿಗೆ ಸಿಟ್ಟು ಮಾಡುವರು, ಒಂದೊಂದು ಸಲ ಕಪಾಳಪೂಜೆಯನ್ನು ಮಾಡಿದುದುಂಟು. ಮರುಕ್ಷಣದಲ್ಲಿಯೇ ಅವರ ಸಿಟ್ಟು ಇಳಿದು ಹೋಗುತ್ತಿತ್ತು. ಮಕ್ಕಳಂತೆ ಪ್ರೀತಿಯಿಂದ ಕರೆದು ಸಂತಯಿಸುವರು. ಅರವತ್ತು ಮೀರಿದ ವಯಸ್ಸು. ಆಗಾಗ ಶಾರೀರಿಕ ಬಾಧೆಗಳಿಂದಾಗಿ ಶ್ರೀಗಳವರ ಬಾಹ್ಯಕರ್ಮಗಳು ಅನಿಯತವಾಗುವವು, ಸೇವಕರಿಗೆ ಬೇಸರವನ್ನುಂಟು ಮಾಡುತ್ತಿದ್ದವು; ಆದರೆ ಅವರೆಂದೂ ಶಿವಪೂಜೆಯನ್ನು ಬಿಡಲಿಲ್ಲ. ಅವರು ಸ್ನಾನ ಮಾಡಿ ಶಿವಪೂಜೆಗೆ ಕುಳಿತರೆ ತೀರಿತು. ಲೀಲಾಮಯವಾಗಿ ತನ್ಮಯರಾಗಿ ಭಾವಲಿಂಗಪೂಜೆಯ ಸಮಾಧಿಯಲ್ಲಿ ಗಂಟೆಗಟ್ಟಲೆ ಇದ್ದು ಬಿಡುವರು. ಅವರ ಪೂಜಾನಂದವನ್ನು ಕಂಡ ಸೇವಕರೇ ಧನ್ಯರು. ಅನೇಕ ಸಲ ಪೂಜ್ಯರು ಸಿಟ್ಟು ಮಾಡಿದರೂ .ಅದು ನನ್ನ ಒಳ್ಳಿತಕ್ಕಾಗಿಯೇ. ೧೯೪೫ ರಲ್ಲಿ ಪೂಜ್ಯರು ನನಗೆ ಸವದತ್ತಿ ಮಠದ ಅಧಿಕಾರವನ್ನು ದಯಪಾಲಿಸುತ್ತ 'ಇದು ಕಡೆಯ ಗುರುಸೇವೆ' ಎಂದು ಅಪ್ಪಣೆ ಕೊಡಿಸಿದರು. ಅಂತೆಯೇ ಅದೇ ವರ್ಷ ೧೯೪೬ರಲ್ಲಿ ಪುಷ್ಯ ಶು. ೧೦ ಯ ಸಾಯಂಕಾಲ ಹಾವೇರಿಯ ಮಠಕ್ಕೆ ತಾರು ಮಾಡಿಸಿ ನನ್ನನ್ನು ಕರೆಯಿಸಿದರು. ಪವಡಿಸಿದಲ್ಲಿ ಹತ್ತಿರ ನನ್ನನ್ನು ಕರೆದು "ಇನ್ನು ಲಿಂಗಯ್ಯನ ಅಪ್ಪಣೆಯಾಗಿದೆ. ನಿಮ್ಮನ್ನು ಗುರುವಿನ ಸ್ಥಾನಕ್ಕೆ ಮಾಡಿರುವೆವು. ಗುರುವಿನ ಮಹತ್ವವರಿತು ಗುರುಪೀಠದ ಗೌರವ ಉಳಿಸುವದು ನಿಮ್ಮನ್ನು ಕೂಡಿದೆ" ಎಂದು ಅಪ್ಪಣೆ ಕೊಡಿಸಿದಾಗ ನನ್ನ ಹೃದಯ ತುಂಬಿ ಬಂದು ಕಣ್ಣಲ್ಲಿ ಕೋಡಿಯಾಗಿ ಹರಿಯಹತ್ತಿತು. ನನ್ನಂತಹ ಅಲ್ಪನನ್ನು ಮೈದಡವಿ ಕೃಪೆಮಾಡಿ ಅನುಗ್ರಹಿಸಿದ ಕರುಣಾಳು ಗುರುವನ್ನು ಮರೆಯುವದೆಂತು ? ಕರುಣಾಕಟಾಕ್ಷದ ದಯಾಮೂರ್ತಿ ಇಂದಿಗೂ ನನ್ನ ಕಣ್ಣುಗಳ ಮುಂದೆ ಕಟ್ಟಿದಂತಿದೆ, ಹೃನ್ಮಂದಿರದಲ್ಲಿ ನೆಲಸಿದಂತಿದೆ. "ಕರುಣರಸದ ಕೋಡಿವರಿವ ಕಟಾಕ್ಷದ ಪರತತ್ತ್ವವರುಪುವಾಲಾಪದ, ವರಪುಣ್ಯಮಯ ಶರೀರದ ನಿರಾಭಾರಿ ಸದ್ಗುರುವಿರಲೆನ್ನ ಮಾನಸದಲ್ಲಿ" ಎಂದು ಶ್ರೀ ನಿಜಗುಣರು ಹೇಳಿರುವಂತೆ ಸದ್ಗುರುವಿನ ಸ್ಮರಣೆಗೆಯ್ಯಲೆಂದು ಸ್ಮಾರಕಗ್ರಂಥ ಪ್ರಕಟಿಸುವ ಮಹೋದ್ದೇಶವುಳ್ಳ ಸಮಿತಿಯ ಸದಸ್ಯರಿಗೆ ಅನಂತ ವಂದನೆಗಳು.

CC-0. Jangamwadi Math Collection. Digitized by eGangotri

# ದಿವ್ಯದರ್ಶಿ

'ವಿದ್ಯಾವಾಚಸ್ಪತಿ' 'ವೇದಾಂತಾಚಾರ್ಯ'
ಮುಧೋಳದ ಶ್ರೀ. ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು,
ಕಿರೀಟಮಠ, ಸೊಲ್ಲಾಪುರ.

ಭವಮಯವಾದ ದೃಷ್ಟಿಯು ಈ ಸೃಷ್ಟಿಗಿಂತಲೂ ನಿಕೃಷ್ಟವಾಗುವದು ಸಹಜ. ಆ ದೃಷ್ಟಿಗೆ ಈ ಸೃಷ್ಟಿಯು ಭವ್ಯ ಆಶ್ಚರ್ಯಮಯವಾಗಿ ಕಾಣುತ್ತದೆ. ಆದುದರಿಂದ ಅದು ಈ ಸೃಷ್ಟಿಯ ಸೌಂದರ್ಯಕ್ಕೆ ಮೋಹಗೊಳ್ಳುತ್ತದೆ. ಈ ದೃಷ್ಟಿಯುಳ್ಳ ಮಾನವನು ಸ್ವಸ್ವರೂಪವನರಿಯದ ಕಾರಣ ದೃಷ್ಟಿಯ ನಿಜವಾದ ಗುಟ್ಟನ್ನರಿಯದೆ ದಾನವನಾಗುತ್ತಾನೆ. ಅವನಿಗೆ ಸೃಷ್ಟಿಯೇ ಮಿಗಿಲಾಗಿ ಕಾಣುತ್ತದೆ ಆದುದರಿಂದ ಮುಗ್ಧನಾಗಿ ನೇತಿ, ನೇತಿ ಎಂದು ದೃಷ್ಟವಾದ ಸೃಷ್ಟಿಯಿಂದತ್ತ ವಸ್ತುವನರಿಯಲ-ಶಕ್ತನಾದ ಕಾರಣ ನಾಸ್ತಿಕನಾಗುತ್ತಾನೆ; ದಿವ್ಯ ಭವ್ಯ ಶಿವಮಯವಾದ ದೃಷ್ಟಿಯನ್ನರಿಯದೇ ಅಂಧನಾಗುತ್ತಾನೆ. ಆ ಭವ್ಯ ದಿವ್ಯ ದೃಷ್ಟಿಯನ್ನು ಕಾಣುವದಕ್ಕಾಗಿ ಮಾನವ ಸಹಸ್ರಾರು ಜನ್ಮಗಳಿಂದ ಸಾಧಕನಾಗಿ ಸಾಧನದಲ್ಲಿ ಸವೆಯಬೇಕಾಗುತ್ತದೆ. ಅದರಿಂದ ಆ ದಿವ್ಯ ಸವಿಯನ್ನು ಸೇವಿಸಲು ಅರ್ಹನಾಗುತ್ತಾನೆ. ಆದ ಕಾರಣ ಪತಂಜಲಿ ಮಹರ್ಷಿಗಳು ಅಷ್ಟಾಂಗಯೋಗವನ್ನು ಪ್ರತಿಪಾದಿಸಿದ್ದಾರೆ. ಅವರಲ್ಲಿ ವಿಭೂತಿಪಾದದಲ್ಲಿ ಧ್ಯಾನಧಾರಣ ಸಮಾಧಿಗಳ ಸ್ಥೈರ್ಯದಿಂದ ದಿವ್ಯದೃಷ್ಟಿ ಪ್ರಾಪ್ತವಾಗುತ್ತದೆಂದು ವಿವರಿಸಿದ್ದಾರೆ.* ಆವಾಗ್ಗೆ ಈ ಭವ್ಯವಾದ ಭವವೆಲ್ಲ ಶಿವಮಯವಾಗಿ ಕಾಣುತ್ತದೆ ಅದೇ ನಿಜವಾದ ದಿವ್ಯದೃಷ್ಟಿಯು. ಆ ದಿವ್ಯ ದೃಷ್ಟಿಯಿಂದಲೇ ಸೃಷ್ಟಿಯಾಗುತ್ತದೆಂದು ಅರಿತಾಗ ಆ ಭವ್ಯಸೃಷ್ಟಿಯು ಚುಳುಕಾಗಿ ಕರದಲ್ಲಿ ಕಾಣಿಸಿಕೊಳ್ಳುತ್ತದೆ. ಆ ದೃಷ್ಟಿಯು ಹೊರಹೊಮ್ಮುವದು ತನ್ನ ಶರೀರದಿಂದಲೇ. ಈ ಹೊರಹೊಮ್ಮಿದ ಶಕ್ತಿಯು ಆತ್ಮಲಿಂಗವಾಗಿ ಕಾಣುತ್ತದೆ. ಇದನ್ನೇ ವ್ಯಾಸ ಮಹರ್ಷಿಗಳು "ಸಂಪದ್ಯಾವಿರ್ಭಾವಃ ಸ್ವೇನ ಶಬ್ದಾತ್" ಎಂದು §ಬ್ರಹ್ಮಸೂತ್ರದಲ್ಲಿ ಹೇಳಿದ್ದಾರೆ. ಇದನ್ನೇ ಮೈತ್ರೇಯ್ಯುಪನಿಷತ್ತಿನಲ್ಲಿ "ಅಥ ಯ ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರೂಪಃ ಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತ ಇತ್ಯೇಷ ಆತ್ಮೇತಿ ಹೋವಾಚ".

---

* पातञ्जल योगदर्शनम् (तृतीयो विभूतिपादः, सूत्रं- तज्जयात्प्रज्ञालोकः ॥ ५॥ ) भावागणेशीय - नागोजीभट्टीयवृत्ति सहितम् , निर्णयसागर मुद्रालय प्रकाशन- १९१८.

§ ब्रह्मसूत्र शांकरभाष्यम् (अध्यायः- ४, पाद-४, सूत्रं-१) निर्णयसागर प्रकाशन- १९३४.

CC-0. Jangamwadi Math Collection. Digitized by eGangotri

ಈ ಶರೀರದಿಂದಲೇ ಜ್ಯೋತಿರೂಪವಾಗಿ ಸಾಧಕನ ಸಾಧನೆಯಿಂದ ಪರಿಶುದ್ಧವಾದ ಅಂತಃಕರಣದ ಅಂತರಾಳದಲ್ಲಿ ಹುದುಗಿದ್ದ ದಿವ್ಯ ಆತ್ಮವು ಹೊರಹೊಮ್ಮುತ್ತದೆ. ಅದನ್ನೇ ವೀರಶೈವರು ಇಷ್ಟಲಿಂಗವೆಂದು ಕರೆಯುತ್ತಾರೆ. ಇದಕ್ಕೆ ಸಂತಸಾಧುಗಳು ಮಹಾ ಬೆಳಗೆಂದು 'ಮಾತು ಮನಗಳಿಂದ ಮೀರಿದ ದಿವ್ಯ ಜ್ಯೋತಿ' ಯೆಂದು ಕರೆಯುತ್ತಾರೆ. ಈ ಜ್ಯೋತಿಗೆ ಶರೀರದಿಂದ ಹೊರಹೊಮ್ಮಿ ಬರುವ ಮೂಲಮಾರ್ಗವೆಂದರೆ ನೇತ್ರವೆಂದು ಎಲ್ಲ ಅನುಭಾವಿಗಳು ಅನುಭವಿಸುತ್ತಾರೆ. ಇದಕ್ಕೇನೇ ಉಪನಿಷತ್ತಿನಲ್ಲಿ 'ಅಕ್ಷಿಪುರುಷ' ನೆಂದು ಕರೆಯುತ್ತಾರೆ. ಇದನ್ನೇ ನಿಜಗುಣರು ಕೈವಲ್ಯ ಪದ್ಧತಿಯಲ್ಲಿ ರಾಜಯೋಗ ಪ್ರತಿಪಾದನ ಪ್ರಸಂಗದಲ್ಲಿ 'ಕರ ಪೀಠದಿಷ್ಟವೆನಿಸುವ ಶಂಭುಲಿಂಗವು ಗುರುಮತದೊಳಾವ ದೆಸೆಯಿಂದ ಬಂದುದು' ಎಂಬ ಪದ್ಯದಲ್ಲಿ ಇಷ್ಟಲಿಂಗವು ನೇತ್ರದಿಂದಲೇ ಹೊರಹೊಮ್ಮಿ ಬರುತ್ತದೆಂದು ತಮ್ಮ ಅನುಭವವನ್ನಿಟ್ಟಿದ್ದಾರೆ. ಮತ್ತು "ಕಂಗಳೊಳಗೆ ತೊಳಗಿ ಬೆಳಗುವ ದಿವ್ಯ ರೂಪನ ಕಂಡು ಮೈಮರೆದೆನವ್ವ"* ಎಂದು ಶ್ರೀ ಅಕ್ಕಮಹಾದೇವಿಯು ಕಣ್ಣಿನ ದೃಷ್ಟಿಯ ದಿವ್ಯತ್ವವನ್ನು ಪ್ರತಿಪಾದಿಸಿದ್ದಾಳೆ. ಇದರಂತೆ ಬಸವಾದಿ ಪ್ರಮಥರು, ಕನಕದಾಸ, ಪುರಂದರದಾಸ, ಕಬೀರದಾಸ, ತುಳಸೀದಾಸ ಮುಂತಾದವರು ತಮ್ಮ ಅನುಭವವನ್ನು ಜಗತ್ತಿನ ಮುಂದೆ ಇಟ್ಟಿದ್ದಾರೆ. ಇದನ್ನೇ ಜ್ಞಾನೇಶ್ವರಿ ಮಹಾರಾಜರು "ಯಾವ ರೂಪವನ್ನು ನೋಡಬೇಕೆನ್ನುತ್ತೀವೆಯೋ ಅದನ್ನು ಅದೇ ಸ್ವರೂಪದಲ್ಲಿ ನೋಡಬೇಕು"† ಎಂದು ದಿವ್ಯದೃಷ್ಟಿಯನ್ನೇ ಪ್ರತಿಪಾದಿಸಿದ್ದಾರೆ. ಈ ದಿವ್ಯದೃಷ್ಟಿಯ ಬಗೆಗೆ ಅರ್ಜುನನಿಗೆ ತನ್ನ ವಿರಾಟರೂಪವನ್ನು ತೋರಿಸುವಾಗ "ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಂ"§ ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ. ಆ ದಿವ್ಯದರ್ಶನದಿಂದ ಮಾನವನು ದಿವ್ಯದರ್ಶಿಯಾಗುತ್ತಾನೆ. ಅದಕ್ಕೆ ಆತ್ಮದರ್ಶಿಯೆಂದರೂ ಸರಿ; ಲಿಂಗದರ್ಶಿಯೆಂದರೂ ಸರಿ. ಇವೆಲ್ಲವೂ ಪರ್ಯಾಯ ಶಬ್ದಗಳೆಂದು ಹೇಳಬಹುದು. ಅವನಿಗೆ ಬಾಹ್ಯಸೃಷ್ಟಿಯಲ್ಲಿ ದೃಷ್ಟಿಯು ಬೇರೆ ಯಾಗುತ್ತದೆ. ಅವನು ನಿತ್ಯತೃಪ್ತನೂ ಆತ್ಮತೃಪ್ತನೂ ಆಗುತ್ತಾನೆ. ಅವನಿಗೆ ಬಾಹ್ಯ ವಿಷಯಂಗಳಲ್ಲಿ ತೃಪ್ತಿಯು ಇರುವದಿಲ್ಲ. ಭಗದ್ಗೀತೆಯು "ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ." (೬-೨೦) ಎಂದು ದಿವ್ಯದರ್ಶಿಯ

---

* ಅಕ್ಕನ ಬಾಳು ಮತ್ತು ಸಾಹಿತ್ಯ : (ಮಹಾದೇವಿಯಕ್ಕನ ಆಯ್ದ ಹೆಚ್ಚಿನ ವಚನಗಳು, ವ. ೧೮.)– ಶ್ರೀ. ಜ. ಚ. ನಿ.

† " तें रूप पाहिजे आपलें । आपणाची ॥ २६७ ॥"

–सार्थ ज्ञानेश्वरी (अध्याय-१५) लेखकः- ह. भ. प. रंगनाथ महाराज व रामभाऊ यादव; १९४८; प्रकाशक : राज्य यशवंत चिंतामण गुणे, कोल्हापुर; पु. ६५४.

§ ಭಗವದ್ಗೀತಾ : ಅಧ್ಯಾಯ : ೧೧, ಶ್ಲೋಕ : ೮;

CC-0. Jangamwadi Math Collection. Digitized by eGangotri

ಸ್ಥಿತಿಯನ್ನು ಹೇಳುತ್ತದೆ. ಭೃಂಗವು ಪುಷ್ಪದ ಪರಿಮಳದಲ್ಲಿ ಬೆರೆದಂತೆ ದಿವ್ಯ ದರ್ಶಿಯು ಸ್ವ-ಆತ್ಮನಲ್ಲಿ ಮುಗ್ಧನಾಗುತ್ತಾನೆ. ಅವನಿಗೆ ಬಾಹ್ಯಕೀರ್ತಿ-ವಾರ್ತೆ, ಮಾನಾಪಮಾನ, ಲಾಭಾಲಾಭ ಜಯಾಪಜಯುಂಗಳಲ್ಲಿ ದೃಷ್ಟಿಯಿರುವದಿಲ್ಲ. ಆ ದಿವ್ಯದರ್ಶಿಯ ಸ್ಥಿತಿಯೇ ಬೇರೆಯಾಗುತ್ತದೆ. ಅವನ ನೋಟವೆಲ್ಲ ಕೂಟವಾಗುತ್ತದೆ. ಕೂಟವೇ ಪ್ರಾಣವಾಗುತ್ತದೆ. ಪ್ರಾಣವೇ ಪರಬ್ರಹ್ಮವಾಗಿ ಮಹಾಕೂಟವಾಗುತ್ತದೆ. ಆ ಮಹಾಕೂಟದಲ್ಲಿ ಅವನು ನಿಬ್ಬೆರಗಾದಾಗ ಆವನ ತನುಮನ ಧನವೆಲ್ಲ ಶಿವಯೋಗಕ್ಕೆ ಮಂದಿರವಾಗುತ್ತದೆ. ಅಂಥ ಶಿವಯೋಗ ಮಂದಿರದಲ್ಲಿ ಅನಂತ ಕಾಲ ತಪಿಸಿ, ಮಹಾತಪಸ್ವಿಯೆನಿಸಿ ಮಹಾದಿವ್ಯದರ್ಶಿಯೆನಿಸಿ ಶಿವಬಸವ ನಾಮದಿಂದ ನಾಡಿನಲ್ಲಿ ಮೆರೆದರು ನಮ್ಮ ಹಾವೇರಿಯ ಹುಕ್ಕೇರಿಮಠದ ಶ್ರೀ. ಮ. ನಿ. ಪ್ರ. ಲಿಂಗೈಕ್ಯ ಶಿವಬಸವ ಮಹಾಸ್ವಾಮಿಗಳವರು (ಮಹಾ ಶಿವ ಯೋಗಿಗಳವರು).

ಇವರು ಅಥಣಿ ತಾಲೂಕಿನ ಸಪ್ತಸಾಗರ§ ಗ್ರಾಮದಲ್ಲಿ ೧೮೫೭ ರಲ್ಲಿ ಬಡ ಕುಟುಂಬದಲ್ಲಿ ಜನಿಸಿ ಬಾಲ್ಯದಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿ ಬಳ್ಳಾರಿ, ಕಾಶಿ ಮುಂತಾದ ಸ್ಥಳಗಳಿಗೆ ಹೋಗಿ ಸಂಸ್ಕೃತ ಅಭ್ಯಾಸವನ್ನು ಮುಂದುವರಿಸಿ ಪಾಂಡಿತ್ಯವನ್ನು ಸಂಪಾದಿಸಿದರು. ಇವರು ಸಂಗೀತಾದಿ ಕಲಾಭಿಜ್ಞರೂ ಆಗಿದ್ದರು. ಇವರ ಗುರುಗಳು ಜಮಖಂಡಿ ತಾಲೂಕಿನ ಬಿದರಿ ಗ್ರಾಮದ ಕುಮಾರ ಮಹಾ ಶಿವಯೋಗಿಗಳು. ಇವರು ಮುಧೋಳದವರು. ಕುಮಾರ ಶಿವಯೋಗಿಗಳವರ ದಿವ್ಯದರ್ಶನಾನುಗ್ರಹಕ್ಕೆ ಪಾತ್ರರಾಗಿ ಹಾವೇರಿ ಮಠದ ಶ್ರೀ ಶಿವಬಸವ ಮಹಾ ಶಿವಯೋಗಿಗಳೆಂದು ಪ್ರಸ್ತುತ ಕಥಾನಾಯಕರು ಪ್ರಸಿದ್ಧರಾದರು. ಇವರ ಬ್ರಹ್ಮಚರ್ಯ, ಶಮದಮಾದಿಗಳ ಸತ್ವವನ್ನು ಕಂಡು ಲಿಂಗೈಕ್ಯ ಹಾನಗಲ್ಲ ಮಹಾ ಮಹಾಶಿವಯೋಗಿಗಳವರು ಇವರನ್ನು ತಮ್ಮೊಂದಿಗೆ ಶಿವಯೋಗಮಂದಿರಕ್ಕೆ ಕರೆದು ಕೊಂಡು ಹೋದರು. ಅಲ್ಲಿ ಇವರು ತಪಸ್ಸನ್ನಾಚರಿಸುತ್ತಿದ್ದಾಗ ಇವರ ಗುಡಿಸಲಿನ ಮುಂದೆ ಹುಲಿ, ಚಿರ್ತು ಮುಂತಾದ ಕ್ರೂರ ಪಶುಗಳೂ ಬಂದು ಸಮಾಧಾನ

---

§ ಸಪ್ತಸಾಗರ ಗ್ರಾಮವು ಬೆಳಗಾಂವ ಜಿಲ್ಲೆಯ ಅಥಣಿ ತಾಲೂಕಿನಲ್ಲಿದೆ. ಇದಕ್ಕೆ ಸರ್ಪಸಾಗರವೆಂತಲೂ ಕರೆಯುತ್ತಾರೆ. ಮಹಾಭಾರತ ಕಾಲದಲ್ಲಿ ಜನಮೇಜಯ ರಾಜನು ಸರ್ಪಗಳ ವಿನಾಶಕ್ಕಾಗಿ ನೂರು ಕೋಟಿ ಯಜ್ಞಗಳನ್ನು ಇಲ್ಲಿಯೇ ಮಾಡಿದ ನೆಂದೂ ಆ ಯಜ್ಞಕ್ಕೆ ಪವಿತ್ರವಾದ ಜಲ ಬೇಕೆಂದು ಸಪ್ತಸಾಗರಗಳ ಸಂಕೇತರೂಪವಾಗಿ ಏಳು ನೀರಿನ ಕುಂಡಗಳನ್ನು ನಿರ್ಮಿಸಿದನೆಂದೂ ಪ್ರತೀತಿಯಿದೆ. ಇಲ್ಲಿ ಕೃಷ್ಣಾನದಿಯು ಉತ್ತರ ವಾಹಿನಿಯಾಗಿ ಹರಿದಿದೆ; ಮತ್ತು ಇಲ್ಲಿ ಅನಂತ ಲಿಂಗಗಳ ಸ್ಥಾಪನೆಯಾಗಿದೆ; ಇಲ್ಲಿ ಸಪ್ತರ್ಷಿಗಳು ತಪಸ್ಸು ಆಚರಿಸಿ ಸಿದ್ಧಿಪಡೆದರಂತೆ. ಈ ಗ್ರಾಮವು ದಕ್ಷಿಣ ಕಾಶಿ ಯೆಂದು ಪ್ರಸಿದ್ಧಿ ಪಡೆದಿದೆ. ಇಲ್ಲಿ ಭವ್ಯವಾದ ಕಾಶೀನಾಥ ದೇವಾಲಯವಿದೆ. –ಸಂ.

CC-0. Jangamwadi Math Collection. Digitized by eGangotri

ದಿಂದ ಆಡುತ್ತಿದ್ದವು. ಇಲ್ಲಿ ಅನುಷ್ಠಾನ ಬಲದಿಂದ ದಿವ್ಯದೃಷ್ಟಿಯನ್ನು ಸಂಪಾದಿಸಿದರು. ಆ ದಿವ್ಯದೃಷ್ಟಿಯು ಜ್ಯೋತಿಷ್ಯ, ರಮಲ ಮುಂತಾದ ಭೌತಿಕ ಶಾಸ್ತ್ರಗಳಂತಲ್ಲ, ಅದು ಆತ್ಮದರ್ಶಿತ್ವದ ಸ್ಥಿತಿ.

ಆ ಶಿವಯೋಗಿಯು ದಿವ್ಯದರ್ಶನಕ್ಕೆ ಭೂತ-ಭವಿಷ್ಯತ್-ವರ್ತಮಾನ ಕಾಲಗಳು ದೇಶಗಳು ಪ್ರತಿಬಂಧಕವಾಗಲಾರವು. ಸಾಮಾನ್ಯ ಪ್ರಾಣಿಯು ಪ್ರಕಾಶದಲ್ಲಿ ಹೇಗೆ ತನ್ನ ಎದುರಿನಲ್ಲಿ ಪದಾರ್ಥಗಳನ್ನು ಸ್ಪಷ್ಟವಾಗಿ ಕಾಣುತ್ತಿದೆಯೋ ಹಾಗೆ ಯಾವ ದೇಶ ಕಾಲಗಳಲ್ಲಿಯೂ ನಡೆಯದಿರತಕ್ಕ, ನಡೆದು ಹೋದ, ನಡೆಯಲಿರುವ ಘಟನೆಗಳನ್ನೆಲ್ಲ ದಿವ್ಯಚಕ್ಷುವಿನಿಂದ ನೋಡುತ್ತಾನೆ ದಿವ್ಯದರ್ಶಿಯು. ಯೋಗಸೂತ್ರದಲ್ಲಿ ಪತಂಜಲಿ ಮಹರ್ಷಿಗಳು ವಿಭೂತಿ ಪಾದದಲ್ಲಿ ಸರಿಯಾಗಿ ಇದನ್ನೇ ವರ್ಣಿಸಿದ್ದಾರೆ.* ಶ್ರೀ ಕೃಷ್ಣನು ತನ್ನ ದಿವ್ಯ-ಭವ್ಯ ವಿರಾಟ ರೂಪವನ್ನು ನೋಡುವದಕ್ಕಾಗಿ ಅರ್ಜುನನಿಗೆ ದಿವ್ಯಚಕ್ಷುವನ್ನು ಕೊಟ್ಟದ್ದು ಪ್ರಸಿದ್ಧವಿಲ್ಲವೇ ? ಹುಟ್ಟುಗುರುಡನಾದ ಧೃತರಾಷ್ಟ್ರನಿಗೆ ಯುದ್ಧದ ವಿಷಯಗಳನ್ನರುಹಲು ಸಂಜಯನೂ ದಿವ್ಯದೃಷ್ಟಿಯನ್ನು ಪಡೆದಿರಲಿಲ್ಲವೇ ? ಶ್ರೀ ರಾಮಕೃಷ್ಣ ಪರಮಹಂಸರು ದಿವ್ಯದೃಷ್ಟಿಯಿಂದ ಮೊದಲೇ ನರೇಂದ್ರನಲ್ಲಿ ವಿವೇಕಾನಂದನನ್ನು ಕಂಡಿರಲಿಲ್ಲವೇ ? ಶ್ರೀ ಅರವಿಂದ ಮಹರ್ಷಿಗಳಿಗೆ ಆಂಗ್ಲೇಯನೊಬ್ಬ– "ಭಾರತೀಯರು ದಿವ್ಯದೃಷ್ಟಿಯನ್ನುತ್ತಾರಲ್ಲ ! ಅದೇನು ? ಸುಮ್ಮನೆ ಕೇವಲ ಬಾಯಿಂದ ಹೇಳುವ ಬಂಡಾಟಿಕೆಯೇ ? " ಎಂದು ಹಾಸ್ಯ ಮಾಡಿದರೆ " ಇನ್ನೊಂದು ಘಂಟೆಯೊಳಗಾಗಿ ನಿನ್ನ ಮಗು ಸತ್ತ ಸುದ್ದಿ ಬರುತ್ತದೆ. " ಎಂದು ಅರವಿಂದರು ಹೇಳಿದರು. ಅವರ ಹೇಳಿಕೆಯಂತೆ ತಂತಿ ಬಂದುದನ್ನು ನೋಡಿ ಆ ಆಂಗ್ಲೇಯನು ಮುಗ್ಧನಾದನಂತೆ ! ಅದಕ್ಕೇನೇ ನಮ್ಮ ಸಂತರು ಶರಣರು ಕಾಲಜ್ಞಾನದ ವಚನಗಳನ್ನು ಹಾಡಿದರು. ಶ್ರೀ ಕೃಷ್ಣನು ಕೂಡ ೪ನೆಯ ಅಧ್ಯಾಯದಲ್ಲಿ ತನ್ನ ಪೂರ್ವದ ಉಪದೇಶ ಪರಂಪರೆಯನ್ನು ಹೇಳಿದ್ದಾನೆ. ಯೇಸುಕ್ರಿಸ್ತನು ತಾನೊಂದು ಹಳ್ಳಿಯಲ್ಲಿದ್ದಾಗ ಇನ್ನೊಂದು ಹಳ್ಳಿಯಲ್ಲಿ ನಡೆದ ಘಟನೆಯನ್ನು ತನ್ನ ಶಿಷ್ಯರಿಗೆ ಹೇಳಿದ್ದು ಪ್ರಸಿದ್ಧವಿದೆ. ಇದರಂತೆ ಮಹಮ್ಮದನ ಚರಿತ್ರೆಯಲ್ಲಿಯೂ ಹಲವಾರು ಘಟನೆಗಳು ಇರುತ್ತವೆ. ಈ ಎಲ್ಲ ಪ್ರವಾದಿಗಳೂ ದಿವ್ಯದರ್ಶಿಗಳು. ಇವರೆಲ್ಲರಂತೆಯೇ ನಮ್ಮ ಶ್ರೀ ಶಿವಬಸವ ಮಹಾಸ್ವಾಮಿಗಳವರು ದಿವ್ಯದರ್ಶಿ ಶಿವಯೋಗಿಗಳು.

೧೯೪೫ರಲ್ಲಿ ಮುಧೋಳ ಗವಿಮಠದ ವ್ಯಾಜ್ಯ ನಡೆದಿತ್ತು. ಅದು ನಮ್ಮ ವಿರುದ್ಧವಾಗಿದೆಯೆಂದೂ ಪ್ರತಿಪಕ್ಷದವರು ಮಿಠಾಯಿ ಹಂಚಿದರೆಂದೂ ಒಬ್ಬರು ಸೋಲಾಪುರ ಮಠದಲ್ಲಿದ್ದ ನನಗೆ ತಿಳಿಸಿದರು. ಕಿರೀಟಮಠದ ಶ್ರೀ ಲಿಂಗೈಕ್ಯ

* पातञ्जलयोगसूत्रम् - " परिणामत्रयसंयमादतीतानागतज्ञानम् " ॥ १५ ॥

CC-0. Jangamwadi Math Collection. Digitized by eGangotri

ನಿಜಗುಣ ಶಿವಯೋಗಿಗಳು ನನ್ನನ್ನಾಗ ಅಲ್ಲಿಗೆ ಬರಮಾಡಿಕೊಂಡಿದ್ದರು. ನಾನು ಊಟ ಸಹ ಮಾಡದೇ ದುಃಖಿಸುತ್ತ ಇರುವಾಗ ಶ್ರೀ ನಿಜಗುಣ ಗುರುಗಳು, "ಅಷ್ಟೇಕೆ ದುಃಖಿಸುತ್ತೀ ಬಿಡು; ನಮ್ಮ ಮಠವಿದೆ. ನಿಮ್ಮ ಹಾವೇರಿ ಸದ್ಗುರುಗಳ ಮಠವಿದೆ. ದುಃಖಿಸಬೇಡಪ್ಪ; ಹಾವೇರಿಗೆ ಹೋಗು. ಶ್ರೀ ಪೂಜ್ಯರಲ್ಲಿ ಅರಿಕೆ ಮಾಡಿಕೊ. ಅನಂತರ ಅವರ ಅಪ್ಪಣೆಯೇನಾಗುತ್ತದೆಯೋ ನೋಡೋಣವೆಂದು ಸಮಾಧಾನ ಹೇಳಿದರು. ಮತ್ತು ನನಗೆ ರೈಲಿನಿಂದ ಹಾವೇರಿಗೆ ಹೋಗಲು ಅಪ್ಪಣೆ ಕೊಟ್ಟರು. ಮರುದಿನ ಬೆಳಿಗ್ಗೆ ೭|| ಘಂಟೆಯ ಸುಮಾರಕ್ಕೆ ಹಾವೇರಿ ಸ್ಟೇಶನ್ನಿನಲ್ಲಿ ರೈಲು ನಿಂತಾಗ್ಗೆ ಮಗ್ಗುಲಿನವರೊಬ್ಬರು ಇದೇ ಹಾವೇರಿಯೆಂದಾಗ್ಗೆ ಎಚ್ಚರದಪ್ಪಿ ಇಳಿದೆ. ದುಃಖವು ಆವರಿಸಿತು. ಅದೇ ದುಃಖಮುಪ್ರೆಯಲ್ಲಿ ಮಠಕ್ಕೆ ತಲುಪಿದಾಗ ಶ್ರೀ ಮಹಾಶಿವಯೋಗಿಗಳು ಬೆಳಗಿನ ಶಿವಯೋಗ(ಪೂಜೆ)ದಲ್ಲಿ ನಿರತರಾಗಿದ್ದರು. ಆ ಮಠದ ಮಧ್ಯದ ಬಲಗಡೆಯ ಕೋಣೆಯಲ್ಲಿ ವಾಮಹಸ್ತದಲ್ಲಿ ಲಿಂಗ ಮಸ್ತಕದ ಮೇಲೆ ರುದ್ರಾಕ್ಷಿಮಾಲೆ, ಕೊರಳಿನಲ್ಲಿ ಕಂಠಮಾಲೆ, ಬಲಹಸ್ತದಲ್ಲಿ ಜಪಮಾಲೆ, ಅಂಗ ಪ್ರತ್ಯಂಗಳೆಲ್ಲ ಭಸ್ಮ ರುದ್ರಾಕ್ಷಿಮಯವಾಗಿ ಸರ್ವಾಂಗವು ಲಿಂಗತೇಜದಿಂದ ಬೆಳಗುತ್ತಿದ್ದ ಮಹಾದಿವ್ಯ ತೇಜೋಮಯ ಮೂರ್ತಿಯನ್ನು ಕಂಡು ಬೆರಗಾದೆನು. ನಮ್ರ ಭಾವದಿಂದ ನಮಿಸಿದೆನು. ಆ ದಿವ್ಯ ತೇಜಸ್ಸಿನ ಚಿತ್ರವು ಈಗ್ಯೂ ನನ್ನ ಕಣ್ಣುಮುಂದೆ ಕುಣಿಯುತ್ತದೆ. ಲಿಂಗದೊಳ್ ನಟ್ಟ ಆ ನಿಜದೃಷ್ಟಿ, ಆ ದೃಷ್ಟಿಯೊಳ್ ನಟ್ಟ ಆ ನಿಜಮನ, ಆ ಮನದೊಳ್ ನಟ್ಟ ಆ ಮಹಾಭಾವ, ಆ ಭಾವದೊಳ್ ನಟ್ಟ ಮಹಾಲಿಂಗ, ಆ ಲಿಂಗದೊಳ್ ತನ್ನವಸ್ಥೆವಿಲೀನ ಗೊಳಿಸುವ ಆ ಜ್ಯೋತಿರ್ಮಯ ದಿವ್ಯ ಶಿವಯೋಗಿಗೆ ದಿವ್ಯದರ್ಶಿತ್ವವು ಸಹಜವೆಂಬುದು ಸರಿ. ಆ ದಿವ್ಯದೃಷ್ಟಿ ಹೊರಮುಖವಾದಾಗ್ಗೆ ಆ ಕರಣಂಗಳೆಲ್ಲ ನನ್ನತ್ತ ವ್ಯಾಪಿಸಿದವು. "ಯಾಕೋ ದುಃಖಿಸುತ್ತಾ ಇರುವಿ; ದುಃಖಿಸಬೇಡ, ಆ ಮಠವು ನಿನ್ನದೇ. ಆ ಹುಡುಗನಂತೆಯಾಗಿದ್ದರೆ ಆ ಹುಡುಗ ಸಾಯುತ್ತಾನೆ. ಇಲ್ಲದೇ ಇದ್ದರೆ ನಿನ್ನಂತೆಯಾಗುತ್ತದೆ. ಹೋಗು ಸ್ನಾನ ಮಾಡಿ ಪೂಜೆಗೆ ಬಾ " ಎಂದು ಶಿವಯೋಗಗಳು ಅಪ್ಪಣೆ ಕೊಟ್ಟರು. ಅದರಂತೆಯೇ ಮುಂದೆ ನನಗೆ ಮಹಾ ಸನ್ನಿಧಿಯ ನೇತೃತ್ವದಲ್ಲಿಯೇ ಮುಧೋಳ ಮಠದ ಅಧಿಕಾರ ಕಾರ್ಯಗಳು ಸಾಂಗವಾದುದು ಸರ್ವಶ್ರುತವಿದೆ.

ಇನ್ನೊಂದು ಸಂಗತಿ. ೧೯೪೪ ರಲ್ಲಿ ನಮ್ಮ ಪೂರ್ವಾಶ್ರಮದ ತಂಗಿಯಾದ ಅನ್ನಪೂರ್ಣಮ್ಮನು ಪುತ್ರ ಸಂತತಿಯನ್ನು ಕಳೆದುಕೊಂಡು ದುಃಖಸಾಗರದಲ್ಲಿ ಮುಳುಗಿ ಹೋದಾಗ ಅವಳ ಪತಿಯಾದ ದಾವಣಗೆರೆಯ ಹೆಂಜಗಿಮಠ ಪ್ರಭಯ್ಯನವರೂ ಅವಳೂ ಆಥಣಿಗೆ ಬಂದರು. ಅವರು ಮಹಾತಪಸ್ವಿಗಳಿಂದ ಸಂತತಿಗಾಗಿ ಆಶೀರ್ವಾದ ಪಡೆಯಬೇಕೆಂದು ಹಂಬಲಿಸುತ್ತಿದ್ದರು. ಆ ವಿಷಯವನ್ನು ಶ್ರೀ ಪೂಜ್ಯ

CC-0. Jangamwadi Math Collection. Digitized by eGangotri

ರಲ್ಲಿ ಅರಿಕೆ ಮಾಡಿಕೊಂಡಾಗ್ಗೆ ನನ್ನನ್ನು ಒಳಗೆ ಕರೆದು "ಇನ್ನೊಂದು ತಿಂಗಳೊಳಗೆ ಲಿಂಗ ಬೀಳುತ್ತದೆ. ಅದಕ್ಕೆ ಹೇಗೆ ಆಶೀರ್ವಾದ ಕೊಡಬೇಕು ?" ಎಂದರು. ಇಷ್ಟು ಸ್ಪಷ್ಟವಾಗಿ, ನಿಶ್ಚಲವಾಗಿ, ಖಂಡಿತವಾಗಿ ಈ ವಾಕ್ಯಗಳನ್ನು ಕೇಳಿದಾಗ್ಗೆ ವಾಚಕರಿಗೆ ಆಶ್ಚರ್ಯವೆನಿಸದೆ ಇರದು. ಏಕೆಂದರೆ ತಿಂಗಳೊಳಗೆ ತಂಗಿ ಅವರ ವಾಕ್ಯದಂತೆ ಶಿವನ ಪಾದಕ್ಕೆ ಸಲ್ಲಿದಳು.

ಕೊನೆಯ, ಆದರೆ ಬಹು ಮಹತ್ವದ ಇನ್ನೊಂದು ವಿಷಯವನ್ನು ಹೇಳಲೇ ಬೇಕು. ೧೯೪೫ ನೇ ಇಸ್ವಿಯಲ್ಲಿ ನಮ್ಮ ಪೂಜ್ಯ ದಿವ್ಯದರ್ಶಿಗಳು ತಮ್ಮ ಶಿಷ್ಯನಾದ ನನ್ನನ್ನು ಶ್ರಾವಣದ ಪುರಾಣಕ್ಕಾಗಿ ಅಥಣಿಗೆ ಕರೆಕಳುಹಿದರು. ಅಷ್ಟರಲ್ಲಿ ನಾನು ಬೇರೆ ಕಡೆ ಪುರಾಣಕ್ಕೆ ಒಪ್ಪಿಕೊಂಡಿದ್ದೆ. ಕರೆಯಲು ಬಂದ ಮನುಷ್ಯನಿಗೆ "ನಾನು ಈ ಸಾರೆ ಬರಲು ಸಾಧ್ಯವಿಲ್ಲ" ಎಂದು ಹೇಳಿದೆನು. ಆ ಮನುಷ್ಯನು ಪೂಜ್ಯ ಶ್ರೀಗಳವರ ಪತ್ರವೊಂದನ್ನು ನನ್ನ ಕೈಯಲ್ಲಿತ್ತನು. ಅದರಲ್ಲಿ "ನಿನ್ನ ಪುರಾಣವನ್ನು ಕೇಳುವದು ಇದೇ ಮೊದಲು, ಇದೇ ಕಡೆಯದು; ತಪ್ಪಿಸಬೇಡ." ಎಂದು ಅಪ್ಪಣೆ ಕೊಡಿಸಿದ್ದರು. ಅದಕ್ಕನುಗುಣವಾಗಿ ಪುರಾಣಕ್ಕೂ ಹೋದದ್ದಾಯಿತು. ಅದನ್ನು ನೆನೆಸಿದರೆ ಈಗಲೂ ನನ್ನ ಮೈ ಜುಮ್ಮೆನ್ನುತ್ತಿದೆ. ಅದೇ ವರುಷ ಪೂಜ್ಯ ಶ್ರೀಗಳು ೧೯೪೬ ರಲ್ಲಿ ಲಿಂಗೈಕ್ಯರಾದರು. ಇಂಥ ಹಲವಾರು ಘಟನೆಗಳು ಆಗಿಹೋಗಿವೆ. ಕೆಲವನ್ನು ಮಾತ್ರ ಇಲ್ಲಿ ಹೇಳಲಾಗಿದೆ.

ಇದು ಕಟ್ಟು ಕಥೆಯಲ್ಲ. ಸ್ವತಃ ಅನುಭವಿಸಿದ್ದು, ಈ ದಿವ್ಯದರ್ಶಿತ್ವವು ಅವರಲ್ಲಿಯೇ ಲೀನವಾಯಿತೇನೋ, ಎಂಬಂತೆ, ಸಮಾಜವು ಇಂದು ಅಂಧವಾಗಿದೆ. ಈ ದಿವ್ಯದರ್ಶಿತ್ವದ ಲವಲೇಶವು ಸಹ ಸಮಾಜದ ಮುಖಂಡರಲ್ಲಿ, ಗುರುಹಿರಿಯರಲ್ಲಿ ರಾಷ್ಟ್ರಪುರುಷರಲ್ಲಿಯೂ ಇಲ್ಲದ ಮೂಲಕ ಈಗ ಅಶಾಂತಿಯ ಅಂತಃ ಕಲಹಗಳು, ಅಧಿಕಾರ ಲಾಲಸೆಯು ಪರಸ್ಪರ ಈರ್ಷಾಸೂಯೆಗಳು, ವಿಷಯ ಬುದ್ಧಿ, ನಿಂದೆಗಳು, ಅನೈಕ್ಯತೆಯು ತಲೆದೋರ ಹತ್ತಿವೆ.

ಪ್ರಾಚೀನ ಕಾಲಕ್ಕಿಂತಲೂ ಈಗ ದೇಶದಲ್ಲಿ ಶಾಲೆ ಕಾಲೇಜುಗಳು ಮತ್ತು ಇನ್ನು ಇತರ ಹಲವಾರು ಜ್ಞಾನಪ್ರಸಾರದ ಸಹಾಯ ಸಲಕರಣೆಗಳು ಒದಗುತ್ತಿದ್ದರೂ ಇವುಗಳಲ್ಲಿ ತಮ್ಮ ತಮ್ಮ ಧರ್ಮಗಳಿಗುಣವಾಗಿ ಪೂಜಾ ಅನುಷ್ಠಾನ, ನೀತಿ, ಆಚಾರ ಮತ್ತು ಆಧ್ಯಾತ್ಮಿಕ ವಿಷಯುಗಳ ಚರ್ಚೆ ಇವು ಅಲಕ್ಷಿಸಲ್ಪಟ್ಟವುಗಳಾಗಿ ಸಮಾಜವು ಅಸ್ತವ್ಯಸ್ತವಾಗಹತ್ತಿದೆ – ದಿವ್ಯದರ್ಶಿತ್ವದ ಅಭಾವವಾಗಹತ್ತಿದೆ. ತತ್ಪರಿಣಾಮವಾಗಿ, ರಾಷ್ಟ್ರ ರಾಷ್ಟ್ರಗಳಲ್ಲಿ, ದೇಶ ದೇಶಗಳಲ್ಲಿ, ಸಮಾಜ ಸಮಾಜಗಳಲ್ಲಿ, ಮನೆ ಮನೆಗಳಲ್ಲಿ ಅಶಾಂತಿಯು ಬೀಡು ಬಿಡಲಿಕ್ಕೆ ಹತ್ತಿದೆ. ಅದಕ್ಕೆಲ್ಲ ಮೂಲ ಕಾರಣವೆಂದರೆ ಮಾನವನಲ್ಲಿ ಆತ್ಮದರ್ಶಿತ್ವ ಮತ್ತು ಅಂತಹ ದಿವ್ಯದರ್ಶಿಗಳ

CC-0. Jangamwadi Math Collection. Digitized by eGangotri

ನೇತೃತ್ವ ಇಲ್ಲದಿರುವದು. ಈ ಬಾಹ್ಯ ನಿಸರ್ಗದ ಯಾವುದೇ ಶಕ್ತಿಗಿಂತ ಮಾನವನ ಮನಸ್ಸು ಪ್ರಭಾವವುಳ್ಳದ್ದು. ಅದು ಪವಿತ್ರವಾದರೆ ದಿವ್ಯದರ್ಶಿತ್ವ ಸಾಧ್ಯ. ಆ ದಿವ್ಯದರ್ಶಿತ್ವವಿಲ್ಲದೆ; ಮಾನವತೆಯ ಉದ್ಧಾರವೇ ಶಕ್ಯವಿಲ್ಲ. ಸುಖ ಶಾಂತಿ ಸುಮತಿಗಳಂತೂ ದೂರೇ ಉಳಿದವು.

ಆ ಮಹಾ ಶಿವಯೋಗಿಗಳು ಸಾಧಿಸಿದ ದಿವ್ಯದರ್ಶನದ ಆದರ್ಶವು ಎಲ್ಲರಿಂದಲೂ ಅನುಕರಣೀಯವಾದುದು. ಆ ದಿವ್ಯದರ್ಶಿತ್ವವನ್ನು ಶಿವಬಸವೇಶನು ಕರುಣಿಸಲೆಂದು ವಿರಮಿಸುತ್ತೇವೆ.

CC-0. Jangamwadi Math Collection. Digitized by eGangotri

## ಅಥಣಿಯಲ್ಲಿರುವ ಶೆಟ್ಟರಮಠ (ಕುಮಾರಮಠ)ದ ದೃಶ್ಯಗಳು.



ಅಥಣಿ ಕುಮಾರಮಠದ ಮಹಾದ್ವಾರ



ಶ್ರೀ ಮುರುಳಸಿದ್ಧೇಶ್ವರ ಗದ್ದುಗೆ

CC-0. Jangamwadi Math Collection. Digitized by eGangotri




ಲಿಂಗೈಕ್ಯ ಹಾವೇರಿ ಮಹಾಪೂಜ್ಯರು
ಅಥಣಿ ಕುಮಾರ ಮಠದಲ್ಲಿ ಅನುಷ್ಠಾನ ಮಾಡಿದ ದೃಶ್ಯ.

[ಫೋಟೋಗ್ರಾಫರ: ಎಸ್. ಕೆ. ಇಟ್ನಾಳಮಠ]

CC-0. Jangamwadi Math Collection. Digitized by eGangotri

# ಆದರ್ಶಯೋಗಿ

**ಶ್ರೀ. ನಿ. ಪ್ರ. ಶಿವಲಿಂಗ ಸ್ವಾಮಿಗಳು, ಹುಕ್ಕೇರಿಮಠ, ಹಾವೇರಿ.**

ಪ್ರಾತಃಸ್ಮರಣೀಯರಾದ ಪರಮಪೂಜ್ಯ ಲಿಂಗೈಕ್ಯ ಶ್ರೀ ಶಿವಬಸವ ಮಹಾಸ್ವಾಮಿಗಳವರ ವ್ಯಕ್ತಿತ್ವ ಬಹಳ ಉಜ್ವಲವಾದುದು. ಅವರೊಬ್ಬ ಮಹಾ ತಪಸ್ವಿಗಳು; ತಮ್ಮ ತಪಸ್ಸಿನ ತೈಲವನೆರೆದು, ಶಿವಯೋಗಮಂದಿರವೆಂಬ ನಂದಾದೀಪವನ್ನು ಹಚ್ಚಿ ವಿಪನ್ನಾವಸ್ಥೆಯಲ್ಲಿದ್ದ ವೀರಶೈವ ಸಮಾಜದ ಮೇಲೆ ಬೆಳಕು ಚೆಲ್ಲಿ ಅದು ಚೇತರಿಸಿಕೊಳ್ಳುವಂತೆ ಮಾಡಿದರು.

ವಿರಕ್ತಾಶ್ರಮದ ಆಗಸದಲ್ಲಿ ಶ್ರೀಗಳವರೊಂದು ಧ್ರುವ ತಾರೆಯಂತೆ ಮಿನುಗಿ ಮಾಯವಾದರು. ಲಿಂಗಾನುಸಂಧಾನದ ಬಲದಿಂದ ಶಾಪಾನುಗ್ರಹ ಸಾಮರ್ಥ್ಯವನ್ನು ಸಂಪಾದಿಸಿದವರಾಗಿದ್ದರು. ವಿರತಿ, ಲಿಂಗನಿಷ್ಠೆ, ದಾಸೋಹಂಭಾವ, ಲಿಂಗಾಂಗ ಸಾಮರಸ್ಯದ ಅನುಭವ, ಸರ್ವಾತ್ಮ ಭಾವನೆ ಮೊದಲಾದ ದಿವ್ಯ ಗುಣಗಳು ಇವರಲ್ಲಿ ಮನೆ ಮಾಡಿದ್ದವು. ಶ್ರೀ ಬಸವಾದಿ ಪ್ರಮಥರ ತತ್ವದಂತೆ ಆಚರಿಸಿ ತಮ್ಮ ಪವಿತ್ರ ಜೀವನವು ಅನ್ಯರಿಗೆ ಮಾರ್ಗದರ್ಶಿಯಾಗುವಂತೆ ಮಾಡಿದ ಇಂತಹ ಮಹರ್ಷಿಯರು ನಮ್ಮ ಸಮಾಜದಲ್ಲಿ ಬಹು ವಿರಳ.

ವೈರಾಗ್ಯದಲ್ಲಿ ಎರಡು ವಿಧ. ಒಂದು ಗೇಹ-ವೈರಾಗ್ಯ, ಮತ್ತೊಂದು ದೇಹ ವೈರಾಗ್ಯ. ಗೃಹ ಕಲಹದ ಅಥವಾ ಬಂಧುವಿಯೋಗದ ಮೂಲಕವಾಗಲಿ ಇಲ್ಲವೆ ಬೇರೆ ಯಾವುದೇ ಒಂದು ಕಾರಣ ಮನೆ-ಮಾರುಗಳನ್ನು, ಮಡದಿ-ಮಕ್ಕಳನ್ನು, ಧನ-ಕನಕ-ವಸ್ತ್ರವಾಹನಗಳನ್ನೂ ತ್ಯಜಿಸಿ, ಏಕಾಂಗಿಯಾಗಿ, ಕೌಪೀನ ಧಾರಿಯಾಗಿ, ಕಾವಿ ಬಟ್ಟೆಯನ್ನುಟ್ಟು ತನ್ನ ಜೀವನ ನಾಟಕವನ್ನು ನಡೆಯಿಸುತ್ತಲಿರುವುದಕ್ಕೆ ಗೇಹವೈರಾಗ್ಯವೆಂದೆನ್ನುವರು. ಇನ್ನು ದೇಹದಲ್ಲಿರುವ ಪಂಚ ಜ್ಞಾನೇಂದ್ರಿಯಗಳನ್ನು, ಪಂಚ ಕರ್ಮೇಂದ್ರಿಯುಗಳನ್ನೂ, ಅವುಗಳಿಗೆ ಅಧಿಪತಿಯಾದ ಸಂಕಲ್ಪ ವಿಕಲ್ಪಾತ್ಮಕವಾದ ಮನವನ್ನು ತನ್ನ ಸ್ವಾಧೀನಪಡಿಸಿಕೊಂಡು ಶಿವಧ್ಯಾನ ತತ್ಪರನಾಗಿ, ತನ್ನ ಜೀವನ ನೌಕೆಯನ್ನು ಈ ಸಂಸಾರ ಸಾಗರದಲ್ಲಿ ಬಹು ದಕ್ಷತೆಯಿಂದ ಸಾಗಿಸಿಕೊಂಡು ಹೋಗುವದಕ್ಕೆ ದೇಹ ವೈರಾಗ್ಯವೆಂದೆನ್ನುವರು. ಈ ದೈಹಿಕ ವೈರಾಗ್ಯವಿಲ್ಲದೇ ಕೇವಲ ಗೃಹಿಕ ವೈರಾಗ್ಯದಿಂದ ಏನೂ ಪ್ರಯೋಜನವಿಲ್ಲ. ವಿರಕ್ತ ಶಿಖಾಮಣಿಗಳಾದ ಶ್ರೀ ಶಿವಬಸವ ಮಹಾಸ್ವಾಮಿಗಳವರು ನಿಜವಾಗಿಯೂ ಈ ದೇಹ-ವೈರಾಗ್ಯದ ಚರಮ ಸ್ಥಿತಿಯನ್ನು ಪಡೆದವರಾಗಿದ್ದರು. ಆ ತೇಜೋಮೂರ್ತಿಯ ಆಜಾನು ಬಾಹುವುಳ್ಳ ಬಂಧುರ ದೇಹವನ್ನು, ಶಿವಕಲೆಯಿಂದ ಶೋಭಿ

CC-0. Jangamwadi Math Collection. Digitized by eGangotri

ಸುವ ಆ ಪ್ರಸನ್ನ ಮುಖ ಕಮಲವನ್ನು ಕರುಣಾರಸವೇ ಹೊರಸೂಸುವಂತಿರುವ ಆ ಕಂಗಳ ಮಂಗಳ ಕಾಂತಿಯನ್ನು, ಒಮ್ಮೆಯಾದರೂ ನಿಟ್ಟಿಸಿ ನೋಡಿದವರಿಗೆ ಅವರ ಕಡುತರ ವೈರಾಗ್ಯದ ಪರಿಚಯು ಮಾಡಿಕೊಡಬೇಕಾಗಿಲ್ಲ.

## ಸತ್ವ ಪರೀಕ್ಷೆ

ಶ್ರೀಗಳವರು ನಿಡಗುಂದಿ ಕೊಪ್ಪದಲ್ಲಿ ತಪಸ್ಸನ್ನಾಚರಿಸುವ ಕಾಲಕ್ಕೆ ಇವರ ವೈರಾಗ್ಯವನ್ನು ಭಂಗಗೊಳಿಸಬೇಕೆಂದು ಕೆಲವು ಜನ ಕುಹಕರು ಒಂದು ಆಟ ಹೂಡಿದರು. ಒಬ್ಬ ಷೋಡಶ ಪ್ರಾಯದ ಮಿಸುನಿ ಬಂಣದ ಸುಂದರಿ ಯುವತಿಯನ್ನು ಇವರ ಕುಟೀರಕ್ಕೆ ಕಳುಹಿದರು. ಮಹಾಸ್ವಾಮಿಗಳವರು ಸಾಯಂಕಾಲದ ಅನುಷ್ಠಾನವನ್ನು ತೀರಿಸಿಕೊಂಡು ಹೊರಗೆ ಬರುವಷ್ಟರಲ್ಲಿ ಆ ಪರ್ಣಕುಟೀರದ ಬಾಗಿಲ ಬಳಿಯಲ್ಲಿಯೇ ಆ ಯುವತಿಯನ್ನು ಕಂಡರು, ವಿಸ್ಮಯಗೊಂಡರು. ಆಕೆಯ ಬಲದ ಕೈಯಲ್ಲೊಂದು ಭಿಕ್ಷಾ ಪಾತ್ರೆಯಿದೆ. ಅರ್ಧ ನಗ್ನ ಸ್ಥಿತಿಯಲ್ಲಿ ನಿಂತುಕೊಂಡು, ತನ್ನ ಕೊಂಕು ನೋಟದಿಂದ ನಿಟ್ಟಿಸಿ ನೋಡುತ್ತಲಿದ್ದಾಳೆ; ಬಲಗೈ ಮುಂದೆ ಮಾಡಿ ಭಿಕ್ಷಾಂದೇಹಿ ಎನ್ನುತ್ತಲಿದ್ದಾಳೆ. ಆ ನಿರ್ಜನವಾದ ಪ್ರದೇಶದಲ್ಲಿ ಹೂಗಳ ಕಂಪನ್ನು ಹೊತ್ತು ತಂದ ಮಂದ ಮಾರುತನು ಇದನ್ನೆಲ್ಲ ನೋಡುತ್ತಲಿದ್ದಾನೆ. ಚಂದಿರನು ತನ್ನ ಹಾಲ್‌ಬೆಳಕನ್ನು ಚಲ್ಲಿ ನಿರುಕಿಸುತ್ತಲಿದ್ದಾನೆ. ಆದರೆ ಆದದ್ದೇನು ? ಹಿಮಾಚಲದಂತೆ ಅವಿಚಲವಾದ ಈ ವಿರಕ್ತ ಮೂರ್ತಿಯ ಮುಂದೆ ಮಾಯೆಯ ಮಾಟ ನಡೆಯದಾಯಿತು.

ಪ್ರಚಂಡವಾದ ಬಿರುಗಾಳಿಯು ಸಣ್ಣ ಸಣ್ಣ ಗಿಡ-ಮರಗಳನ್ನು ಕಿತ್ತೊಗೆಯ ಬಲ್ಲುದೇ ಹೊರತು ಉನ್ನತವಾದ ಮೇರು-ಗಿರಿಯನ್ನು ಕಿತ್ತೊಗೆಯಲು ಎಂದಾದರೂ ಸಮರ್ಥವಾದೀತೆ ? ಎಂದಿಗೂ ಇಲ್ಲ.

ಶ್ರೀಗಳವರು ಆ ತರುಣಿಯನ್ನು ಕುರಿತು—" ತಂಗೀ, ನೀನು ಈ ಹೊತ್ತಿನಲ್ಲಿ ಇಲ್ಲಿಗೇಕೆ ಬಂದಿರುವಿ ? ನಿನಗೆ ಭಿಕ್ಷೆ ಬೇಕಾಗಿದ್ದರೆ ಊರೊಳಗೆ ಹೋಗು. ನಮ್ಮಂತಹ ಸನ್ಯಾಸಿಗಳ ಹತ್ತರ ನಿನಗೇನು ದೊರೆಯಬಲ್ಲದು ? " ಎಂದು ಹೇಳಿ ಆಕೆಯನ್ನು ಹಿಂದಕ್ಕೆ ಕಳುಹಿಸಿ ಕೊಟ್ಟರು. ಸಂತಾಪಗೊಂಡರು. ಮುಂದೆ ಕೆಲವೇ ದಿನಗಳಲ್ಲಿ ಆ ಕುಚೋದ್ಯ ಮಾಡಿದವರ ವಂಶವೇ ನಿರ್ನಾಮವಾಗಿ ಹೋಯಿತು. ಈ ವಿಷಯದಲ್ಲಿ ಒಬ್ಬ ಸಂಸ್ಕೃತ ಕವಿಯು ಹೀಗೆ ಹೇಳಿದ್ದಾನೆ.

ಅಜಾಚರ್ಮನಿಃಶ್ವಾಸಾದ್ದಹತೇ ಪಂಚಲೋಹಕಮ್ ।
ಸಾಧುಸಂತಾಪ ನಿಃಶ್ವಾಸಾತ್ ಕಿಮಾಶ್ಚರ್ಯಂ ಕುಲಕ್ಷಯಂ ॥

CC-0. Jangamwadi Math Collection. Digitized by eGangotri

ಆಡಿನ ಚರ್ಮದಿಂದ ಮಾಡಲ್ಪಟ್ಟ ಕಂಬಾರನ ತಿದಿಯ ಉಸಿರಿನಿಂದ ಕಠಿಣವಾದ ಪಂಚಲೋಹಗಳೇ ಕರಗಿ ನೀರಾಗುತ್ತಿರುವಾಗ ಸಾಧುಗಳ ನೊಂದ ಹೃದಯದ ನಿಟ್ಟುಸಿರಿನಿಂದ ವಂಶವು ನಾಶವಾಗುವದೇನಾಶ್ಚರ್ಯ ?

ಮಹಿಮರೊಡನೆ ಸರಸವಾಡುವದು ಎಷ್ಟು ಘಾತಕವಾದುದೆಂಬುದನ್ನು ಮಹಾತ್ಮ ಬಸವಣ್ಣನವರು ತಮ್ಮದೊಂದು ಸುಂದರ ವಚನದಲ್ಲಿ ಬಹು ಮಾರ್ಮಿಕವಾಗಿ ಬಣ್ಣಿಸಿದ್ದಾರೆ:

ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುಱಿಸುವಂತೆ,
ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ,
ಹುಲಿಯ ಮೀಸೆಯ ಹಿಡಿದುಕೊಂಡು
ಒಲಿದುಯ್ಯಲೆಯಾಡುವಂತೆ,
ಕೂಡಲ ಸಂಗನ ಶರಣರೊಡನೆ ಮಱೆದು ಸರಸವಾಡಿದರೆ
ಸುಣ್ಣದಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ ! §

## ಸಾತ್ವಿಕ ಶೌರ್ಯ

ಸ್ರಕ್-ಚಂದನ-ವನಿತಾದಿ ವಿಷಯಗಳು ವಿಷದಂತೆ ಮನುಷ್ಯನನ್ನು ನಾಶಗೊಳಿಸುತ್ತವೆ. ಅವುಗಳನ್ನು ಅತಿ ದೂರದಲ್ಲಿರಿಸಿ ಏಕಾಂತವಾಸಿಗಳಾಗಿ ವಿರತಿಸಂಪನ್ನರಾಗುವದು ಅಷ್ಟೇನೂ ಮಹತ್ವದ ವಿಷಯವಲ್ಲ. ಆದರೆ, ಮಾನವನ ಅಂತಃಕರಣವನ್ನು ಕದಡುವ ಚಿತ್ತಾಕರ್ಷಕವಾದ ವನಿತಾದಿ ವಿಷಯಗಳು ತನ್ನ ಸಮೀಪದಲ್ಲಿದ್ದು ಅವುಗಳನ್ನು ಭೋಗಿಸುವ ಶಕ್ತಿಯಿದ್ದು ಅದಕ್ಕೆ ಅನುಕೂಲವಾದ ಅವಕಾಶವೂ ದೊರೆತಿರುವಾಗ ಯಾರ ಮನಸ್ಸು ಸ್ವಲ್ಪವೂ ಚಂಚಲವಾಗುವದಿಲ್ಲವೋ ಅವರೇ ನಿಜವಾದ ವೀರರು, ಧೀರರು, ಅವರೇ ಪ್ರಚಂಡ ಪರಾಕ್ರಮಿಗಳು. ಇದಕ್ಕನೇ ಸಾತ್ವಿಕ ಶೌರ್ಯವೆಂದು ಹೆಸರಿಸಬಹುದು.

ಇದನ್ನೇ ಮಹಾಕವಿ ಕಾಲಿದಾಸನು ತನ್ನ ಕಾವ್ಯದಲ್ಲಿ " ವಿಕಾರಹೇತೌ ಸತಿ ವಿಕ್ರಿಯಂತೇ ಯೇಷಾಂ ನ ಚೇತಾಂಸಿ ತ ಏವ ಧೀರಾಃ " ಎಂದು ಹೇಳಿರುವನು.*

ಈ ಬಗೆಯ ಸಾತ್ವಿಕ ಶೌರ್ಯ-ಸಂಪನ್ನರಾಗುವದು ಶಿವಾಂಶಸಂಭೂತರಿಗೆ ಸಾಧ್ಯವಪ್ಪುದಲ್ಲದೇ ಸಾಮಾನ್ಯ ಮಾನವನಿಗೆ ಅದೆಂದಿಗೂ ಸಾಧ್ಯವಾಗದು.

---

§ ಬಸವಣ್ಣನವರ ಷಟ್‌ಸ್ಥಳದ ವಚನಗಳು, ಸಂ. ಶಿ. ಶಿ. ಬಸವನಾಳ, ದ್ವಿತೀಯ ಮುದ್ರಣ ೧೯೫೪, ಮಾಹೇಶ್ವರನ ಜ್ಞಾನಿಸ್ಥಳ, ವ. ೬೬೧.

* ಕುಮಾರಸಂಭವ, ಸರ್ಗ-೫, ಶ್ಲೋಕ-೫೯

CC-0. Jangamwadi Math Collection. Digitized by eGangotri

ಮುಪ್ಪಿನಾರ್ಯನು ಈ ಸೂಕ್ಷ್ಮ ತತ್ವವನ್ನು ಬಹಳ ಸುಂದರವಾಗಿ ತನ್ನ ಕಾವ್ಯ ವಾಣಿಯಲ್ಲಿ ವರ್ಣಿಸುತ್ತಾನೆ :

"ಒಲಿದ ಲಲನೆಯನಗಲುವದು ತಾ
ಒಲಿದು ಲಿಂಗದಿ ಮನವನಿಟ್ಟರೆ
ಚಲಿಸದದು ಶಿವನಂಶಕಲ್ಲದೆ ನರರಿಗೆಂತಹುದು ॥ ಪ ॥

ಮುನಿದ ನಲ್ಲಗೆ ಲಲ್ಲೆಗರದತಿ
ವಿನಯದಿಂದಲಿ ತೋರಿ ಕುಚವನು
ಇನಿಯನೆದೆಯೊಳು ಸಾರ್ಚಿಯಧರವ ಜಿಹ್ವೆಯೊಳಗಿರಿಸಿ
ಮುನಿಸು ತಿಳಿಯದಡೆನ್ನ ಕೊಲ್ಲೆಂ-
ದೆನುತ ಮುದ್ದಿಸಿ ದೈನ್ಯಗರೆವಳ
ಮನದಿ ನೆನೆಯದೆ ಇರ್ಪುದದು ತಾ ನರರಿಗೆಂತಹುದು ॥ ೧ ॥

ಒಲಿದ ಪುರುಷನ ವಿನಯದಿಂದಲಿ
ಎಳೆದು ಮಂಚದ ಮೇಲೆ ಮಲಗಿಸಿ
ಬಲುಹಿನಿಂ ತಾಂಬೂಲ ಗುಟಕನು ಕೊಟ್ಟು ಬಿಗಿದಪ್ಪಿ
ನಲಿದು ಅಧರವ ಸವಿದು ಸೊಗಸಿಂ
ತಳಪುಗಂಗಳ ಮುಚ್ಚಿ ತೆರೆವಳ
ನುಳಿಪುದದು ಶಿವನಂಶಕಲ್ಲದೆ ನರರಿಗೆಂತಹುದು ॥ ೨ ॥

ಕುರುಳು ಕುಣಿವುತ ಮುತ್ತಿನೋಲೆಯ
ಮಿರುಗು ಹೊಳೆವುತ ಕೊರಳ ಮುತ್ತಿನ
ಸರವು ಕಲಕುತ ತೊಟ್ಟಕುಚಯುಗವದರುತಿರೆ ಬಳಿಕ
ಸೆರಗಿನಿಂದಲಿ ಬೆಮುತ ನಲ್ಲನ
ಒರಸಿ ಮುಖವನು ಮರಳಿ ನೆರೆವಳ
ತೊರೆವುದುದು ಶಿವನಂಶಕಲ್ಲದೆ ನರರಿಗೆಂತಹುದು ॥ ೩ ॥

ತೊಡೆಗಳದರುತ ನಡುವು ಬಳಕುತ
ಮುಡಿಯು ಕುಣಿಯುತ ಸಡಲಿ ಬೈತಲೆ
ಒಡನೆ ಗಂಟಿಕ್ಕಿರಲು ತಿಲಕವು ಬೆಮರಿನಿಂದಿಳಿಯೆ
ಮಡದಿ ಮುತ್ತಿನ ಬೊಟ್ಟು ರಂಜಿಸೆ
ಮುಡಿದ ಕುಸುಮದ ಭಾವದಳವಸು
ಬಿಡುವುದದು ಶಿವನಂಶಕಲ್ಲದೇ ನರರಿಗೆಂತಹುದು ॥ ೪ ॥

CC-0. Jangamwadi Math Collection. Digitized by eGangotri

ಸುರತದಂತ್ಯದಿ ಬಳಲಿದಾತನ
ನೊರಗಿಸುತ ಕುಚಯುಗದ ಮಧ್ಯದಿ
ಪರವಶದಿ ಮೆರೆದಿರುವ ಚಲುವೆಯ ಸೊಗಸನಗಲುವರೆ
ಪರಕೆ ಪರತರ ಶಿವ ಷಡಕ್ಷರ
ಪರಮ ಲಿಂಗದಿ ಮನವು ಸಿಲ್ಕಿರೆ
ಹೊರಗೆ ಮರೆದಿಹ ಶರಣಗಲ್ಲದೆ ನರರಿಗೆಂತಹುದು ॥ ೫ ॥ *

ಈ ದೃಷ್ಟಿಯಿಂದ ವಿಚಾರಿಸುವದಾದರೆ ಸಾತ್ವಿಕ ಶೌರ್ಯಸಂಪನ್ನರಾದ ಪರಮ ಪೂಜ್ಯ ಗುರುವರ್ಯರು ನಿಜವಾಗಿಯೂ ಶಿವಾಂಶಿಕರಾಗಿದ್ದರೆಂಬ ಮಾತನ್ನು ನಾವು ಒಪ್ಪಲೇಬೇಕು, ಒಪ್ಪುತ್ತೇವೆ.

## ಶ್ರೀಗಳವರು ಅವತಾರಿಗಳಲ್ಲ

ಶ್ರೀಗಳವರು ಶಿವಾಂಶಿಕರಾಗಿದ್ದರೆಂದು ಹೇಳಿದ ಮಾತ್ರಕ್ಕೆ ಅವರು ಇಂದ್ರ ಲೋಕದಿಂದಲೋ ಚಂದ್ರಲೋಕದಿಂದಲೋ ನೇರವಾಗಿ ಭೂವಿಗೆ ಇಳಿದು ಬಂದವ ರಾಗಿದ್ದರೆಂದೂ ಅಥವಾ ಶಿವಲೋಕದ ರುದ್ರಗಣಾಧೀಶ್ವರನ ಅವತಾರಿಗಳಾಗಿದ್ದ ರೆಂದೂ ದಯವಿಟ್ಟು ಯಾರು ತಿಳಿಯಬಾರದು. ಏಕೆಂದರೆ, ಬಹುಶಃ ಎಲ್ಲ ಕವಿ ಗಳು ಮತ್ತು ಪುರಾಣಕರ್ತೃಗಳು ತಮ್ಮ ಚರಿತ್ರನಾಯಕನ ಬಗೆಗೆ ಬರೆಯುವಾಗ ಅವನೊಬ್ಬ ಶಿವಲೋಕದ ಗಣಾಧೀಶ್ವರನ ಅವತಾರಿಯಾಗಿದ್ದನು, ಎಂದು ಹೇಳುವ ಸಂಪ್ರದಾಯವುಂಟು. ತಮ್ಮ ನಾಯಕನನ್ನು ಸ್ವರ್ಗದಿಂದಲೋ ಕೈಲಾಸ ದಿಂದಲೋ ಕರೆದು ತಂದರೇನೇ ಅವನಿಗೆ ಜನರು ಮಹತ್ವಕೊಡುತ್ತಾರೆಂಬುದು ಅವರ ವಿಚಾರಸರಣಿ ಹೀಗೆ ಹೇಳುವದರಿಂದ ಶ್ರೋತೃಗಳಲ್ಲಿ ಈ ಬಗೆಯ ಭಾವನೆ ಬರಲು ಅವಕಾಶವಿದೆ. ಆ ಮಹಾತ್ಮನು ದೇವಲೋಕದಿಂದ ಅವತಾರವೆತ್ತಿ ಬಂದು ದರಿಂದ ಅವನಲ್ಲಿ ಈ ಎಲ್ಲ ಅಲೌಕಿಕ ಗುಣಗಳು ಸಹಜವಾಗಿ ಇದ್ದಿರಬಹುದು. ಧರ್ಮೋದ್ಧಾರಕ್ಕಾಗಿಯೇ ಅವರಿಸಿದ ಅಂತಹ ಮಹಾಪುರುಷರು ಮಹಾಕಾರ್ಯ ಗಳನ್ನು ಮಾಡಬಹುದು. ಇದರಲ್ಲೇನು ಆಶ್ಚರ್ಯ ? ಅಂತಹ ದೇವತಾಪುರು ಷರ ಗುಣಗಳನ್ನು ಕಲಿಯುವದು, ಅವರಂತೆ ನಡೆಯುವದು, ಈ ಭೂಲೋಕದಲ್ಲಿ ಹುಟ್ಟಿದ ಸಾಮಾನ್ಯ ಮಾನವರಾದ ನಮಗೆ ಎಂದಾದರೂ ಸಾಧ್ಯವಾದೀತೆ ? ಅವ ರದು ಅವರಿಗೆ, ನಮ್ಮದು ನಮಗೆ.

ಈ ಬಗೆಯ ವಿಚಾರ ಪ್ರಚೋದನೆ ಮಾಡುವಂತಹ ಬರೆಹಗಳಿಂದ, ಭಾಷಣ ಗಳಿಂದ ಸಾಮಾಜಿಕ ಸುಧಾರಣೆಯಾಗುವದು ಸಾಧ್ಯವಾಗಬಹುದೇ ?

---

* ಸುಭೋಧಸಾರ (ಮುಪ್ಪಿನ ಷಡಕ್ಷರಿ ದೇವ ಕೃತ), ಸಂ. ಹರ್ಡೇಕರ ಮಂಜಪ್ಪ ತೃತೀಯ ಮುದ್ರಣ, ೧೯೫೫.

CC-0. Jangamwadi Math Collection. Digitized by eGangotri

ಸ್ವರ್ಗದಲ್ಲಿ ಹುಟ್ಟಿ ಆಕಾಶದಲ್ಲಿ ಬೆಳೆದು ಗಾಳಿಯಲ್ಲಿ ತೋರಿ ಹಾರಿ ಹೋಗುವ ದೇವತಾಪುರುಷರ ಚರಿತ್ರೆ ಇಂದು ನಮಗೆ ಬೇಕಾಗಿಲ್ಲ; ಅವರಿಂದ ಇಂದಿನ ನಮ್ಮ ಸಮಾಜಕ್ಕೆ, ದೇಶಕ್ಕೆ, ರಾಷ್ಟ್ರಕ್ಕೆ ಯಾವ ಬಗೆಯ ಪ್ರಯೋಜನವೂ ಆಗಲಾರದು.

## ಸುಕುಮಾರ

ಆದರೆ ನಮ್ಮಂತೆಯೇ ಹುಟ್ಟಿ, ನಮ್ಮಂತೆಯೇ ಬೆಳೆದು, ತಮ್ಮ ಸಾಧನೆಯ ಬಲದಿಂದ, ತಮ್ಮ ಪ್ರಯತ್ನದ ಫಲದಿಂದ, ಮಹಾತ್ಮರಾದ ಶಿವಸ್ವರೂಪಿಗಳಾದ ಆದರ್ಶ ವ್ಯಕ್ತಿಗಳ ಚರಿತ್ರೆ ನಮಗಿಂದು ಅತ್ಯವಶ್ಯವಾಗಿ ಬೇಕು. ಇಂತಹ ಚರಿತ್ರೆಗಳು ವೈಯಕ್ತಿಕ ಪ್ರಗತಿಗೆ ಮತ್ತು ಸಾಮಾಜಿಕ ಸುಧಾರಣೆಗೆ ತುಂಬಾ ಸಹಾಯಕವಾಗುತ್ತವೆ.

ಶ್ರೀ ಶಿವಬಸವ ಮಹಾಸ್ವಾಮಿಗಳವರು ಅವತಾರವೆತ್ತಿ ಭೂಮಿಗೆ ಬಂದವರಲ್ಲ. ಅವರಿಗೆ ರಾವಣನಂತೆ ಹತ್ತು ತಲೆಗಳೋ, ಇಪ್ಪತ್ತು ಕೈಗಳೋ ಇದ್ದಿರಲಿಲ್ಲ. ಅವರೂ ನಮ್ಮೆಲ್ಲರಂತೆ ತಾಯಿಯ ಗರ್ಭದಿಂದಲೇ ಜನಿಸಿ, ಎಲ್ಲರಂತೆಯೇ ಬೆಳೆದು ದೊಡ್ಡವರಾದವರು.

ಆದರೆ ಅವರು ಆತ್ಮಸಂಯಮ, ಆಧ್ಯಾತ್ಮಿಕ ಚಿಂತನ, ಅತ್ಯುಗ್ರವಾದ ತಪಃಸಾಧನೆ, ಸರ್ವಭೂತ ದಯಾಪರತೆ, ವಿರತಿ ಮತ್ತು ಲಿಂಗನಿಷ್ಠೆ ಇವೇ ಮೊದಲಾದ ಅಲೌಕಿಕ ಗುಣಗಳಿಂದ ಮಹಾತ್ಮರಾದರು; ಶಿವಾಂಶಿಕರಾದರು; ಸರ್ವಸಂಪೂಜ್ಯರಾದರು. ಈ ಬಗೆಯ ಗುಣಗಳ ಬಲದಿಂದ ಯಾವನೊಬ್ಬ ಸರ್ವಸಾಮಾನ್ಯ ಮಾನವನು ಸಹ ಮಹಾದೇವನಾಗಬಲ್ಲನು, ಮಹಾತ್ಮನಾಗಬಲ್ಲನು.

"ಅರಿದಡೆ ಶರಣ, ಮರೆದಡೆ ಮಾನವ." ಎಂಬ ಮಾತನ್ನು ನಾವು ಅವರ ಆದರ್ಶ ಜೀವನದಿಂದ ಕಲಿಯಬಹುದಾಗಿದೆ.

## ಅಲಿಪ್ತ ಸ್ಥಿತಿ

ಶ್ರೀ ಗುರುವರ್ಯರು ಎಲ್ಲರಂತೆ ಪ್ರಪಂಚದಲ್ಲಿ ಜನಿಸಿದವರಾದರೂ ಅವರು ಪ್ರಾಪಂಚಿಕರಲ್ಲ. ಮಾನವ ಸಹಜವಾದ ಕರಚರಾದಿ ಅವಯವಗಳಿದ್ದರೂ ಅವರು ಅತಿ ಮಾನವರಾಗಿದ್ದರು. ಯಾವುದರಿಂದ ? ತಮ್ಮ ಆತ್ಮತೇಜಸ್ಸಿನಿಂದ; ತಮ್ಮ ಅಲಿಪ್ತಭಾವದ ಬಲದಿಂದ. ಕಮಲವು ಯಾವಾಗಲೂ ನೀರಿನಲ್ಲಿಯೇ ಇರುವದಾದರೂ ಅದಕ್ಕೆ ಆ ನೀರಿನ ಸಂಸರ್ಗವು ಸ್ವಲ್ಪಾದರೂ ಉಂಟೇ ? ಈ ಮಾತನ್ನು ಸರ್ವಜ್ಞನು ಬಹು ಸರಸವಾಗಿ ಹೇಳುತ್ತಾನೆ:

CC-0. Jangamwadi Math Collection. Digitized by eGangotri

ಮುತ್ತು ನೀರೊಳು ಪುಟ್ಟಿ । ಮತ್ತೆ ನೀರಪ್ಪುದೇ ?
ಸತ್ಯವನು ಅರಿದ-ಜ್ಞಾನಿ ಸಂಸಾರವನು ।
ಮತ್ತೆ ಹೊದ್ದುವನೆ ? ಸರ್ವಜ್ಞ ॥
ತಿಳಿಯ ಕಾಸಿದ ತುಪ್ಪ । ವಳಿದು ಹಾಲಪ್ಪುದೇ ?
ಕಳೆಬೆಳಗನರಿದ-ಶಿವಯೋಗಿ ಸಂಸಾರ ।
ದೊಳಗೆ ಸಿಲುಕುವನೆ ? ಸರ್ವಜ್ಞ ॥

ಶ್ರೀಗಳವರು ಎಲ್ಲರಂತೆಯೇ ಜನಿಸಿದರೂ ಮುತ್ತಿನಂತೆ ತುಪ್ಪದಂತೆ ಈ ಪ್ರಪಂಚದಲ್ಲಿ ಇದ್ದೂ ಇಲ್ಲದಂತೆ ನಿರ್ಲಿಪ್ತ ಸ್ಥಿತಿಯನ್ನು ಪಡೆದವರಾಗಿದ್ದರು.

ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂದ್ವಿಜಾನತಃ ।
ತತ್ರ ಕೋ ಮೋಹಃ ಕಃ ಶೋಕಃ ಏಕತ್ವಮನುಪಶ್ಯತಃ ॥

ಎಂದು ಈಶಾವಾಸ್ಯೋಪನಿಷತ್ತಿನಲ್ಲಿ ಉಕ್ತವಾದ ಉಚ್ಚಮಟ್ಟಕ್ಕೆ ಮುಟ್ಟಿದ ಮಹನೀಯರವರು.

## ಭೋಗ-ವಿರಾಗಿ

ಭೋಗ ಮತ್ತು ವಿರಾಗಗಳು ಪರಸ್ಪರ ವಿರುದ್ಧವಾದವುಗಳು. ಭೋಗಿಯಾದವನು ವಿರಾಗಿಯೂ ಆಗಿರಲು ಎಂದಾದರೂ ಸಾಧ್ಯವೇ ? ಇಲ್ಲ. ಶ್ರೀಪೂಜ್ಯಪಾದರವರು ಮಾತ್ರ ಈ ಮಾತಿಗೆ ಅಪವಾದವಾಗಿದ್ದರು. ಲಿಂ. ಶ್ರೀ ಹಾನಗಲ್ಲ ಕುಮಾರ ಯತಿಗಳಿಗೆ ಹಠಯೋಗಿಗಳೆಂದು ಕರೆದರೆ, ಇವರಿಗೆ ರಾಜಯೋಗಿಗಳೆಂದು ಕರೆಯಬಹುದು. ಮೊದಲು ಕೆಲವು ವರ್ಷ ಸಪ್ಪೆಯ ಆಹಾರವನ್ನೇ ಸೇವಿಸುದ್ದತ್ತಿರೂ ಇತ್ತೀಚೆಗೆ ಷಡ್ರಸಗಳಿಂದ ಕೂಡಿದ ಮಧುರ ಆಹಾರವನ್ನೇ ಸೇವನೆ ಮಾಡುತ್ತಿದ್ದರು. ಪ್ರತಿದಿನವೂ ಹಣ್ಣಿನ ರಸವಿಲ್ಲದೇ ಅವರಿಗೆ ತೃಪ್ತಿಯಾಗುತ್ತಿರಲಿಲ್ಲ. ಎಷ್ಟೋ ಸಲ ಅಕಾಲದಲ್ಲಿಯೂ ಅವರ ಪ್ರಸಾದ ವೇಳೆಗೆ ಹಣ್ಣುಗಳು ತಾನಾಗಿ ದೊರಕುತ್ತಿದ್ದವು. ಭೋಗವೇ ಅವರನ್ನು ಹಿಂಬಾಲಿಸುತ್ತಿದ್ದಿತೇ ಹೊರತು ಅವರು ಭೋಗದ ಬೆನ್ನು ಹತ್ತಿರಲಿಲ್ಲ. ಪ್ರತಿಯೊಂದು ಪದಾರ್ಥವನ್ನು ಲಿಂಗಾರ್ಪಣ ಭಾವದಿಂದ ಅವರು ಸ್ವೀಕರಿಸುತ್ತಿದ್ದರು. ಅಂತೆಯೇ ಅದೆಲ್ಲವೂ ಭೂತಾನ್ನವಾಗದೆ ಪೂತಾನ್ನವಾಗುತ್ತಿದ್ದಿತು.

ಹೀಗೆ ಸುಖಭೋಗಿಗಳಾಗಿದ್ದರೂ ಅವರು ಧೀರ ವಿರಾಗಿಗಳಾಗಿದ್ದರು ಇಂದ್ರಿಯ ನಿಗ್ರಹ, ಮನಃಸಂಯಮ ಮಾಡುವುದರಲ್ಲಿ ಯಾವ ಋಷಿ-ಮುನಿಗಳಿಗೂ ಕಡಿಮೆಯಿರಲಿಲ್ಲ. ಇದು ಅಸಾಧ್ಯವಾದ ಮಾತೆಂದು ಭರ್ತೃಹರಿಯು ಹೀಗೆ ಹೇಳುತ್ತಾನೆ:-

CC-0. Jangamwadi Math Collection. Digitized by eGangotri

ವಿಶ್ವಾಮಿತ್ರ ಪರಾಶರ ಪ್ರಭೃತಯೋ ವಾತಾಂಬುಪರ್ಣಾಶನಾಃ
ತೇಽಪಿ ಸ್ತ್ರೀಮುಖಪಂಕಜಂ ಸುಲಲಿತಂ ದೃಷ್ಟ್ವೈವ ಮೋಹಂ ಗತಾಃ
ಶಾಲ್ಯನ್ನಂ ಸಘೃತಂ ಪಯೋದಧಿಯುತಂ ಯೇ ಭುಂಜತೇ ಮಾನವಾಃ
ತೇಷಾಮಿಂದ್ರಿಯನಿಗ್ರಹೋ ಯದಿ ಭವೇದ್ ವಿಂಧ್ಯಃ ಪ್ಲವೇತ್ ಸಾಗರೇ॥*

ಕೇವಲ ಮರದ ತರಗೆಲೆಗಳನ್ನೇ ತಿಂದು, ಗಾಳಿ-ನೀರುಗಳನ್ನು ಕುಡಿಯುತ್ತ ಅತಿ ಕಠೋರವಾದ ತಪವನ್ನಾಚರಿಸಿದ ವಿಶ್ವಾಮಿತ್ರ, ಪರಾಶರ ಮೊದಲಾದ ಋಷಿ ಮುನಿಗಳು, ಸ್ತ್ರೀಯರ ಸುಂದರ ಮುಖ ಕಮಲವನ್ನು ಕಂಡೊಡನೆಯೇ ಮೋಹ ವಶರಾಗಿರುವಾಗ, ಪ್ರತಿದಿನವೂ ಹಾಲು ಮೊಸರು, ತುಪ್ಪದೊಡನೆ ರಾಜಾನ್ನವನ್ನು ಭುಂಜಿಸುವ ಮಾನವರು ಇಂದ್ರಿಯ-ನಿಗ್ರಹ ಮಾಡುತ್ತಾರೆಂಬುದು ವಿಂಧ್ಯ ಪರ್ವತವು ಸಮುದ್ರದಲ್ಲಿ ಈಜುವದು, ಎನ್ನುವಷ್ಟು ಅಸಂಭವವಾದುದು.

ಈ ಅಸಾಧ್ಯವಾದ ಮಾತನ್ನು ಸಾಧ್ಯವನ್ನಾಗಿ ಮಾಡಿ ತೋರಿಸಿದರು ಪೂಜ್ಯ ಶ್ರೀಗಳವರು. ಅಂತೆಯೇ ಅವರು ಅಘಟಿತ ಘಟನಾಸಮರ್ಥರು. ಅವರ ಪಾವನ ಜೀವನದಲ್ಲಿ ಭೋಗ-ವಿರಾಗಗಳೆರಡರ ಸುಂದರವಾದ ಸಮನ್ವಯವಿದ್ದಿತು. ಅಂತೆಯೇ ಅವರು ತಮ್ಮ ೯೯ ವರ್ಷದ ವೃದ್ಧಾಪ್ಯದಲ್ಲಿಯೂ ತರುಣರಂತೆ ತೋರುತ್ತಿದ್ದರು. ಅವರ ಮುಖದ ಮೇಲಿನ ಬ್ರಹ್ಮತೇಜಸ್ಸನ್ನು ಕಂಡವರಿಗೆ 'ಇವರಿಗೆ ೯೯ ವರ್ಷಗಳಾಗಿವೆಯೆ ?' ಎಂಬ ಶಂಕೆ ಬರುವಂತಿದ್ದಿತು.

ಎಂಬತ್ತೊಂಬತ್ತು ವಸಂತ ಋತುಗಳು ಅವರನ್ನು ಆಶಾವಾದಿಗಳನ್ನಾಗಿ ಮಾಡಿದವು. ೯೯ ಹೇಮಂತ ಋತುಗಳು ಕಷ್ಟ ಸಹಿಷ್ಣುತೆಯ ಪಾಠವನ್ನು ಕಲಿಸಿದವು. ೯೯ ಶರದೃತುಗಳು ಅವರಿಗೆ ಅಚಲವಾದ ಧೈರ್ಯ-ಸಾಹಸಗಳನ್ನು ನೀಡಿದವು.

## ಕೊನೆಯ ಮಾತು

ಈ ವರೆಗೆ ವಿವರಿಸಿದ ಅಸಾಧಾರಣವಾದ ಅನೇಕ ದಿವ್ಯ ಗುಣಗಳ ಮೇಲಿಂದ ಶ್ರೀ ಶಿವಬಸವ ಮಹಾಸ್ವಾಮಿಗಳವರ ವ್ಯಕ್ತಿತ್ವವು ಎಷ್ಟೊಂದು ಉಜ್ವಲವಾಗಿತ್ತೆಂಬುದನ್ನು ಓದುಗರು ಊಹಿಸಬಹುದಾಗಿದೆ.

ಈ ಉಜ್ವಲ ವ್ಯಕ್ತಿಯ ಕೀರ್ತಿಲತೆಯು ಕನ್ನಡ ನಾಡಿನಲ್ಲೆಲ್ಲ ಹಬ್ಬಿತು. ನಾಡಿನ ಮೂಲೆ ಮೂಲೆಗಳಿಂದ ಭಕ್ತವೃಂದವು ಗುಂಪು-ಗುಂಪಾಗಿ ಅವರ ಪಾದ ದರ್ಶನಕ್ಕಾಗಿ ಬರುತ್ತಲಿದ್ದಿತು. ಅವರ ಪಾವನ ನಾಮ ಸ್ಮರಣೆ ಮಾಡಿ ಅದೆಷ್ಟೋ

* सुभाषितत्रिशती- भर्तृहरि, शृंगारशतक, श्लोक- ८०

CC-0. Jangamwadi Math Collection. Digitized by eGangotri

ಜನರು ಅಭ್ಯುದಯ ಹೊಂದಿದ್ದಾರೆ ಹೊಂದುತ್ತಲಿದ್ದಾರೆ. ಅವರ ಪಾದಕ್ಕೆ ಶರಣು ಹೊಕ್ಕು, ಭಕ್ತಿ ವಿಶ್ವಾಸಗಳಿಂದ ನಡೆದುಕೊಂಡವರು ಪುತ್ರ-ಪೌತ್ರ-ಧನ-ಕನಕ-ವಸ್ತು ವಾಹನಗಳಿಂದಲೂ, ಆಯುರಾರೋಗ್ಯ ಸೌಭಾಗ್ಯಗಳಿಂದಲೂ ಜೀವಿಸಿದ್ದಾರೆ; ಜೀವಿಸುತ್ತಲಿದ್ದಾರೆ.

ಈ ಮಹೋನ್ನತ ವ್ಯಕ್ತಿಯ ಆತ್ಮವಿಕಾಸವನ್ನೂ, ಪರಿಪಕ್ವದಶೆಯನ್ನು ಕಂಡು ಶಿವನು ಸಂತುಷ್ಟನಾಗಿ ಶಾಲಿವಾಹನ ಶಕ ೧೮೬೮ನೆಯ ಪುಷ್ಯ ಶುದ್ಧ ಏಕಾದಶಿಯ ಶುಭ ದಿನದಲ್ಲಿ ಅವರನ್ನು ತನ್ನಲ್ಲಿ ಅಡಗಿಸಿಕೊಂಡ.

ಇಂತಹ ಮಹಾಪುರುಷರ ಜೀವನ ಚರಿತ್ರೆಯು ಜಗತ್ತಿಗೆ ಆದರ್ಶಭೂತವಾದುದು. ಅದರ ಸಹಾಯದಿಂದ ಮಾನವನು ತನ್ನ ದೈನಂದಿನ ವ್ಯವಹಾರದೊಳಗಣ ಕುಂದು-ಕೊರತೆಗಳನ್ನು ತಿದ್ದಿಕೊಳ್ಳಬಹುದು. ಅವರ ಪುಣ್ಯ ನಾಮ ಸ್ಮರಣೆಯಿಂದ ಆತ್ಮೋದ್ಧಾರದ ಸತ್-ಪಥವನ್ನು ಕಾಣಬಹುದು.

CC-0. Jangamwadi Math Collection. Digitized by eGangotri

# ಶ್ರೀಗಳವರ ವೈರಾಗ್ಯಸಂಪತ್ತು

ಶ್ರೀ. ನಿ. ಪ್ರ. ಪ್ರಭುಸ್ವಾಮಿಗಳು, ಬೂದಿಸ್ವಾಮಿ ಸಂಸ್ಥಾನಮಠ,
ಹೊಸಳ್ಳಿ.

ವೀರಶೈವ ಸಿದ್ಧಾಂತದಲ್ಲಿ ಮುಕ್ತಿಯ ಸಂಪಾದನೆಗೆ ಶಿವಯೋಗ ಮಾರ್ಗವೊಂದೇ ಉಕ್ತವಾಗಿದೆ. ವೀರಶೈವರ ಮುಕ್ತಿಯೆಂದರೆ ಲಿಂಗಾಂಗ ಸಾಮರಸ್ಯವು. ಅದನ್ನು ಪಡೆಯುವುದಕ್ಕೆ ಲಿಂಗಾಂಗಯೋಗ ಮಾರ್ಗವಿರುವುದು. ಇದುವೇ ಶಿವಯೋಗ ಮಾರ್ಗ. ಇದನ್ನೇ ಷಟ್‌ಸ್ಥಲಮಾರ್ಗವೆಂದೂ ಕರೆಯುವುದುಂಟು. ಈ ಷಟ್‌ಸ್ಥಲ ಸಿದ್ಧಾಂತವೇ ವೀರಶೈವದ ತತ್ವಸಿದ್ಧಾಂತವಾಗಿದೆ.

ಈ ಸಿದ್ಧಾಂತದಲ್ಲಿ ಉಕ್ತವಾದ ಸಾಮರಸ್ಯ, ಲಿಂಗಾಂಗ ಸಾಮರಸ್ಯ ರೂಪವಾದ ಮುಕ್ತಿಯನ್ನು ವೀರಶೈವ ಸಮಾಜದ ಸರ್ವ ಸ್ತ್ರೀ-ಪುರುಷರೂ ಪಡೆಯುವುದು ಸಾಧ್ಯವಿದೆ, ಸುಲಭವಿದೆಯೆಂಬುದೇ ವೀರಶೈವ ತತ್ವಜ್ಞರ ಅಭಿಪ್ರಾಯವಾಗಿದೆ.

ಲಿಂಗಾಂಗಯೋಗರೂಪವಾದ ಶಿವಯೋಗದಲ್ಲಿ ಮೊದಲನೆಯ ಮೆಟ್ಟಲು ಇಷ್ಟಲಿಂಗಧಾರಣವು. ಈ ಇಷ್ಟಲಿಂಗದ ಮೂಲಕವಾಗಿ ಕಷ್ಟವಿಲ್ಲದೆ ಲಿಂಗಧಾರಿಗಳಾದವರು ಶಿವಯೋಗಿಗಳಾಗಿ ಲಿಂಗಾಂಗ ಸಾಮರಸ್ಯ ರೂಪವಾದ ಮುಕ್ತಿಯನ್ನು ಸುಲಭವಾಗಿ ಪಡೆಯಬಹುದಾಗಿದೆ. ಇತರ ಯೋಗಮಾರ್ಗಗಳು ಕೆಲವರಿಗೆ ಮಾತ್ರ ಕಷ್ಟದಿಂದ ಸಾಧಿಸಲು ಬರುವಂತಿದ್ದರೆ ಶಿವಯೋಗ ಮಾರ್ಗವು ಲಿಂಗಧಾರಿಗಳೆಲ್ಲರಿಗೂ ಸುಲಭ ಸಾಧ್ಯವಾಗಿರುವುದೇ ಶಿವಯೋಗದ ವೈಶಿಷ್ಟ್ಯವಾಗಿದೆ.

ಕಾಲಕಾಲಕ್ಕೆ ಕನ್ನಡ ನಾಡಿನ ಶಿವಯೋಗಿಗಳು ಈ ಮಾರ್ಗದಲ್ಲಿ ಪ್ರಗತಿಯನ್ನು ಸಾಧಿಸುತ್ತಲೇ ಬಂದಿದ್ದಾರೆ. ಕನ್ನಡ ನಾಡಿನಲ್ಲಿರುವ ಶಿವಯೋಗಿಗಳ ಪರಂಪರೆಯಲ್ಲಿ ಈ ಬಗೆಯ ಪ್ರಗತಿಯಾದುದರಿಂದಲೇ ಹಿಂದಿನಿಂದ ಇಂದಿನವರೆಗೂ ನಮ್ಮ ಸಮಾಜದಲ್ಲಿ ಅನೇಕ ಗುರುಜಂಗಮರು, ಶರಣ-ಶರಣೆಯರು ಶಿವಯೋಗ ಸಿದ್ಧರಾಗಿ ಸಮಾಜವನ್ನುದ್ಧರಿಸಲು ಸದವಕಾಶವು ಸಂಭವಿಸಿರುವುದೆಂದು ಹೇಳಲು ಅಭ್ಯಂತರವಿಲ್ಲ. ಇಂತಹ ಶಿವಯೋಗಿಗಳವರ ಪರಂಪರೆಯಲ್ಲಿ ಹಾವೇರಿ ಹುಕ್ಕೇರಿ ಮಠಾಧ್ಯಕ್ಷರಾದ ಶ್ರೀ. ಮ. ನಿ. ಪ್ರ. ಶಿವಬಸವ ಮಹಾಸ್ವಾಮಿಗಳೂ ಒಬ್ಬರಾಗಿದ್ದಾರೆ.

ಶ್ರೀ ಶಿವಬಸವ ಸ್ವಾಮಿಗಳವರು ವಿರಕ್ತಾಶ್ರಮಕ್ಕೆ ಇರಬೇಕಾದ ಎಲ್ಲ ಸದ್ಗುಣಗಳಿಂದ ಕೂಡಿದ ಮಹಾಪುರುಷರಾಗಿದ್ದರು. ಅವರ ವ್ಯಕ್ತಿತ್ವವು ಅಮೋಘ

CC-0. Jangamwadi Math Collection. Digitized by eGangotri

ವಾದುದು. ಅವರು ಲಿಂಗಪೂಜಾ ನಿಷ್ಠಾಪರರು; ಶಾಪಾನುಗ್ರಹೆ ಸಮರ್ಥರು; ಪವಾಡ ಪುರುಷರು, ಜ್ಞಾನಾನುಭವಸಂಪನ್ನರು, ಧರ್ಮಜ್ಞರು, ಶಿವಾನುಭಾವಿಗಳು, ದಾಸೋಹಂಭಾವಿಗಳು, ಸಮದರ್ಶಿಗಳು, ತತ್ವನಿಷ್ಠರು, ಪರಮ ವೈರಾಗ್ಯಶೀಲರೂ ಆಗಿದ್ದರು.

" ವಿರತಿಯಿಂದಿತರ ಸಂಪದ ಸುಖಮುಂಟೇ ? "
" ವಿರತಿವಜ್ರದಿ ಮೋಹಗಿರಿಯನುಗ್ಗೊಡೆವುದೇ ಚಂದಮು "

ಎಂಬ ನಿಜಗುಣ ಶಿವಯೋಗಿಗಳ ಬೋಧೆಯನ್ನು ಶ್ರೀಗಳು ನೆನೆದು ಅರಿದು ಆಚರಿಸಿ ವೈರಾಗ್ಯ ಸಂಪನ್ನರಾದರು. ವೈರಾಗ್ಯವೆಂದರೆ–

"ಭೋಗಾನಿತ್ಯತ್ವದರ್ಶನ ಜನ್ಯ ವೈರಸ್ಯ ಪ್ರಯುಕ್ತ ವಿಷಯ ವೈಮುಖ್ಯವೇ ವೈರಾಗ್ಯ ಲಕ್ಷಣಮಹುದದಕೆ ವನಿತಾದಿ ವಿಷಯಂಗಳಲ್ಲಿ ಅನಿತ್ಯತ್ವದೋಷ ದರ್ಶನವೇ ಕಾರಣಮಹುದು. ಮೇಲಾವ ಪ್ರಕಾರದಿಂದಾದರವಂ ಬಿಡುವುದೇ ಸ್ವರೂಪ ದರ್ಶನಮಹುದು. ಬಳಿಕ ವಿಷಯಂಗಳಿಗೆರಗದಿಹುದೇ ಕಾರ್ಯಮಕ್ಕುಂ. "*

" ಅರಿದು ವನಿತಾದಿ ವಿಷಯದೊಳುಳ್ಳದೋಷವನು
ತೊರೆದವನು ಮರಳಿ ಮೋಹಿಸದೆ ಛಲಿಯಾಗಿ
ಕೊರತೆಯಿಲ್ಲದ ಶಂಭುಲಿಂಗದಂತಿರೆ ಭೋಗ
ದೆರಕವಿಲ್ಲದುದೀಗ ಪರಮ ವೈರಾಗ್ಯ "

ಈ ವಿಚಾರದಲ್ಲಿ ಶ್ರೀಗಳವರ ಪವಿತ್ರ ಜೀವನದಲ್ಲಿ ವಿರತಿಭಾವದ ಹಲವು ಸನ್ನಿವೇಶಗಳನ್ನು ಕಾಣಬಹುದು. ಜಂಗಮರು, ದೀನರು, ದರಿದ್ರರು ವಿದ್ಯಾರ್ಥಿಗಳು ಬಂದು ತಮ್ಮ ಆಪತ್ತುಗಳನ್ನು, ತೊಡಕು ತೊಂದರೆಗಳನ್ನು, ಬೇನೆ ಬೇಸರಿಕೆಗಳನ್ನು ಹೇಳಿಕೊಂಡಾಗ ನಿರಾಶಾಪರರಾದ ಶ್ರೀಗಳು ಧರೆಯ ಭೋಗಭಾಗ್ಯದ ಸುಖಗಳಿಗೆ ಕಾರಣಗಳಾದ ಚಿನ್ನ ಬೆಳ್ಳಿಗಳನ್ನು ಕಾಷ್ಠ ಲೋಷ್ಠ ಸಮವೆಂದು ಭಾವಿಸಿ, ತಾವು ನಿತ್ಯದ ಶಿವಪೂಜೆಯಲ್ಲಿ ಉಪಯೋಗಿಸುತ್ತಲಿದ್ದ ರಜತಮಯವಾದ ಶಿವಪೂಜೆಯ ಸಾಹಿತ್ಯಗಳೆಲ್ಲವನ್ನು ಅವರಿಗೆ ಕೊಟ್ಟು ಸಂತೋಷ ಪಡಿಸುತ್ತಲಿದ್ದರು.

ಶ್ರೀಗಳವರು ನಿಡಗುಂದಿ ಎಂಬ ಗ್ರಾಮದಲ್ಲಿ ಶಿವಲಿಂಗಪೂಜಾ ಸತ್ಕ್ರಿಯೆಯಲ್ಲಿ ನಿರತರಾಗಿದ್ದರು. ಶಿವಯೋಗಸಿದ್ಧಿಯಿಂದ ಅನೇಕ ಮಹಿಮೆಗಳು ನಡೆ

---

* ಲಿಂ. ಹಾನಗಲ್ಲ ಶ್ರೀಗಳವರು ಸಂಸ್ಕರಿಸಿದ 'ವಿವೇಕ ಚಿಂತಾಮಣಿ' ಯ ಶುದ್ಧ ಪ್ರತಿಯಿಂದ.

CC-0. Jangamwadi Math Collection. Digitized by eGangotri

ಯುತ್ತಲಿದ್ದವು. ಅದರಿಂದ ಸಮಸ್ತರು ಭಯ ಭಕ್ತಿಯಿಂದ ನಡೆದು ಕೊಳ್ಳುತ್ತಲಿದ್ದರು. ಶ್ರೀಗಳವರು ನಿರಂತರವಾಗಿ ಇಲ್ಲಿಯೇ ಶಿವಲಿಂಗಪೂಜಾಸಕ್ತರಾಗಿರಬೇಕೆಂಬ ಉದ್ದೇಶದಿಂದ ಅಲ್ಲಿಯ ಭಕ್ತರು ಭೂಮಿಯನ್ನು ಭಕ್ತಿಯ ಕಾಣಿಕೆಯನ್ನಾಗಿ ಅರ್ಪಿಸಿದರು. ಪರಮ ವೈರಾಗ್ಯ ಮೂರ್ತಿಗಳಾದ ಶ್ರೀಗಳವರು ಇಂದಿಂಗೆಂತು ! ನಾಳಿಂಗೆಂತು ! ಎಂದು ಚಿಂತಿಸದೆ ಅದನ್ನು ತಮಗಾಗಿ ಇಟ್ಟುಕೊಳ್ಳುವ ಸ್ವಾರ್ಥಕ್ಕೆ ಬೀಳದೆ ಇದು ಸಾರ್ಥಕವಾಗಬೇಕೆಂದು ಬಗೆದರು. ಸಮಾಜೋದ್ಧಾರಕರಾದ ಹಾನಗಲ್ ಕುಮಾರ ಮಹಾಸ್ವಾಮಿಗಳವರನ್ನು ಬರಮಾಡಿಕೊಂಡು ಶಿವಾನುಗ್ರಹದಿಂದ ದೊರೆತ ಆಸ್ತಿಯನ್ನು ತಮ್ಮ ಶಿವಯೋಗಮಂದಿರಕ್ಕೆ ಸಲ್ಲಬೇಕೆಂದು ಅರ್ಪಿಸಿದರು. ಹಾನಗಲ್ಲ ಶ್ರೀಗಳು "ವಿರಕ್ತಸ್ಯ ತೃಣಂ ಜಗತ್" ಎಂಬ ಮಾತಿನ ಸಾರ್ಥಕತೆಯನ್ನು ಶ್ರೀಗಳವರಲ್ಲಿ ಕಂಡು ಕೊಂಡಾಡಿದರು.

ಶ್ರೀಗಳವರಲ್ಲಿದ್ದ ವೈರಾಗ್ಯವು ಉದರ ವೈರಾಗ್ಯವಲ್ಲ. ಅಭಾವ ವೈರಾಗ್ಯವಲ್ಲ. ಸ್ಮಶಾನ ವೈರಾಗ್ಯವಲ್ಲ. ಪುಸ್ತಕ ವೈರಾಗ್ಯವಲ್ಲ. ಅದು ಅವರ ಆತ್ಮಸಂಸ್ಕಾರದ ಫಲ. ನಿಜವಾದ ವೈರಾಗ್ಯ ಬರಬೇಕಾದರೆ ಮೂಡಿ ಫಲಿಸಬೇಕಾದರೆ ಶುದ್ಧಸಾತ್ವಿಕ ಹೃದಯವಿರಬೇಕಲ್ಲವೇ ?

ತಾನಾಗಿಯೇ ಒದಗಿ ಬಂದ ವಿಷಯವನ್ನು ಬಿಟ್ಟು ಬಿಡುವದು ತೀರ ಕಷ್ಟಸಾಧ್ಯವಾದ ಮಾತಾಗಿದೆ. ಜಿತೇಂದ್ರಿಯರಾದ ಶ್ರೀಗಳವರು ನಿಜವಾದ ಶೂರರು, ಧೀರರೂ ಆಗಿದ್ದರೆಂಬುದಕ್ಕೆ ಅವರ ಜೀವನದಲ್ಲಿಯ ಹಲವಾರು ಮಾರ್ಮಿಕ ಘಟನೆಗಳು ಸಾಕ್ಷಿಯಾಗಿವೆ.

"ಸೋಲದಾತನೆ ವಿರತನು ಮನದೊಳಗೆ
ಬಾಲೆಯರ ಸಿಂಗರವನೆ ಕಂಡು ॥ ಪ ॥

ತಳಿರಡಿಯ ನುಣ್ದೊಡೆಗಳ ಚಲು ನೊ
ಬ್ಬಳಿಯುಹ ನಿತಂಬಭರದ ನಡೆಗೆ
ಬಳುಕುತಿಹ ಬಡನಡುವಿನ ತೆಳುವಸುರ
ನಳಿತೋಳ ನಲ್ಲಳನುವ ಕಂಡು ॥ ೧ ॥

ನಸುದೋರ್ಪ ಬಲ್ಮಲೆಗಳ ಲಾವಣ್ಯ
ರಸವೊಸರ್ವ ಮುದ್ದುಮೊಗದ ಕಾಂತಿ
ಪಸರಿಸುವ ನಿಡು ಗಂಗಳಜವ್ವನದ
ಮಿಸುನಿವಣ್ಣದ ಮೈಯಳ ಕಂಡು ॥ ೨ ॥

CC-0. Jangamwadi Math Collection. Digitized by eGangotri

ಜೊಲ್ಲೆಯುದಬಳಲು ಮುಡಿಯು ತೊಳಪ ಕೆಂ
ಬಲ್ಲು ಕಂಬುಗ್ರೀವದ ಸೊಗಸ
ನುಳ್ಳ ಚೆಂದುಟಿಯು ಪೊಗರ
ನಗುವ ತೆಳುಗಲ್ಲದಸಿಯುಳ ರೀತಿಯು ಕಂಡು ॥ ೩ ॥

ಮುರಿದುನೋಡುವ ನೋಟದ ಮುಗುಳ್ನಗೆಯು
ಸರಸದಿನಿಗಲೆಯು ನುಡಿಯು ಸನ್ನೆ
ವೆರಸಿ ತೋರುವ ಭಾವದ ಮೋಹಮುಂ
ಬರಿವ ಸೊಬಗಿನ ಸುದತಿಯು ಕಂಡು ॥ ೪ ॥

ಮನವನಳ್ಳರಿವುದೊಂದು ಭಯವಿಲ್ಲ
ದನುಕೂಲ ನೀರೆ ತನ್ನೆಳಸಿ
ವಿನಯುವಾಂತಿರಲಳುಪದೆ
ನಿಜಧೈರ್ಯವನು ಶಂಭುಲಿಂಗದಿಂದ ಪಡೆದು ॥ ೫ ॥

ಇಂತು ನಿಜಗುಣ ಶಿವಯೋಗಿಗಳು ಬೋಧಿಸಿರುವ ವಿರತನ ಲಕ್ಷಣವು ನಿಜವಾಗಿಯೂ ವಿರಕ್ತಮೂರ್ತಿಯಾದ ಶ್ರೀಶಿವಬಸವ ಸ್ವಾಮಿಗಳವರಲ್ಲಿ ಅಕ್ಷರಶಃ ಅನ್ವಯಿಸುತ್ತದೆ.

ಶ್ರೀಶಿವಬಸವಸ್ವಾಮಿಗಳ ಹೃದಯಭೂಮಿಯಲ್ಲಿ ಭಕ್ತಿಯೆಂಬ ತಿಳಿಹೊನಲು, ಜ್ಞಾನವೆಂಬ ಹೊಂಬಿಸಿಲು, ಕ್ರಿಯೆಯೆಂಬ ವ್ಯವಸಾಯ ಇವು ವೈರಾಗ್ಯಲತೆಯನ್ನು ಪರಿಪುಷ್ಟಿಯಾಗಿ ಬೆಳಸಿದುವು. ಆ ಲತೆಯಲ್ಲಿ ಬಿಟ್ಟ ಹೀಚು ಕಾಯಾಗಿ ಹಣ್ಣಾಯಿತು. ಪರಿಪಕ್ವ ಹೃದಯಿಗಳಾದ ಶ್ರೀಗಳವರಿಗೆ ಸಿರಿಯುಬೇಡ, ಕರಿಯುಸಿಬೇಡ, ಜಗತ್ತಿನ ಶ್ರೇಷ್ಠ ಸಂಪದವು ಬೇಡ, ಉನ್ನತ ಪದವಿಯೂ ಬೇಡ, ಮತ್ತಾವ ಪದವಿಯೂ ಬೇಡೆಂದು ಶಿವನಲ್ಲಿ ಮೊರೆಯಿಟ್ಟರು. ವೈರಾಗ್ಯ ಸಂಪತ್ತನ್ನೇ ಯಾಚಿಸಿದರು. ಸಂಸಾರ ಸುಖ-ದುಃಖದಿಂದ ವಿಮುಕ್ತರಾದರು; ವೈರಾಗ್ಯ ಸಂಪತ್ತನ್ನು ಸಂಪಾದಿಸಿ ವಿರಕ್ತಮೂರ್ತಿಯಾದರು; ಸಮಸ್ತ ಪ್ರಂಪಂಚವನ್ನು ಚಿದ್ರೂಪವೆಂದರಿದು ಇಷ್ಟಲಿಂಗದಲ್ಲಿ ಎಡೆವೆರೆದರು; ಶಿವನೇ ಬಸವನಾಗಿ, ಬಸವನೇ ಶಿವನಾಮದಿಂದ ಶಿವಬಸವನೆಂಬ ನಾಮದಿಂದ ಪ್ರಖ್ಯಾತಿಯನ್ನು ಪಡೆದರು.

CC-0. Jangamwadi Math Collection. Digitized by eGangotri

# ಶ್ರೀ ಶಿವಯೋಗಿ ಶಿವಬಸವ ಸ್ವಾಮಿಗಳವರು

## ಶ್ರೀ. ನಿ. ಪ್ರ. ಸದಾಶಿವ ಸ್ವಾಮಿಗಳು, ಹಾನಗಲ್ಲ

ಮಾನವನ ನಿಜವಾದ ಶಾಂತಿಯ ಸಲುವಾಗಿ ಭಾರತ ಮಾತೆಯು ಯುಗ ಯುಗಾಂತರದಿಂದಲೂ ಯೋಗಿಗಳನ್ನೂ ತ್ಯಾಗಿಗಳನ್ನೂ ಸತ್ಪುರುಷರನ್ನೂ ದಯ ಪಾಲಿಸುತ್ತ ಬಂದಿದ್ದಾಳೆ. ಅದರಲ್ಲಿ ವಿಶೇಷವಾಗಿ ದಕ್ಷಿಣ ಭಾರತವು ಅನೇಕ ಶಿವ ಯೋಗಿಗಳ ನೆಲೆವೀಡಾಗಿರುವದು. ಅಲ್ಲಿ ಶಿವಯೋಗಿಗಳೂ ಶರಣರೂ ಅವತರಿಸಿ ಶಿವಯೋಗದ ಬಲದಿಂದ ಆಧ್ಯಾತ್ಮಿಕ ಶಕ್ತಿಯನ್ನು ಗಳಿಸಿಕೊಂಡು ಬಾಳಿ ಬೆಳಗಿದ್ದಾ ರಲ್ಲದೆ ಮಾನವರಿಗೆ ನಿಜವಾದ ಶಾಂತಿಯ ಮಾರ್ಗವನ್ನು ತೋರಿ ಅವರನ್ನು ಪಾವನ ಮಾಡಿರುವರು; ಹಾಗು ಭಾರತೀಯ ಉಚ್ಚ ಸಂಸ್ಕೃತಿಯನ್ನು ಕಾಪಾಡಿ ಕೊಂಡು ಬಂದಿರುವರು.

ಹುಟ್ಟಿದ ಮೇಲೆ ಸಾಮಾನ್ಯವಾಗಿ ಪ್ರತಿಯೊಬ್ಬನು ಬೌತಿಕ ಭೋಗ ಭಾಗ್ಯದ ಬಗೆಗೆ ಮುಖ್ಯವಾಗಿ ಅನ್ವೇಷಣ ಮಾಡುತ್ತ ಕೊನೆಗೆ ಯಾವುದರಿಂದಲೂ ಆತ್ಮ ಶಾಂತಿ ಸಿಗದೆ ಭವ ಬಂಧನಕ್ಕೆ ಬಲಿಯಾಗುವನು. ಇದು ಮಾನವನ ಸಾಮಾನ್ಯ ಧರ್ಮವಾಗಿದೆ. "ಮರೆದೊಡೆ ಮಾನವ" ಎನ್ನುವಂತೆ ತನ್ನ ನೈಜವಾದ ಪರ ಮಾತ್ಮ ಸ್ಥಿತಿಯನ್ನು ಮರೆದನಾದ ಕಾರಣ ಮಾನವನಾಗಿ ಈ ಕರ್ಮಲೋಕಕ್ಕೆ ಬಂದಿರುವನು. ಮಾನವನ ಮನಸ್ಸಿಗೆ ಅಂಟಿದ ಮರೆವೆಯ ಪರೆಯನ್ನು ಹರಿದು ಆಧ್ಯಾತ್ಮಿಕ ಶಕ್ತಿಯ ಬಲವನ್ನುಂಟು ಮಾಡತಕ್ಕವರು ನಿಜವಾಗಿಯೂ ಶಿವ ಯೋಗಿಗಳು.

ಇಂದು ಜಗತ್ತನ್ನೇ ಸುಡತಕ್ಕ ಭಸ್ಮಾಸುರನ ಅವತಾರವಾದ ಅಣುಬಾಂಬಿನ ಕರಾಳ ಶಕ್ತಿಯ ಮುಂದೆ ಪ್ರತಿಯೊಂದು ಶಕ್ತಿಯು ನಿರ್ನಾಮವಾಗುತ್ತಲಿರುವದು. ಜಗತ್ತೇ ಪ್ರಳಯದಲ್ಲಿ ಪರ್ಯವಸಾನವಾಗುತ್ತಲಿದೆ. ಈ ಶಕ್ತಿಯನ್ನು ಪ್ರತಿ ಭಟಿಸಬೇಕಾದರೆ ಆಧ್ಯಾತ್ಮಿಕ ಬಲವೇ ಮುಖ್ಯವಾಗಿದೆ ಎಂದು ಹೇಳಬಹುದು.

ವೀರಶೈವ ಯೋಗಿಗಳಾದ ಶಿವಯೋಗಿಗಳು ಶಿವಯೋಗದ ಸಾಮರ್ಥ್ಯದಿಂದ ಆಧ್ಯಾತ್ಮಿಕ ಬಲವನ್ನು ಗಳಿಸಿಕೊಂಡು ಮಾನವರನ್ನುದ್ಧರಿಸಿ ಪಾವನ ಮಾಡಿದ್ದಾರ ಲ್ಲದೆ ಅಘಟಿತ ಘಟನಾಕಾರ್ಯಗಳನ್ನೂ ಕೂಡ ಮಾಡಿರುವರು. ಹಾಗೆ ಹಾವೇರಿ ಶ್ರೀ ಶಿವಬಸವ ಮಹಾಸ್ವಾಮಿಗಳವರು ಅವಿರಳ ಲಿಂಗಪೂಜಾನಿಷ್ಠೆಯಿಂದ ಶಿವಯೋಗದ ಪರಾಕಾಷ್ಠತೆಯನ್ನು ಪಡೆದವರಾಗಿದ್ದರು. ಯಾವಾಗಲೂ ಪೂಜಾನುಷ್ಠಾನದಲ್ಲಿಯೇ ಕಾಲವನ್ನು ಕಳೆಯುವದು ಅವರ ವಿಶಿಷ್ಟವಾದ ಸ್ವಭಾವ

CC-0. Jangamwadi Math Collection. Digitized by eGangotri

ಧರ್ಮವಾಗಿತ್ತು. ಲಿಂಗೈಕ್ಯ ಪೂಜ್ಯ ಹಾನಗಲ್ಲ ಶ್ರೀಗಳವರು ಶಿವಯೋಗದ ಸ್ಥಿತಿಯು ಮಠಾಧಿಪತಿಗಳಲ್ಲಿ ಬೆಳೆದು ಬರಬೇಕೆಂದು; ತದ್ವಾರಾ ಸಮಾಜದ ಉದ್ಧಾರ ವಾಗಬೇಕೆಂದೂ ಈ ಮಹತ್ವದ ಉದ್ದೇಶವನ್ನಿಟ್ಟುಕೊಂಡೇ ಶ್ರೀ ಶಿವಬಸವ ಮಹಾ ಸ್ವಾಮಿಗಳವರನ್ನು ಕೂಡಿಕೊಂಡು ಶಿವಯೋಗಮಂದಿರನ್ನು ಸ್ಥಾಪಿಸಿದರು. ಅದ ರಂತೆ ಹಾವೇರಿ ಪೂಜ್ಯರು ಶಿವಯೋಗ ಮಂದಿರದಲ್ಲಿದ್ದುಕೊಂಡು ಶಿವಯೋಗಿ ಗಳನ್ನು ಮಕ್ಕಳಂತೆ ಕಾಪಾಡುತ್ತ ಅವರಲ್ಲಿ ಅನುಷ್ಠಾನದ ಬಲವನ್ನು ಹೆಚ್ಚಿಸಿದರು.

ಶ್ರೀ ಶಿವಬಸವ ಸ್ವಾಮಿಗಳವರು ಕೇವಲ ಮುಗ್ಧ ಸ್ವಭಾವದವರಾಗಿದ್ದರು. ಅವರು ಲೌಕಿಕ ವಿಷಯವನ್ನು ಎಷ್ಟೂ ಅರಿಯರು. ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳಂತೆ ಕೇವಲ ಆತ್ಮ ಲೀಲೆಯಲ್ಲೇ ಆಸಕ್ತರಾಗಿರುತ್ತಿದ್ದರು. ಅವರಿಗೆ ಮುಖ್ಯವಾಗಿ ಪ್ರೇಮದ ವಿಷಯವೆಂದರೆ ಲಿಂಗಪೂಜೆಯಾಗಿತ್ತು. ಮನೋಹರ ವಾದ ಪತ್ರಿಪುಷ್ಪದ ಗಿಡಗಳುಳ್ಳ ಪ್ರಶಾಂತ ತಾಣವನ್ನು ಕಂಡರೆಂದರೆ ಮುಂದಕ್ಕೆ ಪಾದವನ್ನೇ ಇಡುತ್ತಿರಲಿಲ್ಲ. ಎಲ್ಲ ವಿಷಯಗಳನ್ನು ಮರೆದು,

ಲಿಂಗದೊಳಿರ್ದು ಲಿಂಗಮನೆ ತಾಳ್ದು ನಿರಂತರ ಲಿಂಗ ಪೂಜೆಯಂ
ಲಿಂಗದಿನೊಲ್ದು ವಿಸ್ತರಿಸಿ ಲಿಂಗಕೆ ಲಿಂಗಮನರ್ಪಿಸುತ್ತಮಾ-
ಲಿಂಗಪದಾರ್ಥಮಂ ಸವಿದು ಲಿಂಗಸುಖಾಸ್ಪದನಾಗಿ ರಾಜಿಪಂ
ಲಿಂಗ ನಿಜೈಕ್ಯನೈ ಪರಮಪ್ರಭುವೆ ಮಹದೈಪುರೀಶ್ವರಾ.

ಎನ್ನುವಂತೆ ಲಿಂಗವೇ ತಾನು, ತಾವೇ ಲಿಂಗವಾಗಿ ಬಾಹ್ಯ ಪ್ರಪಂಚವನಳಿದು, ಲಿಂಗಾನಂದ ಸಮರಸದಲ್ಲಿ ತಲ್ಲೀನರಾಗುತ್ತಿದ್ದರು. ಇದು ವೀರಶೈವರ ವಿಶಿಷ್ಟ ವಾದ ಪೂಜೆಯ ಕ್ರಮವಾಗಿದೆ. ಇದು ಸರ್ವರಿಗೆ ಸಾಧ್ಯವಾಗದ ಮಾತು.

ಶಿವಯೋಗಮಂದಿರದ ಸಮೀಪದಲ್ಲಿ ಗುಡ್ಡದ ಕೊಳ್ಳವು ಉತ್ತಮ ನೀರಿನ ಝರಿಯಿಂದಲೂ ಬಿಲ್ವವೃಕ್ಷಗಳಿಂದಲೂ ಬಹು ಮನೋಹರವಾಗಿದೆ. ಆ ಪ್ರಶಾಂತ ಸ್ಥಾನದಲ್ಲಿ ಕುಟೀರವನ್ನು ಕಟ್ಟಿಕೊಂಡು ಶ್ರೀ ಶಿವಬಸವ ಸ್ವಾಮಿಗಳವರು ಅನು ಷ್ಠಾನ ಮಾಡುತ್ತಲಿದ್ದರು. ಆ ಭಾಗದಲ್ಲಿ ಅನುಷ್ಠಾನ ಶಕ್ತಿಯು ಪ್ರಭೆಯು ವ್ಯಾಪಿಸಿ ವ್ಯಾಘ್ರಾದಿ ಹಿಂಸ್ರಪಶುಗಳಲ್ಲಿರುವ ಕ್ರೂರಗುಣವು ಹೋಗಿ ಅವು ಕುಟೀರದ ಹಿಂಭಾಗದಲ್ಲಿ ನಿರಾತಂಕವಾಗಿ ವಾಸಮಾಡುತ್ತಿದ್ದವು. ಕಾವ್ಯಗಳಲ್ಲಿ ಕೇಳುವ ವಿಷಯವನ್ನು ಅಂದು ಪ್ರತ್ಯಕ್ಷದಲ್ಲಿ ಕಂಡುದಾಗಿರುವದು. ಮತ್ತೊಮ್ಮೆ, ನಿಡಗುಂದಿ ಕೊಪ್ಪದ ಸಮೀಪದಲ್ಲಿ ಹಳ್ಳದ ದಡದಲ್ಲಿ ಬಿಲ್ವವೃಕ್ಷಗಳ ಮನೋಹರ ಸ್ಥಾನದ ಬಿಲ್ವವೃಕ್ಷದಡಿಯಲ್ಲಿ ನಿಷ್ಠೆಯಿಂದ ಅನುಷ್ಠಾನವನ್ನು ಗೈಯ್ಯಲಾಗಿ ಶಿವಯೋಗದ ಪ್ರಭಾವದಿಂದ ಅಲ್ಲಿ ಶಾಖಾ ಶಿವಯೋಗಮಂದಿರವೇ ಆಯಿತು. ಅಲ್ಲದೆ ಅಲ್ಲಿಯು

CC-0. Jangamwadi Math Collection. Digitized by eGangotri

ಭಕ್ತರು ತಾವಾಗಿಯೇ ಅನೇಕ ಜಮೀನುಗಳನ್ನು ದಾನವಾಗಿ ಕೊಟ್ಟರು. ಇಂದಿಗೂ ಅಲ್ಲಿ ಅನುಷ್ಠಾನದ ಕಾರ್ಯವು ನಡೆಯುತ್ತಲಿದೆ. ಪೂಜ್ಯರ ತಪಃಪ್ರಭಾವದಿಂದ ಅದೊಂದು ಜಾಗ್ರತ ಸ್ಥಾನವಾಗಿದೆ. ಅದರಂತೆ ಹಿರೇಹಾಳ ಗ್ರಾಮದ ಹಳ್ಳದ ದಂಡೆಯಲ್ಲಿ ಶಿವಯೋಗಾನುಷ್ಠಾನವನ್ನು ಮಾಡಲಾಗಿ ಅಲ್ಲಿಯೂ ಶಿವಯೋಗ ಮಂದಿರವಾಗಿದೆ. ಹೀಗೆ ಯಾವ ಯಾವ ಕ್ಷೇತ್ರಗಳಲ್ಲಿ ಪಾದವನಿಟ್ಟು ಅನುಷ್ಠಾನ ವನ್ನು ಮಾಡುವರೋ ಅವೆಲ್ಲವೂ "ಕ್ಷೇತ್ರಂ ಪವಿತ್ರಂ ಪರಂ" ಎಂಬಂತೆ ಪವಿತ್ರ ಕ್ಷೇತ್ರಗಳಾಗಿ ಭಕ್ತರ ಮಾಲಿನ್ಯವನ್ನು ಕಳೆಯುವ 'ಪತಿತ ಪಾವನ' ಭೂಮಿಗಳಾ ಗಿವೆ. "ಶಿವಯೋಗಿ ಸಾಕ್ಷಾತ್ ಶಿವನಾದ ಕಾರಣದಿ" ಎಂಬ ಬಾಲಲೀಲಾ ಮಹಾಂತ ಶಿವಯೋಗಿಗಳ ಉಕ್ತಿಯಂತೆ ಅವಿರಳವಾಗಿ ಶಿವಯೋಗ ಸಾಧನವನ್ನು ಮಾಡಿ ಆ ತಪಸ್ಸಿನ ಶಕ್ತಿಯಿಂದ ಶಿವಬಸವ ಸ್ವಾಮಿಗಳವರು ನಿಜವಾಗಿಯೂ ಶಿವನ ಸ್ವರೂಪಿಗಳಾಗಿದ್ದರು. ಆದ್ದರಿಂದಲೇ ಅವರ ದೃಷ್ಟಿಯು ಮಾತ್ರದಿಂದ ಮಾನವರು ಪಾವನರಾಗುತ್ತಿದ್ದರು. ಅವರು ಆಡಿದ ಮಾತು ಹುಸಿಯಾಗುತ್ತಿದ್ದಿಲ್ಲ. ಅವರು ಮುಟ್ಟಿದ ವಸ್ತು ಪವಿತ್ರವಾಗುತ್ತಿತ್ತು. ಅವರು ದಯಾಮೂರ್ತಿಗಳಾಗಿದ್ದರು.

ವೀರಶೈವರು ಹೇಳುವ ಶಿವಯೋಗವು ಪರಿಪೂರ್ಣಯೋಗವೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ. ಲಿಂಗಪೂಜೆಯೇ ಮುಖ್ಯವಾದ ಶಿವಯೋಗದಲ್ಲಿ ಭಕ್ತಿಯೋಗ, ಜ್ಞಾನಯೋಗ, ಕ್ರಿಯಾಯೋಗ, ಲಯಯೋಗ, ಮಂತ್ರಯೋಗ, ಹಠಯೋಗ, ಧ್ಯಾನಯೋಗ ಇನೇ ಮೊದಲಾದ ಸರ್ವಯೋಗಗಳು ತುಂಬಿಕೊಂಡಿವೆ ಯಾದ್ದರಿಂದ ಪರಿಪೂರ್ಣ ಯೋಗವೆಂದು ಕರೆಯಬಹುದಾಗಿದೆ. ಈ ತೆರನಾದ ಪರಿಪೂರ್ಣ ಶಿವಯೋಗವನ್ನು ಸಾಧಿಸಿ ಅಂತಿಮ ಧ್ಯೇಯವಾದ ಲಿಂಗಾಂಗ ಸಾಮ ರಸ್ಯವನ್ನು ಹೊಂದಿದ ಶ್ರೀಶಿವಬಸವ ಸ್ವಾಮಿಗಳವರು ಪ್ರಾತಃಸ್ಮರಣೀಯರಾಗಿದ್ದಾರೆ.

CC-0. Jangamwadi Math Collection. Digitized by eGangotri



ಲಿಂ. ಶ್ರೀ. ನಿ. ಪ್ರ. ಶಿವಬಸವ ಮಹಾಸ್ವಾಮಿಗಳವರು

( ಹಿರೇಹಾಳ ಶಿವಯೋಗಾಶ್ರಮದಲ್ಲಿ. ಶೂನ್ಯ ಸಂಪಾದನೆಯ ಪ್ರವಚನ ನಡೆಯಿಸಿದಾಗ)

CC-0. Jangamwadi Math Collection. Digitized by eGangotri



ಲಿಂ. ಶ್ರೀ. ನಿ. ಪ್ರ. ಶಿವಬಸವ ಮಹಾಸ್ವಾಮಿಗಳವರು, ಹಾವೇರಿ
(ಕಪನಳ್ಳಿಯ ಶಿವಯೋಗಾಶ್ರಮದಲ್ಲಿ, ಅನುಷ್ಠಾನ ಮಾಡಿದುದು).

CC-0. Jangamwadi Math Collection. Digitized by eGangotri

# ಹಾವೇರಿ ಶ್ರೀಗಳವರ ಲಿಂಗಪೂಜಾನಿಷ್ಠೆ

**ಶ್ರೀ. ಮ. ಘ. ಚ. ಬಸವಲಿಂಗ ಪಟ್ಟಾಧ್ಯಕ್ಷರು, ತೆಲಸಂಗ.**

ಕನ್ನಡ ಭೂದೇವಿಯ ಪುಣ್ಯ ಗರ್ಭದಿಂದ ಅವತರಿಸಿದ ಶಿವಯೋಗಿಗಳ ಮಾಲಿಕೆಯಲ್ಲಿ ಹಾವೇರಿ ಶ್ರೀ ಶಿವಬಸವ ಮಹಾಸ್ವಾಮಿಗಳವರು ಮಧ್ಯಮಣಿ ಯಂತೆ ಒಪ್ಪಿದರು. ಶ್ರೀಗಳವರ ಭವ್ಯ ಬಾಹ್ಯಾಕಾರವೇ ಅವರ ಅಂತರ್ಯದ ಅಧ್ಯಾತ್ಮಿಕ ಸೌಂದರ್ಯಕ್ಕೆ ಸಾಕ್ಷಿಯಾಗಿತ್ತು. ಶ್ರೀಗಳವರು ತಮ್ಮ ಇಳಿವಯ ದಲ್ಲಿಯೂ ಸಹ ಎಳೆವಯದ ಹಸುಮಕ್ಕಳಂತೆ ಆವಾಗಲೂ ನಕ್ಕು ನಲಿದಾಡುತ್ತಿ ದ್ದರು. ಆರರ ಏರಾಟವೂ, ಮೂರರ ಮೂರಾಟವೂ, ಐವರ ಹೋರಾಟವೂ ಇಲ್ಲದ ಮಕ್ಕಳ ನಿರ್ಮಲ ಮನದಂತೆ. ಶ್ರೀಗಳವರ ಮನ ಪರಿಶುದ್ಧವಾಗಿತ್ತು. ಅಂತರ್ಮುಖಿಗಳಾದ ಶ್ರೀಗಳವರಿಗೆ ಲೋಕಾಂತವು ಬೇಡೆನಿಸಿ ಏಕಾಂತವೇ ಬೇಕೆ ನಿಸಿತ್ತು. ಅಂತರ್ಲೋಕದಲ್ಲಿ ನಲಿದಾಡುವ ಶ್ರೀಗಳವರು ಲೋಕಲೀಲಾಸಕ್ತ ರಾಗದೆ ಮಕ್ಕಳಂತೆ ಲೀಲೆಗಳನ್ನು ಮಾಡುತ್ತ ಮುಗ್ಧ ಬಾಲಕರಂತೆ ಒಪ್ಪುತ್ತಿದ್ದರು. ಶಿವಸಿದ್ಧಾಂತ ತಂತ್ರಜ್ಞರಿಂದ ಶಿವಾನುಭವ ಶಾಸ್ತ್ರದಲ್ಲಿ ಶಿವಯೋಗದ ಬಗೆಗೆ ಹೇಳಿದ ವಿಶಿಷ್ಟ ಲಕ್ಷಣಗಳೆಲ್ಲ ಶ್ರೀಗಳವರಲ್ಲಿ ಪರಿಪೂರ್ಣವಾಗಿದ್ದು ಮಿಕ್ಕಾದ ಕೆಲ ಲಕ್ಷಣಗಳು ಶಿವಸಿದ್ಧಾಂತ ತಂತ್ರಕ್ಕೇ ಪ್ರತಿಯಾಗಿ ಹೇಳಿ ಅವುಗಳ ನ್ಯೂನತೆಯನ್ನು ತುಂಬುವಷ್ಟರ ಮಟ್ಟಿಗೆ ಶ್ರೀಗಳವರಲ್ಲಿ ಶಿವಯೋಗವು ಪರಿಪೂರ್ಣತೆಯನ್ನೈದಿತ್ತು.

ಏಕಛತ್ರಾಧಿಪತಿಯೆನಿಸಿದ ಚಕ್ರವರ್ತಿ ಸಾರ್ವಭೌಮನು ತನ್ನ ಚತುರಂಗ ಬಲ, ಶ್ವೇತಛತ್ರ, ಚಾಮರ ಮುಂತಾದ ರಾಜ್ಯಾಂಗಗಳೊಡನೆ ಕೂಡಿ ಸಾಮ್ರಾ ಜ್ಯದ ಸುಖವನ್ನು ಅನುಭವಿಸುವಂತೆ, ಯಮನಿಯಮಾದಿ ಅಷ್ಟಾಂಗಗಳನ್ನು ಸಾಧಿಸಿದ ಹಠಯೋಗಿಯು ಅಣಿಮಾದ್ಯಷ್ಟ ಸಿದ್ಧಿಗಳನ್ನು ಪಡೆದು ಆನಂದ ಪಡು ವಂತೆ, ತ್ರಿಕೂಟಸ್ಥಾನದಲ್ಲಿ ಮನಸ್ಸನ್ನು ಖೇಚರೀ ಮುದ್ರೆಯಿಂದ ನಿಲ್ಲಿಸುವದು ಮೊದಲಾದ ಅಷ್ಟಾವಧಾನದಿಂದ, ರಾಜಯೋಗಿಯು ಉನ್ಮನೀ ಸಿದ್ಧಿಯನ್ನು ಪಡೆದು ಆನಂದಿಸುವಂತೆ. ಶಿವಯೋಗಿ ಪುಂಗವರಾದ ಶ್ರೀಗಳವರು ಶಿವಪೂಜಾ ಸಾಮಗ್ರಿಗಳ ಸಿದ್ಧತೆಗಾಗಿ ತ್ರಿಕರಣಗಳನ್ನು ಸವಿಸುವಂತಹ ತಪಸ್ಸು, ಶಿವಲಿಂಗಾ ರ್ಚನೆ, ಶಿವಮಂತ್ರಜಪ, ಶಿವಲಿಂಗಧ್ಯಾನ, ಶಿವಾಗಮಪಠನ ಜನ್ಯಜ್ಞಾನ ಈ ಐದು ವಿಧಗಳಿಂದ ಕೂಡಿದ ಶಿವಯೋಗ ಸಾಮ್ರಾಜ್ಯದ ಲಿಂಗಾನಂದದಲ್ಲಿ ಮಗ್ನರಾಗಿ ಬಾಳಿದರು. ಶಿವಯೋಗಾನಂದ ಸಾಗರದಲ್ಲಿ ರಾಜಹಂಸನಂತೆ ವಿಹರಿಸುವ ಶ್ರೀಗಳ ವರ ಅಖಂಡ ಜೀವನಕ್ರಮವೇ " ಯಾ ಯಾ ಚೇಷ್ಟಾ ಸಮುತ್ಪನ್ನಾ ಜಾಯತೇ ಶಿವಯೋಗಿನಾಂ । ಸಾ ಸಾ ಪೂಜನಮೀಶಸ್ಯ ಸರ್ವಥಾ ತದ್ಗತಾತ್ಮನಾಂ ॥" ಎಂಬ

CC-0. Jangamwadi Math Collection. Digitized by eGangotri

ಶಿವಾಗಮ ಪ್ರಮಾಣದಂತೆ ಶಿವಲಿಂಗ ಪೂಜೆಯಾಗಿಹೋಗಿತ್ತು. ಶ್ರೀಗಳವರ ದಿವ್ಯವಾದ ಆಧ್ಯಾತ್ಮಶಕ್ತಿಯು ಅನೇಕ ಮುಮುಕ್ಷುಗಳ ಹೃದಯದಲ್ಲಿ ಸುಪ್ತವಾಗಿದ್ದ ಚಿತ್‌ಶಕ್ತಿಯನ್ನು ಜಾಗೃತಗೊಳಿಸಿ ಅವರಿಗೆ ನವಚೈತನ್ಯವನ್ನು ಕೊಟ್ಟು ಆದರ್ಶ ವ್ಯಕ್ತಿಗಳನ್ನಾಗಿ ಮಾಡಿತು. ಶ್ರೀಗಳವರು ಪುಣ್ಯಾರಣ್ಯ, ನದೀತಟ, ಹೂದೋಟ, ಬಿಲ್ವವೃಕ್ಷವನ ಇವುಗಳನ್ನು ಕಂಡರೆ ಭಕ್ತಿಪರವಶರಾಗಿ ಶಿವಲಿಂಗಾರ್ಚನೆಗೆ ಮುಹೂರ್ತ ಮಾಡುತ್ತಿದ್ದರು. "ಆಡಿ ಕಾಲು ದಣಿಯವು, ನೋಡಿ ಕಣ್ಣು ದಣಿಯವು, ಹಾಡಿ ನಾಲಿಗೆ ದಣಿಯದು, ನಿಮ್ಮ ಪೂಜಿಸಿ ಮನ ದಣಿಯಲೊಲ್ಲದು, ಕೂಡಲ ಸಂಗಮದೇವ ಕೇಳಯ್ಯ ನಿಮ್ಮ ಉದರವ ಬಗಿದು ಹೋಗುವ ಭರವೆನಗೆ." ಎಂಬ ಬಸವಣ್ಣನವರ ಉಕ್ತಿಯಂತೆ ಎಷ್ಟು ಹೊತ್ತು ಪೂಜೆ ಮಾಡಿದರೂ ಶ್ರೀಗಳವರಿಗೆ ಆಸರ ಬೇಸರ ದಣಿವೇ ಇದ್ದಿಲ್ಲ. ಶ್ರೀಗಳವರು ದಿನದಿನದ ಉಚಿತ ವೇಳೆಯಲ್ಲಿ ಷೋಡಶೋಪಚಾರಗಳಿಂದ ಅಷ್ಟವಿಧಾರ್ಚನೆಯನ್ನು ಮಾಡುವಲ್ಲಿ ಕೊನೆಯುಸಿರು ಬಿಡುವವರೆಗೂ ತಪ್ಪಲಿಲ್ಲ. ಶ್ರೀಗಳವರಿಗೆ ಲಿಂಗಪೂಜೆಯೆಂದರೆ ಹಿರಿದಾದ ಹಿಗ್ಗು.

ಹಿಂಗದೆ ಪುಷ್ಪಾಂಜಲಿಗೈಯುವತಿ ಸುಖ
ಸಿಂಗರವೆನಿಸಿ ಬಂಣಿಪ ಸುಖ ।
ಮಂಗಲಮಯ ಶಂಭುಲಿಂಗವೆನಿಸಿ ರಾಜಿಪ ಸುಖ
ಲಿಂಗಪೂಜಾಸಂಭ್ರಮದ ಸುಖ ॥

ಎಂಬ ನಿಜಗುಣಾರ್ಯರ ಉಕ್ತಿಯಂತೆ ಶ್ರೀಗಳವರಿಗೆ ಲಿಂಗಪೂಜಾಸಂಭ್ರಮದ ಸುಖವೇ ಸುಖ.

* * * *

ವಿರತಿವಜ್ರದಿಂದ ಮೋಹಗಿರಿಯನ್ನು ತುಂಡರಿಸಿದ ಹಾನಗಲ್ಲ ಮತ್ತು ಹಾವೇರಿಯ ಈರ್ವರು ವೀರ ತರುಣ ವಿರಕ್ತರು ಸಮಾಜ ಪುರುಷನ ನೇತ್ರದ್ವಯದಂತೆ ರಾರಾಜಿಸುತ್ತಿದ್ದರು, ಅಥವಾ ಉಭಯ ಶ್ರೀಗಳು ವೀರಶೈವ ಸಮಾಜ ನಭೋಮಂಡಲದಲ್ಲಿ ಸೂರ್ಯಚಂದ್ರರಂತೆ ಶೋಭಿಸುತ್ತಿದ್ದರು.

ಶ್ರೀ ಶಿವಬಸವ ಸ್ವಾಮಿಗಳವರು ಹಾವೇರಿಯ ಹುಕ್ಕೇರಿ ಮಠದ ಸದ್ಭಕ್ತರ ಸದಿಚ್ಛೆಯ ಪ್ರಕಾರ ಮಠದ ಆಧಿಪತ್ಯವನ್ನು ವಹಿಸಿಕೊಂಡರೂ ಸಹ ಅವರು ಮಠದ ಮೇಲ್ಭಾಗದಲ್ಲಿ ಒಂದರಮೇಲೊಂದು ಉಪ್ಪರಿಗೆಗಳನ್ನು ಏರಿಸುವದು. ನಗಾರಿ ನೌಬತ್ತುಗಳ ಖಾನೆಗಳನ್ನು ಕಟ್ಟಿಸುವದು, ಭೂಮಿ ಸೀಮೆಗಳನ್ನೂ, ಬೆಳ್ಳಿ-ಬಂಗಾರವನ್ನೂ ಕೂಡಿಸುವದು ಮೊದಲಾದ ಸ್ವಾರ್ಥದ ಕನಕಶೃಂಖಲೆಯಲ್ಲಿ ಸಿಗಲಿಲ್ಲ. ಮೇಣೆ, ಪಲ್ಲಕ್ಕಿಗಳಲ್ಲಿ ಮೆರೆಯುವದು, ಸಾವಿರಾರು ಭಕ್ತರು ಜಯಘೋಷ ಮಾಡುವದು ಮುಂತಾದ ವೈಭವಾಡಂಬರಗಳ ಬಲೆಗೂ ಅವರು ಬೀಳಲಿಲ್ಲ. ಶ್ರೀ ಶಿವ

CC-0. Jangamwadi Math Collection. Digitized by eGangotri

LIBRARY
Jangamawadi Math, Varanasi
Acc. No. ......628......



ಬಸವಸ್ವಾಮಿಗಳವರಿಗೆ ವೀರಶೈವ ಸಮಾಜೋನ್ನತಿಗಾಗಿ ಕಟ್ಟಿದ ಮಂದಿರವೇ ಒಂದು ಮಠವಾಯಿತು.

ಶ್ರೀ ಶಿವಯೋಗಮಂದಿರವು ಪ್ರಶಾಂತವಾದ ಪುಣ್ಯಾಶ್ರಮವಾಗಿ ಒಪ್ಪುತ್ತಿರುವದು. ಮಂದಿರದ ಮಗ್ಗಲು ಮಲಾಪಹಾರಿಣೀ, ತ್ರಿಮಲನಾಶಿನೀ, ಗಂಗಾಮುಂತಾಗಿ ಕವಿಗಳಿಂದ ಪ್ರಶಂಸಿಸಲ್ಪಟ್ಟ ಮಲಪ್ರಭೆಯು ಉತ್ತರಾಭಿಮುಖಿಯಾಗಿ ಮೆಲ್ಲಮೆಲ್ಲನೆ ಸಾಗಿರುವಳು. ಮಂದಿರದ ಹಿಂಬದಿಯ ಬನಸಿರಿಯಲ್ಲಿ ಲೋಕಮಾತೆಯಾದ ಬನಶಂಕರಿಯು ನೆಲಸಿದ್ದಾಳೆ. ಮುಂಬದಿಯ ಮಹಾಪರ್ವತದ ಮಹಾಕ್ಷೇತ್ರದಲ್ಲಿ ಮಹಾಕೂಟೇಶ್ವರನು ಮುಹೂರ್ತಮಾಡಿದ್ದಾನೆ. ಎಡಬದಿಯ ಶೈಲಮಧ್ಯದಲ್ಲಿ ನಾಗನಾಥೇಶ್ವರನು ರಾರಾಜಿಸುತ್ತಾನೆ. ನೆರೆಯಲ್ಲಿ ಕೊಟ್ಟೂರ ಬಸವೇಶ್ವರನು ಸಮಾಧಿಸ್ಥನಾಗಿದ್ದಾನೆ. ಬೆಟ್ಟದ ನಟ್ಟನಡುವೆ ದಟ್ಟವಾಗಿ ಬೆಳೆದ ಬೆಟ್ಟದಾವರೆಯ ಮರಗಳು ಹೊಂಬಣ್ಣದ ಹೂಗಳು ಬಿಟ್ಟು ನಿಂತಿವೆ. ಸಹಸ್ರ ಬಿಲ್ವಾರ್ಚನೆ, ಲಕ್ಷ ಬಿಲ್ವಾರ್ಚನೆ, ಕೋಟಿ ಬಿಲ್ವಾರ್ಚನೆ ಮಾಡುವವರಿದ್ದರೆ ಬನ್ನಿರಿ, ಅವರಿಗೆ ಸಾಕಾದಷ್ಟು, ಬೇಕಾದಷ್ಟು ಬಿಲ್ವದಳಗಳನ್ನು ಒದಗಿಸಿ ಕೊಡುವೆವು ಎಂದು ಹೆಮ್ಮೆಯಿಂದ ಹೇಳುವಂತೆ ಎತ್ತರವಾಗಿ ಬೆಳೆದು ಚಿಗಿದು ನಿಂತಿರುವ ಅನಂತ ಬಿಲ್ವ ವೃಕ್ಷಗಳು ಎಲ್ಲಿ ನೋಡಿದಲ್ಲಿ ಕಂಗೊಳಿಸುತ್ತಿವೆ.

ರಣರಂಗದಲ್ಲಿ ರಣಕಹಳೆಯನ್ನು ಊದಿದೊಡನೆ ಓರ್ವ ವೀರಭಟನಿಗೆ ಯುದ್ಧದಲ್ಲಿ ಉತ್ಸಾಹವು ಹುಟ್ಟುವಂತೆ, ನಿಸರ್ಗದೇವಿಯ ಸೌಂದರ್ಯವನ್ನು ಕಂಡೊಡನೆ ಓರ್ವ ವರಕವಿಗೆ ಕಾವ್ಯಸ್ಫೂರ್ತಿಯು ಹುಟ್ಟುವಂತೆ, ಪುಣ್ಯಾರಣ್ಯ, ಪುಣ್ಯಪ್ರದೇಶ, ಪುಣ್ಯಾಶ್ರಮದಲ್ಲಿದ್ದು ಪ್ರಕೃತಿ ದೇವಿಯ ಪಾವಿತ್ರ್ಯವನ್ನು ಕಂಡ ಶ್ರೀ ಶಿವಬಸವ ಸ್ವಾಮಿಗಳವರಿಗೆ ಪ್ರಾಚೀನ ಮಹರ್ಷಿಗಳಂತೆ ಇನ್ನೂ ಏಕಾಂತದಲ್ಲಿದ್ದು ಅನುಷ್ಠಾನವನ್ನು ಮಾಡಬೇಕೆಂಬ ಸದಿಚ್ಛೆಯಾಯಿತು.

ಶ್ರೀ ಶಿವಬಸವ ಸ್ವಾಮಿಗಳವರು ಪತಂಜಲಿಯ ಯೋಗಸೂತ್ರದಲ್ಲಿ ವ್ಯಾಸರ ಪುರಾಣಗಳಲ್ಲಿ, ಕಾಲಿದಾಸನ ನಾಟಕದಲ್ಲಿ ಬಣ್ಣಿಸಿದಂತಹ ಸುಂದರ ಪ್ರಶಾಂತ ನಿತಾಂತ ಏಕಾಂತಸ್ಥಾನವನ್ನು ಆಯ್ದುಕೊಂಡರು. ಶ್ರೀಮಂದಿರದ ಮಗ್ಗಲು ಎತ್ತರವಾದ ಒಂದು ಪರ್ವತ. ಆ ಪರ್ವತವನ್ನು ಏರಿ ಏರಿದಂತೆ ಮಧ್ಯದಲ್ಲಿ ಗೈರಿಕಾದಿ ಧಾತುಗಳಿಂದ ಪರಿರಂಜಿಸುವ ಸಾನುಪ್ರದೇಶ. .... ಅಲ್ಲಿ ಸ್ವಲ್ಪ ವಿಶ್ರಾಂತಿಯ ಕೈಕೊಂಡು ಮತ್ತೆ ಮೇಲೇರಲು ಒಂದು ವಿಶಾಲವಾದ ಕೊಳ್ಳ. ಆ ಕೊಳ್ಳದಲ್ಲಿ ಬಾಗಿದರೆ ತಳ ಕೈಗೆ ಹತ್ತುವಷ್ಟು ಆಳವಾದ ನೀರಿನಕೊಂಡ. ಆ ಕೊಂಡದೊಳಗಿಂದ ಬಾಲಗಂಗೆಯು ಕಾರಂಜಿಯಂತೆ ಪುಟಿ ಪುಟಿದು ಮೇಲೆದ್ದು ಜಿಗಿಯುವಳು. ಆ ಚಿಕ್ಕ ಕುಂಡದಲ್ಲಿರುವ ಬಾಲಗಂಗೆಯು ಎಷ್ಟು ನೀರು ತುಂಬಿಕೊಂಡು ಹೋದರೂ

CC-0. Jangamwadi Math Collection. Digitized by eGangotri

ಸೊರಗಳು, ಕೊರಗಳು, ಬತ್ತಳು. ಅಂಚೆ ತುಂಬ ತುಂಬಿ ಹೊರಚೆಲ್ಲಿ ಮಂದ ಮಂದಾಗಿ ಮಂದಾಕಿನಿಯಂತೆ ಮುಂದೆ ಸಾಗಿ ಆ ಬಾಲಗಂಗೆಯು ಅನತಿ ದೂರದಲ್ಲಿ ಗುಪ್ತಗಾಮಿನಿಯಾಗುವಳು. ಕೊಳ್ಳದ ಎಡಬಲದಲ್ಲಿ ಸೋಮಲತೆಯಿಂದ ಸುತ್ತುವರಿಯಲ್ಪಟ್ಟ ಕಾಡುಮಲ್ಲಿಗೆ, ಬೆಟ್ಟದಾವರೆ, ನವಿಲು ಮೊದಲಾದ ಹಕ್ಕಿಪಕ್ಕಿ ಕುಳಿತು ಇಂಚರದಿಂದ ಗಾನಮಾಡುತ್ತಿರುವವು. ಹರಿಣ, ಸಾರಂಗ, ಮೊಲ ಮೊದಲಾದ ಸಾತ್ವಿಕ ಪ್ರಾಣಿಗಳೂ, ತೋಳ, ಚಿರ್ಚ ಇಂತಹ ಹಿಂಸ್ರಪಶುಗಳೂ ಆ ಕಾಡಿನಲ್ಲಿ ಮನೆಮಾಡಿಕೊಂಡಿರುವವು.

ಇಂತಹ ಪ್ರಶಾಂತ, ಏಕಾಂತ, ಮನೋಹರವಾದ ಪ್ರದೇಶದಲ್ಲಿ ಶ್ರೀಗಳವರ ಅನುಷ್ಠಾನಕ್ಕಾಗಿ ಒಂದು ಪರ್ಣಕುಟೀರವು ಸಿದ್ಧವಾಯಿತು. ಶ್ರೀಗಳವರ ನಿತ್ಯ ಲಿಂಗಾರ್ಚನೆಯ ಅಭಿಷೇಕಾದಿ ವಿನಿಯೋಗಕ್ಕಾಗಿ ಒಂದು ಕಪಿಲಗೋವೂ ಕಟ್ಟಲ್ಪಟ್ಟಿತು. ಶ್ರೀಗಳವರು ಆ ಕಟ್ಟೇಕಾಂತದಲ್ಲಿ ತಾವೊಬ್ಬರೇ ಇದ್ದು ಮನುಮುನಿಗಳೂ ಆಗದಂಥ ಉಗ್ರವಾದ ತಪಸ್ಸನ್ನು ಆಚರಿಸಲು ಪ್ರಾರಂಭಿಸಿದರು.

ಧೀರೋದಾತ್ತರಾದ ಶ್ರೀ ಶಿವಬಸವ ಸ್ವಾಮಿಗಳವರು ಬೆಳ್ಳಿಯ ಚಿಕ್ಕಿಯು ಮೂಡುವದಕ್ಕಿಂತ ಮುನ್ನವೇ ಎದ್ದು ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ಬಾಲಗಂಗೆಯಲ್ಲಿ ಮಿಂದು ಪರ್ಣಕುಟೀರದೊಳಗಿರುವ ಶಿಲಾತಲದಲ್ಲಿಯ, ಕಂಬಲಾಸನದಲ್ಲಿ ಪೂರ್ವಾಭಿಮುಖವಾಗಿ ಮಂಡಿಸುತ್ತಿದ್ದರು. ಬಂಧುರಸಿದ್ಧಾಸನವನ್ನು ಹಾಕಿದ, ಪ್ರಾಣಾಯಾಮವನ್ನು ಮಾಡಿ ಭಸ್ಮ ರುದ್ರಾಕ್ಷಿಗಳಿಂದ ಭೂಷಿತರಾದ, ಅಂಗನ್ಯಾಸ, ಕರನ್ಯಾಸ, ದೇಹನ್ಯಾಸಗಳನ್ನು ಮಾಡಿದ, ಕೈಯಲ್ಲಿ ಜಪಮಾಲೆಯನ್ನು ಹಿಡಿದು ಸಮಕಾಯ ಶಿರೋಗ್ರೀವರಾಗಿ ಕುಳಿತ ಶ್ರೀ ಶಿವಬಸವ ಸ್ವಾಮಿಗಳವರು ಹಿಮವತ್ಪರ್ವತದ ಸಾನುಪ್ರದೇಶದಲ್ಲಿ ಸ್ವಸ್ವರೂಪ ಸಾಕ್ಷಾತ್ಕಾರಕ್ಕಾಗಿ ಕುಳಿತ ಪರಶಿವನೋ ಏನೋ ಎಂಬುವಂತೆ ಒಪ್ಪುತ್ತಿದ್ದರು.

ಶ್ರೀಗಳವರ ಎಡಬಲಗಳಲ್ಲಿಟ್ಟ ದೀಪದಂಡಗಳಲ್ಲಿ ದೀಪವು ನಿಷ್ಕಂಪವಾಗಿ ಉರಿಯುವಂತೆ ವೃತ್ತಿರಹಿತವಾದ ಅವರ ಮನಸ್ಸು ಧ್ಯೇಯದತ್ತ ಸಾಗಿ ಮೆರೆಯುತ್ತಿತ್ತು. ಉಪಚಾರಗಳ ಸಮಯವರಿತು ಬಾರಿಸಿದಾಗ (ಆಹತ) ಘಂಟಾನಾದವನ್ನು ಕೇಳುವಂತೆ ನಿರಂತರದಲ್ಲಿಯೂ ಶ್ರೀಗಳವರು ಅಹತವಾಗದ ಪ್ರಣವ ನಾದವನ್ನು ಕೇಳುತ್ತಿದ್ದರು. ವಿವಿಧ ಪರಿಮಳ ದ್ರವ್ಯಗಳನ್ನು ಹಾಕಿ ಹೊತ್ತಿಸಿದ ಧೂಪಾರತಿಯ ಬೆಂಕಿಯಿಂದ ಸುವಾಸನೆಯು ಹೊರ ಹೊಮ್ಮುವಂತೆ ಶ್ರೀಗಳವರ ಹೃದಯದಿಂದ ಸತ್ಕರ್ಮಜನಿತವಾದ ಸದ್ವಾಸನೆಯು ಹೊರಸೂಸುತ್ತಿತ್ತು. ಆ ಪವಿತ್ರವಾದ ಪರ್ವತ ಕಂದರವು ಸೃಷ್ಟಿದೇವತೆಯ ಮಕ್ಕಳಾದ ಶುಕಪಿಕಾದಿಗಳ ಕಲಕಲ ಧ್ವನಿಯಿಂದ ತುಂಬಿದುದಕ್ಕಿಂತಲೂ ಹೆಚ್ಚಾಗಿ ಶ್ರೀಗಳವರ ವೇದಪಠನ, ಅಷ್ಟೋತ್ತರ ಶತನಾಮಾ

CC-0. Jangamwadi Math Collection. Digitized by eGangotri

ವಳಿಯ ಸ್ತವನ, ಗಣಸಹಸ್ರಪಾರಾಯಣ ಮುಂತಾದವುಗಳಿಂದ ತುಂಬಿಹೋಗಿತ್ತು. ಆ ಪವಿತ್ರವಾಣಿಯನ್ನು ಕೇಳಿದ ಪರ್ವತ ಪುರುಷನು ತಾನೂ ಧನ್ಯನಾಗಬೇಕೆಂದು ನಾಮೋಚ್ಚಾರಣೆಯನ್ನು ಮಾಡುವನೋ ಏನೋ ಎಂಬುವಂತೆ ಮಾರ್ದನಿಗೈಯು ತ್ತಿದ್ದನು. ಶ್ರೀ ಶಿವಬಸವ ಸ್ವಾಮಿಗಳವರು ಶಿವಲಿಂಗಾರ್ಚನೆಯಲ್ಲಿ ತನ್ಮಯರಾಗು ತ್ತಿದ್ದರು. ತಲ್ಲೀನರಾಗುತ್ತಿದ್ದರು. ಕೊನೆಗೆ "ಮಂಗಲಮಯ ಶಂಭುವೆನಿಸಿ ರಾಜಿಪ ಸುಖ" ಎಂಬ ನಿಜಗುಣಾರ್ಯರ ಉಕ್ತಿಯಂತೆ ಶಿವಸ್ವರೂಪಿಗಳಾಗಿ ಹೋಗುತ್ತಿ ದ್ದರು. ಶ್ರೀಗಳವರ ಲಿಂಗಾರ್ಚನೆಯು ಅಷ್ಟವಿಧಾರ್ಚನೆ ಷೋಡಶೋಪಚಾರ ಗಳಿಂದ ದ್ವೈತಭೂಮಿಕೆಯಲ್ಲಿ ಭವ್ಯವಾಗಿ ಬೆಳೆದು, ಸಾಕಷ್ಟು ಅರ್ಚನೋಪಚಾರ ಗಳಿಲ್ಲದ, ಅಹಂ, ತ್ವಂ ಈ ಶಬ್ದವಿಭೇದವು ಅಡಗಿಯೂ ಅಡಗದಂತಿರುವ, ದ್ವೈತಾ ದ್ವೈತ ಭೂಮಿಕೆಯಲ್ಲಿ ಸ್ವಲ್ಪವೇಳೆ ಉಳಿದು, ಕೊನೆಗೆ ಅರ್ಚನೋಪಚಾರಗಳಿಲ್ಲದ, ಅಹಂತ್ವಮಿತಿ ಶಬ್ದವಿಭೇದವಡಗಿದ, ಪರಮ ಶಿವಾದ್ವೈತದಲ್ಲಿ ಅಳಿಯುತ್ತಿತ್ತು. ಶ್ರೀಗಳವರು ತಮ್ಮ ಶಿವಲಿಂಗಾರ್ಚನೆಯ ಉಪಯೋಗಕ್ಕಾಗಿ ಒಂದು ಗೋಮಾತೆ ಯನ್ನು ಕಟ್ಟಿಕೊಂಡಿದ್ದರು. ಮತ್ತು ತಮ್ಮ ಪರ್ಣಕುಟೀರದ ಸಮೀಪದಲ್ಲಿ ಒಂದು ಬಿಲ್ವವೃಕ್ಷದ ಸಸಿಯನ್ನೂರಿ ಅದಕ್ಕೆ ನೀರೆರೆದು ಬಹಳ ಅಕ್ಕರದಿಂದ ಸಾಕುಮಗುವಿ ನಂತೆ ಜೋಪಾನ ಮಾಡುತ್ತಿದ್ದರು. ಶ್ರೀಗಳ ಅಮೃತ ಹಸ್ತದ ಜಲಸೇಚನೆಯನ್ನು ಹೊಂದಿ ಬೆಳೆದ ಆ ಪುಣ್ಯ ವೃಕ್ಷವು ಆ ಪುಣ್ಯಸ್ಥಲದ ಸಮೀಪದಲ್ಲಿ ಇಂದಿಗೂ ಕಂಗೊಳಿಸುತ್ತಿರುವದು.

ಶ್ರೀಗಳವರ ಸದ್ಗುಣ, ಸಚ್ಛೀಲ, ಸದಾಚಾರಗಳ ಪ್ರಭಾವದಿಂದ ಆ ವನ ದಲ್ಲಿಯ ಪರಸ್ಪರ ವಿರೋಧ ಪ್ರಾಣಿಗಳು ತಮ್ಮ ವೈರಭಾವವನ್ನು ಬಿಟ್ಟು "ಅಹಿಂಸಾ ಪ್ರತಿಷ್ಠಾಯಾಂ ತತ್ಸನ್ನಿಧೌ ವೈರತ್ಯಾಗಃ" ಎಂಬ ಪಾತಂಜಲಯೋಗ ಸೂತ್ರದಂತೆ ಸ್ನೇಹಭಾವದಿಂದ ವರ್ತಿಸುತ್ತಿದ್ದವು. ಶ್ರೀಗಳವರು ಅನುಷ್ಠಾನವನ್ನು ಆಚರಿಸುವ ಸಮಯದಲ್ಲಿ ಹಿಂಸಕ ಪ್ರಾಣಿಯಾದ ಚಿರ್ಚು ಎಲೆವನೆಯ ಮುಂಬದಿಯ ಗೋ ಮಂದಿರದ ಬಳಿ ಕುಳಿತು ಶ್ರೀಗಳವರನ್ನು ನಿಟ್ಟಿಸಿ ನೋಡಿ ಹೋಗುತ್ತಿತ್ತು.

ಮಿತಾಹಾರಸೇವನ, ಮಿತನಿದ್ರಾಕರಣ, ಕಠೋರವ್ರತ ಪರಿಪಾಲನ ಇವು ಗಳಿಂದ ಶ್ರೀಗಳವರ ಹುರಿಕಟ್ಟಾದ ಮೈ ಸೊರಗಿ, ಕೊರಗಿ ಸಣ್ಣಾಗಿ ತೂಕಕ್ಕೆ ಕಡಿಮೆಯಾದರೂ ಅವರ ಅಧ್ಯಾತ್ಮಶಕ್ತಿಯು ತೂಕ ಮಾಡಲಾರದಷ್ಟು ಮಿಗಿಲಾಗಿ ಬೆಳೆಯಿತು. ಸಂತತ ಸಾಧನ ಸಂಪತ್ತಿಯಿಂದ ಶ್ರೀಗಳವರು ಪುಟವಿಕ್ಕಿದ ಚಿನ್ನ ದಂತೆ ಪರಿಶುದ್ಧಾತ್ಮರಾದರು. ಭಗವತ್ ಸಾಕ್ಷಾತ್ಕಾರದ ಮುಂಗುರುತುಗಳು ಮೆಲ್ಲ ಮೆಲ್ಲನೆ ಶ್ರೀಗಳಿಗೆ ಕಾಣಹತ್ತಿದವು.

ಸಂಗಡಿಗರಾದ ಹಾನಗಲ್ಲ ಶ್ರೀಗಳವರು ಆಗಾಗ ತಪೋವನಕ್ಕೆ ಹೋಗಿ ತರುಣ ಶ್ರೀಗಳವರಲ್ಲಿರುವ ತಪಃಪ್ರೌಢಿಮೆಯನ್ನು ಕಂಡು ಹಿರಿಹಿರಿ ಹಿಗ್ಗುತ್ತಿದ್ದರು. ಒಮ್ಮೆ

CC-0. Jangamwadi Math Collection. Digitized by eGangotri

ಶ್ರೀ ಶಿವಬಸವ ಸ್ವಾಮಿಗಳು ಸೇವೆಗೈಯುವ *ಉರುಲಿಂಗಾರ್ಯನೆಂಬ ವಟುವನ್ನು ಕುರಿತು– "ಉರುಲಿಂಗಾರ್ಯನೆ ! ಅಕೋ ನೋಡು, ಮಲಪ್ರಭೆಯ ಜಲಪಾತದ ಬಳಿ ದೇವತೆಗಳೂ, ಋಷಿಗಳೂ, ಸ್ನಾನಮಾಡಿ ಹೋಗುತ್ತಾರೆ. ಕಾಣುವದೇನು? " ಎಂದು ಕೇಳಿದರು. ಅಂತರ್ದೃಷ್ಟಿಗೆ ಕಾಣುವ ಆ ದೇವತೆಗಳು ಚರ್ಮ ಚಕ್ಷುಸ್ಸ ಗಳಿಗೆ ಕಾಣುವದುಂಟೆ !

ಸನ್ ೧೯೧೨ ರಲ್ಲಿ ಶ್ರೀ ಶಿವಬಸವ ಸ್ವಾಮಿಗಳವರು ಹಗಲು ಹೋದರೂ ಭಯವನ್ನುಂಟುಮಾಡುವ, ಜನರ ಸುಳಿವಿಲ್ಲದ ಆ ಪರ್ವತ ಮಧ್ಯದಲ್ಲಿ ಉಪ ನಿಷದ್ಗ್ರಂಥಾವಲೋಕನ, ಷಟ್‌ಸ್ಥಲಶಾಸ್ತ್ರವಾಚನ, ಮಂತ್ರಲೇಖನ ಮುಂತಾದವು ಗಳನ್ನು ಮಾಡುತ್ತ ಸಪ್ತಾಹ, ಪಕ್ಷ, ಮಾಸಗಳನ್ನು ಮಾತ್ರ ಕಳೆಯದೆ ಸಮಗ್ರ ಮೂರು ತಿಂಗಳುಗಳನ್ನು ಕಳೆದರು. ಅನುಷ್ಠಾನ ಸಮಾಪ್ತಿಯನ್ನು ಶ್ರೀ ಹಾನಗಲ್ಲ ಶ್ರೀಗಳವರು ಅತ್ಯಂತ ಸಡಗರದಿಂದ ಮಾಡಿಸಿ ಪುನಃ ಶಿವಯೋಗಮಂದಿರಕ್ಕೆ ಶ್ರೀಗಳವರನ್ನು ಬರಮಾಡಿಕೊಂಡರು.

ಒಂದು ಸಲ ಶ್ರೀ ಹಾವೇರಿ ಶ್ರೀಗಳವರು ಮಹಾದೇವದೇಶಿಕರೆಂಬ ಶಿಷ್ಯ ರೊಡನೆ ಕೂಡಿಕೊಂಡು ಪ್ರಾತಃಕಾಲದಲ್ಲಿ ಹೊಸಮಹಾಕೂಟಕ್ಕೆ ದಯಮಾಡಿಸಿ ದರು. ಅಲ್ಲಿರುವ ವಿಶಾಲವಾದ ಸ್ವಚ್ಛ ಜಲಾಶಯ, ಪ್ರಫುಲ್ಲಿತ, ಕುಸುಮಿತ, ಗಗನಚುಂಬಿಗಳಾದ ವೃಕ್ಷಶ್ರೇಣಿಗಳ ಮಧ್ಯದಲ್ಲಿರುವ ಮಹಾಕೂಟೇಶ್ವರನ ಭವ್ಯ ದೇವಾಲಯ, ಸಹಸ್ರಾರು ಲಿಂಗಗಳು ಭೂಮಿಯಲ್ಲಿ ನೆಲಸಿದ ಪಾವನದೃಶ್ಯ ಇವು ಗಳನ್ನು ಕಂಡು, ಶ್ರೀಗಳವರಿಗೆ ಅಲ್ಲಿಯೇ ಲಿಂಗಾರ್ಚನೆಯನ್ನು ಮಾಡಬೇಕೆಂಬ ಇಚ್ಛೆಯಾಯಿತು. ಕೂಡಲೆ ಮಹಾದೇವ ದೇಶಿಕರನ್ನು ಬಳಿ ಕರೆದು " ಈ ದಿನ ಇಲ್ಲಿಯೇ ಶಿವಲಿಂಗಾರ್ಚನೆಗೆ ಸಿದ್ಧಮಾಡಿರಿ " ಎಂದು ಅಪ್ಪಣೆ ಮಾಡಿದರು. ಆಗ ಮಹಾದೇವ ದೇಶಿಕರು ಶ್ರೀಗಳವರ ಅಪ್ಪಣೆಯ ಪ್ರಕಾರ ವಿಶಾಲವಾದ ಮಂದಾರ ವೃಕ್ಷದ ಅಡಿಯಲ್ಲಿ ನೆಲವನ್ನು ಸಮವಾಗಿ ಮಾಡಿ, ನೀರಿನ ಚಳಿಹೊಡೆದು ಪರ್ಣಾ ಸನವನ್ನು ಹಾಕಿದರು. ಇತ್ತ ಶ್ರೀಗಳವರು ಗೋಸಂಚಾರದ ಪ್ರದೇಶದಲ್ಲಿ ತಿರುಗಾಡಿ ಗೋವುಗಳ ಬೆರಣಿಗಳನ್ನೇ ಆಯ್ದು ತಂದು ಸುಟ್ಟು ಭಸ್ಮವನ್ನು ಸಿದ್ಧಮಾಡಿ ಕೊಂಡರು. ಶ್ರೀಗಳವರಿಗೆ ಅಂದು ಜೊತೆಗೆ ಒಯ್ದು ತಂಬಿಗೆಯೇ ಪೂಜಾಕಲಶ ವಾಯಿತು. ಎಲೆಗಳಿಂದ ಕಟ್ಟಿದ ಪರ್ಣ ಪಾತ್ರೆಗಳೇ ಅಭಿಷೇಕ ಪಾತ್ರೆಗಳಾದವು. ಯಾವ ಶ್ರೀಗಳವರು ಪಂಚಾಮೃತಾಭಿಷೇಕ, ಷಡ್ರಸೋಪೇತ ನೈವೇದ್ಯ, ಧೂಪ, ದೀಪ, ಆರತಿ, ಛತ್ರಚಾಮರ, ವ್ಯಜನ, ಘಂಟಾ ಮುಂತಾದ ವಿವಿಧೋಪಚಾರ ಗಳ ಮತ್ತು ಪೂಜಾ ಸಾಮಗ್ರಿಗಳ ಮುಖಾಂತರ ಪೂಜೆಗೈಯುತ್ತಿದ್ದರೋ ಆ ಶ್ರೀಗಳ

* ಮುಂದೆ ಅವರೆ ಶ್ರೀ ಉರುಲಿಂಗದೇಶಿಕರಾಗಿ ಹಾಸನ ಜಿಲ್ಲೆಯ ಅರಸಿಕೆರೆ ತಾಲೂ ಕಿನಲ್ಲಿರುವ ಹಾರನಹಳ್ಳಿಯ ಕೋಡಿ ಮಠದ ಅಧಿಪತಿಗಳಾಗಿದ್ದು ಲಿಂಗೈಕ್ಯರಾದರು.

CC-0. Jangamwadi Math Collection. Digitized by eGangotri

ವರು ಇಂದು ಸ್ವಲ್ಪೇ ಸಾಮಗ್ರಿಗಳಿಂದ ಪೂಜೆಯನ್ನು ಮಾಡಲು ಪ್ರಾರಂಭಿಸಿದರು. ಸ್ವಲ್ಪೇ ವೇಳೆಯಲ್ಲಿ ಧ್ಯಾನಸ್ತಿಮಿತಲೋಚನರಾಗಿ ಬಹಿಃಪ್ರಪಂಚವನ್ನು ಮರೆತು ತಾವೇ ತಾವಾಗಿ ಕುಳಿತುಕೊಂಡರು. ಉಪಚಾರಗಳ ಹಂಗಿಲ್ಲದ, ಅಂದಿನ ಅವರ ಪೂಜೆಯು ಬಹಳ ಮೇಲ್ತರಗತಿಯದಾಗಿತ್ತು.

" ಗಗನವೇ ಗುಂಡಿಗೆ, ಆಕಾಶವೇ ಅಗ್ಗವಣಿ, ಚಂದ್ರಸೂರ್ಯರಿಬ್ಬರೂ ಪುಷ್ಪ ನೋಡಾ! ಬ್ರಹ್ಮ ಧೂಪ, ವಿಷ್ಣು ದೀಪ, ರುದ್ರನೋಗರ, ಸುಯಿಧಾನ ನೋಡಾ! ಗುಹೇಶ್ವರ ಲಿಂಗಕ್ಕೆ ಪೂಜೆ ನೋಡಾ!"

" ಪ್ರಾಣಲಿಂಗಕ್ಕೆ ಕಾಯವೇ ಸೆಜ್ಜೆ, ಆಕಾಶಗಂಗೆಯಲ್ಲಿ ಮಜ್ಜನ, ಹೂವಿಲ್ಲದ ಪರಿಮಳದ ಪೂಜೆ, ಹೃದಯ ಕಮಲದಲ್ಲಿ ಶಿವಶಿವ ಎಂಬ ಶಬ್ದ ಇದು, ಅದ್ವೈತ ಕಾಣಾ ಗುಹೇಶ್ವರ " ಎಂಬ ಪ್ರಭುದೇವರ ಅಮೃತವಾಣಿಯಂತೆ ಶ್ರೀ ಶಿವಬಸವ ಸ್ವಾಮಿಗಳವರು ಅದ್ವೈತ ಭಕ್ತಿಯ ಲಿಂಗಾರ್ಚನೆಯಲ್ಲಿ ತಲ್ಲೀನರಾದರು. ಇಂದ್ರಿಯಗಳ ವ್ಯಾಪಾರವನ್ನು ಮನಸ್ಸಿನಲ್ಲಿಯೂ, ಮನೋವ್ಯಾಪಾರವನ್ನು ಬುದ್ಧಿಯಲ್ಲಿಯೂ, ಬುದ್ಧಿವ್ಯಾಪಾರವನ್ನು ಚಿತ್ತದಲ್ಲಿಯೂ, ಚಿತ್ತದ ವ್ಯಾಪಾರವನ್ನು ಅಹಂಕಾರದಲ್ಲಿಯೂ ಆ ಅಹಂಕಾರ ವೃತ್ತಿಯನ್ನು ಪರಮಾತ್ಮನಲ್ಲಿಯೂ ಲಯಗೊಳಿಸಿ ಧ್ಯಾನಯೋಗಾಸಕ್ತರಾದ ಶ್ರೀ ಶಿವಬಸವ ಸ್ವಾಮಿಗಳವರು ಶಿವಾಲಯದಲ್ಲಿ ಕುಳಿತು ಜೀಸತ್ತ ಮಹಾಕೂಟೇಶ್ವರನೇ ಮಂದಾರ ವೃಕ್ಷಾರ ಅಡಿಯಲ್ಲಿ ಬಂದು ಕುಳಿತಿರುವನೋ ಎಂಬುವಂತೆ ನೋಡುವವರಿಗೆ ಭಾಸವಾಗುತ್ತಿತ್ತು. ನಡುನೆತ್ತಿಯ ಮೇಲಿರ್ದ ಸೂರ್ಯನು ಈ ಶಿವಯೋಗಿಯ ಸುವಾರ್ತೆಯನ್ನು ಪಶ್ಚಿಮಾಂಗನೆಗೆ ಹೇಳಲೋಸುಗವೋ ಏನೋ ಎಂಬುವಂತೆ ಪಡುವಣ ದಿಕ್ಕಿಗೆ ಇಳಿದನು. ಧ್ಯಾನ ನಿಮಗ್ನರಾದ ಶ್ರೀ ಶಿವಬಸವ ಸ್ವಾಮಿಗಳವರು ಬಹಿರ್ಮುಖರಾದರು. ಶಿಷ್ಯರಾದ ಮಹಾದೇವ ದೇಶಿಕರು ಶಿವಯೋಗಿಗಳವರ ಧ್ಯಾನಪರವಶತೆಯನ್ನು ಕಂಡು ಅಚ್ಚರಿಗೊಂಡರು. ಶಿವಲಿಂಗಪೂಜೆಯನ್ನು ಮುಗಿಸಿಕೊಂಡು ಕುಳಿತ ಶ್ರೀ ಶಿವಬಸವ ಮಹಾಸ್ವಾಮಿಗಳವರನ್ನು ಕುರಿತು ಶಿಷ್ಯರಾದ ಮಹಾದೇವದೇಶಿಕರು— ಬುದ್ಧೀ ಲಿಂಗಾರ್ಚನೆಯು ಮುಗಿಯಿತು. ಇನ್ನು ಶಿವಾರ್ಪಿತದ ವ್ಯವಸ್ಥೆಯನ್ನು ಹೇಗೆ ಮಾಡುವದು ? ತಮ್ಮ ಅಪ್ಪಣೆಯಾದರೆ ಕೂಡಲೆ ಹಳ್ಳಿಗೆ ಹೋಗಿ ಭಿಕ್ಷೆಯನ್ನು ಬೇಡಿಕೊಂಡು ಬರುವೆನು.

ಶ್ರೀ.— ಶಿಷ್ಯನೇ, ಶಿವನಿಗೆ ತನ್ನ ಭಕ್ತರನ್ನು ಪೊರೆಯುವ ಚಿಂತೆಯಿಲ್ಲವೇನು ? ನೀನೇಕೆ ಭಿಕ್ಷೆಯನ್ನು ಬೇಡಲಿಕ್ಕೆ ಹೋಗುವಿ ? ಬೇಡಿ ಬಂದುದು ಅಂಗಾರ್ಪಿತ; ಬೇಡದೇ ಬಂದುದು ಲಿಂಗಾರ್ಪಿತ ಎಂಬ ವೀರಶೈವರ ಆಚರಣೆಯು ನಿನಗೆ ಗೊತ್ತಿಲ್ಲವೇ ? ಶಿವನೇ ಕೊಡುವವನು. ನಮಗೇಕೆ ಆ ಚಿಂತೆ ?

ಮ.— ತಮ್ಮ ಅಪ್ಪಣೆಯ ಪ್ರಕಾರ ನಡೆಯುವೆನು.

CC-0. Jangamwadi Math Collection. Digitized by eGangotri

ಎಂದು ಹೇಳಿ ಭಿಕ್ಷೆಗೆ ಹೊರಟ ಮಹಾದೇವ ದೇಶಿಕರು ತಮ್ಮ ಜೋಳಿಗೆಯನ್ನು ಬದಿಗಿಟ್ಟು ಶ್ರೀಗಳವರ ಸಮ್ಮುಖದಲ್ಲಿ ಕೈಮುಗಿದುಕೊಂಡು ಕುಳಿತರು. ಅರಕ್ಷಣದಲ್ಲಿಯೇ ಗುಡಿಯ ಹಿಂಬದಿಯ ಪರ್ವತದ ಕೊಳ್ಳದೊಳಗಿಂದ ಓರ್ವ ಹೊಸ ಮನುಷ್ಯನು ಬಾಳೆ, ಮಾವು, ದಾಳಿಂಬ, ಮೋಸಂಬಿ ಮೊದಲಾದ ಹಣ್ಣುಗಳಿಂದ ತುಂಬಿದ ಕರಂಡಿಯನ್ನು ತಲೆಯ ಮೇಲೆ ಹೊತ್ತುಕೊಂಡು ಶ್ರೀಗಳವರು ಅನುಷ್ಠಾನಕ್ಕೆ ಕುಳಿತ ಮಂದಾರವೃಕ್ಷದ ಬಳಿಗೆ ಬಂದು ಶ್ರೀಗಳವರ ಶಿಷ್ಯರನ್ನು ಕುರಿತು–

ಆಗಂತುಕ– ಶಿಷ್ಯರೇ, ನಿಮ್ಮ ಗುರುಗಳ ಲಿಂಗಾರ್ಚನೆಯು ಮುಗಿದಿರುವದೇನು ?

ಶಿಷ್ಯ– ಮುಗಿದಿರುವದು.

ಆಗಂತುಕ– ಹಾಗಾದರೆ ಸ್ವಾಮಿಗಳವರ ಲಿಂಗಾರ್ಪಿತಕ್ಕಾಗಿ ಈ ಹಣ್ಣಿನ ಕರಂಡಿಕೆಯನ್ನು ಹಾನಗಲ್ಲ ಶ್ರೀಗಳವರು ಕಳುಹಿಸಿರುವರು. ಆದ್ದರಿಂದ ಇವುಗಳನ್ನು ಶ್ರೀಗಳವರ ಅರ್ಪಿತಕ್ಕಾಗಿ ಒಯ್ದು ಮುಟ್ಟಿಸಿರಿ.

ಎಂದು ಹೇಳಿದನು. ಆಗಲೇ ಮಹಾದೇವ ದೇಶಿಕರು ಶ್ರೀ ಶಿವಬಸವ ಸ್ವಾಮಿಗಳವರ ಬಳಿಗೆ ಬಂದು, " ಬುದ್ಧೀ, ಅವನೋ, ಓರ್ವ ಹೊಸಬನಾದ ಸೇವಕನು ಹಣ್ಣು ಹಂಪಲುಗಳಿಂದ ತುಂಬಿದ ಕರಂಡಿಕೆಯನ್ನು ಹೊತ್ತುಕೊಂಡು ಬಂದು, ಈ ಹಣ್ಣುಹಂಪಲುಗಳ ಬುಟ್ಟಿಯನ್ನು ಹಾನಗಲ್ಲ ಶ್ರೀಗಳವರು ನಿಮ್ಮ ಗುರುಗಳಿಗೆ ಮುಟ್ಟಿಸಲು ಕಳಿಸಿರುವರು ಬೇಗನೇ ಮುಟ್ಟಿಸಿರಿ ಎಂದು ಹೇಳಿ ಹೊರಟುಹೋದನು" ಎಂದು ವಿಜ್ಞಾಪಿಸಲು, ಆಗ ಶಿವಾಜ್ಞೆಯಿಂದ ಬಂದ ಹಣ್ಣುಹಂಪಲುಗಳನ್ನು ತೆಗೆದುಕೊಂಡು ಬನ್ನಿರಿ ಎಂದು ಅಪ್ಪಣೆ ಮಾಡಿದರು. ದೇಶಿಕರು ಶ್ರೀಗಳ ಆಜ್ಞೆಯ ಪ್ರಕಾರ ಬುಟ್ಟಿಯನ್ನು ಸಮ್ಮುಖದಲ್ಲಿ ಒಯ್ದಿಟ್ಟರು. ಆಗ ಶ್ರೀಗಳವರು "ದೇಶಿಕರೇ, ಹಣ್ಣುಹಂಪಲಗಳನ್ನು ಹೊತ್ತು ತಂದ ಆ ಸೇವಕನನ್ನು ಕರೆಯಿರಿ, ಅವನೂ ದಣಿದಿರಬಹುದು, ಎಲ್ಲರೂ ಕೂಡಿ ಪ್ರಸಾದವನ್ನು ಸೇವಿಸೋಣ" ಎಂದು ಅಪ್ಪಣೆಯಿತ್ತರು. ಆಗಿಂದಾಗಲೇ ದೇಶಿಕರು ಸ್ವಲ್ಪು ದೂರ ಬಂದು ಗುಡಿಯ ಹಿಂಬದಿಯಲ್ಲಿಯೂ ಮುಂಬದಿಯಲ್ಲಿಯೂ, ಆ ಕಡೆಯಲ್ಲಿಯೂ, ಈ ಕಡೆಯಲ್ಲಿಯೂ, ಕೊಳ್ಳದಲ್ಲಿಯೂ, ಹಳ್ಳದಲ್ಲಿಯೂ, ಹುಡುಕಿ ಹುಡುಕಿ ಕರೆಕರೆದು ಬೇಸತ್ತರು. ತಿರುಗಿ ತಿರುಗಿ ದಣಿದರು. ಏನಾದರೂ ಎಂತಾದರೂ ಆ ಹೊಸಬನಾದ ಮನುಷ್ಯನು ಸಿಕ್ಕಲಿಲ್ಲ. ನಿಮಿಷಾರ್ಧದಲ್ಲಿ ಆ ಪರ್ವತವನ್ನು ಕಾಲ್ನಡಿಗೆಯಿಂದ ಸುತ್ತು ಹಾಕುವಷ್ಟು ಶೀಘ್ರ ಗತಿಯುಳ್ಳ ಆ ಮಹಾದೇವ ದೇಶಿಕರಿಗೆ ಆ ನೂತನ ವ್ಯಕ್ತಿಯು ಸಿಕ್ಕಲಾರದ್ದು ಬಹಳ ಆಶ್ಚರ್ಯವನ್ನುಂಟು ಮಾಡಿತು. ಅಲೆದಾಡಿ ಅಲೆದಾಡಿ ದಣಿದುಕೊಂಡ ದೇಶಿಕರು ಶ್ರೀಗಳವರ ಸನ್ನಿಧಿಗೆ ಬಂದು, "ಬುದ್ಧೀ, ಕರಂಡಿಯನ್ನು ಹೊತ್ತು ತಂದ ಮನು

CC-0. Jangamwadi Math Collection. Digitized by eGangotri



ಹಾವೇರಿ ಶ್ರೀಗಳವರು ಶ್ರೀ ಶಿವಯೋಗಮಂದಿರದ ಹತ್ತಿರವ ಬೆಟ್ಟದ ಕೊಳ್ಳದಲ್ಲಿ ಅನುಷ್ಠಾನಕ್ಕೆ ಕುಳಿತಿರುವ ದೃಶ್ಯ.

CC-0. Jangamwadi Math Collection. Digitized by eGangotri



ಶಿವಯೋಗಮಂದಿರದ ನದಿಯ ತೀರದಲ್ಲಿ ಶ್ರೀಗಳು ಅನುಷ್ಠಾನ ಮಾಡಿದ ಸ್ಥಾನ
(ಬೇವು, ಬನ್ನಿ, ಬಿಲ್ವ ವೃಕ್ಷಗಳು ಕೂಡಿ ಬೆಳೆದಿವೆ).

CC-0. Jangamwadi Math Collection. Digitized by eGangotri

ಷ್ಯನು ಎಷ್ಟು ಹುಡುಕಿದರೂ ಸಿಕ್ಕಲಿಲ್ಲ. ಪರ್ವತದ ಸುತ್ತುಮುತ್ತಲೂ ತಿರುಗಿ ಬಂದೆನು" ಎಂದು ಅರಿಕೆ ಮಾಡಿಕೊಂಡರು. "ಆಗಲಿ ದೇಶಿಕರೇ, ಶಿವನ ಮಹಿಮೆಯನ್ನು ಹೇಳಲು ಬರುವದಿಲ್ಲ" ಎಂದು ಅಪ್ಪಣೆ ಮಾಡಿ ಶಿವನಾಣತಿಯಿಂದ ಬಂದ ಹಣ್ಣುಹಂಪಲಗಳನ್ನು ಸ್ವೀಕರಿಸಿ ದೇಶಿಕರಿಗೂ ಪ್ರಸಾದವನ್ನು ಕೊಟ್ಟರು. ನಂತರ ಶ್ರೀಗಳವರು ದೇಶಿಕರಿಗೆ ಶಿವಾನುಭವ ಶಾಸ್ತ್ರವನ್ನು ಉಪದೇಶಿಸಿದರು. ಹೀಗೆ ಶ್ರೀಗಳವರು ಮಹಾಕೂಟೇಶ್ವರನ ಸಾನ್ನಿಧ್ಯದಲ್ಲಿ ಶಿವಾರ್ಚನ, ಶಿವಾರ್ಪಿತ, ಶಿವಾನುಭವಗಳನ್ನು ಮುಗಿಸಿಕೊಂಡು ತಿರುಗಿ ಶಿವಯೋಗಮಂದಿರಕ್ಕೆ ದಯಮಾಡಿಸಿದರು.

ಹಾವೇರಿ, ಹಾನಗಲ್ಲ ಈ ಉಭಯ ಶ್ರೀಗಳವರು ಶಿವಯೋಗಮಂದಿರವೆಂಬ ಶಿಶುವನ್ನು ತಾಯಿತಂದೆಗಳಂತೆ ಜೋಪಾನ ಮಾಡುತ್ತಿದ್ದರು. ಲೌಕಿಕದಲ್ಲಿ ಮಕ್ಕಳ ಸಂರಕ್ಷಣೆಯ ಭಾರವು ತಂದೆಯ ಮೇಲಿರುವದಕ್ಕಿಂತಲೂ ತಾಯಿಯ ಮೇಲೆ ಹೆಚ್ಚು ಇರುವದು. ಹಡೆದ ತಾಯ್ತಂದೆಗಳನ್ನು ಬಿಟ್ಟು ಬಂದಿರುವ ಆ ಚಿಕ್ಕ ಚಿಕ್ಕ ಮಕ್ಕಳಿಗೆ ಬೇನೆ ಬೇಸರಿಕೆಗಳು ಬಂದರೆ ಅವರಿಗೆ ,ಬಿಸಿನೀರಿನಿಂದ ಜಳಕ ಮಾಡಿಸುವದು, ಹಾಸಿಗೆಯನ್ನು ಮಾಡಿ ಮಲಗಿಸುವದು, ತೊಡೆಯ ಮೇಲೆ ತಲೆಯಿಟ್ಟುಕೊಂಡು ಹಣೆಯೊತ್ತುವದು, ಔಷಧವನ್ನು ಕುಡಿಸುವದು, ಹಣ್ಣು ಹಂಪಲಗಳನ್ನು ತಿನ್ನಿಸುವದು ಇವೇ ಮೊದಲಾದ ಉಪಚಾರಗಳನ್ನು, ತಮ್ಮ ತಾಯಿಯನ್ನು ನೆನೆಸದ ರೀತಿಯಲ್ಲಿ, ಪಡೆದ ತಾಯಿಯಂತಿರುವ ಹಾವೇರಿ ಶ್ರೀಗಳವರೇ ಕೈಮುಟ್ಟಿ ಮಾಡುತ್ತಿದ್ದರು. ಒಂದೊಂದು ಸಲ ಮಕ್ಕಳು ಬೇನೆಯ ನೋವನ್ನು ತಾಳಲಾರದೆ ದುಃಖದಿಂದ ಅಳಹತ್ತಿದರೆ ಶ್ರೀಗಳವರು ತಾವೂ ಅವರ ಕೂಡ ಕಂಬನಿಗರೆಯುತ್ತಿದ್ದರು. ಅಷ್ಟು ಕೋಮಲಾಂತಃಕರಣವುಳ್ಳವರು ಶ್ರೀಗಳವರು.

ವೀರಶೈವ ಸಮಾಜೋದ್ಧಾರ, ವೀರಶೈವ ಮತೋದ್ಧಾರದ ಎಂದು ಹಗಲಿರಳೂ ಕನವರಿಸುವ ಈ ಉಭಯ ಶ್ರೀಗಳವರು ವಿಪುಲೈಶ್ವರ್ಯವುಳ್ಳ ತಮ್ಮ ತಮ್ಮ ಮಠಮಾನ್ಯಗಳಿಗೆ ನೀರೆರೆದು ಕೇವಲ ಶಿವಯೋಗಮಂದಿರ ಸಂಸ್ಥೆಯ ಅಭಿವೃದ್ಧಿಗಾಗಿ ಉಸಿರಿರುವನಕ ಹೆಣಗಾಡಿದರು. ಒಂದು ಸಲ ಉಭಯ ಶ್ರೀಗಳವರೂ ಕೂಡಿಕೊಂಡು ಮಂದಿರದ ಭಿಕ್ಷೆಯನ್ನು ಮಾಡಬೇಕೆಂದು ನಿಡಗುಂದಿಗೆ ದಯಮಾಡಿಸಿದರು. ನಿಡಗುಂದಿಯ ಸದ್ಭಕ್ತರು ಶ್ರೀ ಹಾವೇರಿ ಶ್ರೀಗಳಲ್ಲಿರುವ ಲಿಂಗಪೂಜಾನಿಷ್ಠೆ, ಜಿತೇಂದ್ರಿಯತ್ವ, ವಾಕ್ಸಿದ್ಧಿ, ವೈರಾಗ್ಯ ಮುಂತಾದ ದಿವ್ಯಗುಣಗಳನ್ನು ಕಂಡು ಅತಿಭಕ್ತಿಪುರಸ್ಸರವಾಗಿ ಊರ ಸಮೀಪದೊಳಗಿರುವ ಬಿಲ್ವವೃಕ್ಷದ ಬನದೊಳಗೆ ಲಿಂಗಪೂಜೆಗೆ ಅನುಕೂಲವಾಗುವಂತೆ ಒಂದು ಉತ್ತಮವಾದ ಮಠವನ್ನು ಕಟ್ಟಿಸಿಕೊಟ್ಟರು. ಶ್ರೀಗಳವರು ಪ್ರತಿದಿವಸ ತ್ರಿಕಾಲ ಲಿಂಗಾರ್ಚನೆಯನ್ನು ಮಾಡುತ್ತ, ಮಠಕ್ಕೆ ಬಂದ ಸದ್ಭಕ್ತರನ್ನು ಉಪದೇಶಾಮೃತದಿಂದಲೂ, ಸಂದರ್ಶನದಿಂದಲೂ ಪುನೀತರನ್ನಾಗಿ ಮಾಡುತ್ತಿದ್ದರು.*

* 'ಶಿವಯೋಗಿರಾಜ ಶ್ರೀ ಶಿವಬಸವ' ಗ್ರಂಥದಿಂದ.

CC-0. Jangamwadi Math Collection. Digitized by eGangotri

# ಶ್ರೀಗಳವರು ನಿಜಗುಣಶಾಸ್ತ್ರವು

## ಶ್ರೀ. ನಿ. ಪ್ರ. ರುದ್ರಸ್ವಾಮಿಗಳು, ರುದ್ರಾಕ್ಷಿಮಠ, ಹುಬ್ಬಳ್ಳಿ.

ಶಿವಶರಣರ ತತ್ವದ ಪುಣ್ಯಭೂಮಿಯಾದ ಈ ಕನ್ನಡ ನಾಡಿನಲ್ಲಿ ಜನ್ಮವೆತ್ತಿ ಶಿವಯೋಗ ಸಿದ್ಧಿಪಡೆದ ಮಹಾಶಿವಯೋಗಿಗಳವರಲ್ಲಿ ಹಾವೇರಿಯ ಲಿಂ. ಶ್ರೀ ಶಿವ ಬಸವ ಮಹಾಸ್ವಾಮಿಗಳವರೂ ಒಬ್ಬರಾಗಿದ್ದಾರೆ.

ಶ್ರೀಗಳವರು ಶಿವಪೂಜಾಲೋಲರಾಗಿದ್ದಂತೆ. ಶಿವಾನುಭವ ಪ್ರವಚನಗಳಲ್ಲಿಯೂ ಪಟುಗಳಾಗಿದ್ದರು. ಅವರ ಅನುಭವ ಪ್ರವಚನ ಬರಿಯ ಪುಸ್ತಕೀಯ ವಿದ್ಯೆಯಾಗಿರಲಿಲ್ಲ. ಶಿವಾನುಭವ ಅವರ ನಿತ್ಯ ಜೀವನದ ಉಸಿರಾಗಿದ್ದಿತು. ನಡೆದಂತೆ ನುಡಿದ, ನುಡಿದಂತೆ ನಡೆದ ಮಹಾಶಿವಯೋಗಿಗಳವರಾಗಿದ್ದರು. ಅವರ ಅನುಭವದ ನುಡಿ ನೇರವಾಗಿ ಹೃದಯಾಂತರಾಳದಿಂದ ಹೊರಹೊಮ್ಮುತ್ತಿತ್ತು. ಅಂತೆಯೇ ಅದು ಶ್ರೋತೃಗಳ ಮನದಲ್ಲಿ ನೇರವಾಗಿ ತಾಕಿ ನಾಟುತ್ತಿದ್ದಿತು ಅವರು ಲೀಲಾಮಯವಾಗಿ ಪ್ರವಚನವನ್ನು ಹೇಳುವಾಗ ಸ್ನಾನ, ಇಷ್ಟಲಿಂಗ ಪೂಜೆಯನ್ನು ಮರೆತು ಬಿಡುತ್ತಿದ್ದರು.

ಶ್ರೀಗಳವರು ಕಾಶಿಯಲ್ಲಿದ್ದು ಸಂಸ್ಕೃತ, ಕಾವ್ಯ-ಶಾಸ್ತ್ರಗಳಲ್ಲಿ ಪೂರ್ಣ ಪಾಂಡಿತ್ಯವನ್ನು ಪಡೆದು ಬಂದಿದ್ದರು. ಅವರು ಹಾನಗಲ್ಲ ಶ್ರೀಗಳವರ ಸತ್ ಸಹವಾಸದಿಂದ ಶರಣ ತತ್ವಗಳನ್ನೂ ತಿಳಿದು ಕೊಂಡುದಲ್ಲದೆ ಶ್ರೀ ನಿಜಗುಣರ ಶಿವ ಯೋಗ ಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸಮಾಡಿ, ಅರಿತು ನಿತ್ಯ ಜೀವನದಲ್ಲಿ ಅಳವಡಿಸಿ ಕೊಂಡಿದ್ದರು. ಹೆಸರಿಗೆ ತಕ್ಕಂತೆ ಇವರಲ್ಲಿ ಶಿವನ ಚಿತ್ಕಳೆಯ ತಿಳಿಬೆಳಗೂ, ಬಸವನ ಭಕ್ತಿಭಾವವೂ ತುಂಬಿ ತುಳುಕುತ್ತಿದ್ದವು. ಭಕ್ತರ ಮುಮುಕ್ಷುಗಳ ಉದ್ಧಾರವೇ ಅವರ ಜೀವನದ ಧ್ಯೇಯವಾಗಿದ್ದಿತು. ಶ್ರೀಗಳವರು ಅತ್ಯಂತ ಸುಲಭ ಸರಳ ಭಾಷೆಯಲ್ಲಿ ಸಾಮಾನ್ಯರಿಗೂ ತಿಳಿಯುವಂತೆ ಬೋಧಿಸುತ್ತಿದ್ದರು. ಇವರ ಬೋಧೆ ಎಲ್ಲರನ್ನೂ ಆಕರ್ಷಿಸಿದ್ದಿತು. ಅವರ ಮಾತುಗಳೆಂದರೆ ಲಿಂಗಕಿರಣಗಳು. ಅವುಗಳು ಸೂಜಿಗಲ್ಲಿನಂತೆ ಶ್ರೋತೃಗಳ ಮನವನ್ನು ಸೆಳೆದು ನಿರ್ಮಲಗೊಳಿಸುತ್ತಿದ್ದವು.

"ವಿಧಿವದಧೀತ ವೇದಾಂತ ನಿಷ್ಕಾಮಪರನಾಗಿ ಶರಣಾಗತನಾದ ಶಿಷ್ಯಂಗೆ ಮರಳಿ ಸಂಶಯಮುಂಕುರಿಸದಂತೆ ತತ್ವೋಪದೇಶಂಗೈದು ಅಜ್ಞಾನವಂ ಪರಿಹರಿಸುವವನೇ ಗುರುವೆಂದೆನ್ನಿಸಿಕೊಳ್ಳುವನು.*

---

* ವಿವೇಕ ಚಿಂತಾಮಣಿ– ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿಗಳಿಂದ ಪರಿಶೋಧಿಸಲ್ಪಟ್ಟದು; ಸನ್ ೧೮೬೩: ೧ನೆಯ ಪ್ರಕರಣ, ಪುಟಃ ೩೩

CC-0. Jangamwadi Math Collection. Digitized by eGangotri

ಎಂದು ನಿಜಗುಣ ಶಿವಯೋಗಿಗಳು ಹೇಳಿರುವಂತೆ ಶ್ರೀಗಳವರು ನಿಜವಾದ ಜ್ಞಾನ ಬೋಧಕ ಗುರುವರ್ಯರಾಗಿದ್ದರು. ಶಿವಯೋಗಮಂದಿರದ ಶಿವಯೋಗ ಸಾಧಕರಿಗೆ ಶ್ರೀಗಳವರ ಈ ಸುಜ್ಞಾನ ಬೋಧೆ ಬಹು ಸುಲಭವಾಗಿ ಅನಾಯಾಸವಾಗಿ ದೊರೆಯುತ್ತಿತ್ತು. ಶ್ರೀಗಳವರ ಪ್ರವಚನ ಪ್ರಭಾವ ಇಡಿಯ ನಾಡಿನಲ್ಲೆಲ್ಲ ಹರಡಿತ್ತು.

ಶ್ರೀಗಳವರ ಹೆಸರಿನಲ್ಲಿ ಹುದುಗಿರುವ ಶಿವಶಕ್ತಿಯು ತನ್ನ ಜ್ಞಾನಪ್ರಭೆಯನ್ನು ಸರ್ವ ಭಕ್ತರಿಗೆ ಶ್ರೀಗಳ ಕರ್ತೃತ ಶಕ್ತಿಯ ಮುಖವಾಗಿ ಬೀರಬೇಕೆಂದು ಸಂಕಲ್ಪಿಸಿತೋ ಎನ್ನುವಂತೆ, "ಅಜ್ಞಾನ ದಶೆಯಲ್ಲಿದ್ದ ಗುರುಗಳಿಗೆ ನಾವು ಲಿಂಗಾಂಗ ಸಾಮರಸ್ಯ ಜ್ಞಾನವನ್ನು ಬೋಧಿಸಿದರೆ, ಅವರ ದ್ವಾರಾ ಅದು ಎಲ್ಲ ಭಕ್ತರ ಮನೆಯನ್ನೂ, ಮನವನ್ನೂ ಮುಟ್ಟಿ, ಅವರ ಉದ್ಧಾರವೂ ವೀರಶೈವ ಧರ್ಮ ತತ್ವಗಳ ಪ್ರಸಾರವೂ ಆಗುವುದು" ಎಂದು ಬಗೆದು ನಾಡಿನಲ್ಲಿ ಸಂಚರಿಸಿ ಅದರಂತೆ ಬೋಧೆ ಮಾಡಿದರು. ಸಾವಿರಾರು ಗುರುಗಳಿಗೆ, ವಿರಕ್ತರಿಗೆ, ಭಕ್ತರಿಗೆ ಜ್ಞಾನದ ಬೆಳಗನ್ನು ಕರುಣಿಸಿದರು. ಅದರಿಂದಾಗಿ ಸಮಾಜದಲ್ಲಿ ನೂರಾರು ವರ್ಷಗಳಿಂದ ಮನೆ ಮಾಡಿಕೊಂಡಿದ್ದ ಮರವೆಯ ಕಗ್ಗತ್ತಲು ಹರಿದು ಹೋಗಿ ಅರುವಿನ ಬೆಳಕು ಮೂಡಿ ಬರುವಂತಾಯಿತು.

ಭಕ್ತರ ಉದ್ಧಾರವೇ ತಮ್ಮ ಜನ್ಮಸಾಫಲ್ಯವೆಂದು ಕೃತಸಂಕಲ್ಪರಾಗಿದ್ದ ಹಾನಗಲ್ಲ ಶ್ರೀ ಕುಮಾರ ಮಹಾಸ್ವಾಮಿಗಳವರು ಶ್ರೀಗಳವರ ಭಕ್ತಿ, ಜ್ಞಾನ, ಕ್ರಿಯೆಗಳ ಸಮನ್ವಯ ಶಕ್ತಿಯನ್ನು ಕರ್ತೃತ್ವವನ್ನು ಅರಿತು ಅವರ ಈ ಜ್ಞಾನ ಪ್ರಸಾರ ಕಾರ್ಯದಲ್ಲಿ ಸಹಭಾಗಿಯಾದರು. ಎಣ್ಣೆ–ಬತ್ತಿಯಿಂದ ಸಿದ್ಧವಾದ ಪ್ರಣತಿಗೆ ಜ್ಯೋತಿ ತಗುಲಿದಂತಾಯಿತು. ಉಭಯ ಶಿವಯೋಗಿಗಳವರ ಜ್ಞಾನ ಜ್ಯೋತಿಯು ಅಖಂಡ ಕರ್ನಾಟಕವನ್ನೇ ಬೆಳಗಲು ಪ್ರಾರಂಭಿಸಿತು.

ಅಂದಿನಿಂದ ಶ್ರೀಗಳು ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳವರಿಗೆ ಬಲಗೈಯಾಗಿ ಕಾರ್ಯ ಮಾಡಿದರಲ್ಲದೆ, ಕಡೆತನಕ ಶ್ರೀ ಕುಮಾರ ಸ್ವಾಮಿಗಳ ನೆರಳಾಗಿ ಯಾವ ಹೆಸರಿಗೂ ಗೌರವಕ್ಕೂ ಆಶಿಸದೆ, ಬಸವಣ್ಣನಿಗೆ ಚೆನ್ನಬಸವಣ್ಣನು ನೆರವಾಗಿದ್ದಂತೆ, ಎಲ್ಲ ರೀತಿಯಿಂದ ತನು–ಮನ–ಧನಗಳಿಂದ ತ್ರಿಕರಣ ಪೂರ್ವಕವಾಗಿ, ಕರ್ಮಯೋಗಿಗಳಾಗಿ ಸಮಾಜ ಸೇವೆಯನ್ನು ಮಾಡಿದರು.

ಇಂದು ತಲೆಯೆತ್ತಿ ನಿಂತಿರುವ ಶಿವಯೋಗಮಂದಿರವು ಶ್ರೀಗಳವರ ಪ್ರಯತ್ನದ ಫಲವನ್ನು ಅವರ ಅದ್ಭುತ ಕಾರಣಿಕ ಶಕ್ತಿಯನ್ನೂ ಸಾರಿ ಹೇಳುತ್ತಲಿದೆ. ಶಿವಯೋಗಮಂದಿರದ ಸಲುವಾಗಿ ಶ್ರೀಗಳವರು ಹಗಲಿರುಳು ಶ್ರಮಿಸಿದ್ದನ್ನು ವರ್ಣನೆ ಮಾಡಲು ಬರುವಂತಿಲ್ಲ. ಅದನ್ನು ಅವರ ಸಾನ್ನಿಧ್ಯದಲ್ಲಿದ್ದ ನವಿಲುಗುಂದ

CC-0. Jangamwadi Math Collection. Digitized by eGangotri

ಗವಿಮಠದ ಶ್ರೀ ಬಸವಲಿಂಗ ಸ್ವಾಮಿಗಳವರನ್ನು, ಹಾಲಕೆರೆಯ ಶ್ರೀ ಅನ್ನದಾನೀಶ್ವರ ಸ್ವಾಮಿಗಳವರನ್ನೂ ಪ್ರತ್ಯಕ್ಷ ಕೇಳಿ ತಿಳಿಯಬೇಕು.

ಮಂದಿರದ ಸಲುವಾಗಿ ಶ್ರೀಗಳವರು ತಮ್ಮ ತನು-ಮನಗಳನ್ನೂ ಗಂಧದ ಕೊರಡಿನಂತೆ ಸವೆಸಿದ್ದಾರೆ. ಆ ಸಂಸ್ಥೆಯ ಸಲುವಾಗಿ ಅವರು ಕರ್ನಾಟಕದಲ್ಲಿ ಸಂಚರಿಸದ ಗ್ರಾಮಗಳಿಲ್ಲ, ನಗರಗಳಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಶ್ರೀಗಳವರ ತಪಃಪ್ರಭಾವ ಮತ್ತು ಬೋಧೆಯ ಮಹಿಮೆಯಿಂದಾಗಿ ಎಲ್ಲರೂ ಭಕ್ತಿಯಿಂದ ಕಿಂಕರರಾಗಿ ಸಂಸ್ಥೆಗೆ ಎಲ್ಲ ತೆರನಾಗಿ ಸಹಾಯ-ಸೇವೆಯನ್ನು ಸಲ್ಲಿಸಿ ಕೃತಾರ್ಥರಾದರು.

ಶ್ರೀಗಳವರು ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳ ಸತ್ಯ ಸಂಕಲ್ಪದಂತೆ ಗುರು-ಜಂಗಮ ಪೀಠಗಳ ಅಧಿಪತಿಗಳಾಗತಕ್ಕ ಸಾಧಕರಿಗೆ ವೀರಶೈವ ಧರ್ಮ ತತ್ವಗಳನ್ನು ಲಿಂಗಾಂಗ ಸಾಮರಸ್ಯರೂಪ ಶಿವಯೋಗ ಜ್ಞಾನವನ್ನು ಮಾಡಿಕೊಟ್ಟು, ಅವರಲ್ಲಿ ಭಕ್ತಿ-ಜ್ಞಾನ-ಕ್ರಿಯೆಗಳ ಬಿತ್ತುಗಳನ್ನು ಬಿತ್ತಿದರು. ಆಗ ಶ್ರೀಗಳವರು ಸಾಧಕರ ಮನೋಭೂಮಿಯಲ್ಲಿ ಬಿತ್ತಿದ ಅರುವಿನ ಬೀಜಗಳೇ ಪ್ರತಿಫಲಿಸಿ ಇಂದು ಕರ್ನಾಟಕದ ಮೂಲೆಮೂಲೆಗಳಲ್ಲಿರುವ ಊರುಗಳ ಮಠಮಾನ್ಯಗಳಲ್ಲಿ ಪ್ರಮುಖರಾಗಿ, ಹಿರಿಯರಾಗಿ ಸಮಾಜ ಸೇವೆಯನ್ನೂ ನಾಡಿನ-ಹಿತಕಾರ್ಯಗಳನ್ನು ಅವಿರಳವಾಗಿ ಮಾಡುತ್ತಿರುವುದನ್ನು ಕಣ್ಣಾರೆ ಕಾಣುತ್ತಲಿದ್ದೇವೆ.

ಶ್ರೀಗಳವರು ಶಿವಯೋಗಮಂದಿರ ಸಂಸ್ಥೆಯ ಅಭಿವೃದ್ಧಿಗಾಗಿ ಧನ-ಧಾನ್ಯಗಳನ್ನು ಬೇಡಿ ತಂದರು; ಭಕ್ತರ ಭಕ್ತಿಯನ್ನು ಕೊಂಡರು. ಆದರೆ ಅವರು ತಮಗಾಗಿ ಏನನ್ನೂ ಬಯಸಿದವರಲ್ಲ. ಅವರು ಶಿವನಲ್ಲಿ ಬೇಡುತ್ತಿದ್ದುದು ಒಂದನ್ನೆ! ಅದು ಶಿವನ ಅನುಭವ, ಅರುವಿನ ಕರಗದ ನಿಚ್ಚ ಸಿರಿ. ಶ್ರೀಗಳವರು ಪ್ರತಿನಿತ್ಯವೂ ಲಿಂಗಾರ್ಚನೆಯ ಕಾಲದಲ್ಲಿ ಶ್ರೀ ನಿಜಗುಣರ ಈ ಸ್ವರವಚನವನ್ನು ಬಹು ತನ್ಮಯತೆಯಿಂದ ಹಾಡುತ್ತಿದ್ದರು :

ರಾಗ : ಗೌರಿ

ಬೇಡುವೆನಭವ ನಿಮ್ಮನುಭವ ಭವದೊಳು
ಮಾಡೆನಗೊಲಿದು ಸುಗುಣಸಂತತಿಯನಿಂತು ॥ ಪಲ್ಲ ॥

ಎಡರಡಸಿದ ವೇಳೆಯೊಳು ಧೈರ್ಯವನುಸಿರಿ
ಪಡೆದು ಜೀವಿಸುವೆಡೆಯೊಳು ವಿನಯವನು
ಕಡು ಜವ್ವನದೊಳು ವಿಕೃತಿಯೋರದಿಹುದನು
ಪಿಡಿದ ನೇಮವನೆಡೆವಿಡದತಿ ಛಲವನು ॥ ೧ ॥

CC-0. Jangamwadi Math Collection. Digitized by eGangotri

ಅಸುವಳಿಯಲಿ ದೇಹಿಯೆನಲಿಲ್ಲದಘಟನು
ಪುಸಿಯನೆಲ್ಲಿಯು ನುಡಿಯದ ಸತ್ತ್ವವಿದನು
ಮಸಳಿಸದಿಹ ಪುಣ್ಯಮಯ ಕೀರ್ತಿಯನು ಶಾಂತ
ದೊಸೆದಹುದೆಂದು ಬಣ್ಣಿಸುವ ವರ್ತನವನು ॥ ೨ ॥

ವಿತರಣದೊಡನೆ ಭೋಗಿಸುವರ್ಥದೊದವನು
ಶ್ರುತಿಬೋಧನೆಯೊಳುಪರತಿಯಿಲ್ಲದರಿವನು
ಹಿತವಚನವೆ ತೊಡವೆನಿಪ ದಾನವನು
ನುತಿವೆತ್ತು ಕೈಸಾರುತಿಹ ಮನೋರಥವನು ॥ ೩ ॥

ಕೋಪವಂಟದ ತಪವನು ಪರವಧುವಿನ
ರೂಪುಗಂಡೆಳಸದ ಕರಣ ಜಯುವನು
ತಾಪವಡರಿ ಕೆಡಸದ ಸಾರಸುಖವನು
ಕಾಪಟ್ಯವಿಲ್ಲದಾಶ್ರಮಧರ್ಮರತಿಯನು ॥ ೪ ॥

ಧರೆಯೊಳತ್ಯಧಿಕವೆನಿಪ ಶಾಂತಿಮುತವನು
ಕರುಣವಿದ್ಯೆಗಳುಳ್ಳ ಗುರುಭಜನೆಯನು
ಪರತರ ಮುಕ್ತಿದೋರುವ ಶಾಸ್ತ್ರವನು ಕಂತು-
ಹರ ಶಂಭುಲಿಂಗ ನಿಮ್ಮಡಿಯ ಭಕ್ತಿಯನು§ ॥ ೫ ॥

ಇದು ಶ್ರೀಗಳವರ ಬಹು ಮೆಚ್ಚಿನ ಪದವಾಗಿತ್ತು. ವೀರಶೈವರ ಶಿವಯೋಗ ಮಾರ್ಗದ ಸಾರವೇ ಈ ಪದ್ಯದಲ್ಲಿ ಎರಕಗೊಂಡಿದೆಯೆಂದು ಅವರು ಸಾಧಕರಿಗೆ ಬೋಧಿಸುತ್ತಿದ್ದರಂತೆ. ಶ್ರೀಗಳವರು 'ಲೇಸೆನಿಸುವ ಗುಣಗಣ'ದವರಾಗಿ 'ಮುಕ್ತಿ ಕಾಂತೆಯ ರತಿ' ಯನ್ನು ಪಡೆದ ಪರಮ ಶಿವಯೋಗಿಗಳು. ,ಅವರು 'ಮಾಯಾ ಸತಿ'ಯ ಬೆಡಗಿಗೆ ಬೆರಗಾಗದ ಮಹಾವೀರ ವಿರಕ್ತರು. ಅವರು ಮಾಯಿಕ ಸಂಸಾರವನ್ನು ತ್ಯಜಿಸಿ ಅಧ್ಯಾತ್ಮ ಕುಟುಂಬವನ್ನು ಕಟ್ಟಿದವರು. ಶ್ರೀಗಳವರ ಸಂಸಾರ ಶ್ರೀ ನಿಜಗುಣರ ಮಾತಿನಲ್ಲಿ ಇಂತಿದಿತು :

ರಾಗ : ಮಾಳವ

ಯೋಗಿಗೆ ಸಂಸಾರ ಸಂಗವದಿಲ್ಲ
ವಾಗಿ ತಿಳಿದವರು ಪುಸಿ ನೋಡು ರಮಣಿ ॥ ಪಲ್ಲ ॥

---

§ ಕೈವಲ್ಯ ಪದ್ಧತಿ : ನೀತಿ ಕ್ರಿಯಾಚರ್ಯ ಪ್ರತಿಪಾದನ ಸ್ಥಲ;

CC-0. Jangamwadi Math Collection. Digitized by eGangotri

ವರವಿದ್ಯೆಯೆಂಬ ಕುಲವನಿತೆಯುಂಟಗಲದ
ಪರಿತೋಷವೆಂಬ ಮೋಹದಣುಗನುಂಟು
ವಿರತಿಯೆಂಬನುಕೂಲ ಜನಮುಂಟು ಕ್ಷಮೆಯೆಂಬ
ಚರನುಂಟು ಶಾಂತಿಯೆಂಬ ಸಖನ ಸರಸಮುಂಟು ॥ ೧ ॥

ನುತಭಕ್ತಿಯೆಂಬ ಮಾತೆಯುಂಟು ಸುಚರಿತ್ರವೆಂಬ
ಪಿತನುಂಟು ಸತ್ಯವೆಂಬ ಕುವರಿಯುಂಟು
ಹಿತವಾದ ನಂಬಿಗೆಯೆಂಬಾಪ್ತಜನರ ಸೇವೆಯುಂಟು
ಮತಿಯೆಂಬ ಗೇಹಮುಂಟಾಚಾರವೆಂಬ ಕ್ಷೇತ್ರಮುಂಟು ॥ ೨ ॥

ದಾಸಿಯುಂಟಹಿಂಸೆಯೆಂಬ ದಾಸನುಂಟಸ್ತೇಯವೆಂಬ
ಲೇಸನೀವ ಧರ್ಮವೆಂಬ ವಾಹನಮುಂಟು
ಭಾಸುರ ಮೈತ್ರ್ಯಾದಿಯೆಂಬ ಪೌತ್ರರುಂಟು ಮುಕ್ತಿಯೆಂಬ
ದೇಶಮುಂಟು ಶಂಭುಲಿಂಗವೆಂಬ ಗುರು ತನಗುಂಟು ॥ ೩ ॥

ಇಂತಹ ಶಾಶ್ವತ ಸಂಸಾರವನ್ನು ಹೊಡಿ ಬಾಳುವ ಮಾರ್ಗವನ್ನು ಶ್ರೀಗಳವರು ಕಂಡುಕೊಂಡು ಅದನ್ನು ಮುಮುಕ್ಷುಗಳಿಗೆ, ಸಾಧಕರಿಗೆ ಬೋಧಿಸುತ್ತಿದ್ದರು. ಸಾಧನೆಯಿಂದ ನಿಜ ಮುಕ್ತಿಯನ್ನು ದೊರಕಿಸಿ ಅದನ್ನು ಬೇಡಿದವರಿಗೆ ಕರುಣಿಸಿದ ಕರುಣಾಳು ಯೋಗಿಗಳವರು.

"ದೇಶಕಾಲ ಕಲ್ಪಿತ ಲೌಕಿಕಾಚಾರಂಗಳಂ ಮೀರಿ, ಸ್ವತಂತ್ರ ಶೀಲನಾಗಿ, ಶಿವಾತ್ಮರ್ಗೆ ಭೇದಭ್ರಾಂತಿದೋರದಾತನಾಗಿ, .......... ಲಿಂಗಾಂಗಸಂಗಾದ್ವೈತ ಭಾವನೆಯ ಭಯಃವರ್ಜಿತನಾಗಿ, ಸವಶಕ್ತ ಶಿವೋಪಾಶ್ರಯ ಬಲದಿಂ ಅಘಟನಾ ಘಟನ ಸಮರ್ಥಮಪ್ಪ ಧೈರ್ಯಸಂಪನ್ನನಾಗಿ, ಹರ್ಷವಿಷಾದಗಳಿಗೆರಗದ ಶಾಂಭವ ವಿದ್ಯೆಯಲ್ಲಿ ರಮಿಸುವ ಶೈವನಪ್ಪುದರಿಂ ತತ್ಸಂಜ್ಞೆಯುಳ್ಳಾತನಾಗಿ ಜಗತ್ಪೂಜ್ಯ ನಪ್ಪಾತನೇ ವೀರಶೈವನಪ್ಪಂ"† ಎಂಬ ಶ್ರೀ ನಿಜಗುಣರು ಹೇಳಿದ ವೀರಶೈವ ಲಕ್ಷಣವು ಶ್ರೀಗಳವರಲ್ಲಿ ಅಕ್ಷರಶಃ ಅನ್ವಯಿಸುತ್ತಿದ್ದಿತು.

ಶ್ರೀಗಳವರು 'ಕೈವಲ್ಯ ಪದ್ಧತಿ' 'ವಿವೇಕ ಚಿಂತಾಮಣಿ' ಮತ್ತು 'ಪಾರಮಾರ್ಥ ಪ್ರಕಾಶಿಕೆ' ಮೊದಲಾದ ಶ್ರೀ ನಿಜಗುಣರ ಕೃತಿಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದರು; ಶ್ರೀ ನಿಜಗುಣರ ಶಾಸ್ತ್ರವನ್ನು ಅರಿತು, ಜೀವನದಲ್ಲಿ ಅಳವಡಿಸಿಕೊಂಡು ನಿತ್ಯ ನಿಜೈಕ್ಯ ಶಿವಯೋಗಿಗಳಾಗಿದ್ದರು. ಶ್ರೀಗಳವರು ಉಳಿದವ

† ವಿವೇಕ ಚಿಂತಾಮಣಿ; ೨ನೆಯ ಪರಿಚ್ಛೇದ

CC-0. Jangamwadi Math Collection. Digitized by eGangotri

ರಂತೆ ಆತ್ಮಸಾಮರ್ಥ್ಯವಿಲ್ಲದೆ ಕೇವಲ ಉಪದೇಶಮಾಡಿ ಗುರುಗಳೆನಿಸಿಕೊಳ್ಳುವ ಹಂಬಲಕ್ಕೆ ಬೀಳದೆ, ಆತ್ಮಬಲವನ್ನೂ ಶಿವಯೋಗ ಸಾಧನೆಯಿಂದ ಸಾಧಿಸಿ ನಿಜ ಗುರುಗಳಾಗಿ ನಮ್ಮೆಲ್ಲರಿಗೆ ಬಾಳಬಟ್ಟೆಯ ದೀಪವಾಗಿ ಇಂದಿಗೂ ಬೆಳಗುತ್ತಲಿದ್ದಾರೆ. ಆ 'ಶಿವಬಸವ ಪ್ರಕಾಶ' ನಮ್ಮೆಲ್ಲರ ಬಾಳನ್ನು ಬೆಳಗಲೆಂದು ಪ್ರಾರ್ಥಿಸುವ.

CC-0. Jangamwadi Math Collection. Digitized by eGangotri

# ಶ್ರೀಗಳವರ ಸಂಗೀತಪ್ರೇಮ

ಉಭಯಗಾನ ವಿಶಾರದ, ತ್ರಿಭಾಷಾಕವಿ,
ಪಂ. ಪುಟ್ಟರಾಜ ಗವಾಯಿಗಳು, ವೀರೇಶ್ವರ ಪುಣ್ಯಾಶ್ರಮ, ಗದಗ.

ಶ್ರೀ ಶಿವಯೋಗಿ ಶಿವಬಸವ ಮಹಾಸ್ವಾಮಿಗಳವರ ಸಂಗೀತಪ್ರೇಮವು ಅವರ್ಣನೀಯವಾದುದು, ಅದು ಅವರ ಲಿಂಗಾನಂದವಾಗಿ ವ್ಯಕ್ತವಾಗುತ್ತಿತ್ತು. ಘಟಿಸಿದ ಚರಿತೆಯೊಂದು ನೆನಪಾಗುತ್ತಿದೆ. ಒಂದು ಸಲ ಮಹಾಸ್ವಾಮಿಗಳವರು ನನ್ನನ್ನು ಕರೆಯಿಸಿಕೊಂಡು ತಮ್ಮ ಸನ್ನಿಧಿಯಲ್ಲಿ ನನ್ನ ಗಾಯನವನ್ನು ಏರ್ಪಡಿಸಿದರು. ಮೂರು ತಾಸುಗಳ ವರೆಗೆ ಸಂಗೀತವನ್ನು ಕೇಳಿ ನಾದಾನಂದದಲ್ಲಿ ತಲ್ಲೀನರಾಗಿ ತಮ್ಮ ಲಿಂಗಾರ್ಚನೆಯನ್ನು ಕೂಡ ಮರೆತುಬಿಟ್ಟರು, ಹಾಗೂ ಶಿವಪೂಜೆಗೆಂದು ಕರೆಯ ಬಂದ ಸೇವಕರಿಗೆ ತಮ್ಮ ಲಿಂಗತೃಪ್ತಿಯು ನಿತ್ಯದ ಲಿಂಗಾರ್ಚನೆಗಿಂತಲೂ ವಿಶೇಷವಾಯಿತೆಂದು ಹೇಳಿ ಕಳುಹಿದರು.

ಶ್ರೀಗಳವರು ಸಂಗೀತವನ್ನು ಕೇಳಿ ಆನಂದ ಪಡುತ್ತಿದ್ದರಷ್ಟೇ ಅಲ್ಲ, ಹಾಡಿಯೂ ಆ ಸಂಗೀತದ ಆನಂದವನ್ನು ಅನುಭವಿಸುತ್ತಿದ್ದರು. ಒಮ್ಮೊಮ್ಮೆ ಹಾಡುವವರು ಇಲ್ಲದಾಗ, ತಮಗೆ ಹಾಡಲು ಸಾಧ್ಯವಿಲ್ಲದಾಗ, ಲಿಂಗವನ್ನು ನಿರೀಕ್ಷಿಸುತ್ತ ತಮ್ಮ ಹೃದಯದಲ್ಲಿರುವ ಅನಾಹತಚಕ್ರದಿಂದ ಹೊರಹೊಮ್ಮುವ ಅನಾಹತ ನಾದದಿಂದಲೇ ತೃಪ್ತಿಪಡೆಯುತ್ತಿದ್ದರು. ಈ ಅನಾಹತನಾದದಿಂದಲೇ ಆಹತ ನಾದವು ಜನಿಸಿದುದೆಂದು ಶ್ರೀಗಳವರು ತಿಳಿದವರಾಗಿದ್ದರು. ಅಂತೆಯೆ, ಅವರು ವಾದ್ಯಗಳನ್ನು, ಅದರಲ್ಲಿಯೂ ತಂಬೂರಿಯನ್ನು ಕಂಡರೆ ಬಹಳವಾಗಿ ಪ್ರೀತಿಸುತ್ತಿದ್ದರು. ತಂಬೂರಿ ಹಿಡಿದು ಹಾಡುವದೆಂದರೆ ಅವರಿಗೆ ಬಹು ಆನಂದ. ಶ್ರೀಗಳವರು ಶಿವಸ್ತೋತ್ರ ಗೀತಗಳನ್ನು ಬಹುವಾಗಿ ಮೆಚ್ಚುತ್ತಿದ್ದರು. ಶಿವಗೀತಗಳನ್ನು ಹಾಡುವದರಿಂದ ನಾದಸಾಕ್ಷಾತ್ಕಾರವಾಗಿ ಪ್ರೇಮಮಯ ಶಿವನು ಅಭಿವ್ಯಕ್ತನಾಗುವನು ಎಂಬುದು ಶ್ರೀಗಳವರ ಅನುಭವವಾಣಿ. ಶಿವನು ನಾದಶರೀರಿಯೆಂಬುದನ್ನು ಶ್ರೀಗಳವರು ಅನುಸಂಧಾನದಿಂದಲೂ ಶಾಸ್ತ್ರಜ್ಞಾನ ಬಲದಿಂದಲೂ ತಿಳಿದವರಾಗಿದ್ದರು. ಅವರು ಅಪ್ಪಣೆ ಕೊಡಿಸಿದ ವಿಷಯವನ್ನೇ ಸಂಕ್ಷೇಪವಾಗಿ ನಾನಿಲ್ಲಿ ಬರೆಯುವದು.

ಶಿವನೇ ನಾದಸ್ವರೂಪನು. ಆ ನಾದದಿಂದಲೇ ಸಂಗೀತದ ಉತ್ಪತ್ತಿಯಾಯಿತು. ಇದನ್ನು ಸರ್ವಮತೀಯರು ಒಪ್ಪುತ್ತಾರೆ. ಸಂಗೀತ ಪ್ರಸಾರಕರಲ್ಲಿ ಪ್ರಸಿದ್ಧ ಮಹಾತ್ಮರಾದ ಶ್ರೀ ತ್ಯಾಗರಾಜರ ಕೃತಿಯು ಇದಕ್ಕೆ ನಿದರ್ಶನವಾಗಿದೆ:

CC-0. Jangamwadi Math Collection. Digitized by eGangotri

ನಾದತನುಮನಿಶಂ ಶಂಕರಂ ನಮಾಮಿ ಮನಸಾ ಶಿರಸಾ ॥ ಪ ॥
ಮೋದಾಕಾರಂ ನಿಗಮೋದ್ಧಾರಂ ಸಾಮವೇದಸಾರಂ ಸಾರಂ ॥ ೧ ॥
ಸದ್ಯೋಜಾತಾದಿ ಪಂಚವಕ್ತ್ರಜ ಸರಿಗಮಪದನಿ ವರ ಸಪ್ತಸ್ವರ ॥ ೨ ॥
ವಿದ್ಯಾಲೋಲಂ ವಿದಿತಕಾಲಂ ವಿಮಲಹೃದಯ ತ್ಯಾಗರಾಜಂ ರಾಜಂ॥೩॥

ಈ ತ್ಯಾಗರಾಜ ಕೃತಿಯು ಸಂಸ್ಕೃತದಲ್ಲಿದ್ದರೂ ಬಹು ಸುಲಭ ಶೈಲಿಯಲ್ಲಿ ರಚಿತವಾಗಿದೆ. ಅರ್ಥವೂ ಸ್ಪಷ್ಟವಾಗಿದೆ ನಾದ ಶರೀರಿಯಾದ, ಆನಂದ ಸ್ವರೂಪ ನಾದ, ನಿಗಮೋದ್ಧಾರಕನಾದ, ಸಾಮವೇದಕ್ಕೆ ಮೂಲನಾದ, ಸದ್ಯೋಜಾತ-ವಾಮ ದೇವಾದಿ ಐದು ಮುಖಗಳಿಂದ ಉತ್ಪನ್ನವಾದ ಸರಿಗಮಾದಿ ಏಳು ಸ್ವರಗಳ ಸಂಗೀತ ವಿದ್ಯೆಯಲ್ಲಿ ಲೋಲನಾದ, ತೇಜಸ್ವಿಯಾದ ನಿರ್ಮಲಹೃದಯವುಳ್ಳ ತ್ಯಾಗರಾಜೇ ಶ್ವರನನ್ನು ಶಿರಬಾಗಿ ಮನವೊಲಿದು ನಮಸ್ಕರಿಸುತ್ತೇನೆ ಎಂದು ತ್ಯಾಗರಾಜರು ಅನನ್ಯ ಭಕ್ತಿಭಾವದಿಂದ ನಾದವಿದ್ಯೆಗೆ ಅಧೀಶ್ವರನಾದ ಶಿವನನ್ನು ಕೀರ್ತಿಸಿರುವರು. ತಮಿಳು ನಾಡಿನಲ್ಲಿ ತ್ಯಾಗರಾಜೇಶ್ವರವೆಂಬ ಶಿವಲಿಂಗವು ಪ್ರಸಿದ್ಧವಾಗಿದೆ. ಕವಿಯು ಆ ಶಿವಲಿಂಗವನ್ನು ಕುರಿತು ಭಜಿಸಿದಂತಿದೆ. ಇದರಿಂದ, ಶಿವನು ನಾದಮಯ ನಿಷ್ಟೇ ಅಲ್ಲ, ಅವನು ಸಂಗೀತ ವಿದ್ಯೆಗೂ ಮೂಲನಾಗಿರುವನೆಂಬ ತಾತ್ಪರ್ಯವು ಸ್ಫುಟವಾಗುತ್ತದೆ.

ಈ ನಾದೋತ್ಪತ್ತಿಯ ವಿಷಯವಾಗಿ ಇನ್ನು ಕೆಲವರು ಹೀಗೆ ಬರೆಯುತ್ತಾರೆ. ಓಂಕಾರದಿಂದಲೆ ನಾದ ಮತ್ತು ವರ್ಣಗಳು, ಆ ನಾದದಿಂದ ಸಪ್ತಸ್ವರಗಳ ಉಗಮ ವಾಯಿತು. ಆ ಸಪ್ತಸ್ವರಗಳೇ 'ಸ ರಿ ಗ ಮ ಪ ದ ನಿ' ಸ್ವರಗಳಲ್ಲಿ ಮುಖ್ಯವಾದವು ಗಳು. 'ಸ ಮ' ಈ ಎರಡು ಸ್ವರಗಳಿಂದಲೇ ಸಾಮವೇದದ ಉತ್ಪತ್ತಿಯಾಯಿತು. ಈ ಎರಡು ಸ್ವರಗಳೇ ಸಂಗೀತಕ್ಕೆ ಮುಖ್ಯವಾದುವಾದ್ದರಿಂದ, ಅವೇ ಗ್ರಾಮಸ್ವರ ಗಳೆಂದು ಪ್ರಸಿದ್ಧವಾಗಿ ಹದಿನಾರು ಸ್ವರಗಳ ಉಗಮಕ್ಕೆ ಕಾರಣವಾಗಿವೆ. ಅವು ಗಳಿಂದಲೇ ರಸರಂಜಕಗಳಾದ ಇಪ್ಪತ್ತೆರಡು ಶ್ರುತಿಗಳು ಉಂಟಾದವು. ಅವುಗಳಿಂದ ಎಪ್ಪತ್ತೆರಡು ಕರ್ತೃರಾಗಗಳು ಜನಿಸಿದವು. ಇವುಗಳಲ್ಲಿಯ ಒಂದೊಂದು ರಾಗ ದಿಂದ ನಾಲ್ಕು ನಾಲ್ಕು ಸಾವಿರ ಜನ್ಯರಾಗಗಳು ವೈದಾಳಿ ವಿಸ್ತಾರ ಹೊಂದಿದವು. ಅದೇ ಓಂಕಾರದಿಂದ ಉತ್ಪನ್ನವಾದ ವರ್ಣಸಮುದಾಯವು ಶಬ್ದಮಯವಾಗಿ, ಶಬ್ದವು ಪದಮಯವಾಗಿ, ಪದವು ಗೀತವೆಂಬ ಹೆಸರನ್ನು ಧರಿಸಿ, ಈ ರಾಗಗಳಲ್ಲಿ ಸಮರಸವಾಗಿ ಸಪ್ತಸ್ವರ ವಿದ್ಯೆಗೆ ಸಂಗೀತ ವಿದ್ಯೆಯೆಂಬ ಹೆಸರನ್ನು ಕೊಟ್ಟಿತು. ಆ ಓಂಕಾರವು ಶಕ್ತಿವಿಶಿಷ್ಟ ಸ್ವರೂಪವಾಗಿದೆ. ಅದರಿಂದಲೇ ಪಂಚಾಕ್ಷರ ಮಹಾಮಂತ್ರ (ನಮಃ ಶಿವಾಯ) ಉದಿಸಿದೆ. ಆ ಓಂಕಾರ ವಿಶಿಷ್ಟವಾದ ಪಂಚಾಕ್ಷರ ಮಹಾ ಮಂತ್ರವೇ ಪೃಥಿವ್ಯಾದಿ ಷಟ್‌ತತ್ವಗಳಿಗೆ ಮೂಲವಾಗಿದೆ. ಆ ಷಟ್‌ತತ್ತ್ವಗಳು

CC-0. Jangamwadi Math Collection. Digitized by eGangotri

ಜಗತ್ತಿಗೆ ಮೂಲವಾಗಿವೆ. ಈ ಜಗವೆಲ್ಲವೂ ನಾದಮಯವಾಗಿದೆ. ಅಂತೆಯೇ ಬಿದಿರಿನಲ್ಲಿಯೂ, ಕಟ್ಟಿಗೆಯಲ್ಲಿಯೂ, ಲೋಹದಲ್ಲಿಯೂ, ಮಣ್ಣಿನಲ್ಲಿಯೂ ಅನೇಕ ವಾದ್ಯಗಳು ಉತ್ಪನ್ನವಾಗಿ ಮನುಷ್ಯರ ಕೈವಶವಾದವು. ಆಗ ಸರ್ವರೂ ಹಾಡುತ್ತ ಬಾರಿಸುತ್ತ ಆನಂದದಲ್ಲಿ ತಾವು ನಲಿಯುವುದಲ್ಲದೆ ಪ್ರಾಣಿಗಳನ್ನು ಸಹ ನಲಿಸಿದರು. ಆಗ ಸಂಗೀತಕ್ಕೆ ನೃತ್ಯವು ಕೂಡಿ ಜೊತೆಯಾಗಿ ಲಯಕ್ಕೆ ಪ್ರಾಧಾನ್ಯ ದೊರೆಯಿತು. ಆ ಲಯದಿಂದಲೇ ತಾಳೋತ್ಪತ್ತಿಯಾಯಿತು. ತಾಳಗಳು ಮೊದಲು ಏಳಾಗಿ, ಏಳ ರಿಂದ ಮೂವತ್ತೈದಾಗಿ, ಅವೇ ಈಗ ವರ್ಣಿಸಿದ ದೇಶಿಯ ಸಂಗೀತಕ್ಕೆ ಕಾರಣ ವಾದವು. ನಾದವು ಶಿವಶಕ್ತಿಮಯವಾಗಿರುವಂತೆ, ತಾಳವೂ ಶಿವಶಕ್ತಿಸ್ವರೂಪ ವಾಗಿದೆ :

ತಾಕಾರಶ್ಶಂಕರಃ ಪ್ರೋಕ್ತೋ ಲಕಾರಶ್ಶಕ್ತಿರುಚ್ಯತೆ ।
ಶಿವಶಕ್ತಿಸಮಾಯೋಗಾತ್ತಾಲ ಇತ್ಯಭಿಧೀಯತೇ ॥

—ಸಂಗೀತವಿದ್ಯಾದರ್ಪಣ

'ತಾ' ಅಕ್ಷರವು ಶಿವವಾಚಕವಾಗಿಯೂ, 'ಲ' ಅಕ್ಷರವು ಶಕ್ತಿವಾಚಕ ವಾಗಿಯೂ ಇರುವುದರಿಂದ ತಾಲವೆಂಬ ಹೆಸರಿಗೆ ಶಿವಶಕ್ತಿಯರ ಏಕತ್ವವೇ ಮೂಲ ವಾಗಿದೆ.

ಹೀಗೆ, ಶಿವಶಕ್ತಿ ಸ್ವರೂಪವಾದ ಸಂಗೀತವು ಮಾರ್ಗ, ದೇಶಿ ಎಂದು ಎರಡು ಪ್ರಕಾರವಾಗಿದೆ. ಮಾರ್ಗ ಸಂಗೀತವು ಗಾಂಧಾರ ಗ್ರಾಮವುಳ್ಳದಾಗಿ ಸ್ವರ್ಗ ಲೋಕದಲ್ಲಿಯೂ, ದೇಶಿ ಸಂಗೀತವು ಭೂಲೋಕದಲ್ಲಿಯೂ ಪ್ರಚಾರ ಹೊಂದಿವೆ. ಈ ಉಭಯ ಸಂಗೀತ ಪ್ರಕಾರಗಳಿಂದ ಅನಂತ ಸಂಗೀತಗಳು ಹುಟ್ಟಿ ಆಯಾ ಲೋಕಗಳಲ್ಲಿಯ ಜೀವಿಗಳಿಗೆ ಆನಂದಪ್ರದವಾಗಿವೆ. ಸಂಗೀತವು ಸರ್ವರಿಗೂ ಪ್ರಿಯವಾದ ವಸ್ತುವು; ಯೋಗಿಗಳಿಗೂ, ಭೋಗಿಗಳಿಗೂ, ರೋಗಿಗಳಿಗೂ ಬೇಕಾ ದುದು. ಸಸ್ಯಗಳೂ ಕೂಡ ಧ್ವನಿವಿಕಿರಣದಿಂದ ಬೆಳೆಯುವವೆಂದು ವಿಜ್ಞಾನಿಗಳು ತಮ್ಮ ಪ್ರಯೋಗಗಳಿಂದ ಕಂಡು ಹಿಡಿದಿರುವದರಿಂದ ಮೇಲೆ, ಸಂಗೀತದಷ್ಟು ಪ್ರಿಯ ವಾದ ಮತ್ತು ಜೀವನಾನಂದಕಾರಕ ವಿದ್ಯೆಯು ಮತ್ತೊಂದು ಇಲ್ಲವೆಂದು ಹೇಳಿದರೆ ಅಸಮಂಜಸವೆನಿಸದು.

ಇಂತಹ ಸರ್ವಪ್ರಿಯವಾದ ವಿದ್ಯೆಯು ಶಿವಯೋಗಿ ಸಾರ್ವಭೌಮರೂ ಶಿವಾ ವತಾರಿಗಳೂ ಆದ ಶಿವಬಸವ ಮಹಾಸ್ವಾಮಿಗಳವರಿಗೆ ಬಹು ಮೆಚ್ಚಿಗೆಯದಾಗಿತ್ತು. ಅವರು ಪ್ರತಿನಿತ್ಯವೂ ಶಿವಪೂಜೆಯ ಕಾಲದಲ್ಲಿ ನಿಜಗುಣ ಶಿವಯೋಗಿಗಳು, ಬಾಲಲೀಲಾ ಮಹಾಂತ ಶಿವಯೋಗಿಗಳು, ಸರ್ಪಭೂಷಣ ಶಿವಯೋಗಿಗಳು ಮೊದ ಲಾದವರ ರಾಗಮಯ ಗೀತಗಳನ್ನು ಬಹು ತನ್ಮಯರಾಗಿ ಹಾಡಿ ತಣಿಯುತ್ತಿದ್ದರು.

CC-0. Jangamwadi Math Collection. Digitized by eGangotri

ಅವರ ಶಿವಪೂಜೆಯೆ ಒಂದು ಸಾಮ್ರಾಜ್ಯ, ಒಂದು ವಿಶೇಷ ಉತ್ಸವ. ಅದಕ್ಕೆ ಸಂಗೀತವು ಬಹು ಕಳೆಯನ್ನು, ವೈಭವವನ್ನು ತಂದುಕೊಡುತ್ತಿತ್ತು. ಶ್ರೀಗಳವರ ಸಂಗೀತಪ್ರೇಮ ಅಸದೃಶವಾಗಿತ್ತು, ಅನುಪಮವಾಗಿತ್ತು.

ಲಿಂಗಪೂಜಾನಿಷ್ಠರಾದ ಸಂಗೀತ ಪ್ರೇಮಿಗಳಾದ ಶ್ರೀಗಳವರ ದಿವ್ಯ ಆತ್ಮ ಪ್ರಭೆಯು ಸಹೃದಯ ಸದ್ಭಕ್ತರಿಗೆ ಶಾಂತಿಯನ್ನೀಯಲಿ.

' ಓಂ ಸರ್ವಂ ಭದ್ರಂ ಭೂಯಾತ್ '

CC-0. Jangamwadi Math Collection. Digitized by eGangotri

# ಶ್ರೀ ಶಿವಬಸವ ಶಿವಯೋಗಿಗಳ ಸಂದರ್ಶನ

ಶ್ರೀ ಸುಬುದ್ಧಿಸ್ವಾಮಿ, ಹಿರೇಮಠ, ಬಿ.ಎ.,ಎಲ್‌ಎಲ್.ಬಿ.

ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥

—ಭಗವದ್ಗೀತೆ

ಪವಿತ್ರವಾದ ನಮ್ಮೀ ಭಾರತ ವರ್ಷವು ಬಹು ಪ್ರಾಚೀನ ಕಾಲದಿಂದಲೂ ತನ್ನಲ್ಲಿರುವ ಆಧ್ಯಾತ್ಮಿಕ ಶಕ್ತಿಯ ದಿವ್ಯ ತೇಜಸ್ಸಿನಿಂದ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿಯೂ ಕೂಡ ತನ್ನ ಗುರುತರವಾದ ಗೌರವವನ್ನು ಕಾಯ್ದುಕೊಂಡು ಬಂದಿದೆ. ತನ್ನ ಅಮರವಾದ ಆತ್ಮ ತತ್ತ್ವಗಳ ಪ್ರಚಾರದಿಂದಲೂ, ಸ್ವಾಮಿ ವಿವೇಕಾನಂದ, ಸ್ವಾಮಿ ರಾಮತೀರ್ಥ, ಕವೀಂದ್ರ ರವೀಂದ್ರನಾಥ, ಮಹಾತ್ಮಾ ಗಾಂಧಿ, ಅರವಿಂದ ಘೋಷ ಮೊದಲಾದ ಆಧ್ಯಾತ್ಮಶಕ್ತಿ ಸಂಪನ್ನರ ಅಮರ ಸಂದೇಶಗಳಿಂದಲೂ ಉರುತರವಾದ ಗುರುತ್ವದ ಸ್ಥಾನವನ್ನು ಗಳಿಸಿಕೊಂಡಿದೆ. ಅದನ್ನು ಈ ವರೆಗೂ ಉಳಿಸಿಕೊಂಡಿದೆ. ಈ ಸಂಗತಿಯು ಸತ್ಯಾಂಶಕ್ಕೆ ಕಾರಣವೆಂದರೆ– ಪರದೇಶಗಳಲ್ಲಿ ಕೇವಲ ಭೌತಿಕ ಶಾಸ್ತ್ರವು ಇಂದು ತಲೆ ಎತ್ತಿ ತಾಂಡವವಾಡುತ್ತಿರುವಾಗ ಕೇವಲ ಭೌತಿಕ ಜೀವನ ಕ್ರಮದಿಂದ ಮಾನವ ಜೀವನದ ಆತ್ಯಂತಿಕ ಕಲ್ಯಾಣವಾಗಲಾರದೆಂಬ ಸತ್ಯವನ್ನು ಭಾರತೀಯರು ಬಹುಕಾಲದ ಹಿಂದೆಯೇ ಕಂಡು, ಪವಿತ್ರವು ಶ್ರೇಷ್ಠವೂ ಆದ ಮಾನವ ಜೀವನದ ಚರಮ ಗುರಿಯು ಕೇವಲ ಐಹಿಕ ಸುಖೋಪಭೋಗ ಸಂಪತ್ತಿಯಾಗಿರದೆ ಆಧ್ಯಾತ್ಮದರಿವಿನ ಸಂಪತ್ತಿಯಿಂದ ಆತ್ಮಸಾಕ್ಷಾತ್ಕಾರದ ಸಾಧನೆಯಾಗಿದೆಯೆಂಬ ಸಂಗತಿಯನ್ನು ನಮ್ಮ ಪೂರ್ವಜರು ಪ್ರಾಚೀನ ಕಾಲದಲ್ಲಿಯೇ ಪಳಗಿಸಿಕೊಂಡರು. ಈ ಸತ್ಯಾನ್ವೇಷಣೆಗಾಗಿ ಪುರಾತನ ಕಾಲದಲ್ಲಿ ಸಕಲೈಶ್ವರ್ಯ ಸಂಪನ್ನರಾದ ಎಷ್ಟೋ ಜನ ರಾಜಮಹಾರಾಜರು ತಮ್ಮ ಭೋಗಭಾಗ್ಯಾದಿಗಳೆಲ್ಲವನ್ನು ತೊರೆದು, ತ್ಯಾಗಜೀವಿಗಳಾಗಿ, ಆಧ್ಯಾತ್ಮಿಕ ಅರುವಿನ ತಿರುಕರಾಗಿ ತಿರುಗಿದುದುಂಟು. "ಜಾಣನು ಲೌಕಿಕ ಪರಮಾರ್ಥವೆರಡನು ಮಾಣದೆ ಕೂಡಿ ನಡೆಸುತಿಹೆನಿಂತು" ಎಂಬ ಶ್ರೀ ನಿಜಗುಣರ ನುಡಿಯಂತೆ ಲೌಕಿಕ ಪರಮಾರ್ಥವೆರಡರ ಸಮನ್ವಯ ಮಾಡಿಕೊಂಡು ಜೀವನ ಸಾಗಿಸುವುದೇ ಭಾರತೀಯರ ವೀರ ವ್ರತವಾಗಿದೆ. ವೇದಗಳು, ಆಗಮಗಳು, ಉಪನಿಷತ್ತುಗಳು ಮೊದಲಾದ ಭಾರತೀಯ ಸಂಸ್ಕೃತಿಯ ಧ್ವಜಸ್ತಂಭಗಳು ಈ ವಿಷಯವಾಗಿ ಆಧಾರ ಸ್ತಂಭಗಳಾಗಿವೆ. ಇದರಿಂದ ನಮ್ಮ ಭಾರತ ದೇಶದ ಖ್ಯಾತಿ ನೀತಿಗಳು ಬಹು ಎತ್ತರವಾದ ಮಟ್ಟಕ್ಕೆ ಮುಟ್ಟಿವೆ. ಪಾಶ್ಚಿ

CC-0. Jangamwadi Math Collection. Digitized by eGangotri

ಮಾತ್ಯ ರಾಷ್ಟ್ರಗಳ ಆಧ್ಯಾತ್ಮ ಸಾಧಕರನೇಕರು ತಮ್ಮ ಸಾಧನೆಯಲ್ಲಿ ಸಂತೃಪ್ತಿಯನ್ನು ಸಂಪಾದಿಸಲಾರದೆ ಭಾರತ ದೇಶಕ್ಕೆ ಬಂದು ಇಲ್ಲಿ ತಮ್ಮ ಆಧ್ಯಾತ್ಮಿಕ ತೃಷೆಯನ್ನು ತೃಪ್ತಿಪಡಿಸಿಕೊಂಡು ಹೋದ ಉದಾಹರಣೆಗಳುಂಟು. ಈ ಸಂಗತಿಗೆ ಡಾ. ಆ್ಯನಿ ಬೇಜಂಟಳೇ ಉತ್ತಮವಾದ ಉದಾತ್ತ ಉದಾಹರಣೆಯಾಗಿದ್ದಾಳೆ.

## ಕಮನೀಯವಾದ ಕಾಣಿಕೆ

ನಮ್ಮ ತಾಯ್ನಾಡಿಗೆ ಇಂಥ ಮಹತ್ತರವಾದ ಸ್ಥಾನವನ್ನು ಸಾಧಿಸಿಕೊಟ್ಟ ಮಹಾ ಕಾರ್ಯದಲ್ಲಿ ಕರ್ನಾಟಕವೂ ಒಂದು ಪವಿತ್ರವಾದ ಪಾತ್ರವನ್ನು ವಹಿಸಿಕೊಂಡಿದೆಯೆಂದು ಧಾರಾಳವಾಗಿ ಹೇಳಬಹುದು. ಶಂಕರ, ಮಧ್ವ, ರಾಮಾನುಜ ಮೊದಲಾದ ಮತಸ್ಥಾಪನಾಚಾರ್ಯರು ಸಹ ಕರ್ನಾಟಕದ ಆಧ್ಯಾತ್ಮಿಕ ಸಂಸ್ಕೃತಿಯ ಸಂಪೋಷಣೆಗೆ ಸಾಕಷ್ಟು ಸೇವೆ ಸಲ್ಲಿಸಿದ್ದಾರೆ. ಆದರೆ ಈ ವಿಷಯದಲ್ಲಿ ವೀರಶೈವ ಮತಸ್ಥಾಪನಾಚಾರ್ಯರಾದ ಶ್ರೀ ರೇಣುಕಾದ್ಯಾಚಾರ್ಯರೂ, ಶ್ರೀ ಅಲ್ಲಮ, ಬಸವ, ಚೆನ್ನಬಸವ, ಸಿದ್ಧರಾಮ. ಅಕ್ಕಮಹಾದೇವಿ ಮೊದಲಾದ ಶಿವಶರಣ ಶರಣೆಯರೂ ಕನ್ನಡ ನಾಡಿನಲ್ಲಿ ನೂತನ ಚೇತವನ್ನುಂಟು ಮಾಡಲು ಬಹುಮುಖವಾಗಿ ಹೆಣಗಿ ಜನಜೀವನದಲ್ಲೊಂದು ಆಧ್ಯಾತ್ಮಿಕ ಆಂದೋಲವನ್ನುಂಟು ಮಾಡಿ ಜನತೆಯ ಹೃದಯದಲ್ಲಿ ಹುದುಗಿಕೊಂಡಿದ್ದ ದೈವೀ ಶಕ್ತಿಯನ್ನು ಜಾಗೃತಗೊಳಿಸಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಉಪನಿಷತ್ತುಗಳಂತಿದ್ದ ವಚನರೂಪದ ವಾಗ್ಝರಿಯನ್ನು ಹರಿಯಿಸಿ ಆಧ್ಯಾತ್ಮ ಶಾಸ್ತ್ರವು ಕನ್ನಡ ನಾಡಿನಲ್ಲಿ ಅಚ್ಚಳಿಯದೆ ಅನಂತ ಕಾಲವೂ ಉಳಿಯುವಂತೆ ಮಾಡಿದ್ದಾರೆ. ಈ ರೀತಿಯಾಗಿ ಕನ್ನಡಮ್ಮನ ಕೀರ್ತಿಯ ಹೆಚ್ಚಳಕ್ಕಾಗಿ ವೀರಶೈವರು ಸಲ್ಲಿಸಿದ ಸಂಸ್ಕೃತಿಯ ಕಾಣಿಕೆ ಕಮನೀಯವಾದುದಾಗಿದೆ.

## ಹಾನಗಲ್ಲ ಶ್ರೀಗಳವರ ಮಹಾಕಾರ್ಯ

ಇಂಥ ಒಂದು ಉಜ್ವಲವಾದ ಆಧ್ಯಾತ್ಮ ಶಕ್ತಿಯ ಅನುಪಮ ಪರಂಪರೆಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಬರಬೇಕೆಂದೂ ಅದರಿಂದ ಜನಜೀವನದ ಸಂಸ್ಕೃತಿಯ ಮಟ್ಟವನ್ನು ಬಹು ಮೇಲಕ್ಕೆತ್ತಬೇಕೆಂದೂ ಈಗಿನ ಶತಮಾನದಲ್ಲಿಯೂ ಕೂಡ ಅನೇಕ ಜನ ಮಹಾಪುರುಷರು ತಮ್ಮ ಜೀವನದ ಕೊನೆಯವರೆಗೂ ಬಹುಮುಖವಾಗಿ ಹೆಣಗಿದ್ದಾರೆ. ಅಂಥ ಮಹನೀಯರಲ್ಲಿ ಲಿಂಗೈಕ್ಯರಾದ ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು ಬಹು ಮನ್ನಣೆಗೆ ಪಾತ್ರರಾಗಿದ್ದಾರೆ. ಅವರು ಮಾಡಿದ ಕಾರ್ಯ ಮಹತ್ತರವಾಗಿದೆ; ಬಹುಮುಖವಾಗಿದೆ. ವೀರಶೈವ ಮತದ ಮಹಾತತ್ತ್ವಗಳನ್ನು ಅವುಗಳೊಡನೆ ಉಳಿದ ಧರ್ಮಗಳ ತತ್ತ್ವಗಳನ್ನು ಕೂಲಂಕಷವಾಗಿ ಅಭ್ಯಸಿಸಿ ಅವುಗಳಲ್ಲಿ ಅಡಕವಾಗಿದ್ದ ಆಧ್ಯಾತ್ಮ ಶಕ್ತಿಯನ್ನು ಜನಮನದಲ್ಲಿ

CC-0. Jangamwadi Math Collection. Digitized by eGangotri

ತುಂಬಿ ಜನತೆಯ ಜೀವನ ಕ್ರಮದಲ್ಲೊಂದು ಮಹಾಶಕ್ತಿಯನ್ನು ಮೂರ್ಡಿಸಬೇಕೆಂಬ ಮಹಾ ಮನೀಷೆಯ ಸಿದ್ಧಿಗಾಗಿ ಅನೇಕ ಜನ ಆಧ್ಯಾತ್ಮ ಶಕ್ತಿ ಸಂಪನ್ನರಾದ ಧರ್ಮ ಗುರುಗಳನ್ನು ಸಿದ್ಧಪಡಿಸಬೇಕೆಂಬ ಮಹಾಸಂಕಲ್ಪದಿಂದ ಶಿವಯೋಗ ಮಂದಿರವೆಂಬ ಯೋಗ ಸಂಸ್ಥೆಯೊಂದನ್ನು ಸಂಸ್ಥಾಪಿಸಿ ಸಾಧಕರಾದ ಅನೇಕ ಜನ ಮಹನೀಯರನ್ನು ಸಿದ್ಧರಾದ ಶಿವಯೋಗಿಗಳನ್ನಾಗಿ ಸಿದ್ಧಪಡಿಸಿ, ನಾಡಿನ ಕಲ್ಯಾಣಕ್ಕಾಗಿ ನೀಡಿ ನಾಡಿಗೊಂದು ಮಹಾ ಸೇವೆ ಸಲ್ಲಿಸಿದ್ದಾರೆ. ಇಂಥ ಮಹಾಕಾರ್ಯದ ಸಿದ್ಧಿಗಾಗಿ ಹಾನಗಲ್ಲ ಶ್ರೀಗಳವರೊಡನೆ ಅನುಪಮ ಕರ್ತೃತ್ವ ಶಕ್ತಿಯಿಂದ ಜೀವನದ ಕೊನೆಯ ವರೆಗೂ ದುಡಿದು ತಮ್ಮ ಜೀವನವನ್ನೇ ಅಮರವನ್ನಾಗಿಸಿ ಕೊಂಡಿದ್ದಾರೆ ಶ್ರೀ ಶಿವಬಸವ ಮಹಾಸ್ವಾಮಿಗಳವರು.

ಇಂಥ ಪೂಜ್ಯ ಮಹಾಸ್ವಾಮಿಗಳವರ ಸಮೀಚೀನವಾದ ಸಂದರ್ಶನವು ೧೯೪೦ನೇ ಇಸ್ವಿಯ ಫೆಬ್ರುವರಿ ತಿಂಗಳಲ್ಲಿ ಮಂದಿರದ ವಾರ್ಷಿಕೋತ್ಸವದ ಕಾಲಕ್ಕೆ ಸಮನಿಸಿತು. ಅದಕ್ಕೂ ಮುಂಚಿತವಾಗಿಯೇ ಹಾನಗಲ್ಲ ಶ್ರೀಗಳವರು ಶಿವೈಕ್ಯರಾದುದರಿಂದ ಮಂದಿರದ ಸಂಚಾಲನೆಯ ಗುರುತರವಾದ ಭಾರವು ಶ್ರೀ ಶಿವಬಸವ ಸ್ವಾಮಿಗಳವರ ಮೇಲೆಯೇ ಇದ್ದಿತು. ಆ ಭಾರವನ್ನು ಅವರು ಬಹು ಪ್ರೇಮದಿಂದಲೂ ಪರಮಾತ್ಮನ ಕಾರ್ಯವೆಂಬ ಪವಿತ್ರ ಭಾವನೆಯಿಂದಲೂ ನಿರ್ವಹಿಸಿಕೊಂಡ ವಿಷಯವು ಅವರ ಕಳಕಳಿಯ ಕಾರ್ಯಸಾಧನೆಯಿಂದ ಕಂಡು ಬರುತ್ತಿತ್ತು. ಶ್ರೀ ಶಿವಯೋಗಮಂದಿರದ ಪ್ರಕೃಷ್ಟವಾದ ಪ್ರಗತಿಯೇ ಅವರ ಜೀವನದ ಉಸಿರಾಗಿತ್ತು. ಅದರ ಸಮೃದ್ಧಿಯೇ ಸಮಾಜದ ಸರ್ವಾಂಗೀಣ ಸಮುತ್ಕರ್ಷವೆಂಬ ಸದ್ಭಾವನೆ ಅವರ ನಾಡಿಗಳಲ್ಲಿ ಮಿಡಿಯುತ್ತಿತ್ತು. ಅದಕ್ಕಾಗಿ ಅವರು ತಮ್ಮ ಜೀವನವನ್ನು ಮೀಸಲಾಗಿರಿಸಿ ಬಹುಪರಿಶ್ರಮ ಬಟ್ಟು ದುಡಿದರು. ಹಾನಗಲ್ಲ ಶ್ರೀಗಳವರು ಲಿಂಗೈಕ್ಯರಾದ ನಂತರ ಶ್ರೀ ಶಿವಬಸವ ಮಹಾಸ್ವಾಮಿಗಳವರ ಅವಿರತ ದುಡಿಮೆಯಿಂದಲೇ ಶಿವಯೋಗಮಂದಿರವು ಉಳಿದು ಬೆಳೆಯಿತೆಂದು ಹೇಳಿದರೆ ಅಚ್ಚರಿಯೂ ಅಲ್ಲ; ಅತಿ ಶಯೋಕ್ತಿಯೂ ಅಲ್ಲ.

## ಆಚಾರದ ಅನುಪಮ ಅರಿವು

ಇಂದಿನ ಯುಗದಲ್ಲಿ ಸನ್ಯಾಸಾಶ್ರಮವು ಬಹು ಕಷ್ಟ ಸಾಧ್ಯವಾಗಿದೆ. ಅದನ್ನು ಜೀವನದ ಕೊನೆಯ ವರೆಗೂ ಸರಿಯಾಗಿ ಸಾಗಿಸಿಕೊಂಡು ಹೋಗುವ ಸದಮಲ ಚರಿತ್ರದ ಮಹಾನುಭಾವರು ಶರಣರು ಬಹು ವಿರಲವಾಗಿದ್ದಾರೆ. ಪಾಶ್ಚಿಮಾತ್ಯ ಸಂಸ್ಕೃತಿಯ ಸಮ್ಮೋಹವು ಸರ್ವರನ್ನೂ ಸಂತ್ರಸ್ತರನ್ನಾಗಿ ಮಾಡಿಬಿಟ್ಟಿದೆ. ಆಚಾರದ ಅರಿವು ಅಳಿದುಹೋಗಿದೆ. ಶೀಲದಲ್ಲಿ ಶೈಥಿಲ್ಯವು ಸಂಪ್ರಾಪ್ತವಾಗಿದೆ ಧರ್ಮದ ಬಗೆಗೂ, ಧರ್ಮ ಗುರುಗಳ ಬಗೆಗೂ ಜನತೆಯಲ್ಲಿದ್ದ ಅಲ್ಪಸ್ವಲ್ಪ ಆದರಾಭಿಮಾ

CC-0. Jangamwadi Math Collection. Digitized by eGangotri

ಗಳೂ ಕೂಡ ಅಳಿಯತೊಡಗಿವೆ. ಇಂಥ ವಿಶಿಷ್ಟಕಾಲದ ವಿನಾಶಕಾರಕವಾದ ಯಾವ ಪರಿಣಾಮವನ್ನು ಶ್ರೀಗಳವರು ತಮ್ಮ ಸಮೀಪಕ್ಕೆ ಸುಳಿಯಗೊಡಲಿಲ್ಲ. ಶಿವಯೋಗ ಸಾಧನೆಯೇ ತಮ್ಮ ಜೀವನದ ಪರಮ ಪವಿತ್ರವಾದ ಚರಮಗುರಿ ಯೆಂಬ ಅರಿವಿನಿಂದ ಆಚರಿಸಿ ಅಂತರ್ಧಾನವಾದ ಶ್ರೀಗಳವರ ಜೀವನ ನಿಜವಾಗಿಯೂ ದಿವ್ಯ ಜೀವನ; ಭವ್ಯ ಜೀವನ. ಸರ್ವಕ್ಷೇತ್ರದಲ್ಲಿಯೂ ಹಾನಗಲ್ಲ ಶ್ರೀಗಳವರ ಒಡನಾಡಿಗಳಾಗಿ, ಅವರ ಆಧ್ಯಾತ್ಮದ ಗರಡಿಯಲ್ಲಿ ಸಾಧಕರಾಗಿ – ಸಿದ್ಧರಾಗಿ ಹೊರಗೆ ಬಂದ ಶ್ರೀಗಳವರು ಜೀವನದಲ್ಲಿ ಅಡರಿ ಬರುವ ಎಡರು ತೊಡರುಗಳಿಗೆ ತಡವರಿಸದೆ ಪರಮನಿಷ್ಠೆಯಿಂದ ತಮ್ಮ ಜೀವನ ಕ್ರಮವನ್ನು ಸಾಗಿಸಿಕೊಂಡು ಹೋದುದು ಸದಭಿಮಾನದ ಸಂಗತಿಯಾಗಿದೆ. 'ಶೀಲಂ ಪರಂ ಭೂಷಣಂ' ಎಂಬುದೇ ಅವರ ಜೀವನದ ಮಹಾ ಮಂತ್ರವಾಗಿತ್ತು. 'ಆಚಾರಃ ಪರಮೋ ಧರ್ಮಃ' ಎಂಬ ತತ್ತ್ವವೇ ಅವರ ಜೀವನದ ಉಸಿರಾಗಿತ್ತು. 'ಆಚಾರವೇ ಸ್ವರ್ಗ, ಅನಾಚಾರವೇ ನರಕ' ಎಂಬ ಶರಣರ ಸೂಳ್ನುಡಿಯೇ ಅವರ ಅಂತರಾತ್ಮದ ಒಳ್ನುಡಿಯಾಗಿತ್ತು.

## ಶಿವಯೋಗ ಸಮರಸ

ಪರೋಪದೇಶ ಪಾಂಡಿತ್ಯದಲ್ಲಿ ಪ್ರವೀಣರಾದ ಮಹನೀಯರು ಇಂದಿನ ಕಾಲದಲ್ಲಿ ವಿಪುಲವಾಗಿ ದೊರೆಯುತ್ತಾರೆ. ಆದರೆ ಶ್ರೀ ಶಿವಬಸವ ಸ್ವಾಮಿಗಳವರಂಥ ಆಚಾರನಿಷ್ಠರು ಮಾತ್ರ ವಿರಳವಾಗಿದ್ದಾರೆ. ಸ್ವೀಕರಿಸಿದ ಆಶ್ರಮಕ್ಕುಚಿತವಾದ ರೀತಿಯಲ್ಲಿ 'ಅರಿದಡೆ ಶರಣ, ಮರೆದಡೆ ಮಾನವ'ನೆಂಬ ನುಡಿಯಂತೆ ಮೈ-ಮಾತು-ಮನಂಗಳಲ್ಲಿ ಏಕರೂಪತೆಯನ್ನುಂಟು ಮಾಡಿಕೊಂಡು, ನಡೆನುಡಿಗಳನೊಂದಾಗಿಸಿಕೊಂಡು ಸಮಾಜದ ಸಮೃದ್ಧಿಯ ಸದ್ಭಾವದಿಂದ ಸಂತತವಾಗಿ ಶ್ರಮಿಸಿಹೋದ ಶ್ರೀಗಳವರು ನಿಜಕ್ಕೂ ಇಂದಿನ ಕಾಲದ ಶರಣರು; ಶಿವಯೋಗಿಗಳು.

> ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।
> ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಸಹಾ ॥

ಎಂಬ ಗೀತೆಯ ನುಡಿಯಂತೆ ನಿಯಮಿತವಾದ ಸಾತ್ವಿಕಾಹಾರ, ಯೋಗ್ಯ ಕಾರ್ಯದಲ್ಲಿ ಆಸಕ್ತಿ, ಕಾಲೋಚಿತವಾದ ಸುಪ್ತಿ-ಜಾಗೃತಿ ಇವುಗಳ ಸರಿಯಾದ ಸಾಧನೆಯಿಂದ ಶಿವಯೋಗವು ಶ್ರೀಗಳವರಿಗೆ ಸುಲಭ ಸಾಧ್ಯವಾಗಿತ್ತು. ಶಿವಯೋಗ ಸಾಧನೆಯ ಆಸೆಯ ಹೊರತು ಜೀವನದಲ್ಲಿ ಅವರಿಗೆ ಅನ್ಯ ಆಶೆ–ಆಮಿಷಗಳಿರಲಿಲ್ಲ.

"ನಿಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೆ ತದಾ" ಎಂಬಂತೆ ಲೌಕಿಕದ ಎಲ್ಲ ಭೋಗಭಾಗ್ಯಾದಿಗಳ ಬಯಕೆಗಳನ್ನು ಬದಿಗಿರಿಸಿ ಆಶೆ ಆಮಿಷಗಳೆಲ್ಲ

CC-0. Jangamwadi Math Collection. Digitized by eGangotri

ವನ್ನು ನಾಶಗೊಳಿಸಿ ಶಿವಯೋಗದಲ್ಲಿ ಸಮರಸ ವಾಗಿದ್ದರು ಶ್ರೀ ಶಿವಬಸವ ಸ್ವಾಮಿಗಳವರು.

"ಆತ್ಮನ್ಯೆವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೆ"

ಎಂಬ ಗೀತೆಯ ನುಡಿಯಂತೆ ಬಾಹ್ಯ ಜೀವನದ ಆಗುಹೋಗುಗಳ ಅರಿವನ್ನು ಅಳಿದು, ಆತ್ಮಾನಂದದಲ್ಲಿ ಅವಿರತವಾಗಿ ಅಲೆಯುತ್ತ ಸ್ಥಿರಪ್ರಜ್ಞನ ಸ್ಥಿತಿಗೆ ಮುಟ್ಟಿದ್ದರು ಶ್ರೀಗಳವರು.

ಈ ರೀತಿಯಾಗಿ ವೀರವಿರಾಗಿಯಾಗಿ, ಶಿಷ್ಟಶಿವಯೋಗಿಯಾಗಿ, ತೊಂಬತ್ತು ವರುಷಗಳ ತುಂಬು ಜೀವನವನ್ನಾಗಿ ಬಾಳಿ ಶಿವಸಾನ್ನಿಧ್ಯವನ್ನು ಸಂಪಾದಿಸಿದ ಶ್ರೀ ಶಿವಬಸವ ಸ್ವಾಮಿಗಳವರು ಕನ್ನಡ ನಾಡಿಗೊಂದು ಚೈತನ್ಯವನ್ನು ನೀಡಿ ಹೋಗಿದ್ದಾರೆ. ಅವರ ಜೀವನ ಮಾದರಿಯ ಜೀವನ; ಅವರ ಪುಣ್ಯ ಸ್ಮೃತಿಯು ನಮ್ಮೆಲ್ಲರಿಗೂ ಪರಮಪಾವನ. ಅಣುರೇಣುಗಳಲ್ಲಿ ಅವಿತುಕೊಂಡಿರುವ ಅವರ ಅಮರವಾದ ಆತ್ಮವು ಶಿವಯೋಗಮಂದಿರದ ಸಮೀಚೀನವಾದ ಸಮೃದ್ಧಿಯನ್ನೂ ನಾಡಿನ ಪರಮಪ್ರಗತಿಯನ್ನೂ ಸಮೀಕ್ಷಿಸುತ್ತಿರುವಾಗ ಅದೆಲ್ಲವನ್ನೂ ನಾವು ಸಾಧಿಸಿಕೊಂಡು ಅವರ ದಿವ್ಯ ಆತ್ಮಕ್ಕೆ ಪ್ರೀತಿಯನ್ನುಂಟು ಮಾಡುವುದೇ ನಮ್ಮೆಲ್ಲರ ಪರಮ ಧರ್ಮವಾಗಿದೆಯೆಂದು ಹೇಳಬೇಕಾಗಿದೆ.

CC-0. Jangamwadi Math Collection. Digitized by eGangotri

# ಶ್ರೀಗಳವರ ಧರ್ಮಪ್ರಸಾರ ಕಾರ್ಯ

## ಶ್ರೀ ಚೆನ್ನಮಲ್ಲಿಕಾರ್ಜುನ, ಮೈಸೂರು.

ಶ್ರೀ ಮನ್ನಿರಂಜನ ಪ್ರಣವಸ್ವರೂಪಿ ಲಿಂ. ಶಿವಬಸವ ಮಹಾಸ್ವಾಮಿಗಳವರು ಹುಕ್ಕೇರಿಮಠ ಹಾವೇರಿ, ಅವರು ಪರಮ ಪೂಜ್ಯರಾದ ಲಿಂ. ಶ್ರೀ ಸದಾಶಿವ ಮಹಾಸ್ವಾಮಿಗಳು (ಕುಮಾರ ಸ್ವಾಮಿಗಳು) ಹಾನಗಲ್ಲ, ಅವರ ಪ್ರಥಮ ಪರಿಚಯ ಮಾಡಿಕೊಂಡ ಕಾಲದಿಂದಲೂ ನಾನು ಹಾವೇರಿ ಶ್ರೀಗಳವರ ಸಂಪರ್ಕದಲ್ಲಿದ್ದೆನು. ಉಭಯ ಶ್ರೀಗಳವರು ವೀರಶೈವ ಸಮಾಜ ಪುರುಷನ ಎಡಗೈ-ಬಲಗೈಯಾಗಿ ಅನೇಕ ಮಹತ್ಕಾರ್ಯಗಳನ್ನು ಮಾಡಿರುವರು. ಪ್ರತಿಯೊಂದು ಕಾರ್ಯದಲ್ಲಿಯೂ ಹಾನಗಲ್ಲ ಶ್ರೀಗಳವರು ಹಾವೇರಿ ಶ್ರೀಗಳವರ ಅಭಿಪ್ರಾಯವನ್ನು ತೆಗೆದುಕೊಂಡು ಇಬ್ಬರೂ ಸೇರಿ ಕಾರ್ಯಗಳನ್ನು ಪ್ರಯತ್ನ ಪೂರ್ವಕವಾಗಿ ನಿರ್ವಹಿಸುತ್ತಿದ್ದರು.

ಹಾವೇರಿ ಶ್ರೀಗಳವರಲ್ಲಿ ಒಂದು ದಿವ್ಯ ತೇಜಸ್ಸಿದ್ದಿತು. ಅವರಿಗೆ ಶಿವಯೋಗವು ಸಂಪೂರ್ಣವಾಗಿ ಸಾಧಿಸಿದ್ದಿತು. ಅದರಲ್ಲಿ ಅವರು ಸಿದ್ಧಿ ಪಡೆದಿದ್ದರು. ಲಿಂಗಪೂಜೆಯನ್ನು ಮಾಡುವಾಗ ಯಾವ ಜನರು ಎಷ್ಟು ದೂರದಲ್ಲಿದ್ದರೂ, ಅವರನ್ನು ಲಿಂಗದಲ್ಲಿ ಕಂಡುದರ ವಿಚಾರವನ್ನು ಶ್ರೀಗಳವರು ಆ ಕೂಡಲೇ ಹೇಳಿ ಬಿಡುತ್ತಿದ್ದರು; ಮುಂದಿನ ಕೆಲಸಗಳ ಆಗುಹೋಗುಗಳನ್ನೂ ತಿಳಿಸುತ್ತಿದ್ದರು. ಈ ದಿವ್ಯ ದೃಷ್ಟಿಯಿಂದಲೂ ಶ್ರೀಗಳವರಲ್ಲಿ ಭಕ್ತರ ಭಕ್ತಿ-ವಿಶ್ವಾಸಗಳು ಬಹಳ ಹೆಚ್ಚಿದವು.

ಶ್ರೀಗಳವರು ನಡೆದ ಧರೆ ಪಾವನವಾಗುತ್ತಿತ್ತು; ಅವರು ನಿಂದ ನೆಲ ನಿಜ ಕ್ಷೇತ್ರವಾಗುತ್ತಿತ್ತು. ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಶಿವಯೋಗಾಶ್ರಮವು ಶಿವಪೂಜಾ ಪ್ರೇಮಿಗಳಾದ ಶ್ರೀಗಳವರ ಕೃಪೆಯಿಂದಲೇ ಮೊಟ್ಟಮೊದಲು ಸ್ಥಾಪಿತವಾಯಿತು. ಅವರು ಹಾನಗಲ್ಲ ಶ್ರೀಗಳವರೊಂದಿಗೆ ಸಂಚರಿಸಿ ಮಲೆನಾಡ ಪ್ರಾಂತದಲ್ಲಿ ಶಿವಧರ್ಮದ ಪ್ರಸಾರವನ್ನು ಮಾಡಿದರು. ಕಪನಳ್ಳಿಯ ಶಿವಯೋಗಾಶ್ರಮವು ಧರ್ಮಕಾರ್ಯಗಳ ಕೇಂದ್ರವಾಯಿತು. ಈಗ ಇಲ್ಲಿ ಒಂದು ಲಕ್ಷ ರೂಪಾಯಿ ಬೆಲೆ ಬಾಳುವ ಭವ್ಯ ಭವನದ ನಿರ್ಮಾಣವಾಗಿದೆ; ಈಗ ಈ ಶಿವಯೋಗಾಶ್ರಮದ ಅಧ್ಯಕ್ಷರಾಗಿರುವ ಶ್ರೀ. ನಿ. ಪ್ರ. ರುದ್ರಮುನಿಸ್ವಾಮಿಗಳವರು ಶ್ರೀಗಳವರ ಕೃಪಾವಲಯದಲ್ಲಿ ಬೆಳೆದು ಬಂದವರು. ಅವರು ಶಿವಯೋಗ ಮಂದಿರದ ಮಾದರಿಯಲ್ಲಿ ಈ ಆಶ್ರಮದ ಮುಖಾಂತರ ಅನೇಕ ಜನಹಿತದ ಕಾರ್ಯಗಳನ್ನು ಮಾಡುತ್ತ ಭಕ್ತರಿಗೆ ಪೂಜ್ಯರಾಗಿರುವರು. ಕೃಷಿ ಮತ್ತು-ಗೋಸಂಗೋಪನ ಕಾರ್ಯದಲ್ಲಿ ಈ ಆಶ್ರಮ ಮಾದರಿಯ ಸೇವೆಯನ್ನು ಸಲ್ಲಿಸುತ್ತಿರುವದು. ಈ ಆಶ್ರಮಕ್ಕೆ ಅನೇಕ

CC-0. Jangamwadi Math Collection. Digitized by eGangotri

ಭಕ್ತರು ಬಹು ಪ್ರಕಾರವಾಗಿ ಭಕ್ತಿ ಸಲ್ಲಿಸಿರುವರು. ಅವರಲ್ಲಿ ಹಳೇಪಟ್ಟಣದ ಶೆಟ್ಟರ ಹಾಲಪ್ಪನವರು ಅಗ್ರಗಣ್ಯರು. ಇವರು ಶ್ರೀಗಳವರಿಂದ ಅನುಗ್ರಹ ಪಡೆದು ಈಗಲೂ ಇಲ್ಲಿಯೇ ಶಿವಪೂಜಾನುಷ್ಠಾನ ಮತ್ತು ಸೇವೆಯನ್ನು ತ್ರಿಕರಣ ಪೂರ್ವಕ ಮಾಡುತ್ತ ಆದರ್ಶ ಶಿವಶರಣರೆನ್ನಿಸಿಕೊಂಡಿರುವರು.

ಪತ್ರಿಕೆ ಮತ್ತು ಗ್ರಂಥಗಳ ಪ್ರಕಟನೆಯ ರೂಪದಲ್ಲಿ ಧರ್ಮಕಾರ್ಯಗಳು ಸತತವಾಗಿ ನಡೆಯಬೇಕೆಂಬ ಮಹೋದ್ದೇಶ ಹಾವೇರಿ ಶ್ರೀಗಳವರದಾಗಿತ್ತು. ಅದ ರಂತೆ ಶ್ರೀಗಳವರು ಹಾವೇರಿಯಲ್ಲಿ 'ಶ್ರೀ ಶಿವಲಿಂಗ ವಿಜಯ ಮುದ್ರಣಾಲಯ'* ವನ್ನು ಸ್ಥಾಪಿಸಿ ಅದನ್ನು ನನ್ನ ವಶಕ್ಕೆ ಕೊಟ್ಟರು. 'ಸದ್ಧರ್ಮದೀಪಿಕೆ' ಎಂಬ ಮಾಸಪತ್ರಿಕೆಯನ್ನು ಪ್ರಕಟಿಸುವುದಕ್ಕೆ ಮತ್ತು ಅನೇಕ ಓಲೆಗರಿಯ ಗ್ರಂಥಗಳನ್ನು ಮುದ್ರಿಸಿ ಪ್ರಕಾಶಗೊಳಿಸುವುದಕ್ಕೂ ಈ ಮಹಾಸ್ವಾಮಿಗಳವರೇ ಮೂಲ ಕಾರಣ ರೆಂದು ಹೇಳುವದು ಅತಿಶಯೋಕ್ತಿಯಲ್ಲ. ಒಮ್ಮೆ, ಚಿತ್ರದುರ್ಗದ ಬೃಹನ್ಮಠಾಧ್ಯಕ್ಷ ರಾದ ಲಿಂ. ಜಗದ್ಗುರು ಶ್ರೀ ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳು ಹಾವೇರಿಗೆ ದಯಮಾಡಿಸಿದಾಗ ಶ್ರೀಗಳವರು ಜಗದ್ಗುರುಗಳ ಸನ್ನಿಧಿಯಲ್ಲಿ ಧರ್ಮ ಗ್ರಂಥಗಳ ಸಂಶೋಧನೆ ಮತ್ತು ಪ್ರಕಾಶನದ ಬಗೆಗೆ ಕಳಕಳಿಯಿಂದ ವಿಚಾರ ವಿನಿಮಯ ಮಾಡಿದ ಪ್ರಸಂಗ ನನಗೆ ಚೆನ್ನಾಗಿ ನೆನಪಿದೆ. ತಮ್ಮ ಮಠದ ಖರ್ಚಿನಲ್ಲಿ, ತಮ್ಮ ಸ್ವಂತದ ಅನುಕೂಲತೆಗಳಲ್ಲಿ ಏನಾದರೂ ಕೊರತೆ ಬಂದರೂ ಚಿಂತೆಯಿಲ್ಲ, ಧರ್ಮ ಪ್ರಸಾರವು ಮಾತ್ರ ಚೆನ್ನಾಗಿ ನಡೆಯಬೇಕೆಂದು ಶ್ರೀಗಳವರು ಹಂಬಲಿಸುತ್ತಿದ್ದರು. ಹಾವೇರಿಯಲ್ಲಿ ತಮ್ಮ ಮಠವನ್ನು ಕಲ್ಲುಮಠವನ್ನಾಗಿ ಮಾರ್ಪಡಿಸಿದ ಕೀರ್ತಿಯು ಶ್ರೀಗಳವರಿಗೆ ಸಲ್ಲುವಂತಾಗಿದ್ದರೂ, ಆ ಕಟ್ಟಡದ ನಿರ್ಮಾಣಕ್ಕೆ ದ್ರವ್ಯವು ಬೇಕಾಗಿದ್ದರೂ ಅದನ್ನು ಬದಿಗಿಟ್ಟು ಧರ್ಮಗ್ರಂಥಗಳ ಪ್ರಕಟನೆಯ ಕಾರ್ಯಕ್ಕೆ ಹೆಚ್ಚು ದ್ರವ್ಯವನ್ನು ವಿನಿಯೋಗಿಸುತ್ತಿದ್ದರು. ನನಗೆ ವರ್ಷ ಗಟ್ಟಲೆ ತಮ್ಮೊಡನೆ ಪೂಜೆ ಮತ್ತು ಪ್ರಸಾದಕ್ಕೂ ಅನುಕೂಲತೆಗಳನ್ನು ದಯಪಾಲಿ ಸಿದ ಶ್ರೀಗಳು ಎಂತಹ ಕೃಪಾಳುಗಳೆಂಬುದನ್ನು ಬೇರೆ ಹೇಳಬೇಕೆ?

ಶ್ರೀಗಳವರು ಪದವೀಧರರಾಗ ಬಯಸಿದ ಅನೇಕ ಬಡ ವಿದ್ಯಾರ್ಥಿಗಳಿಗೂ ಮುಕ್ತಹಸ್ತದಿಂದ ಸಹಾಯ ನೀಡಿದರು. ಅವರ ಕೃಪೆಯಿಂದ ಅನೇಕರು ಪದವೀ ಧರರಾಗಿ ಉಚ್ಚ ಸ್ಥಾನಗಳನ್ನು ಪಡೆದಿರುವರು. ಪ್ರೊ ಎಸ್.ಎಸ್.ಭೂಸನೂರುಮಠ, ಶ್ರೀ ಅ. ಮ. ಪಾಟೀಲ ಮೊದಲಾದವರು ಶ್ರೀಗಳವರ ಕೃಪಾಶ್ರಯ ಪಡೆದು ವಿದ್ಯಾ ರ್ಜನೆ ಮಾಡಿದವರು. ಶ್ರೀಗಳವರಿಗೆ ಹಣವನ್ನು ಕೂಡಿಡಬೇಕೆಂಬ ಆಶೆಯಿರಲಿಲ್ಲ.

---

* ಈಗ ಈ ಮುದ್ರಣಾಲಯವು ಶಿವಯೋಗಮಂದಿರದಲ್ಲಿ 'ಶ್ರೀ ಸದಾಶಿವ ಮುದ್ರಣಾಲಯ' ವೆಂಬ ಹೆಸರಿನಲ್ಲಿ ಸಂಸ್ಥಾಪಿತವಾಗಿದೆ.

CC-0. Jangamwadi Math Collection. Digitized by eGangotri

ಭಕ್ತರಿಂದ ಕಾಣಿಕೆ ಬಂದುದೇ ತಡ ಆ ಕೂಡಲೇ ಅದು ಬಡವಿದ್ಯಾರ್ಥಿಗಳಿಗಾಗಿ ಯಥೇಚ್ಛವಾಗಿ ವಿನಿಯೋಗವಾಗುತ್ತಿತ್ತು. ಹಣ ಕೊಟ್ಟು ಅದಕ್ಕೆ ಪ್ರತಿಯಾಗಿ ಹೆಸರನ್ನು ಗಳಿಸಬೇಕೆಂದು ಶ್ರೀಗಳವರು ಕನಸು ಮನಸಿನಲ್ಲಿಯೂ ಬಗೆದವರಲ್ಲ.

ವೀರಶೈವರಲ್ಲಿ ಭಿಕ್ಷೆ ಬೇಡುವದು ಸಮಾಜಕ್ಕಾಗಿ ಎಂದಿರುವ ಧರ್ಮನಿಯಮವನ್ನು ಶ್ರೀಗಳವರು ಪಾಲಿಸಿ ಬಡವರಿಗೆ ಸಾವಿರಗಟ್ಟಲೆ ಧನಸಹಾಯ ಮಾಡಿ ಇತರ ಸ್ವಾಮಿಗಳಿಗೆ ಆದರ್ಶರಾಗಿದ್ದಾರೆ. ಶ್ರೀಗಳವರು ಅನೇಕ ಸಲ ವ್ಯಾಪಾರ ಮಾಡಿ ಹಾನಿಗೀಡಾದ ಭಕ್ತರಿಗೆ ಬಂಡವಾಳ ಕೊಟ್ಟಿದ್ದಾರೆ. ವ್ಯವಸಾಯದಲ್ಲಿ ಉತ್ಪತ್ತಿ ಕಡಿಮೆಯಾಗಿ ನಿರ್ಗತಿಕರಾದ ರೈತರಿಗೆ ಅನುಕೂಲತೆ ಕಲ್ಪಿಸಿಕೊಟ್ಟಿದ್ದಾರೆ. ಅವರಲ್ಲಿ ಕೆಲವರು ಶ್ರೀಗಳವರನ್ನು ಇನ್ನು ಹಾಡಿ ಹರಸುತ್ತಿದ್ದಾರೆ.

ಶಿವಯೋಗಮಂದಿರದಲ್ಲಿ ಹಾನಗಲ್ ಶ್ರೀಗಳವರೊಡನೆ ವಿಶೇಷ ಶ್ರದ್ಧೆಯಿಂದ ಕಾರ್ಯಮಾಡಿ ಶ್ರೀಗಳವರು ಮಂದಿರದ ಸಾಧಕರಿಗೆ, ವಟುಗಳಿಗೆ ಧರ್ಮ-ಯೋಗ-ಆಚಾರ ಮುಂತಾದವುಗಳನ್ನು ಕಲಿಸಿ ಸಂಸ್ಥೆಯ ಉನ್ನತಿಗೆ ಕಾರಣರಾಗಿದ್ದಾರೆ. ಶ್ರೀಗಳ ತಪಃಪ್ರಭಾವದಿಂದಲೇ ಸಂಸ್ಥೆಯು ಇಂದಿನ ಯುಗದಲ್ಲಿ ಉಳಿದು ಬೆಳೆಯುತ್ತಿದೆ. ಹಾನಗಲ್ ಶ್ರೀಗಳವರು ಇವರ ಅಚ್ಚಳಿಯದ ಸಮಾಜ ಪ್ರೇಮ ಮತ್ತು ಧರ್ಮ ಕಾರ್ಯಕ್ಷಮತೆಯನ್ನು ಮನಗಂಡೇ ಇವರನ್ನು ಮಂದಿರದ ಆಜೀವ ಅಧ್ಯಕ್ಷರನ್ನಾಗಿ ನೇಮಿಸಿದ್ದರು. ಶ್ರೀ ಕುಮಾರ ಸ್ವಾಮಿಗಳು ಲಿಂಗೈಕ್ಯರಾದ ಮೇಲೆಯೂ ಶ್ರೀಗಳವರು ಧೈರ್ಯದಿಂದ ಸಂಸ್ಥೆಯ ಅಭಿವೃದ್ಧಿಯನ್ನು ಬಯಸಿ ಕಾರ್ಯ ಮಾಡಿದರು. ಕೆಲವರು ಹಾನಗಲ್ಲ ಪೂಜ್ಯರು ಲಿಂಗೈಕ್ಯರಾದ ಮೇಲೆ ಮಂದಿರವು ನಡೆಯಲಾರದು, ಅದನ್ನು ಒಂದು ವ್ಯವಸಾಯ ಕಾಲೇಜನ್ನಾಗಿ ಮಾರ್ಪಡಿಸಬೇಕೆಂಬ ವಿಚಾರವನ್ನು ಮುಂದು ಮಾಡಿದರು. ಆದರೆ ಶ್ರೀಗಳವರು ಮಂದಿರದಲ್ಲಿ ಧಾರ್ಮಿಕ ಶಿಕ್ಷಣವು ಆದರ್ಶವಾಗಿ ಎಂದಿನಂತೆ ನಡೆಯುವಂತೆ ಮಾಡಿ, ಸಂಸ್ಥೆಯು ಎಂದಿಗೂ ಅಳಿಯದಂತಹ ಧಾರ್ಮಿಕ ಅಡಿಪಾಯವನ್ನು ಹಾಕಿದರು; ಹಾನಗಲ್ ಶ್ರೀಗಳವರ ಧ್ಯೇಯಧೋರಣೆಗಳನ್ನು ಉಳಿಯುವಂತೆ ಮಾಡಿದರು; ಕೆಲವು ಅಭಿಮಾನಿ ತರುಣ ಸ್ವಾಮಿಗಳನ್ನೂ ಉತ್ಸಾಹಿ ಭಕ್ತರನ್ನೂ ಮಂದಿರದ ಟ್ರಸ್ಟ ಕಮೀಟಿಯಲ್ಲಿ ತೆಗೆದುಕೊಂಡು ಸಂಸ್ಥೆಯ ಕಾರ್ಯಗಳು ಸುಗಮವಾಗಿ ನಡೆಯುವಂತೆ ಯೋಜಿಸಿದರು. ಈ ವಿಷಮ ಕಾಲದಲ್ಲಿ ಶ್ರೀಗಳವರು ಪ್ರಯತ್ನಿಸಿರದಿದ್ದರೆ ಶಿವಯೋಗಮಂದಿರವೇ ಉಳಿಯುತ್ತಿರಲಿಲ್ಲ. ಶ್ರೀಗಳವರ ಉದ್ದೇಶವನ್ನು ಸಾಧಿಸಲು ಹಾಲಕೆರೆಯ ಶ್ರೀ ಅನ್ನದಾನ ಸ್ವಾಮಿಗಳು ಮತ್ತು ನವಿಲುಗುಂದದ ಶ್ರೀ ಬಸವಲಿಂಗ ಸ್ವಾಮಿಗಳು ಮತ್ತು ಉಳಿದವರೂ ಬಹು ಹೆಣಗಿದ್ದಾರೆ.

ಶ್ರೀಗಳವರು ಆಡಂಬರದ ಜೀವನದವರಲ್ಲ. ವೀರಶೈವ ಷಟ್‌ಸ್ಥಲಮಾರ್ಗದಲ್ಲಿ ಶ್ರೀಗಳವರು ಬಹು ನಿಷ್ಠೆಯಿಂದ ನಡೆದರು; ಉಳಿದವರಿಗೂ ಮಾರ್ಗ ತೋರಿದರು.

CC-0. Jangamwadi Math Collection. Digitized by eGangotri

ನೂತನ ಮಠಾಧಿಕಾರಿಗಳಿಗೆ ನಿರಂಜನ ಚರಪಟ್ಟಾಧಿಕಾರವನ್ನು ಶ್ರೀಗಳವರು ಹಾನಗಲ್ ಶ್ರೀಗಳವರ ಇಚ್ಛೆಯಂತೆ ಕೊಡುತ್ತಿದ್ದರು. ಶ್ರೀಗಳವರು ಅನೇಕ ಸ್ವಾಮಿಗಳಿಗೂ, ಗುರುಗಳಿಗೂ ಭಕ್ತರಿಗೂ ಅನುಗ್ರಹವನ್ನು ದಯಪಾಲಿಸಿ ರುವರು. ಅವರಿಂದ ಅನುಗ್ರಹ ಪಡೆದವರೆಲ್ಲರೂ ಸಮಾಜದಲ್ಲಿ ಸನ್ಮಾನ್ಯರಾಗಿ ಬಾಳಿದ್ದಾರೆ. ಅವರದು ಅಮೃತ ಹಸ್ತ. ಆ ಹಸ್ತ ಸ್ಪರ್ಶದಿಂದ 'ಗುರು ಮುಟ್ಟಿ ಗುರುವಾದರು' ಎಂಬುದು ಸಿದ್ಧವಾಗುತ್ತಿತ್ತು. ಅಂತಹ ಆದರ್ಶ ಮಹಾಸ್ವಾಮಿ ಗಳ ಪರಮಾದರ್ಶದಲ್ಲಿ ಎಲ್ಲರೂ ನಡೆದರೆ ವೀರಶೈವ ಸಮಾಜವು ಅಮೃತಮಯ ವಾಗಿ ಬಾಳುವುದಲ್ಲವೆ ?

CC-0. Jangamwadi Math Collection. Digitized by eGangotri

# ಹಾವೇರಿ ಶ್ರೀಗಳವರ ವಿಶಾಲದೃಷ್ಟಿ

## ಶ್ರೀ ಮೋಟಗಿ ಮಲ್ಲಿಕಾರ್ಜುನ, ಅಥಣಿ.

ಜಗದಾದಿ ಕಾರಣವಾದ ಆ ಪರಶಿವಲಿಂಗವು ತನ್ನ ಶಕ್ತಿ ವೈಭವದಿಂದ, ಪರಮ ಸ್ವಾತಂತ್ರ್ಯದಿಂದ, ಲೀಲಾವಿಲಾಸದಲ್ಲಿ ಚಿಚ್ಛಕ್ತಿ, ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ ಎಂದು ಆರು ಪ್ರಕಾರವಾಗಿ ಲೋಕ ಕಲ್ಯಾಣಕ್ಕೆ ಕಾರಣವಾಯಿತು.

ಅದೇ ಪ್ರಕಾರವಾಗಿ ಹಾವೇರಿ ಶ್ರೀ ಶಿವಬಸವ ಮಹಾಸ್ವಾಮಿಗಳವರ ವಿಶಾಲ ದೃಷ್ಟಿಯ ದಿವ್ಯ ಜೀವನದಲ್ಲಿ ಅವರ ಅಂತಃಶಕ್ತಿಯು ಆರು ಬಗೆಯಾಗಿ ಸಮಾಜಾ ಭ್ಯುದಯ ದೃಷ್ಟಿಯಲ್ಲಿ, ಜೀವಕಾರುಣ್ಯ ವೃಷ್ಟಿಯಲ್ಲಿ, ತಪೋಜೀವನ ಸೃಷ್ಟಿಯಲ್ಲಿ ಸಂಗೀತ ಕಲಾನಂದ ತುಷ್ಟಿಯಲ್ಲಿ, ಅನುಭಾವ ಕಥನ ಕಲಾಕೃಷಿಯಲ್ಲಿ, ಸರ್ವಾತ್ಮ ದೃಷ್ಟಿಯಲ್ಲಿ ಹೊಳೆದು ಬೆಳೆದು ಸಮಾಜಕ್ಕೂ ತದ್ವಾರಾ ನಾಡಿಗೂ ಹಿತವನ್ನುಂಟು ಮಾಡಿ ಮಾನವ ಕಲ್ಯಾಣಕ್ಕೆ ಕಾರಣವಾಯಿತು.

ಮೊದಲನೆಯದು ಪರಶಿವಲಿಂಗ ಲೀಲಾವಿಲಾಸವೆಂದು ಹೇಳಿದರೆ ಎರಡನೆ ಯದು ಶಿವಬಸವ ಮಹಾಸ್ವಾಮಿಗಳವರ ವಿಶಾಲ ದೃಷ್ಟಿಯ ಲೀಲಾವಿಲಾಸವೆಂದು ಹೇಳಬಹುದು. ಪರಶಿವಲಿಂಗ ಲೀಲೆಯು ಸಮಸ್ತ ಲೋಕಗಳ ಕಲ್ಯಾಣವನ್ನೊಳ ಗೊಂಡರೆ ಶಿವಬಸವ ಲೀಲೆಯು ಆ ಲಿಂಗದೇವನ ಮಹಿಮೆಯನ್ನೆಲ್ಲ ತೋರಿ ಸಾರಿ ಬೀರಿ ಮರ್ತ್ಯದ ಮಾನವಕೋಟಿಯ ಉದ್ಧಾರವನ್ನು ಕೈಗೊಂಡಿತು.

ಶ್ರೀಗಳವರಲ್ಲಿ ಆತ್ಮಸಂಯಮ, ಶಿವಲಿಂಗನಿಷ್ಠೆ, ವೀರ ವೈರಾಗ್ಯ, ಜೀವ ದಯಾಪರತೆ, ವಿಶಾಲದೃಷ್ಟಿ ಇವೇ ಮೊದಲಾದ ಸದ್ಗುಣಗಳು ನೆಲೆಗೊಂಡಿ ದ್ದರಿಂದಲೇ ಅವರು ಮಹಾತ್ಮರೆನಿಸಿದರು; ಶಿವಯೋಗಿಗಳೆನಿಸಿದರು. ಶ್ರೀಗಳವರು ತಪಃಪ್ರಭಾವದಿಂದ ಬೆಳಗಿ ಲೋಕದ ಬಾಳಿಗೆ ಬೆಳಕಾದರು.

### ಸಮಾಜಾಭ್ಯುದಯ ದೃಷ್ಟಿ

ಸದ್ಗುರುವರೇಣ್ಯರಾದ ಅಥಣಿಯ ಶ್ರೀ ಮುರುಘಸಿದ್ಧ ಶಿವಯೋಗಿಗಳವರ ಕೃಪಾಛತ್ರದಲ್ಲಿ ಬೆಳೆದು ಪ್ರಬುದ್ಧಾವಸ್ಥೆಯಲ್ಲಿದ್ದ ಶಿವಬಸವ ಮಹಾಸ್ವಾಮಿಗಳವರು ಹಾವೇರಿಯ ಹುಕ್ಕೇರಿ ಮಠಾಧಿಪತಿಗಳಾಗಿದ್ದರು. ಈ ಪೂರ್ವದಲ್ಲಿ ಶ್ರೀ ಮುರುಘ ಸಿದ ಶಿವಯೋಗಿಗಳವರ ಸಮ್ಮುಖದಲ್ಲಿದ್ದು ಶಿವಾನುಭವ ಶಾಸ್ತ್ರವನ್ನು ಷಟ್‌ಸ್ಥಲ

CC-0. Jangamwadi Math Collection. Digitized by eGangotri

ಮಾರ್ಗವನ್ನೂ ಚನ್ನಾಗಿ ತಿಳಿದುಕೊಂಡವರಾಗಿದ್ದರು. ಹಾವೇರಿ ಶ್ರೀಗಳವರು ತಮ್ಮ ಸಮಕಾಲೀನರಾಗಿ ವೀರಶೈವ ಸಮಾಜೋನ್ನತಿಗಾಗಿ ಹಗಲಿರುಳು ಹೆಂಬಲಿಸುತ್ತಲಿದ್ದ ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳವರಿಗೆ 'ಶಿವಯೋಗ ಮಂದಿರ'ದ ಸ್ಥಾಪನೆಗಾಗಿ ತುಂಬ ನೆರವಾದರು. ಹಾನಗಲ್ಲ ಶ್ರೀಗಳವರು ಶಿವಯೋಗಮಂದಿರ ಶಿಶುವಿಗೆ ತಂದೆಯೆನಿಸಿದರೆ, ಹಾವೇರಿ ಶ್ರೀಗಳವರು ತಾಯಿಯೆನಿಸಿದರು.

ಆ ಕಾಲದಲ್ಲಿ ಬ್ರಿಟಿಷರ ದಬ್ಬಾಳಿಕೆಯ ಪರಿಣಾಮವಾಗಿ ಭಾರತೀಯ ಧರ್ಮ ಸಂಸ್ಕೃತಿಗೆ ಹಾನಿಯುಂಟಾಗುತ್ತಲಿದ್ದಿತು. ಇಂತಹ ವಿಪನ್ನಾವಸ್ಥೆಯಲ್ಲಿ ಧರ್ಮ ಗುರುಗಳು ಸನ್ಮಾರ್ಗಗಾಮಿಗಳಾಗಿ ತಮ್ಮ ಪವಿತ್ರಸ್ಥಾನದ ಹೊಣೆಯನ್ನರಿತು ನಡೆಯಬೇಕಾದುದು ಅತ್ಯವಶ್ಯಕವಾಗಿತ್ತು. ಧರ್ಮಗುರುಗಳು ಧರ್ಮವನ್ನು ರಕ್ಷಿಸಬೇಕು, ಸರ್ವರೂ ಶಿವಯೋಗಿಗಳಾಗಬೇಕು, ಸಮಾಜೋನ್ನತಿಯಾಗಬೇಕು ಎಂಬ ಹಾರೈಕೆಯುಳ್ಳವರಾಗಿ ಆ ದಿಶೆಯಲ್ಲಿ ಹಾವೇರಿ ಶ್ರೀಗಳವರು ಬಹುವಾಗಿ ಶ್ರಮಿಸಿದರು. ಸಾಧಕರು ತಮ್ಮ ಆತ್ಮೋದ್ಧಾರವನ್ನು ಮೊದಲು ಮಾಡಿಕೊಳ್ಳಬೇಕು, ಆಮೇಲೆ ಲೋಕದ ಸಕಲ ಜೀವಾತ್ಮರೆಲ್ಲರೂ ಸುಖಿಗಳಾಗಲೆಂದು ಬಯಸಿ ಪಾರಮಾರ್ಥವನ್ನು ಸಾಧಿಸಬೇಕು ಎಂದು ಬೋಧಿಸಿದರು.

ಶ್ರೀಗಳವರು ವಿದ್ಯಾಭಿವೃದ್ಧಿಗಾಗಿ ಸಂಸ್ಕೃತ ಪಾಠಶಾಲೆಯೊಂದನ್ನು ಸ್ಥಾಪಿಸಿದರು. ವಿದ್ಯಾಸಂಸ್ಥೆಗಳ ಬೆಳವಣಿಗೆಗಾಗಿ ಧನ ಸಹಾಯ ನೀಡಿದರು. ಹೀಗೆ ಶ್ರೀಗಳವರು ತಮ್ಮ ತಪೋಜೀವನದುದ್ದಕ್ಕೂ ನಾನಾಮುಖವಾಗಿ ಸಮಾಜಾಭ್ಯುದಯದ ಮಹತ್ಕಾರ್ಯಗಳನ್ನು ಸಾಧಿಸಿದರು. ಧಾರ್ಮಿಕ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಉತ್ತಮ ಕೃಷಿಗೆಯ್ದರು.

## ಜೀವಕಾರುಣ್ಯ ವೃಷ್ಟಿ

"ಕೊಲ್ಲುವನೇ ಮಾದಿಗ. ಹೊಲಸು ತಿಂಬುವನೇ ಹೊಲೆಯ.
ಕುಲವೇನೋ, ಅವಂದಿರ ಕುಲವೇನೋ ? ಸಕಲ ಜೀವಾತ್ಮರಿಗೆ
ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು"

ಎಂಬ ಶ್ರೀ ಬಸವಣ್ಣನವರ ಅಮೃತವಾಣಿಯಂತೆ ಶ್ರೀ ಶಿವಬಸವ ಮಹಾಸ್ವಾಮಿಗಳವರು ಸಕಲ ಜೀವದಯಾಪರರಾಗಿದ್ದರು. ಅವರು ಸದಾಕಾಲದಲ್ಲಿಯೂ ಲಿಂಗಪೂಜೆ ಲಿಂಗಾನಂದದಲ್ಲಿಯೇ ಕಾಲ ಕಳೆಯುತ್ತಿದ್ದರು. ಒಂದು ಸಮಯದಲ್ಲಿ ಶ್ರೀಗಳವರು ನಿಡಗುಂದಿಗೆ ದಯಮಾಡಿಸಿದ್ದರು. ಅಲ್ಲಿನ ಕನ್ನಡ ಶಾಲಾಶಿಕ್ಷಕರಾದ ಶ್ರೀ ಲಿಂಗಪ್ಪ ಅವರ ಮಗಳಾದ ಮಹಾಲಿಂಗವ್ವ ಎಂಬಾಕೆಯ ಚಿಕ್ಕ ಮಗುವಿಗೆ ವಿಷಮಜ್ವರ ಬಂದಿದ್ದವು. ಅನೇಕ ವೈದ್ಯರಿಂದ ಔಷಧೋಪಚಾರ ಮಾಡಿಸಿ

CC-0. Jangamwadi Math Collection. Digitized by eGangotri

ದರೂ ಈ ಮಗುವಿನ ವಿಷಮಜ್ವರವೇ ಇಳಿಯಲಿಲ್ಲ. ಮಾತೃಹೃದಯದ ಮಹಾಲಿಂಗವ್ವನು ಮಗನ ಮೇಲಣ ಮೋಹದಿಂದ ದುಃಖಿತ ಹೃದಯಳಾಗಿ "ಶಿವಬಸವೇಶನೇ, ನೀನೇ ನನ್ನ ಕಂದವ್ವನನ್ನು ಕಾಯಬೇಕು"ಎಂದು ಮನಸ್ಸಿನಲ್ಲಿ ಸ್ವಾಮಿಗಳನ್ನು ಕುರಿತು ಸ್ಮರಿಸಿದಳು.

ಇತ್ತಕಡೆಗೆ ಲಿಂಗಾರ್ಚನೆಯ ಆನಂದೋನ್ಮಾದದಲ್ಲಿ ನಲಿದಾಡುವ ಶ್ರೀಗಳವರು ತಕ್ಷಣ ಸೇವಕನಾದ ಇಲಕಲ್ಲ ಸಂಗಪ್ಪನನ್ನು ಕರೆದು " ಇಂದು ಊರೊಳಗೆ ನಡೆ ಹೋಗೋಣ" ಎಂದು ಅಪ್ಪಣೆಗೆಯ್ದು, ಶ್ರೀಗಳವರು ಸಂಗಪ್ಪನೊಡನೆ ನಡೆದು ಶೋಕಗ್ರಸ್ತಳಾದ ಮಹಾಲಿಂಗವ್ವನ ಮನೆಗೆ ಬಂದರು. ಅಲ್ಲಿಯ ಅನುತಾಪವನ್ನು ಕಂಡು ಸೈರಿಸಲಾರದೆ ಶ್ರೀಗಳು– " ತಂಗೀ ಮಹಾಲಿಂಗವ್ವ, ಇಷ್ಟೇಕೆ ಗಾಬರಿಯಾಗಿರುವಿ ? ಶಿವಾನುಗ್ರಹದಿಂದ ನಿನ್ನ ಮಗುವಿಗೆ ಒಳ್ಳೆಯದಾಗುವದು, ದುಃಖಿಸಬೇಡ ತಂಗಿ, ಶಾಂತಳಾಗು" ಎಂದು ಹೇಳಿ ಮಗುವಿಗೆ ತಮ್ಮ ಪರುಷ ಹಸ್ತದಿಂದ ಭಸ್ಮ ಲೇಪನ ಮಾಡಿದರು. ಅಷ್ಟರಲ್ಲಿಯೇ ಮಗುವಿನ ಜ್ವರಬಾಧೆಯಳಿದು ಹೋಗಿ ಗುಣಮುಖವಾಯಿತು. ಆಗ ಮಹಾಲಿಂಗವ್ವನ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು. ಸರ್ವರೂ ಶ್ರೀಗಳವರ ಮಹಿಮೆಯನ್ನು ಶ್ಲಾಘಿಸಿದರು. ಇದರಂತೆಯೇ ಶ್ರೀಗಳವರ ಯೋಗಜೀವನದಲ್ಲಿ ಅನೇಕ ಮಹಿಮಾನ್ವಿತ ಘಟನೆಗಳು ಆಗಿ ಹೋಗಿರುವವು. ಇದೆಲ್ಲವೂ ಶ್ರೀಗಳವರ ವಿಶಾಲ ದೃಷ್ಟಿಯ ಜೀವ ಕಾರುಣ್ಯ ವೃಷ್ಟಿಯೆನ್ನಬಹುದು.

## ತಪೋಜೀವನ ಸೃಷ್ಟಿ

ವೈರಾಗ್ಯ ಶಿಖಾಮಣಿಗಳಾದ ಶ್ರೀ ಶಿವಬಸವ ಮಹಾಸ್ವಾಮಿಗಳವರು ಪ್ರಶಾಂತವಾದ ಶಿವಯೋಗಮಂದಿರದ ಪುಣ್ಯಾರಣ್ಯದಲ್ಲಿ ಒಂದು ಪರ್ಣಕುಟೀರವನ್ನು ರಚಿಸಿಕೊಂಡು ತಪವನ್ನು ಪ್ರಾರಂಭಿಸಿದರು. ನಿಸರ್ಗ ಸೌಂದರ್ಯದಿಂದ ತುಂಬಿ ತುಳುಕುವ ಈ ನಿತಾಂತ ಪ್ರದೇಶದಲ್ಲಿ ಶ್ರೀಗಳವರ ತಪೋಬಲದಿಂದ ಹರಿಣ, ಸಾರಂಗ, ಮೊಲ, ಗೋವು ಮೊದಲಾದ ಸಾಧು ಪ್ರಾಣಿಗಳೂ ಹುಲಿ, ಚಿರ್ಚ, ತೋಳ ಮೊದಲಾದ ಹಿಂಸ್ರ ಪಶುಗಳೂ ಕೂಡಿಕೊಂಡು ತಮ್ಮ ವೈರಭಾವವನ್ನು ತೊರೆದು ಸ್ನೇಹದಿಂದ ಚಿನ್ನಾಟವಾಡುತ್ತಲಿವೆ. ಅಲ್ಲಲ್ಲಿ ತರುಲತಾದಿಗಳಲ್ಲಿ ಗಿಳಿ, ಕೋಕಿಲೆಗಳು ತಮ್ಮ ಮೃದು ಮಧುರ ಕಂಠದಿಂದ ಸಂಗೀತವನ್ನು ಪಾಡುತ್ತಲಿವೆ. ಮಂಜುಳ ನಿನಾದವನ್ನು ಮಾಡುತ್ತ ಮಂದಗಮನೆಯಾದ ಮಲಪ್ರಭೆಯು ಹರಿಯುತ್ತಲಿದೆ. ಅಲ್ಲಲ್ಲಿ ಗಿರಿಶಿಖರಗಳು ಆಗಸಕೆ ಚುಂಬನವ ಕೊಡುತ್ತಲಿವೆ. ಪಶ್ಚಿಮಾದ್ರಿಯಲ್ಲಿ ರಕ್ತವರ್ಣದ ರಂಜಿತ ರವಿಯು ತನ್ನ ಹೊಂಗಿರಣಗಳನ್ನು ಹರಹಿದ್ದಾನೆ. ಭೂದೇವಿಯು ಹಚ್ಚ ಹಸರು ಹೊಚ್ಚಿಕೊಂಡು ಹರ್ಷಭರಿತಳಾಗಿ ಪವಡಿಸಿದ್ದಾಳೆ. ಆಗ

CC-0. Jangamwadi Math Collection. Digitized by eGangotri

ಸದ ಚಂದಿರನು ಇನಿತು ಸೊಬಗನು ಕಂಡು ಆನಂದದಲಿ ಕುಲುಕುಲು ನಗುತ ಲಿಹನು. ಎಲ್ಲೆಲ್ಲಿಯೂ ಘನ ಗಂಭೀರ ಶಾಂತಿಯೇ ಶಾಂತಿ ! ಈ ಮಧ್ಯದಲ್ಲಿ ಕುಳಿತು ಲಿಂಗತಪಸ್ಸನ್ನಾಚರಿಸುತ್ತಲಿದ್ದ ಶ್ರೀಗಳು ಸ್ವಸ್ವರೂಪ ಸಾಕ್ಷಾತ್ಕಾರವನ್ನು ಪಡೆದು ಶಿವಾನಂದ ಸಮುದ್ರದಲ್ಲಿ ಮುಳಿಗೇಳುವರು. ಇಂತಹ ಶಿವಯೋಗಿಯ ಮಹಿಮೆಯನ್ನು ಕುರಿತು ಮುಗ್ಗಿಯ ಮಾಯಿದೇವರು ಹೀಗೆ ಹೇಳುತ್ತಾರೆ :

ಶರಣಂ ಶಾಂಭವಯೋಗಿಯಿರ್ದ ನೆಲನೇ ಕ್ಷೇತ್ರಂ ಪವಿತ್ರ ಪರಂ
ದಿರದಿಂದೇರಿದ ಬೆಟ್ಟಮೇ ಘನತರಂ ಶ್ರೀಪರ್ವತಂ ಸ್ವೇಚ್ಛೆಯಿಂ ।
ರಿದದಾಕ್ರೀಡಿಸಲೆಂದು ಪೊಕ್ಕ ಜಲಮೇ ತೀರ್ಥಂ ಮಹಾ ಪಾವನಂ
ನಿರುತಂ ಲೀಲೆಯೊಳೊಲ್ದು ಮಾಡಿದುದೆ ತಾಂ ದೈವಂ ಶಿವಾವಲ್ಲಭಾ ॥

ಇಂತಹ ಶಿವಯೋಗಿಗಳು ನೆಲಸಿರುವ ನೆಲವೇ ಪವಿತ್ರ ಕ್ಷೇತ್ರವು. ಇವರು ಹತ್ತಿದ ಪರ್ವತವೇ ಶ್ರೇಷ್ಠವಾದ ಶ್ರೀಗಿರಿಯು. ಇಂತಹ ಶಿವಯೋಗಿಯ ಪಾದ ಸ್ಪರ್ಶದಿಂದ ನೀರು ಶುದ್ಧವಾಗುವದು. ಶಿವಯೋಗಿಯು ಪ್ರೀತಿಪುರಸ್ಸರವಾಗಿ ಲೀಲೆಯಿಂದ ಪೂಜಿಸಿದುದೇ ದೈವವು. ಇಂತಹ ನಿಗ್ರಹಾನುಗ್ರಹ ಸಮರ್ಥರಾದ ಶಿವಯೋಗಿಗಳ ತಪೋಜೀವನವು ಮಹಂತವಾದುದು; ಅಸದೃಶವಾದುದು.

## ಸಂಗೀತ ಕಲಾನಂದ ತುಷ್ಟಿ

ಕಾವ್ಯ, ಚಿತ್ರ, ಶಿಲ್ಪ, ನಾಟ್ಯ ಮೊದಲಾದ ಕಲೆಗಳಲ್ಲಿ ಸಂಗೀತ ಕಲೆಯೂ ಒಂದು. ಈ ಮಧುರ ಸಂಗೀತವನ್ನು ಕೇಳಿ ಮಾನವನಷ್ಟೇ ಏಕೆ, ಪಶುಪಕ್ಷಿಗಳೂ ಕೂಡ ಆನಂದಿಸುತ್ತಲಿವೆ. ಸರ್ಪಗಳಂತೂ ಸಂಗೀತಕ್ಕೆ ತಲೆದೂಗಿ ಕುಣಿಯುತ್ತ ಲಿವೆ. ಹಾವೇರಿ ಶ್ರೀಗಳುವರು ಸಂಗೀತಕಲೆಯಲ್ಲಿ ತುಂಬ ನಿಷ್ಣಾತರಾಗಿದ್ದರು. ಅಂತೆಯೇ ಶ್ರೀಗಳು ಚಿಕ್ಕಂದಿನಲ್ಲಿದ್ದಾಗ ಅವರ ಗುರುಗಳಾದ ಮುರುಳಸಿದ್ಧ ಶಿವ ಯೋಗಿಗಳು ಇವರನ್ನು ಸಂಗೀತ ಶಿಕ್ಷಣಕ್ಕಾಗಿ ಮಿರಜಿಗೆ ಕಳಿಸಿದ್ದರಂತೆ. ಶ್ರೀಗಳ ವರು ಸಾಹಿತ್ಯ ವಿಷಯದಲ್ಲಿಯಂತೂ ಮೊದಲೇ ಪರಿಣತಮತಿಗಳಾಗಿದ್ದರು. ಇವರು ಅಥಣಿಯ ಶ್ರೀ ಶೆಟ್ಟರ (ಕುಮಾರ) ಮಠಕ್ಕೆ ಆಗಮಿಸಿದ ವೇಳೆಯಲ್ಲಿ ಇಲ್ಲಿನ ಸಂಗೀತ ವಿಶಾರದರೆನಿಸಿದ ಶ್ರೀ ಕಾಗವಾಡ ಅಪ್ಪಣ್ಣ ಎಂಬವರು ಭಕ್ತಿಯಿಂದ ತಮ್ಮ ಸುಶ್ರಾವ್ಯ ಸಂಗೀತ ಮಾಧುರ್ಯವನ್ನು ಸವಿಸಿ ದಿಲ್‌ರೂಬ ಮೊದಲಾದ ವಾದನಕಲಾ ನೈಪುಣ್ಯ ವನ್ನು ತೋರಿಸಿ ಸ್ವಾಮಿಗಳವರನ್ನು ಸಂತೋಷ ಸಾಗರದಲ್ಲಿ ತೇಲಿಸಿ ಬಿಡುತ್ತಿದ್ದರು.

ಶ್ರೀಗಳವರು ನಿಜವಾದ ಸಂಗೀತ ಕಲೆಯ ಸಾರ್ಥಕತೆಯ ಬಗೆಗೆ ತಮ್ಮ ಅನುಭವ ವಾಣಿಯಿಂದ ಹೀಗೆ ವಿವರಿಸಿದರು : "ಒಂದು ಊರ ಹೊರಗೆ ಅಲ್ಲಿನ ದೇವರ ಮಂದಿರದಲ್ಲಿ ಒಂದು ದಿನ ಪ್ರಾತಃಕಾಲದಲ್ಲಿ ಓರ್ವ ಗಾನಕಲಾ ವಿಶಾರದನು.

CC-0. Jangamwadi Math Collection. Digitized by eGangotri

ಅತ್ಯಂತ ಭಕ್ತಿಪರವಶನಾಗಿ ಈಶ್ವರ ಪ್ರಾರ್ಥನಾ ಗೀತೆಯನ್ನು ಹೇಳುತ್ತ ಆತ್ಮಾನಂದ ದಲ್ಲಿ ತನ್ಮಯನಾಗಿದ್ದನು. ಇದೇ ಸಮಯದಲ್ಲಿ ಮಾರ್ಗದಲ್ಲಿ ಹೊರಟಿದ್ದ ಅದೇ ಊರಿನ ಅರಸು ಕುಮಾರನು ಈತನ ಇಂಪಾದ ಮಧುರ ಸಂಗೀತವನ್ನು ಕೇಳಿ ಮಂತ್ರಿ ಸಹಿತವಾಗಿ ಅಲ್ಲಿಗೆ ಬಂದನು. ಸಂತೋಷ ಸ್ವಾಂತನಾದ ಮಹಾರಾಜನು ತನ್ನ ಸಚಿವನನ್ನು ಕರೆದು 'ಗಾನವಿಶಾರದನಿಗೆ ಬೇಕಾದುದನ್ನು ಕೊಡುತ್ತೇನೆ. ಅವನಿಗೆ ಬರಹೇಳು' ಎಂದನು. ರಾಜಾಜ್ಞೆಯಂತೆ ಮಂತ್ರಿಯು ದೇವಮಂದಿರ ವನ್ನು ಪ್ರವೇಶಿಸಿ ಶಿವಲಿಂಗಪಿಂಡಿಕೆಯ ಸಮ್ಮುಖದಲ್ಲಿ ಆನಂದ ಪರವಶತೆಯಿಂದ ತಲ್ಲೀನನಾಗಿ ನಿದ್ರೆ ಹೋಗಿದ್ದ ಗಾಯಕನನ್ನು ಕುರಿತು "ಅಪ್ಪಾ ಗಾನವಿಶಾರದನೇ, ನಮ್ಮ ಮಹಾರಾಜರು ನಿನ್ನ ಸಂಗೀತಕಲೆಗೆ ಮೆಚ್ಚಿದ್ದಾರೆ. ನೀನು ಬೇಡಿದುದನ್ನು ಅವರು ಕೊಡುತ್ತಾರೆ. ಅದಕ್ಕಾಗಿ ನೀನು ಮಹಾರಾಜರ ಅರಮಂದಿರಕ್ಕೆ ಅವರ ಜೊತೆಯಲ್ಲಿ ಬರಬೇಕು" ಎಂದು ಆಜ್ಞಾಪಿಸಿದನು. ದೇವ-ಭಕ್ತ ಹೃದಯಗಳೊಂ ದಾಗಿದ್ದ ಪರಮಾನಂದ ಸುಖದ ಬೆಸುಗೆಯನ್ನೇ ಬಿಚ್ಚಿ ಲೌಕಿಕದ ಕ್ಷಣಿಕ ಸುಖ ದಾಶೆಯ ನುಡಿಗಳನ್ನಾಡಿದ ಮಂತ್ರಿಯನ್ನು ಕಂಡು ದುಃಖಾಕ್ರಾಂತನಾಗಿ ಕಂಬನಿ ಗರೆಯಲಾರಂಭಿಸಿದನು. ತಾತ್ಪರ್ಯವಿಷ್ಟೇ. ದೈವದತ್ತವಾದ ಕಲೆಯು ಕೇವಲ ಸಾಮಾನ್ಯ ಜನತೆಯ ಸಂತುಷ್ಟಿಗಾಗಿ ಅಷ್ಟೇ ಇರದೆ, ಅದು ಹೆಚ್ಚಾಗಿ ದೈವಭಕ್ತಿ ರತಿ ಯಲ್ಲಿಯೇ ಬಳಸಲ್ಪಡಬೇಕು. ಕಲೆಯು ಕಲಾತಪಸ್ಸಾಗಬೇಕು. ಈ ಕಲಾ ತಪಸ್ಸಾಧನೆಯಿಂದ ಅಮೃತಾನಂದವನ್ನು ಅನುಭವಿಸುತ್ತ ಪರಮಾತ್ಮನಲ್ಲಿ ಬೆರೆಯ ಬೇಕು. ಅಂದರೇನೆ, ಕಲೆಯ ಸಾರ್ಥಕತೆಯು." ಕಲೆಯ ಸಾರ್ಥಕ್ಯದ ಬಗೆಗೆ ಹೀಗೆ ಅಪ್ಪಣೆ ಕೊಡಿಸಿದರು ಶ್ರೀಗಳು.

## ಅನುಭಾವ ಕಥನ ಕಲಾಕೃಷಿ

ಶ್ರೀಗಳವರು ತಾವು ಇನ್ನೂ ಮರಿದೇವರಾಗಿರುವಾಗಲೇ ಪುರಾಣ ಹೇಳುವ ಕಲೆಯನ್ನು ಅಳವಡಿಸಿಕೊಂಡಿದ್ದರು. ಶ್ರೀಗಳವರು ಕನ್ನಡ-ಸಂಸ್ಕೃತ ಉಭಯ ಭಾಷಾ ವಿಶಾರದರಾಗಿದ್ದರು. ಜೊತೆಗೆ ಸಾಹಿತ್ಯ–ಸಂಗೀತ ಕಲೆಗಳ ಸಂಗಮವಾದ ಮೇಲೆ ಕೇಳುವದೇನು! ಸವದತ್ತಿಯಲ್ಲಿ ಶ್ರೀ ಬಸವೇಶ್ವರ ಪುರಾಣವನ್ನು ತಮ್ಮ ಅನುಗ್ರಹ ಗುರುಗಳಾದ ಶ್ರೀ ಬಿದರಿ ಕುಮಾರಸ್ವಾಮಿಗಳವರ ಅಪ್ಪಣೆಯ ಮೇರೆಗೆ ಅವರು ಹೇಳಲು ಪ್ರಾರಂಭಿಸಿದಾಗ, ವಿಷಯ ಪ್ರತಿಪಾದನೆಯಲ್ಲಿ ಕಂಡು ಬರುವ ಶಾಸ್ತ್ರನೈಪುಣ್ಯ, ವಾಕ್‌ಚಾತುರ್ಯ, ಸಾಹಿತ್ಯ ಸೌಂದರ್ಯ, ಗಾನಮಾಧುರ್ಯ ಮೊದ ಲಾದುವುಗಳನ್ನು ನೋಡಿ ಮೆಚ್ಚಿ ಶ್ರೋತೃಗಳು ಮಂತ್ರಮುಗ್ಧರಾದರು. ಶ್ರೀಗಳು ಸತತವಾಗಿ ಆರು ತಿಂಗಳುಗಳ ವರೆಗೆ ಶ್ರೀ ಬಸವಣ್ಣನವರ ಪುರಾಣವನ್ನು ತಮ್ಮ ಅಮೃತ ವಾಣಿಯಿಂದ ಹೇಳಿ ಅದೆಷ್ಟೋ ಸಹಸ್ರಾರು ಭಕ್ತರನ್ನು ತಣಿಸಿ ಪುನೀತರ ನ್ನಾಗಿ ಮಾಡಿದರು. ಅನುಭಾವದ ಹಿರಿಮೆಯನ್ನು ಕುರಿತು ಶ್ರೀ ಬಸವಣ್ಣನವರು :

CC-0. Jangamwadi Math Collection. Digitized by eGangotri

" ಅನುಭಾವವಿಲ್ಲದ ಭಕ್ತಿ ಅರಿವಿಂಗೆ ಬಾರದು.
ಅನುಭಾವವಿಲ್ಲದ ಸಂಗ ಸಮರಸ ಸುಖಕ್ಕೆ ನಿಲುಕದು.
ಅನುಭಾವವಿಲ್ಲದ ಪ್ರಸಾದ ಪರಿಣಾಮವ ಕೊಡದು.
ಅನುಭಾವವಿಲ್ಲದೆ ಏನೇನೂ ಅರಿಯಬಾರದು.
ತನ್ನಲ್ಲಿ ಸನ್ನಿಹಿತ ಉಳ್ಳೊಡೆ ಶಿವಶರಣರ ಸಂಗವು
ಏತಕ್ಕೆನಲುಂಟೆ ? ಕೂಡಲ ಸಂಗಮದೇವಯ್ಯ !
ನಿಮ್ಮ ಅನುಭಾವ ಮಾತಿನ ಮಥನವೊಂದು ನುಡಿಯಬಹುದೇ ? "

ಹೆಚ್ಚಾಗಿ ಅನುಭಾವವನ್ನು ಅರುಹುವದೇ ಶ್ರೀಗಳವರ ಬೋಧೆಯ ತಿರುಳಾಗಿತ್ತು. ಅಂತೆಯೇ ಅವರು ಯಾವಾಗಲೂ ಅನುಭಾವದ ಮಾತುಗಳನ್ನು ಹೇಳುತ್ತ ಭಾವಪರವಶರಾಗುತ್ತಿದ್ದರು. ಸ್ವಾಮಿಗಳವರು ತಮ್ಮ ಅಂತರಂಗದ ಅನುಭಾವ ರತ್ನದ ಬೆಳಕನ್ನು ನಾಡಿನಲ್ಲೆಲ್ಲ ಪಸರಿಸಿದರು; ಮುಮುಕ್ಷುಗಳ ಹೃದಯವನ್ನು ತಣಿಸಿದರು. ಶ್ರೀಗಳವರು ತಮ್ಮ ತುಂಬು ಜೀವನದ ವೃದ್ಧಾಪ್ಯ ಕಾಲದಲ್ಲಿ ತಮ್ಮ ಗುರುಸ್ಥಾನವಾದ ಅಥಣಿಯ ಶ್ರೀ ಶೆಟ್ಟರ (ಕುಮಾರ) ಮಠಕ್ಕೆ ಆಗಮಿಸಿದ್ದರು. ಶ್ರೀಗಳವರು ಲಿಂಗೈಕ್ಯರಾಗುವ ಒಂದು ವರ್ಷ ಮೊದಲು ಇದೇ ಶೆಟ್ಟರ ಮಠದಲ್ಲಿಯೇ ತಮ್ಮ ಅಮೃತವಾಣಿಯಿಂದ ಶರಣಶಿಖಾಮಣಿ ನಾಲ್ವತ್ತವಾದ ವೀರೇಶ್ವರ ಪುರಾಣವನ್ನು ಸುಶ್ರಾವ್ಯವಾಗಿ ನಿರೂಪಿದ್ದರು. ಈ ಪುರಾಣವನ್ನು ಶ್ರೀ ಸವದತ್ತಿ ಕಲ್ಮಠಾಧೀಶರಾದ ಕುಮಾರ ಸ್ವಾಮಿಗಳವರೇ ಓದುತ್ತಿದ್ದರು. ಶ್ರೀಗಳವರು ಸುಗಮವಾಗಿ ಅರ್ಥೈಸಿ ಶ್ರೋತೃಗಳು ತಲೆದೂಗುವಂತೆ ಹೇಳುತ್ತಿದ್ದರು.

ಒಮ್ಮೆ ಶ್ರೀಗಳವರು ಅಜ್ಞಾನಿಗಳು ಹೇಗೆ ಸಂಸಾರದಲ್ಲಿ ಸಿಕ್ಕಿ ಬಿದ್ದು ಬಳಲುವರೆಂಬುದನ್ನು ಬಹು ಮಾರ್ಮಿಕವಾಗಿ ತಮ್ಮ ಅನುಭಾವದ ಮಾತಿನಿಂದ ಈ ರೀತಿಯಾಗಿ ಅಪ್ಪಣೆ ಕೊಡಿಸಿದರು : " ಬಲ್ಲಾಳ ಹುಳುವು ಶ್ರಮವಹಿಸಿ ಮುಳ್ಳಿನ ಕಡ್ಡಿಗಳನ್ನು ತಂದು ತನ್ನ ಸುತ್ತುಮುತ್ತಲೂ ಸುತ್ತಿಕೊಂಡು ಮಧ್ಯದಲ್ಲಿ ತಾನು ಸಿಕ್ಕಿಕೊಂಡಿರುವೆನೆಂಬ ಪರಿವೆಯಿಲ್ಲದೆ ಸತ್ತುಹೋಗುವಂತೆ, ಮರುಳು ಮಾನವನು ತಾನೆ ರಚಿಸಿದ ಸಂಸಾರದಲ್ಲಿ ತಿಳಿಯದೆ ಬಿದ್ದು ಬಳಲಿ ಮೃತಿಹೊಂದಿ ಹೋಗುವನು." ಹೀಗೆ ಶ್ರೀಗಳವರು ಪ್ರಸಾದ ರೂಪದಲ್ಲಿ ಬಿತ್ತರಿಸಿದ ಅವರ ಅನುಭವೋಕ್ತಿಗಳು ಹೇರಳವಾಗಿವೆ.

## ಸರ್ವಾತ್ಮದೃಷ್ಟಿ

ಸರ್ವಸ್ತರತು ದುರ್ಗಾಣಿ ಸರ್ವೇ ಭದ್ರಾಣಿ ಪಶ್ಯತು ।
ಸರ್ವಸ್ಸದ್ಬುದ್ಧಿಮಾಪ್ನೋತು ಸರ್ವಸ್ಸರ್ವತ್ರ ನಂದತು ॥

CC-0. Jangamwadi Math Collection. Digitized by eGangotri

ಎಂಬ ಶಾಂತಿಸೂಕ್ತದ ಮಹದುಕ್ತಿಯಂತೆ ಹಾವೇರಿ ಶ್ರೀ ಶಿವಬಸವ ಮಹಾ ಸ್ವಾಮಿಗಳವರು ಸರ್ವಾತ್ಮದೃಷ್ಟಿಯುಳ್ಳವರಾಗಿ ಸರ್ವರ ಮುಕ್ತಿಗಾಗಿ ಶ್ರಮಿಸಿದರು. ಶ್ರೀಗಳವರು ತಮ್ಮ ೮೯ ವರ್ಷಗಳ ಮಹಾಜೀವನದಲ್ಲಿದ್ದರೂ ಅವರ ದೀರ್ಘ ದೇಹವು ದೃಢಕಾಯವೆನಿಸಿತ್ತು. ಜಿತೇಂದ್ರಿಯತ್ವವನ್ನು ತಮ್ಮಲ್ಲಿ ಚನ್ನಾಗಿ ಅಳವಡಿಸಿಕೊಂಡು ಅವರು ರಾಜಯೋಗಿಗಳಾಗಿ ಕಂಗೊಳಿಸಿದರು. ಶ್ರೀಗಳವರ ದಿವ್ಯಜೀವನದಲ್ಲಿ ಭೋಗ-ಯೋಗಗಳ ಸುಂದರ ಸಮನ್ವಯವನ್ನು ಕಾಣಬಹುದು.

ಈ ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲಿ ಪೂಜ್ಯ ಅಥಣಿ ಶಿವಯೋಗಿಗಳು, ಬೀಳೂರು ಗುರುಬಸವ ಸ್ವಾಮಿಗಳು, ಬಿದರಿ ಕುಮಾರ ಸ್ವಾಮಿಗಳು, ಹಾನಗಲ್ಲ ಕುಮಾರ ಸ್ವಾಮಿಗಳು, ಹುಬ್ಬಳ್ಳಿ ಜಗದ್ಗುರು ಮೂರುಸಾವಿರಮಠ ಗುರುಸಿದ್ಧ ಮಹಾಸ್ವಾಮಿಗಳು, ತ್ಯಾಗವೀರ ಶಿರಸಂಗಿ ಲಿಂಗರಾಜರು, ವಾರದ ಮಲ್ಲಪ್ಪನವರು ಇವರೇ ಮೊದಲಾದ ಮಹಾನುಭಾವಿಗಳು ಕರ್ನಾಟಕದಲ್ಲಿ ಜನ್ಮವೆತ್ತಿ ಬಂದು ವೀರಶೈವ ಸಂಸ್ಕೃತಿ, ಸಮಾಜವನ್ನು ರಕ್ಷಿಸಿದರು. ಈ ಕಾಲದ ವೀರಶೈವ ಧರ್ಮ ವಿಜಯ ಧ್ವಜವನ್ನು ಎತ್ತಿ ನಿಲ್ಲಿಸಿದ ಶ್ರೇಯಸ್ಸು ಮೇಲಿನ ಪುಣ್ಯ ಶ್ಲೋಕಿಗಳಿಗೂ ಹಾವೇರಿ ಶ್ರೀಗಳವರಿಗೂ ಸಲ್ಲಬೇಕು. ಹಾವೇರಿ ಶ್ರೀಗಳವರು ವೀರ ವಿರಾಗಿಗಳಾಗಿ ವಿರಾಜಿಸುತ್ತ ಆಧುನಿಕ ಕಾಲದ ಮಹರ್ಷಿಗಳೆನಿಸಿದ್ದರು. ಅವರ ದರ್ಶನ ಸಂಭಾ ಷಣೆಗಳಿಂದ ಅನೇಕ ಭಕ್ತಜನರು ಪಾವನರಾದರು. ಹೀಗೆ ಶ್ರೀಗಳವರು ವಿಶಾಲ ದೃಷ್ಟಿಯುಳ್ಳವರಾಗಿ ಸಂಸ್ಕೃತಿ ಸಮಾಜಾಭ್ಯುದಯವನ್ನು ಧಾರ್ಮಿಕೋನ್ನತಿಯನ್ನು ಹಾಗೂ ಕಲಾಭಿವೃದ್ಧಿಯನ್ನೂ ಗೆಯ್ದು ಕೀರ್ತಿಕಾಯರಾದರು. ಅವರು ಮಾಡಿದ ಧರ್ಮ ಕಾರ್ಯಗಳು ಚಿರಸ್ಮರಣೀಯವಾಗಿವೆ. ಶ್ರೀಗಳವರ ಮಹಾವ್ಯಕ್ತಿತ್ವದ ಕೀರ್ತಿಲತೆಯು ಪಲ್ಲವಿಸಿ ನಾಡಿನಲ್ಲೆಲ್ಲ ಪಸರಿಸಿದೆ.

ಪೂಜ್ಯ ಹಾವೇರಿ ಶ್ರೀ ಶಿವಬಸವ ಮಹಾಸ್ವಾಮಿಗಳವರು ಸ್ಥೂಲದೃಷ್ಟಿಯಿಂದ ನಮ್ಮನ್ನು ಅಗಲಿ ಹೋಗಿ ಹದಿನಾಲ್ಕು ವರ್ಷಗಳಾಗಿದ್ದರೂ ಅವರ ಪವಿತ್ರಾತ್ಮವು ಎಂದೆಂದೂ ಚೈತನ್ಯಮಯವಾಗಿ ಪ್ರಕಾಶಿಸುತ್ತ ಸಕಲ ಜೀವಿಗಳಿಗೂ ಬೆಳಕನ್ನು ನೀಡುತ್ತಲಿದೆ.

CC-0. Jangamwadi Math Collection. Digitized by eGangotri

# ನಾನು ಕಂಡ ಶಿವಯೋಗಿ ಶಿವಬಸವ ಸ್ವಾಮಿಗಳು

' ವ್ಯಾಕರಣತೀರ್ಥ '
ಪಂ. ಚಂದ್ರಶೇಖರ ಶಾಸ್ತ್ರಿಗಳು, ಹಿರಿಯಮಠ, ಹೊಳಲು.

ಹಾವೇರಿಯು ಧಾರವಾಡ ಜಿಲ್ಲೆಯಲ್ಲಿ ಒಂದು ತಾಲೂಕಿನ ಸ್ಥಳವಾದರೂ ಏಲಕ್ಕಿಯ ವ್ಯಾಪಾರದಿಂದ ಅದು ಹಿಂದುಸ್ತಾನದ ಪ್ರತಿಯೊಂದು ಕಡೆಗೂ ಪ್ರಸಿದ್ಧಿಯನ್ನು ಪಡೆದಿರುತ್ತದೆ; ಮೊದಲಿನಿಂದಲೂ ಹಾವೇರಿಯು ಆಚಾರನಿಷ್ಠರಾದ ವೀರಶೈವ ಮಹಾಜನಗಳ ಆಗರವಾಗಿರುತ್ತದೆ. ಈ ಊರಿನಲ್ಲಿ ೧೩-೧೪ ವಿರಕ್ತ ಮಠಗಳಿರುತ್ತವೆ. ಗುರುಸ್ಥಲ ಮಠಗಳ ಸಂಖ್ಯೆಯೂ ಅಧಿಕವಾಗಿರುತ್ತದೆ.

ಹಾವೇರಿಯ ಇತಿಹಾಸವನ್ನು ಸಂಶೋಧನೆಯ ಪಂಡಿತರು ಅನೇಕ ರೀತಿಯಿಂದ ಬರೆದಿರುತ್ತಾರೆ. ಅದರ ಬಗ್ಗೆ ನಾನು ಒಂದು ವಿಷಯ ಇಲ್ಲಿ ಬರೆಯುತ್ತೇನೆ. ಯಾದಗಿರಿಯ ತಾಲೂಕಿನಲ್ಲಿರುವ ಗುರುಮಠಕಲ್ ಗ್ರಾಮವು ಪೂರ್ವಕಾಲದಲ್ಲಿ ವೀರಶೈವರ ಕೇಂದ್ರ ಸ್ಥಾನವಾಗಿದ್ದಿತು. ಚಿತ್ರಕಲ್‌ದುರ್ಗದ ಹನ್ನೊಂದನೆಯ ಪೀಠಾಧೀಶ್ವರರಾದ ಶ್ರೀ ಗುರುಸಿದ್ಧ ಸ್ವಾಮಿಗಳವರ ಸಮಾಧಿಯು ಈ ಊರಿನಲ್ಲಿರುತ್ತದೆ. ಐಶ್ವರ್ಯಶಾಲಿಗಳಾದ ಆರು ಸಾವಿರ ವೀರಶೈವರ ಮನೆಗಳು ಇಲ್ಲಿದ್ದವೆಂದು ಇತಿಹಾಸದಲ್ಲಿ ದೊರೆಯುತ್ತಲಿದೆ. ಪಾಳ್ಯೆಗಾರರ ಕಾಲಕ್ಕೆ ಈ ಊರು ಹಾಳಾಯಿತು. ಆಗ ಇಲ್ಲಿಯ ಜನರೇ ಹಾವೇರಿ ಮತ್ತು ಹುಮನಾಬಾದುಗಳನ್ನು ಕಟ್ಟಿದರು. ಹಾವೇರಿಯಲ್ಲಿರತಕ್ಕ ಪ್ರಸಿದ್ಧ ಮನೆತನದವರೆಲ್ಲ ಗುರುಮಠಕಲ್ಲಿನಿಂದಲೇ ಹೋದವರಾಗಿರುತ್ತಾರೆ. ಗುರುಮಠಕಲ್ಲಿನಲ್ಲಿದ್ದ ಮನೆತನಗಳು ಹಾವೇರಿಯಲ್ಲಿರುತ್ತವೆ. ಉದಾಹರಣೆಗಾಗಿ– ಹತ್ತಿಯವರು, ಮಾಗನೂರು, ಚೌಷಷ್ಟಿಯವರೇ ಮೊದಲಾದವರ ಮನೆತನಗಳು ಗುರುಮಠಕಲ್ಲಿನಲ್ಲಿವೆ. ಗುರುಮಠಕಲ್ಲಿನಲ್ಲಿದ್ದ ವಿರಕ್ತ ಮಠಗಳು ಹಾವೇರಿಯಲ್ಲಿರುತ್ತವೆ. ಪಾಳ್ಯೆಗಾರರು ಗುರುಮಠಕಲ್ಲನ್ನು ಸುಲಿಗೆ ಮಾಡಿದಾಗ ಅವರು ಅಲ್ಲಿಗೆ ಹೋದರು. ಪುರ ಎಂಬುವ ಗ್ರಾಮ ಮಾತ್ರ ಮೊದಲನೆಯದು. ಹಾವು ಏರಿದಂತೆ ನಮ್ಮ ಮೇಲೆ ದಾಳಿಯಾದ ಕಾರಣ ನಾವಿಲ್ಲಿಗೆ ಬಂದಿದ್ದೇವೆಯೆಂದು ಗಾಬರಿಯಿಂದ ಈ ಜನಗಳು ಹೇಳುವದೇ ಹಾವೇರಿಯೆಂದು ಹೆಸರಾಯಿತು. ಈ ಬಗ್ಗೆ ಅನೇಕ ಕಾಗದ ಪತ್ರಗಳು ಹಾವೇರಿಯ ಹೊಸಮಠದಲ್ಲಿ ಮೊದಲು ಇದ್ದವು. ಗುರುಮಠಕಲ್ಲಿನಲ್ಲಿ ಹಿರಿಯರಾದವರೆಲ್ಲರೂ ಈ ವೃತ್ತಾಂತವನ್ನೂ ಹೇಳುತ್ತಲಿದ್ದಾರೆ. ಹತ್ತಿಯವರು ಚೌಷಷ್ಟಿಯವರು ಮೊದಲಾದ ಮನೆತನಗಳು ೫೦೦ ರ ವರೆಗೆ ಎತ್ತುಗಳನ್ನಿಟ್ಟುಕೊಂಡು ಸಾರಿಗೆ ವ್ಯಾಪಾರ ಮಾಡುತ್ತಿದ್ದರಂತೆ. ಆ ಕಾಲಕ್ಕೆ ಗುರುಮಠಕಲ್ ಪಡಿಮೂಲೆಯಾಗಿದ್ದಿತು. ಈ ಪ್ರಾಂತ

CC-0. Jangamwadi Math Collection. Digitized by eGangotri

ದಲ್ಲಿಯ ಜನಗಳು "ಹತ್ತಿಯವರು, ಬತ್ತಿಯವರು, ಬಾವನವರು, ಬಸವಣ್ಣನರು, ಕೈ ಕೈಯವರು, ಮೇಲ್ಗೈಯವರು, ಹೀಗೆಯೇ ಒಂದು ದೊಡ್ಡ ಮಾಲಿಕೆಯಲ್ಲಿ ಹೇಳುತ್ತಾರೆ. ಇವರೆಲ್ಲ ಅಲ್ಲಿಯ ಮೂಲ ನಿವಾಸಿಗಳು. ಅವರೇ ಈಗ ಹಾವೇರಿ ಯಲ್ಲಿ ನೆಲಸಿದ್ದಾರೆ.

ಹಾವೇರಿಯ ಯಾಲಕ್ಕಿ ಪೇಟೆಯ ವೀರಶೈವ ಪ್ರಮುಖರು ಮೊದಲಿನಿಂದಲೂ ಆಚಾರನಿಷ್ಠರಾಗಿ ಗುರು, ಲಿಂಗ, ಜಂಗಮರ ಸೇವೆಯಲ್ಲಿ ತತ್ಪರರು. ನಾನು ಕಂಡಂತೆ ಕಳೆದ ೪೭ ವರ್ಷಗಳಿಂದ ಇವರು ಶಿವಯೋಗಿ ಶಿವಬಸವಸ್ವಾಮಿಗಳವರ ಹುಕ್ಕೇರಿ ಮಠಕ್ಕೆ ಪ್ರಮುಖ ಶಿಷ್ಯರಾಗಿ ನಡೆದುಕೊಳ್ಳುತ್ತ ಬಂದಿರುತ್ತಾರೆ. ಈ ಸಮುದಾಯಕ್ಕೆಲ್ಲ ವೀರಶೈವ ಸಮಾಜದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಪಡೆದ ಚನ್ನ ಬಸಪ್ಪ ದೇವಿಹೊಸೂರ ಶೆಟ್ಟರು - ಅಧ್ಯಕ್ಷರು ಅಥವಾ ಅಗ್ರಗಣ್ಯರಾಗಿದ್ದರು. ಆ ಪರಂಪರೆಯು ಈಗಲೂ ನಡೆದಿರುತ್ತದೆ. ಶ್ರೀ ಶಿವಬಸವ ಶಿವಯೋಗಿಗಳ ಮಠ ವನ್ನು ಈ ಭಕ್ತಾದಿಗಳೇ ಜೀರ್ಣೋದ್ಧಾರ ಮಾಡಿ ಶ್ರೀಗಳಲ್ಲಿ ಅತ್ಯಂತ ಭಯಭಕ್ತಿ ಯಿಂದ ನಡೆದುಕೊಳ್ಳುತ್ತ ಈ ಮಠದಲ್ಲಿಯೇ ಬಡ ವಿದ್ಯಾರ್ಥಿಗಳಿಗಾಗಿ ಉಚಿತ ಪ್ರಸಾದ ನಿಲಯವನ್ನು ನಡೆಸುತ್ತ ಬಂದಿರುತ್ತಾರೆ. ಶ್ರೀಗಳ ಪುಣ್ಯತಿಥಿಯನ್ನು ಪ್ರತಿವರ್ಷ ವಿಜೃಂಭಣೆಯಿಂದ ಮಾಡುತ್ತ ಅನೇಕ ಪಂಡಿತರನ್ನು ಆ ಕಾಲದಲ್ಲಿ ಕರೆಯಿಸಿ ಸಮಾಜದಲ್ಲಿ ಸಾಹಿತ್ಯ-ಸಂಸ್ಕೃತಿಗಳ ಪ್ರಸಾರ ಕಾರ್ಯವನ್ನು ಮಾಡುತ್ತ ಬಂದಿರುತ್ತಾರೆ. ಆ ಉತ್ಸವಕ್ಕೆ ಅಖಿಲ ಕರ್ನಾಟಕದ ವ್ಯಾಪ್ತಿ ತರಲಿಕ್ಕೆ ಪ್ರಯತ್ನಿ ಸುತ್ತಲಿದ್ದು. ಈಗ ಶಿವಯೋಗಿಗಳ ಸ್ಮಾರಕ ಸಂಚಿಕೆಯನ್ನು ಹೊರಡಿಸಿ ಕನ್ನಡ ನಾಡಿನ ತುಂಬ ಅದನ್ನು ಪ್ರಸಾರ ಮಾಡಬೇಕೆಂಬುವ ಪ್ರಯತ್ನ ಮಾಡುತ್ತಿರುವುದು ಅವರಿಗೆ ಅತ್ಯಂತ ಭೂಷಣಾಸ್ಪದವಾಗಿದೆ. ಹುಕ್ಕೇರಿಮಠದ ಈಗಿನ ಸ್ವಾಮಿಗಳವ ರಾದ ಶ್ರೀಮನ್ನಿರಂಜನ ಶಿವಲಿಂಗ ಸ್ವಾಮಿಗಳವರು ಎಲೆಯ ಮರೆಯ ಕಾಯಿಯಂತೆ ಈ ಭಕ್ತರು ಮಾಡುವ ಕಾರ್ಯ ಕಲಾಪಗಳಿಗೆ ಆಧಾರಸ್ತಂಭರಾಗಿ ಕಾರ್ಯ ಮಾಡುತ್ತಿರುವುದು ಅತ್ಯಂತ ಅಭಿನಂದನೀಯವಾಗಿರುತ್ತದೆ. ಹೀಗೆ ಈ ಮಠದಲ್ಲಿ ಧಾರ್ಮಿಕ ಕಾರ್ಯಗಳು ನಡೆಯಬೇಕಾದರೆ ಶ್ರೀ ಶಿವಬಸವ ಶಿವಯೋಗಿಗಳ ಕೃಪೆಯೇ ಕಾರಣ.

ದಾನಗಳಲ್ಲಿ ಅನೇಕ ಪ್ರಕಾರ ಇರುತ್ತವೆ. ಎಲ್ಲ ದಾನಗಳಲ್ಲಿ ಶಿವಯೋಗಿಗಳ ಕಾರ್ಯಕ್ಕೆ ಮಾಡುವ ದಾನವು ಮಿಗಿಲಾದುದು.

ವಿಶುದ್ಧೇಷು ವಿರಕ್ತೇಷು ವಿವೇಕಿಷು ಮಹಾತ್ಮಸು ।
ಶಿವಸ್ತಿಷ್ಠತಿ ಸರ್ವಾತ್ಮಾ ಶಿವಲಾಂಛನಧಾರಿಷು ॥

CC-0. Jangamwadi Math Collection. Digitized by eGangotri

ವಿವೇಕಿಗಳೂ, ವಿಶುದ್ಧರೂ, ಆದ ಮಹಾತ್ಮರಲ್ಲಿ ಶಿವನು ಯಾವಾಗಲೂ ವಾಸವಾಗಿರುತ್ತಾನೆ. ಇಂತಹ ಮಹಾತ್ಮರ ಕಾರ್ಯಕ್ಕೆ ದಾನ ಮಾಡುವುದು ಶಿವ ನಿಗೇ ಸಲ್ಲುತ್ತದೆ. ಶ್ರೀಶಿವಬಸವ ಸ್ವಾಮಿಗಳಂತಹ ಪವಿತ್ರಾತ್ಮರುಗಳಲ್ಲಿಯೇ ಶಿವನು ಯಾವಾಗಲೂ ನೆಲೆಸಿರುತ್ತಾನೆ. ಇವರಂತೆ ಅಸಾಧಾರಣ ವೈರಾಗ್ಯ, ಪವಿತ್ರಭಾವನೆ, ಶಿವನಿಷ್ಠೆ, ಕಟ್ಟಾಚರಣೆಯುಳ್ಳ ಮಹಾತ್ಮರು ಲೋಕದಲ್ಲಿ ವಿರಳರು.

ಆದ್ದರಿಂದಲೇ "ಶಿವಯೋಗಿನಿ ಯದ್ದತ್ತಂ ತದಕ್ಷಯಫಲಂ ಭವೇತ್" ಅಂದರೆ ಶಿವಯೋಗಿಗಳಿಗೆ ಕೊಟ್ಟದ್ದು ಮುಂದೆ ಅಕ್ಷಯ ಫಲವನ್ನು ಕೊಡುತ್ತದೆ. ಶ್ರೀ ಶಿವ ಬಸವಸ್ವಾಮಿಗಳಂತಹ ಪವಿತ್ರಾತ್ಮರ ಸ್ಮರಣೆಯ ಕಾರ್ಯದಲ್ಲಿ ತೊಡಗಿದ ಹಾವೇರಿಯ ಭಕ್ತರೇ ಧನ್ಯರು.

ನಾನು ೧೯೧೩ ರಲ್ಲಿ ಹಾವೇರಿಯ ಹುಕ್ಕೇರಿಯ ಈ ಮಠದಲ್ಲಿ ಸಂಸ್ಕೃತಾಧ್ಯ ಯನ ಮಾಡಲಿಕ್ಕೆ ಇದ್ದೆನು. ಆಗ ಖಾನಾಪುರದ ಪಂ. ಅಪ್ಪಯ್ಯ ಶಾಸ್ತ್ರಿಗಳು ಅಲ್ಲಿ ಅಧ್ಯಾಪಕರಾಗಿದ್ದರು. ೧೯೧೬ರ ವರೆಗೆ, ಅಂದರೆ ಮೂರು ವರ್ಷಗಳ ವರೆಗೆ ಈ ಮಠದಲ್ಲಿದ್ದೆನು. ಆಗಿನಿಂದಲೇ ಈ ಮಠದಲ್ಲಿ ಸಂಸ್ಕೃತ ಪಾಠಶಾಲೆಯು ಬಹು ವರ್ಷ ಗಳವರೆಗೆ ನಡೆದು ಬಂದಿತ್ತು. ಶ್ರಾವಣ ಮಾಸದಲ್ಲಿ ಪುರಾಣ, ಪಾದಪೂಜೆ ಮೊದ ಲಾದ ಧಾರ್ಮಿಕ ಕಾರ್ಯಗಳು ಶ್ರೀಗಳ ಕೃಪೆಯಿಂದ ನಡೆಯುತ್ತಲೇ ಬಂದಿರುತ್ತವೆ. ಅಲ್ಲಿಯ ಧಾರ್ಮಿಕ ಕಾರ್ಯಗಳಲ್ಲಿ ಹುಕ್ಕೇರಿಯ ಈ ಮಠವು ಯಾವಾಗಲೂ ಅಗ್ರ ಗಣ್ಯವಾದುದಾಗಿರುತ್ತದೆ. ೧೯೧೩ ನೇ ಇಸ್ವಿಯಿಂದ ಶ್ರೀ ಶಿವಬಸವ ಸ್ವಾಮಿಗಳು ಲಿಂಗೈಕ್ಯರಾಗುವವರೆಗೆ ಅವರ ಕೂಡ ಒಡನಾಟವಿದ್ದ ಕಾರಣ ಸುಮಾರು ೪೦ ವರ್ಷ ಗಳ ಅವರ ಕಾರ್ಯಕಲಾಪ, ನಿತ್ಯಾಚರಣೆ, ಲಿಂಗನಿಷ್ಠೆ, ಸಾತ್ವಿಕ ಹೃದಯ, ಶುದ್ಧ ವಾದ ಪವಿತ್ರಭಾವನೆ, ದಯಾಪ್ರಪೂರಿತ ಹೃದಯ ಮೊದಲಾದ ಗುಣಗಳ ಬಗೆಗೆ ನನಗೆ ಸಂಪೂರ್ಣ ಅನುಭವವಿರುತ್ತವೆ.

ಶಿವಯೋಗಿಯ ಲಕ್ಷಣಗಳೆಲ್ಲವೂ ಅವರಲ್ಲಿ ಅಳವಟ್ಟಿದ್ದವು. ಶಿವಯೋಗದ ಅಷ್ಟಾಂಗಗಳನ್ನು ವೀರಶೈವದ ಧರ್ಮದ ಗ್ರಂಥಗಳಲ್ಲಿ ಕೆಳಗೆ ಬರೆದಂತೆ ವಿವರಿಸಿ ದ್ದಾರೆ. ಅನೃತ, ಹಿಂಸೆ, ಪರಧನ, ಪರಸ್ತ್ರೀ, ಪರನಿಂದೆ ಇವುಗಳನ್ನು ಬಿಟ್ಟಿರಬೇಕು. ಬ್ರಹ್ಮಚಾರಿಯಾಗಿ, ಆಶಾಶೂನ್ಯನಾಗಿರಬೇಕು. ತ್ರಿಕರಣಗಳಲ್ಲಿ ಶುದ್ಧನಾಗಿ ಪ್ರಣವ ಪಂಚಾಕ್ಷರಿಯನ್ನು ಜಪಿಸುತ್ತ, ಯಾವುದಾದರೊಂದು ಆಸನದಲ್ಲಿ ಬಲ್ಲಿದನಾಗಿ ನಿಷ್ಠೆ ಯಿಂದ ಲಿಂಗದಪೂಜೆಯಲ್ಲಿ ತೊಡಗಿರಬೇಕು. ಇನ್ನೂ ಅನೇಕ ವಿಷಯಗಳಿದ್ದರೂ ಮೇಲೆ ಬರೆದ ವಿಷಯಗಳು ಪ್ರಮುಖವಾಗಿರುತ್ತವೆ. ಈ ಗುಣಗಳೆಲ್ಲ ಅವರಲ್ಲಿ ಪ್ರಕಾಶಮಾನವಾಗಿದ್ದವು.

CC-0. Jangamwadi Math Collection. Digitized by eGangotri



**ಲಿಂ. ಶ್ರೀ. ನಿ. ಪ್ರ. ಶಿವಬಸವ ಸ್ವಾಮಿಗಳು, ಹಾವೇರಿ**

ಬಾಗಲಕೋಟೆಯ ಶಿವಾನಂದ ಜಿನ್-ಫ್ಯಾಕ್ಟರಿಯಲ್ಲಿ

( ಶಿವಪೂಜಾ ಮಂದಿರದಲ್ಲಿ ಮುಹೂರ್ತ ಮಾಡಿದಾಗ )

CC-0. Jangamwadi Math Collection. Digitized by eGangotri

ಶಿವಬಸವ ಸ್ವಾಮಿಗಳವರು ಬಳ್ಳಾರಿಯ ಸಕ್ಕರಿಯ ಕರಿಬಸಪ್ಪನವರ ಸಂಸ್ಕೃತ ಪಾಠಶಾಲೆಯಲ್ಲಿ ಅಧ್ಯಯನ ಮಾಡಿ ಕಾಶಿಗೂ ಕೆಲವು ವರ್ಷ ಹೋಗಿ ಬಂದಿದ್ದರು. ಬಳ್ಳಾರಿಯಲ್ಲಿದ್ದಾಗ ಅವರ ಸಹಾಧ್ಯಾಯಿಗಳು ಗುಂತಕಲ್ ವಿರೂಪಾಕ್ಷ ಶಾಸ್ತ್ರಿಗಳು, ನರೇಗಲ್ ಶಿವಬಸವ ಶಾಸ್ತ್ರಿಗಳೇ ಮೊದಲಾದವರಿದ್ದರು ಇವರಿಗಿಂತ ಶ್ರೀಗಳವರು ಹಿರಿಯರಾಗಿದ್ದರು.

## ಲಿಂಗನಿಷ್ಠೆ

ಅವರಲ್ಲಿದ್ದ ಶ್ರೇಷ್ಠ ಗುಣಗಳಲ್ಲಿ ಲಿಂಗನಿಷ್ಠೆಯು ಅಸಾಧಾರಣವಾಗಿದ್ದಿತು. ಶಿವಪೂಜೆಗೆ ಕುಳಿತರೆ ಬಾಹ್ಯ ಪ್ರಪಂಚದ ಅರಿವೇ ಅವರಿಗಿರುತ್ತಿರಲಿಲ್ಲ. ಎಷ್ಟು ಘಂಟೆಗಳವರೆಗಾದರೂ ಅದರಲ್ಲಿ ತನ್ಮಯರಾಗಿರುತ್ತಿದ್ದರು. ವೀರಶೈವರಿಗೆ ಲಿಂಗವೇ ಪರಬ್ರಹ್ಮ, ಪರಬ್ರಹ್ಮವೇ ಶಿವನು, ಶಿವನೇ ಪರಬ್ರಹ್ಮ ಅಂದಮೇಲೆ, ಇದೇ ಪ್ರಾಮುಖ್ಯವಾಗಿ ಲಿಂಗವಂತನ ವಿಶಿಷ್ಟ ಕುರುಹು. ಅದರ ಚಿಂತನೆಯೇ ಅವನಿಗೆ ಮೋಕ್ಷದಾಯಕ. ಲಿಂಗವಿಲ್ಲದಿದ್ದರೆ ವೀರಶೈವತ್ವವಿಲ್ಲ. ಪ್ರತಿಯೊಬ್ಬ ಲಿಂಗಾಂಗಿಗೆ ಲಿಂಗಪೂಜಾ, ಲಿಂಗನಿಷ್ಠೆಯೇ ಮುಖ್ಯ ತಳಹದಿ. ಈ ಗುಣದಲ್ಲಿ ಶಿವಯೋಗಿ ವರೇಣ್ಯರಾದ ಶಿವಬಸವ ಸ್ವಾಮಿಗಳವರಿಗೆ ಸರಿಗಟ್ಟುವವರು ವಿರಳರು.

ಹಾವೇರಿಯಿಂದ ಮೇಲಿಂದ ಮೇಲೆ ಅವರು ಶಿವಯೋಗಮಂದಿರಕ್ಕೆ ಪ್ರಯಾಣ ಮಾಡುತ್ತಿದ್ದರು. ೩-೪ ದಿನಗಳಿಂದಲೂ ಅವರಿಗೆ ಗಾಡಿಯು ತಪ್ಪುತ್ತಿತ್ತು. ದಯಮಾಡಿಸಬೇಕೆಂದು ಬೇಗನೆ ಸ್ನಾನಮಾಡಿ ಶಿವಾರ್ಚನೆಗೆ ಕುಳಿತರೆ ಗಾಡಿ ಹೋಗಿ ೨ ತಾಸುಗಳಾದ ಮೇಲೆ ಹೊರಗೆ ದಯಮಾಡಿಸಿ ಅಲ್ಲಿದ್ದವರನ್ನು "ಗಾಡಿಯು ಹೋಯಿತೇ" ಎಂದು ಕೇಳುವುದು ಅವರ ಪದ್ಧತಿಯಾಗಿದ್ದಿತು. ಹೋಗಿ ಎರಡು ಘಂಟೆಯಾಯಿತೆಂದು ಅವರು ಹೇಳಿದರೆ "ಎಲಾ ಎಂತ ಲಗು ಹೋಗಿದೆ" ಎನ್ನುತ್ತಿದ್ದರು. ಅವರ ಆಲಸ್ಯದಿಂದ ಗಾಡಿ ತಪ್ಪುತ್ತಿದ್ದಿಲ್ಲ. ಅವರ ಉಪಮಾತೀತವಾದ ಲಿಂಗನಿಷ್ಠೆಯಲ್ಲಿ ಲೌಕಿಕ ಕಾರ್ಯಗಳು ಅವರಿಗೆ ತುಚ್ಛವಾಗಿದ್ದವು. ಲಿಂಗಾನಂದದಲ್ಲಿ ತೊಡಗಿದವರಿಗೆ ಹೀಗಾಗುವುದು ಸ್ವಾಭಾವಿಕವಾದುದು.

ಶ್ರೀ ಭಗವಾನ್ ಬಸವೇಶ್ವರರು ತಮ್ಮದೊಂದು ವಚನದಲ್ಲಿ—

" ಲಿಂಗಮಧ್ಯೇ ಜಗತ್ಸರ್ವಂ ಎಂಬುದನಾನರಿಯೆನಯ್ಯ !
ಸಮುದ್ರದಲ್ಲಿ ಬಿದ್ದ ವಾರಿಕಲ್ಲಿನಂತೆ ಭಿನ್ನಭಾವವಿಲ್ಲದೆ
ಶಿವ ಶಿವಾ ಎನುತಿರ್ದೆನಯ್ಯ!

ಎಂದು ಹೇಳಿದ್ದಾರೆ. ಅಂದರೆ ಲಿಂಗಪೂಜೆಯನ್ನು ಮಾಡಬೇಕಾದರೆ ಶಿವನಲ್ಲಿ ಬೆರೆತುಕೊಂಡು ಸಮುದ್ರದಲ್ಲಿ ಬಿದ್ದ ಆಣೆಕಲ್ಲು ಸಮುದ್ರದಲ್ಲಿ ಕೂಡಿಕೊಂಡು ತನ್ಮಯವಾಗುವಂತೆ ಪೂಜಿಸಬೇಕು. ಇನ್ನೊಂದು ವಚನದಲ್ಲಿ—

CC-0. Jangamwadi Math Collection. Digitized by eGangotri

ಲಿಂಗವ ಪೂಜಿಸಿ ಫಲವೇನಯ್ಯ,
ಸಮರತಿ ಸಮಕಳೆ ಸಮಸುಖವಱಿಯದನ್ನಕ್ಕ ?
ಲಿಂಗವ ಪೂಜಿಸಿ ಫಲವೇನಯ್ಯ,
ಕೂಡಲ ಸಂಗಮದೇವರ ಪೂಜಿಸಿ
ನದಿಯೊಳಗೆ ನದಿಯ ಬೆರಸಿದಂತಾಗದನ್ನಕ್ಕ ?

ಎರಡು ನದಿಗಳು ಒಂದಕ್ಕೊಂದು ಕೂಡಿಕೊಂಡು ಏಕಾಕಾರವಾಗಿ ಮುಂದಕ್ಕೆ ಹೋಗುವಂತೆ ಲಿಂಗದಲ್ಲಿ ಬೆರತುಕೊಂಡು ತದ್ರೂಪನಾಗಿ ಲಿಂಗವನ್ನು ಪೂಜಿಸ ಬೇಕು, ಇಲ್ಲದಿದ್ದರೆ ಅದರಿಂದ ಪ್ರಯೋಜನವಿಲ್ಲವೆಂದು ಹೇಳಿದ್ದಾರೆ. ಅಂತೆಯೇ ಶ್ರೀ ಶಿವಬಸವ ಶ್ರೀಗಳವರು ಲಿಂಗದ ಪೂಜೆಯಲ್ಲಿ ಅತ್ಯಂತ ನಿಷ್ಠೆಯುಳ್ಳವರಾಗಿ ಕೊನೆಯವರೆಗೆ ಈ ಮಹಾ ವ್ರತವನ್ನು ಕೊಂಚವೂ ತಪ್ಪದೆ, ಎಂತಹ ಮಹತ್ಕಾರ್ಯ ಗಳಿದ್ದರೂ ಅವುಗಳನ್ನೂ ಪರಿಗಣಿಸದೆ ಆ ಮಹಾವ್ರತದಲ್ಲಿಯೇ ತಮ್ಮ ಉಸಿರು ಇರುವವರೆಗೆ, ಶರೀರದಲ್ಲಿ ಅಸ್ವಸ್ಥತೆ ಇದ್ದರೂ ತಪ್ಪಲಿಲ್ಲ. ಇದೇ ಶಿವಯೋಗಿ ಗಳ ಲಕ್ಷಣವು. ಲಿಂಗನಿಷ್ಠೆ ಅಂದರೇನೆಂಬುವುದು ಆಗಮಗಳಲ್ಲಿ ಚನ್ನಾಗಿ ಸ್ಪಷ್ಟೀಕರಿಸಲ್ಪಟ್ಟಿದೆ.

"ಲಿಂಗೇ ಯಸ್ಯ ಮನೋ ಲೀನಂ" ಯಾವಾತನ ಮನಸ್ಸು ಲಿಂಗದಲ್ಲಿ ಲೀನ ವಾಗಿಯೂ, ಲಿಂಗಸ್ತುತಿಯಲ್ಲಿ ಮಾತುಗಳೂ, ಪೂಜೆಯಲ್ಲಿ ಕೈಗಳೂ ತೊಡಗಿರುತ್ತ ವೆಯೋ ಅವನೇ ರುದ್ರ. ಅವನೇ ಶಿವಯೋಗಿಯೆಂದು ವರ್ಣಿಸಿರುತ್ತಾರೆ. ಕಡೆಯಲ್ಲಿ "ಲಿಂಗಾರ್ಥದತ್ತಸರ್ವಸ್ವಂ ಲಿಂಗನಿಷ್ಠೇತಿ ಗೀಯತೇ" ಅಂದರೆ ಲಿಂಗದ ಸಲು ವಾಗಿ ಸರ್ವವನ್ನು ತ್ಯಾಗ ಮಾಡುವುದೇ ಲಿಂಗನಿಷ್ಠೆಯೆಂದು ಹೇಳಿದ್ದಾರೆ.

"ತಸ್ಮಾಲ್ಲಿಂಗಂ ಪರಬ್ರಹ್ಮ ಸದಾ ಧ್ಯಾಯಂತಿ ಯೋಗಿನಃ" ಪರಬ್ರಹ್ಮ ಸ್ವರೂ ಪವಾದ ಲಿಂಗವನ್ನು ಯೋಗಿಗಳು ಯಾವಾಗಲೂ ಧ್ಯಾನಿಸುತ್ತಾರೆ. ಇಂತಹ ಲಿಂಗನಿಷ್ಠೆಯು ಶ್ರೀ ಶಿವಬಸವ ಸ್ವಾಮಿಗಳವರಲ್ಲಿ ಅಳವಟ್ಟಿದ್ದಿತು.

ಶ್ರೀಶಿವಬಸವ ಸ್ವಾಮಿಗಳು ವೈರಾಗ್ಯ ಭಾವನೆಯುಳ್ಳವರಾಗಿ, ಬ್ರಹ್ಮಚರ್ಯ ವ್ರತವನ್ನು ಕೊನೆಯವರೆಗೂ ಪರಿಪಾಲಿಸಿ, ಅವರ ಕಾಲದ ಸ್ವಾಮಿಗಳವರಲ್ಲಿ ಅಗ್ರ ಗಣ್ಯ ಸ್ಥಾನವನ್ನು ಪಡೆದಿದ್ದರು.

ಶ್ರೀಗಳವರು ಕಟ್ಟಾಚಾರವನ್ನು ಲಿಂಗದೊಳಗಾಗುವವರೆಗೆ ನಡೆಸಿದ್ದುದು ಅತ್ಯಂತ ಮಹತ್ವದ್ದಾಗಿರುತ್ತದೆ. ಅದು ಅವರಿಗೆ ನಿತ್ಯ ಮಹಾವ್ರತ ಆಗಿದ್ದಿತು. ಅವರ ಸ್ವಂತ ಆಚರಣೆಗಳೆಲ್ಲ ಕಠೋರವಾದ ವ್ರತಸ್ವರೂಪವೇ ಆಗಿದ್ದವು. ನಿತ್ಯಾ ಚರಣೆಯ ವ್ರತವೇ ಯೋಗವು.

CC-0. Jangamwadi Math Collection. Digitized by eGangotri

## ದಯಾಶಾಲಿಗಳು

ಶ್ರೀಗಳು ಬಡವರ ಮೇಲೆ ಅತ್ಯಂತ ಕರುಣಾಶಾಲಿಗಳಾಗಿದ್ದರೆಂಬುವುದು ಅವರ ನಿತ್ಯದ ಕೃತಿಗಳಿಂದ ತಿಳಿದು ಬರುತ್ತಲಿದ್ದಿತು. ನನಗೆ ಅವರ ದಯಾಶಾಲಿ ಗುಣವು ಚನ್ನಾಗಿ ಗೊತ್ತಿರುತ್ತದೆ. ಒಂದೇ ಒಂದು ಉದಾಹರಣೆಯನ್ನು ಇಲ್ಲಿ ಕೊಡುತ್ತೇನೆ.

ಒಂದು ಸಾರೆ ಒಬ್ಬ ವಕೀಲರು ತಮಗೆ ಹಣದ ತೊಂದರೆಯಾದಾಗ ಶಿವಬಸವ ಸ್ವಾಮಿಗಳಲ್ಲಿ ಬಂದು ೪೦೦ ರೂಪಾಯಿಗಳನ್ನು ಕೇಳಿದರು. ಬಹಳ ದೈನ್ಯೋಕ್ತಿಯಿಂದ ವಕೀಲರು ಕೇಳುವುದು ಶ್ರೀಗಳ ಹೃದಯವನ್ನು ಕರಗಿಸಿ ಬಿಟ್ಟಿತು. ಶ್ರೀ ಸ್ವಾಮಿಗಳಲ್ಲಿ ರೂಪಾಯಿಗಳ ಶಿಲ್ಕೇ ಯಾವಾಗಲೂ ಇರುತ್ತಿರಲಿಲ್ಲ. ಬಂದದ್ದೆಲ್ಲ ಖರ್ಚಾಗುತ್ತಿರುತ್ತಿತ್ತು. ಬೇರೆಯವರಿಂದ ೪೦೦ ರೂ. ಗಳನ್ನು ತರಿಸಿ ಕೊಟ್ಟರು. ವಕೀಲರು ಸಂತುಷ್ಟರಾಗಿ ಇಂತಿಷ್ಟೇ ದಿನಗಳಲ್ಲಿ ತಂದು ಕೊಡುತ್ತೇನೆಂದು ಹೇಳಿ ಹೋದರು. ಆದರೆ ಹೇಳಿದ ಸಮಯಕ್ಕೆ ಅವರು ಕೊಡಲಿಲ್ಲ. ಒಂದು ದಿನ ಸ್ವಾಮಿಗಳವರು ನನ್ನ ಮುಂದೆ ಮಾತಿನ ಪ್ರಸಂಗದಲ್ಲಿ ಈ ವಿಷಯ ಹೇಳಿದರು. "ವಕೀಲರು ರೂಪಾಯಿಗಳನ್ನು ತೆಗೆದುಕೊಂಡು ಹೋಗಿ ಬಹಳ ದಿನಗಳಾದವು. ಇಲ್ಲಿ ಒಬ್ಬರಲ್ಲಿ ತರಿಸಿ ಕೊಟ್ಟಿದ್ದೆವು" ಎಂದರು. ಆಗ ನಾನು ಸುಮ್ಮನಿರದೆ ಒಯ್ಯುವಾಗ ಒಳ್ಳೇ ಮಾತುಗಳನ್ನು ಹೇಳಿ ತಿರುಗಿ ತಂದು ಕೊಡುವುದಿಲ್ಲ. ತಾವು ಇಂಥವರಿಗೇಕೆ ಕೊಟ್ಟರೆಂದು ಹೇಳಿದೆನು. ಶ್ರೀಗಳು ನನ್ನ ಮಾತಿಗೆ ಥಟ್ಟನೆ ಉತ್ತರ ಕೊಡುತ್ತ "ಅವರಿಗೆ ತೊಂದರೆ ಇಲ್ಲದಿದ್ದರೆ ನನ್ನ ಹತ್ತರ ಏಕೆ ಬರುತ್ತಿದ್ದರು? ಅವರಿಗೆ ಏನೋ ದೊಡ್ಡ ಅಡಚಣಿ ಬಂದಕಾರಣ ಕೇಳಿದರು. ಅಂಥ ಪ್ರಸಂಗದಲ್ಲಿ ಕೊಡಬೇಕಾಗುತ್ತದೆ" ಎಂದು ಹೇಳಿದರು. ಹೀಗೆ ಅವರು ಹೇಳಿದ ಮಾತಿನಲ್ಲಿ ದೊಡ್ಡ ವಿಷಯ ಅಡಗಿರುತ್ತದೆ. ಇದೇ ದೊಡ್ಡವರ ಲಕ್ಷಣವಾಗಿರುತ್ತದೆ. ಅವರ ದಯಾಪೂರಿತ ತ್ಯಾಗ ಗುಣವು ಅತ್ಯದ್ಭುತವಾಗಿದ್ದಿತು.

ಶಿವಯೋಗಮಂದಿರದ ಸಂಸ್ಥಾಪನೆಯ ಕಾಲದಿಂದ ಕೊನೆಯವರೆಗೆ ಮಾಡಿದ ಅವರ ಕಾರ್ಯವು ಮಹತ್ತಾಗಿದ್ದಿತು. ಅವರಿಗೆ ಶಿವಯೋಗಮಂದಿರವೆಂದರೆ ತಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ ಅಭಿಮಾನವಿದ್ದಿತು. ಯಾವ ಊರಿಗೇ ಎಲ್ಲಿಗಾದರೂ ದಯಮಾಡಿಸಲಿ, ಶಿವಯೋಗಮಂದಿರದ ವಿಚಾರವೇ ಅವರ ಚಿತ್ತದಲ್ಲಿರುತ್ತಿತ್ತು. ಶಾಖಾ ಶಿವಯೋಗಮಂದಿರವಾದ ಕೊಪ್ಪದಲ್ಲಿ ಅವರು ಬಹಳ ಕಾಲ ಇರುತ್ತಿದ್ದರು. ಎಲ್ಲಿದ್ದರೂ ಅವರ ಮಂದಿರದ ಅಭಿಮಾನವು ಉಲ್ಲೇಖನೀಯವಾಗಿದ್ದಿತು.

ಹಾನಗಲ್ ಶ್ರೀಗಳಿಗೂ, ಶ್ರೀ ಶಿವಬಸವ ಸ್ವಾಮಿಗಳಿಗೂ ಇರುವ ಪ್ರೇಮವು ಅಸಾಧಾರಣವಾಗಿದ್ದಿತಲ್ಲದೆ ದೇಹವೆರಡಾದರೂ ಒಂದೇ ಮನಸ್ಸು. ಅವರವರಲ್ಲಿ

CC-0. Jangamwadi Math Collection. Digitized by eGangotri

ಭಿನ್ನಾಭಿಪ್ರಾಯ ಬಂದಾಗ ಹಾನಗಲ್ ಶ್ರೀಗಳು ಮುಗುಳುನಗೆಯಿಂದಲೇ ಅದನ್ನು ಪರಿಹರಿಸುತ್ತಿದ್ದರು. ಆ ಭಿನ್ನಾಭಿಪ್ರಾಯವಾದರೂ ಮಂದಿರದ ಕಾರ್ಯಗಳಲ್ಲಿಯೇ ಬರುತ್ತಿದ್ದಿತು.

ಹೀಗೆಯೇ ಶಿವಬಸವ ಸ್ವಾಮಿಗಳವರಲ್ಲಿ ಅನಂತ ಶ್ರೇಷ್ಠ ಗುಣಗಳನ್ನು ನಾನು ಕಂಡಿರುತ್ತೇನೆ. ಅವುಗಳಲ್ಲಿ ಸ್ಥಾಲೀಪುಲಾಕನ್ಯಾಯದಂತೆ ಕೆಲವುಗಳನ್ನು ಮಾತ್ರ ವಿವರಿಸಿರುತ್ತೇನೆ. ಶಿವಯೋಗಮಂದಿರಕ್ಕೆ ಮಾಡಿದ ಕಾರ್ಯಗಳನ್ನೆಲ್ಲ ವಿವರಿಸಿದರೆ ಒಂದು ಹೊತ್ತಿಗೆ ಆಗುತ್ತದೆ.

ಇಂತಹ ಮಹಾ ಕಟ್ಟಾಚರಣೆಯ ವ್ರತನಿಷ್ಠರಿಂದಲೇ ಸಮಾಜೋದ್ಧಾರ, ಧರ್ಮೋದ್ಧಾರ ಸಾಧ್ಯವಾದುದು. ಇಂಥವರ ನಡೆ, ನುಡಿಗಳೇ ಸಾಮಾನ್ಯ ಜನರಿಗೆ ಮಾರ್ಗದರ್ಶಕಗಳಾಗುತ್ತವೆ. ಶಿವಬಸವ ಶಿವಯೋಗಿಗಳು ನಮ್ಮ ಕಾಲದ ಶ್ರೇಷ್ಠ ಶಿವಯೋಗಿಗಳೆಂದು ನಾನು ಧಾರಾಳವಾಗಿ ಹೇಳಬಲ್ಲೆನು. ಇದರಲ್ಲಿ ಅತಿಶಯೋಕ್ತಿಯ ಮಾತೇ ಇರುವುದಿಲ್ಲ. ಅವರ ಕಟ್ಟಾಚರಣೆಯ ಲಿಂಗನಿಷ್ಠೆ, ಅನ್ಯರಿಗೆ ಅಸಾಧ್ಯವಾದ ಆಧ್ಯಾತ್ಮಿಕ ದೃಷ್ಟಿಯ ಬ್ರಹ್ಮಚರ್ಯ ಪರಿಪಾಲನೆ, ಇವೆರಡೇ ಗುಣಗಳು ಅವರನ್ನು ಶಿವಯೋಗಿಗಳ ಮಾಲಿಕೆಯಲ್ಲಿ ಮಧ್ಯಮಣಿಯಂತೆ ಮಾಡಿವೆ.

ಅವರು ಲಿಂಗೈಕ್ಯರಾದ ಮೇಲೆ ಅವರ ಕೀರ್ತಿವಾರ್ತೆಗಳು ಹೆಚ್ಚಾಗುತ್ತ ನಡೆದಿರುವುದು ಹಾವೇರಿಯ ಸದ್ಭಕ್ತ ಮಂಡಲಿಯು ಅವರಲ್ಲಿಟ್ಟಿರುವ ನಿಷ್ಠೆಯ ಫಲವಾಗಿದೆ. ಇಂತಹ ಮಹಾಪೂಜ್ಯರ ನಡೆನುಡಿಗಳು ಈಗಿನ ಅಶ್ರದ್ಧೆಯ ಕಾಲದಲ್ಲಿ ಬಹಳ ಮಹತ್ವದವುಗಳಾಗಿರುತ್ತವೆ. ಲಿಂಗಾಂಗಿಗಳಾದವರೆಲ್ಲ ಅವರ ಲಿಂಗನಿಷ್ಠೆಯ ಕೊಂಚ ಭಾಗವನ್ನಾದರೂ ಅನುಸರಿಸಿದರೆ ಲಿಂಗವಂತಮತವು ಧನ್ಯವಾಗುವುದು. ಲಿಂಗವೇ ವೀರಶೈವರ ಪರಬ್ರಹ್ಮವೆಂದ ಮೇಲೆ ಲಿಂಗಧಾರಣೆ, ಲಿಂಗಪೂಜೆ, ಲಿಂಗನಿಷ್ಠೆ, ಲಿಂಗದಿಂದಗಲದೆ ಇರುವಿಕೆ ಇವೇ ಈ ಸಮಾಜದ ಕುರುಹು. ಶಿವಬಸವ ಶಿವಯೊಗೀಂದ್ರರ ಈ ಆಚರಣೆಯು ಎಲ್ಲರಲ್ಲಿ ಉತ್ಪನ್ನವಾಗಿ ವೀರಶೈವ ಸಮಾಜವು ದೇದೀಪ್ಯಮಾನನಾಗಲೆಂದು ಹಾರೈಸಿ ಈ ಚಿಕ್ಕಲೇಖವನ್ನು ಮುಗಿಸುತ್ತೇನೆ. ಇಂತಹ ಸಮಯ ಒದಗಿಸಿ ಕೊಟ್ಟುದುದಕ್ಕೆ ಮತ್ತೊಮ್ಮೆ ಸಂಪಾದಕ ಮಂಡಲಿಗೆ ಕೃತಜ್ಞತೆ ಸಲ್ಲಿಸುತ್ತೇನೆ.

CC-0. Jangamwadi Math Collection. Digitized by eGangotri

# ಶ್ರೀಗಳವರ ತಪೋಭೂಮಿಗಳು

**ಶ್ರೀ ನಿ. ಪ್ರ. ಕುಮಾರಸ್ವಾಮಿಗಳು, ಕಲ್ಮಠ, ಸವದತ್ತಿ.**

ಶ್ರೀಗಳವರು ಪೂಜಾನುಷ್ಠಾನ ಮಾಡಿದ ತಾಣಗಳೆಲ್ಲ ಇಂದು ಪರಮ ಪವಿತ್ರ ಕ್ಷೇತ್ರಗಳಾಗಿವೆ. ಭೀಕರ ಕಾಂತಾರಗಳಲ್ಲಿಯೂ, ಕಟ್ಟಡವಿಗಳಲ್ಲಿಯೂ ಶ್ರೀಗಳವರು ವಾಸವಾಗಿದ್ದು ಶಿವನೊಲುಮೆಯನ್ನು ಪಡೆದರು. ಅಡವಿಗಳು ಸಾಮಾನ್ಯರಿಗೆ ಭೀಕರ ವಾದವು. ಅಲ್ಲಿ ಹುಲಿ, ಕರಡಿಯಂತಹ ಕ್ರೂರ ಮೃಗಗಳು ಭೀತಿಯನ್ನುಂಟು ಮಾಡು ತ್ತವೆ. ಆದರೆ ಶಿವಯೋಗಿಗಳು ಕಾಯವೆಂಬ ಕಾಂತಾರದಲ್ಲಿಯೇ ಕೋಪ, ಪಾಪ, ಚಾಪಲ್ಯ, ಕಾಪಟ್ಯವೆಂಬ ಹುಲಿ ಮೊದಲಾದ ಮಾಯಾಮೋಹದ ಮೃಗಗಳನ್ನು ಸದ್ಭಕ್ತಿಯೆಂಬ ಬಿಲ್ಲಿಗೆ ವಿರತಿಯೆಂಬ ಸಿಂಜಿನಿಯಹೂಡಿ, ಅರಿವೆಂಬ ಬಾಣವನಿಟ್ಟು ಕೆಡ ಹುವ ವಿಲಕ್ಷಣ ಬೇಂಟೆಗಾರರು, ಕಾಯಕಾಂತಾರವ ಹೊಕ್ಕು ಈ ಬಗೆಯಾಗಿ ಬೇಂಟೆಯ ನಾಡಿದ ಶ್ರೀಗಳವರಿಗೆ ಹೊರಗಿನ ಕಾಡು, ಕಾಡುಮೃಗಗಳು ಭೀತಿಯನ್ನುಂಟುಮಾಡ ಲಿಲ್ಲ :

ರಾಗ- ಸೌರಾಷ್ಟ್ರ

*ಕಾಯ ಕಾಂತಾರವ ಹೊಕ್ಕು ಬೇಂಟೆಯನಾಡಿ
ಮಾಯಾಮೋಹದ ಮೃಗಗಳ ಕೊಲ್ಲಿರೋ ॥ ಪಲ್ಲ ॥

ಕೋಪವೆಂಬುವ ಹಿರಿಯ ಹುಲಿಗಳುಂಟು
ಪಾಪವೆಂದೆಂಬ ಸೂಕರಗಳುಂಟು
ಚಾಪಲ್ಯಗುಣಗಳೆಂದೆಂಬ ಜಿಂಕೆಗಳುಂಟು
ಕಾಪಟ್ಯವೆಂದೆಂಬ ನರಿಗಳುಂಟು ॥ ೧ ॥

ಮೆರೆವಷ್ಟಮದಗಳೆಂದೆಂಬ ಕೋಣಗಳುಂಟು
ಬರಿಯ ಡಂಭಗಳೆಂಬ ಕರಡಿಯುಂಟು
ಉರಿವ ಮತ್ಸರಬುದ್ಧಿಯೆಂಬ ಕೇಸರಿಯುಂಟು
ಮರವೆಯೆಂದೆಂಬುವ ಗಜಗಳುಂಟು ॥ ೨ ॥

---

* ಕೈವಲ್ಯ ಕಲ್ಪವಲ್ಲರಿ ಸಂಗ್ರಹ– ಶ್ರೀ ಸರ್ಪಭೂಷಣ ಶಿವಯೋಗಿಗಳು; ನೀತಿ ಕ್ರಿಯಾಚರ್ಯ ಪ್ರತಿಪಾದನ ಸ್ಥಲ; ಪು–೩೩. ಪ್ರಕಾಶಕರು– ಶ್ರೀ ಮೃತ್ಯುಂಜಯ ಸ್ವಾಮಿಗಳು, ಮಮದಾಪುರ;

CC-0. Jangamwadi Math Collection. Digitized by eGangotri

ಪರಮ ಸದ್ಭಕ್ತಿಯೆಂದೆಂಬ ಬಿಲ್ಲನೆ ಮಾಡಿ
ವಿರತಿಯೆಂದೆಂಬ ಸಿಂಜಿನಿಯ ಹೂಡಿ
ಅರಿವೆಂಬ ಬಾಣದೊಳವನೆಚ್ಚು ಕೆಡಹುತೆ
ಗುರುಸಿದ್ಧನಂಘ್ರಿಗಳ್ಗುಪಹಾರಿಸಿ ॥ ೩ ॥

ಶ್ರೀ ಸರ್ಪಭೂಷಣ ಶಿವಯೋಗಿಗಳು ಅಪ್ಪಣೆ ಕೊಡಿಸಿದಂತೆ ಶ್ರೀಗಳವರು ಶಿವಯೋಗ ಸಾಧನೆಯಿಂದ ಮನದ ವಿಕಾರಗಳನ್ನೆಲ್ಲ ಕಳೆದು ನಿರ್ಮಲಗೊಳಿಸಿ, ಅಂಗ ಕರಣಗಳನ್ನೆಲ್ಲ ಲಿಂಗಕಿರಣಗಳನ್ನಾಗಿ ಮಾರ್ಪಡಿಸಿದ್ದರು. ಅವರು ನಿರೀಕ್ಷಿಸಿದ ದಿಕ್ಕು ಪ್ರಕಾಶಮಯವಾಗುತ್ತಿತ್ತು; ಮುಟ್ಟಿದ ವಸ್ತು ಪರುಷವಾಗುತ್ತಿತ್ತು; ಮೆಟ್ಟಿದ ಧರೆ ಕ್ಷೇತ್ರವಾಗುತ್ತಿತ್ತು. ಅವರು ಏಕಾಂತವಾದ ನಿಸರ್ಗ ಸುಂದರವಾದ ಸ್ಥಾನಗಳನ್ನು ಕಂಡರೆ ಅಲ್ಲಿಯೇ ಪೂಜೆಗೆಂದು ಕುಳಿತುಬಿಡುತ್ತಿದ್ದರು.

ಶ್ರೀಗಳವರು ಮೊಟ್ಟಮೊದಲು ಶಿವಯೋಗಮಂದಿರದ ಪಶ್ಚಿಮಕ್ಕೆ ಗುಡ್ಡದ ಒಂದು ಭಾಗದಲ್ಲಿ ಪ್ರಶಾಂತವಾದ ಸ್ಥಾನವನ್ನು ಕಂಡರು. ಜುಳುಜುಳು - ಜರಿಯು ಹರಿಯುತ್ತಿದೆ. ಬಿಲ್ವವನ ಕಣ್ಣಿಗೆ ಸೊಬಗು ಬೀರಿದೆ. ಕಾಡು ಹೂಗಳು ಕಂಪು ಸೂಸಿವೆ. ಇಂತಹ ಸ್ಥಾನದಲ್ಲಿ ಶ್ರೀಗಳವರು ತಾವೇ ಒಂದು ಗುಡಿಸಲನ್ನು ೧೯೧೩ರಲ್ಲಿ ಕಟ್ಟಿಕೊಂಡು ಮೂರು ತಿಂಗಳವರೆಗೆ ಅನುಷ್ಠಾನ ಮಾಡಿದರು. ಹಾನಗಲ್ಲ ಶ್ರೀಗಳವರು ಇವರ ಶಿವಪೂಜಾನುರಾಗವನ್ನು ಪರಮ ವಿರತಿಯ ಭಾವವನ್ನು ಕಂಡು ಬಹು ಹಿಗ್ಗಿದರು, ಹೆಮ್ಮೆಪಟ್ಟರು. ಶ್ರೀಗಳವರು ಅನುಷ್ಠಾನ ಮಾಡುವಾಗ ಈ ಭಾಗದಲ್ಲಿ ಚಿರ್ಚಗಳು, ಗೋವುಗಳನ್ನು ಕಂಡೂ ಹಿಡಿಯುತ್ತಿರಲಿಲ್ಲ. ಕ್ರೂರಮೃಗಗಳೂ ಕೂಡ ಶ್ರೀಗಳವರ ತಪದ ಸಾತ್ವಿಕ ಪ್ರಭಾವದಲ್ಲಿ ವೈರವನ್ನು ಬಿಟ್ಟಿದ್ದವು. ಈಗಲೂ ಶಿವಯೋಗಮಂದಿರದ ಸುತ್ತಲೂ ಈ ಪ್ರಭಾವ ಅಚ್ಚಳಿಯದೆ ಉಳಿದಿದೆ; ಅಹಿಂಸೆಯ ಪ್ರತಿಷ್ಠೆ ಒಡಮೂಡಿದೆ. ಈ ಆಶ್ರಮದ ಪರಿಸರದ ಪ್ರದೇಶದಲ್ಲಿ ಬ್ರಿಟಿಷರ ಕಾಲ ದಿಂದಲೂ ಕಾಡುಮೃಗಗಳ ಬೇಟೆಯಾಡುವದಕ್ಕೆ ಯಾರಿಗೂ ಅನುಮತಿಯಿಲ್ಲ. ಹಾಗೆ ಮಾಡಿದವರಿಗೆ ಕೇಡು ತಪ್ಪುವದಿಲ್ಲ.

ಮೊನ್ನೆ ಮೊನ್ನೆಯ ಮಾತು. ಐದು ವರ್ಷಗಳ ಹಿಂದೆ ಬದಾಮಿಗೆ ಒಬ್ಬ ಮಾಮಲೇದಾರರು ಬಂದಿದ್ದರು. ಅವರಿಗೆ ಬೇಟೆಯಾಡುವ ಬಲು ಹುಚ್ಚು ಇದ್ದಿತು. ತಪಸ್ವಿಗಳ ತಾಣ ಬೇಡವೆಂದರೂ ಕೇಳದೆ ಹಲವಾರು ಸಲ ಆಶ್ರಮದ ನವಿಲುಗಳನ್ನು ಮತ್ತು ನದಿಯಲ್ಲಿಯ ಹಕ್ಕಿಗಳನ್ನು ತಿನ್ನಲು ಬೇಟೆಯಾಡುತ್ತಿದ್ದರು. ಅವರಿಗೆ ಒತ್ತಾಯವಾಗಿ ಮಲೆನಾಡಿಗೆ ವರ್ಗವಾಯಿತು. ಜನರ ಪ್ರೀತಿ-ವಿಶ್ವಾಸಗಳನ್ನು ಅವರು ಕಳೆದುಕೊಂಡರು. ಮಲೆನಾಡಿನಲ್ಲಿ ಒಂದು ದಿನ ಬೇಟೆಯಾಡಲು ಹೋದಾಗ ಪ್ರಮಾದದಿಂದ ಅವರ ಗುಂಡು ತಪ್ಪಿ ಸೇವಕನಿಗೆ ತಾಗಿತು. ಈ ಘೋರ ಪ್ರಸಂಗದಲ್ಲಿ

CC-0. Jangamwadi Math Collection. Digitized by eGangotri

ಮತಿವಿಭ್ರಮೆಗೊಂಡು ಅವರು ಆತ್ಮಹತ್ಯೆಯನ್ನು ಮಾಡಿಕೊಂಡ ಪ್ರತ್ಯಕ್ಷ ನಿದರ್ಶನವನ್ನು ಕಂಡವರುಂಟು, ಕೇಳಿದವರುಂಟು.*

## ತೊದಲಬಗಿ

ವಿಜಾಪುರ ಜಿಲ್ಹೆಯ ಜಮಖಂಡಿ ತಾಲೂಕಿನಲ್ಲಿ ಬಿದರಿಗೆ ಸಮೀಪದಲ್ಲಿ ತೊದಲಬಗಿ ಎಂಬ ಗ್ರಾಮವಿದೆ. ಅಲ್ಲಿ ಅನಂತಪುರದವರ ಮನೆತನ ಸಿರಿವಂತಿಕೆಯನ್ನು ಭಕ್ತಿವಂತಿಕೆಯನ್ನೂ ಪಡೆದು ಬಹು ಪ್ರಸಿದ್ಧವಾದುದು. ಆ ಮನೆತನದವರ ಉದಾರತೆ ಮತ್ತು ಗುರುಲಿಂಗ ಜಂಗಮ ಪ್ರೇಮವನ್ನು ಕಂಡು ಶ್ರೀಗಳವರು ಆಗಾಗ ಅಲ್ಲಿಗೆ ದಯಮಾಡಿಸುತ್ತಿದ್ದರು. ಒಂದು ದಿನ ಸಾಯಂಕಾಲ ಶ್ರೀಗಳವರು ಹೊರಗೆ ತಿರುಗಾಡಲು ದಯಮಾಡಿಸಿದರು. ಹಳ್ಳದ ಪ್ರಶಾಂತ ದಡ ಶ್ರೀಗಳವರ ಮನವನ್ನು ಆಕರ್ಷಿಸಿತು; ಅವರ ಇಚ್ಛೆಯಂತೆ ಅಲ್ಲಿಯೇ ಒಂದು ಗಿಡಗಳ ಗುಂಪಿನ ನೆಳಲಲ್ಲಿ ಶಿವಾರ್ಚನೆಗೆ ಅಣಿಯಾಯಿತು. ಶ್ರೀಗಳವರು ಆ ಕಿರಿಯ ನಿರ್ಝರಿಣಿಯಲ್ಲಿ ಮಿಂದು ಪೂಜೆಗೆ ಕುಳಿತರು. ಒಂದು ದಿನ ಅರ್ಚನೆ ಸಾಗಲೆಂದು ಕುಳಿತವರು ಆ ನಿಸರ್ಗ ಸೌಂದರ್ಯಕ್ಕೆ ಮನಸೋತು ಒಂದು ತಿಂಗಳ ವರೆಗೂ ಅನುಷ್ಠಾನ ಮಾಡಿದರು. ಶ್ರೀಮಂತ ಬಸವ ಪ್ರಭಪ್ಪ ಮೊದಲಾದ ಹಿರಿಯರು ಶ್ರೀಗಳವರ ಪೂಜೆಗೆ ಎಲ್ಲವನ್ನು ಸಿದ್ಧಗೊಳಿಸಿದ್ದರು. ಶ್ರೀಮತಿ ಮುರಿಗೆವ್ವ ತಾಯಿಯ ಭಕ್ತಿಯನ್ನು ಕಂಡು- "ತಾಯಿ, ಈ ಸ್ಥಾನದಲ್ಲಿ ಗಂಗೆಯು ಉದಯಿಸಿರುವ; ಆಕೆಯ ಸ್ವಯಂಭು ಶಿಲಾಪಾದುಕೆಗಳ ಈ ಸ್ಥಾನದಲ್ಲಿ ಒಂದು ಗುಡಿಯನ್ನು ಕಟ್ಟಿ ಪೂಜೆಗೆ ಅನುಕೂಲ ಮಾಡಿಕೊಡಬೇಕು." ಎಂದು ಅಪ್ಪಣೆ ಕೊಡಿಸಿದರು. ಅಂತೆಯೇ ಆ ಸ್ಥಾನದಲ್ಲಿ ಶ್ರೀಮಂತ ತಾಯಿಯು ಗುಡಿಯನ್ನು ಕಟ್ಟಿಸಿ ಅದರಲ್ಲಿ ಪಾದುಕೆಗಳನ್ನು ಸ್ಥಾಪಿಸಿದರು. ಶ್ರೀಗಳವರ ಕೃಪೆಯಿಂದ ಈ ಮನೆತನದವರು ತಮ್ಮ ಪ್ರಾಚೀನ ಪವಿತ್ರ ಸಂಸ್ಕೃತಿಯನ್ನು ಬಿಡದೆ ಸಿರಿವಂತರಾಗಿ ಬಾಳುತ್ತಿರುವರು.

## ಅಥಣಿಯ ಶೆಟ್ಟರ ಮಠದ ತೋಟ

ಅಥಣಿಯಲ್ಲಿ ಶೆಟ್ಟರ ಮಠದ ಶ್ರೀ ಮರುಳಸಿದ್ಧೇಶ್ವರನ ದರ್ಶನಕ್ಕೆ ಶ್ರೀಗಳವರು ಪದೇ ಪದೇ ದಯಮಾಡಿಸುತ್ತಿದ್ದರು. ಅಲ್ಲಿ ಊರ ಹೊರಗೆ ಎರಡು ಫರ್ಲಾಂಗು ದೂರದಲ್ಲಿ ಶೆಟ್ಟರ ಮಠದ ತೋಟವಿದೆ. ಅಲ್ಲಿಯೇ ಗುಡ್ಡದ ಓರೆಯಲ್ಲಿ ಶ್ರೀ ಸಿದ್ಧೇಶ್ವರನ ಗುಡಿಯೂ ಇದೆ. ಅಲ್ಲಿಯ ಭಾವಿಯಲ್ಲಿ ಶ್ರೀಗಳ ಕೃಪೆಯಿಂದ ಜಲ ಬಂದಿದೆ. ಜಲ ಟೆಂಗಿನ ಹಾಲಿನಂತೆ ರುಚಿಕರ ಮತ್ತು ಆರೋಗ್ಯಕರವಾಗಿದೆ. ಅದಕ್ಕೆ ಶ್ರೀಗಳವರು

* ಪ್ರೊ. ಜಿ. ಎಂ. ಉಮಾಪತಿ ಶಾಸ್ತ್ರಿಗಳು ಶಿವಯೋಗಮಂದಿರದಲ್ಲಿ ಇದ್ದಾಗ ನಡೆದ ಪ್ರಸಂಗ.

CC-0. Jangamwadi Math Collection. Digitized by eGangotri

ಶ್ರೀ ಮರುಳಸಿದ್ಧೇಶ್ವರ ಕ್ಷೇತ್ರವೆಂದು ಕರೆದರು. ಅದರ ಸಮೀಪದಲ್ಲಿ ಒಂದು ಜೋಪಡಿ ಕಟ್ಟಿಸಿಕೊಂಡು ಶ್ರೀಗಳವರು ಕೆಲವು ದಿನ ಅನುಷ್ಠಾನ ಮಾಡಿದ್ದಾರೆ. ಶ್ರೀಗಳು ಅಲ್ಲಿ ಒಂದು ಆಶ್ರಮವನ್ನು ಕಟ್ಟುವ ವಿಚಾರವನ್ನೂ ಮಾಡಿದ್ದರು.

## ಒಡಳುಹೊಳೆ (ನವಿಲು ತೀರ್ಥ)

ಸವದತ್ತಿಯ ಕಲ್ಮಠಕ್ಕೂ ಗುರುವರ್ಯರ ಸ್ಥಾನವೆಂದು ಶ್ರೀಗಳವರು ಆಗಾಗ ದಯಮಾಡಿಸುವ ಪರಿಪಾಟವಿಟ್ಟುಕೊಂಡಿದ್ದರು. ಸವದತ್ತಿಗೆ ನಾಲ್ಕು ಮೈಲು ದೂರದಲ್ಲಿ ಪಶ್ಚಿಮ-ಉತ್ತರವಾಹಿನಿಯಾಗಿರುವ ಮಲಾಪಹಾರಿಣಿಯ ತೀರದಲ್ಲಿ ನವಿಲು ತೀರ್ಥವು ಬಹು ಪ್ರಸಿದ್ಧವಾಗಿದೆ. ಅಲ್ಲಿ ನದಿಯು ಬೆಟ್ಟವನ್ನು ಒಡೆದು ರಭಸದಿಂದ ಮುಂದೆ ಸಾಗಿದಂತಿದೆ. ಅದಕ್ಕೆ ಒಡಕುಹೊಳೆ ಎಂಬ ಹೆಸರು ಅನ್ವರ್ಥಕವಾಗಿದೆ. ಅದು ಬಹು ರಮ್ಯವಾದ ಸ್ಥಾನ. ಲಿಂ. ಬಿದರಿ ಶ್ರೀ ಕುಮಾರ ಶಿವಯೋಗಿಗಳು, ನಂತರ ಶ್ರೀ ಅಪ್ಪಯ್ಯಸ್ವಾಮಿಗಳು ಅನುಷ್ಠಾನ ಮಾಡಿದ ಪವಿತ್ರ ಸ್ಥಾನವಾದ್ದರಿಂದ ಶ್ರೀಗಳವರು ಮೇಲಿಂದ ಮೇಲೆ ಅಲ್ಲಿಗೆ ದಯಮಾಡಿಸಿ ಕೆಲವು ದಿನವಿದ್ದು ಆನಂದದಿಂದ ಶಿವಪೂಜೆಯನ್ನು ಮಾಡುತ್ತಿದ್ದರು. ಇಲ್ಲಿ ಬಿಲ್ವಪತ್ರಿಯ ಸುಂದರ ಬನವೂ ಇದೆ. ಶ್ರೀಗಳವರು ಒಂದು ಮಠವನ್ನು ಮೂರ್ತಿಗಳ ಪೂಜೆಗೆ ಅನುಕೂಲವಾಗಲೆಂದು ಕಟ್ಟಿಸಿರುವರು. ವರುಷಕ್ಕೊಂದು ಸಲ ಸಂಕ್ರಮಣ ಕಾಲಕ್ಕೆ ಇಲ್ಲಿ ತೆಪ್ಪೋತ್ಸವವು ವೈಭವದಿಂದ ನಡೆಯುತ್ತಿದೆ.

## ತಮ್ಮನತಡಿ

ಶ್ರೀಗಳವರು ಬಿದರಿಗೆ ಪ್ರಯಾಣ ಮಾಡುವಾಗ ಮಾರ್ಗದಲ್ಲಿ ಎಡಹಳ್ಳಿಯ ಶ್ರೀಮಂತ ಮಲ್ಲಪ್ಪ ದೇಸಾಯರ ರಾಜವಾಡೆಗೆ ದಯಮಾಡಿಸುವ ಪದ್ಧತಿಯಿದ್ದಿತು. ಎಡಹಳ್ಳಿಯ ಸಮೀಪದಲ್ಲಿ ಕೃಷ್ಣಾನದಿಯ ತೀರದಲ್ಲಿ ತಮ್ಮನತಡಿಯೆಂಬ ಮನೋಹರ ಸ್ಥಾನವಿದೆ. ಅಲ್ಲಿ ಶ್ರೀ ದೇಸಾಯರ ಪೂರ್ವಜರ ಗದ್ದುಗೆಗಳಿವೆ. ಆ ಸ್ಥಾನವು ಪತ್ರೆ-ಬನ್ನಿ-ಹುಣಸಿ ಮೊದಲಾದ ವೃಕ್ಷಗಳಿಂದಲೂ ಪೇರಲ ಮೊದಲಾದ ಫಲಭರಿತ ಮರಗಳಿಂದಲೂ ಬಹು ರಮ್ಯವಾಗಿದೆ. ಶ್ರೀಮಂತ ಮಲ್ಲಪ್ಪ ದೇಸಾಯಿಯವರ ಇಚ್ಛೆಯಂತೆ ಶ್ರೀಗಳವರು ಈ ಪ್ರಶಾಂತ ಸ್ಥಾನದಲ್ಲಿಯೂ ಅನೇಕ ಸಲ ಶಿವಪೂಜೆಯನ್ನು ಮಾಡಿದರು. ಶ್ರೀ ಮಲ್ಲಪ್ಪ ದೇಸಾಯಿಯವರು ಬಹು ಸಾತ್ವಿಕರು, ಗುರುಲಿಂಗ ಜಂಗಮಪ್ರೇಮಿಗಳು. ಅವರು ಶಿವಯೋಗಮಂದಿರ ಸಂಸ್ಥೆಗೆ ಬಹುವಾಗಿ ಸಹಾಯ ನೀಡಿದ ಉದಾರಿಗಳು, ಅಲ್ಲದೆ ಕಲಾಪ್ರೇಮಿಗಳು. ಅವರು ತಬಲಾ ವಾದನದಲ್ಲಿ ಬಹು ನುರಿತವರಾಗಿದ್ದರು; ಶ್ರೀ ಪಂಚಾಕ್ಷರ ಗವಾಯಿಗಳವರನ್ನು ಆಗಾಗ ಕರೆಯಿಸಿ ಸಂಗೀತ ಕಚೇರಿಯನ್ನು ಮಾಡಿಸಿ ತಣಿಯುತ್ತಿದ್ದರು; ಲಿಂ. ಕಂಚಗಲ್ಲ ಬಿದರಿಯ ಶ್ರೀಪ್ರಭು ಕುಮಾರ ಪಟ್ಟಾಧ್ಯಕ್ಷರಿಂದ ಶಿವದೀಕ್ಷೆ ಹೊಂದಿದ್ದರು. ಹಾವೇರಿಯ ಪೂಜ್ಯರಲ್ಲಿಯಂತೂ ಇವರಿಗೆ ವಿಶೇಷವಾದ ಭಕ್ತಿ-ವಿಶ್ವಾಸಗಳಿದ್ದವು.

CC-0. Jangamwadi Math Collection. Digitized by eGangotri

ಒಡಕುಹೊಳೆಯ (ನವಿಲುತೀರ್ಥದ) ಲ್ಲಿ



ಲಿಂ. ಶ್ರೀ. ನಿ. ಪ್ರ. ಅಪ್ಪಯ್ಯಸ್ವಾಮಿಗಳು ಅನುಷ್ಠಾನ ಮಾಡಿದ ಸ್ಥಾನ.

CC-0. Jangamwadi Math Collection. Digitized by eGangotri



ಒಡಕುಹೊಳೆಯ (ನವಿಲುತೀರ್ಥದ) ದೃಶ್ಯ.

CC-0. Jangamwadi Math Collection. Digitized by eGangotri

ಲಿಂ. ಹಾನಗಲ್ಲ ಶ್ರೀಗಳವರು ಸೋಲಾಪುರದ ಶ್ರೀ ವೀರೇಶ್ವರ ಮಹಾ ಶಿವಶರಣರ ಅಂತಿಮ ದರ್ಶನ ಪಡೆದು ಬಬಲೇಶ್ವರ ಮಾರ್ಗವಾಗಿ ಶಿವಯೋಗಮಂದಿರದ ಎಲ್ಲ ಸಾಧಕವೃಂದದೊಡನೆ ಪ್ರಯಾಣ ಬೆಳೆಸಿದರು; ಬಿದರಿ ಶ್ರೀ ಶಿವಯೋಗಿಗಳ ಗದ್ದುಗೆಯ ದರ್ಶನ ಪಡೆದು ಎಡಹಳ್ಳಿಯ ಮಾರ್ಗವಾಗಿ ಬಂದು ತಮ್ಮನತಡಿಯಲ್ಲಿ ತಂಗಿದರು; ಶ್ರೀದೇಸಾಯಿಯವರ ಆದರಾತಿಥ್ಯದ ಪೂಜೆಯನ್ನು ಮುಗಿಸಿಕೊಂಡು ಬಾಗಲಕೋಟೆಗೆ ದಯಮಾಡಿಸಿದರು. ಶ್ರೀ ಮಲ್ಲಪ್ಪ ದೇಸಾಯರು ೫೦ ಎತ್ತಿನ ಗಾಡಿಗಳಲ್ಲಿ ಶಿವಯೋಗ ಮಂದಿರದ ಪರಿವಾರವನ್ನು ವೈಭವದಿಂದ ಬಾಗಲಕೋಟೆಯ ವರೆಗೂ ಕರೆತಂದರು. ಶ್ರೀಗಳವರು ಅವರ ವಿನಯ-ಭಕ್ತಿಭಾವಗಳಿಗೆ ಬಹು ಮೆಚ್ಚಿದರು. ಶ್ರೀಮಂತ ಮಲ್ಲಪ್ಪ ದೇಸಾಯಿಯವರ ನಂತರ ಅವರ ಧರ್ಮಪತ್ನಿಯವರಾದ ಶ್ರೀಮತಿ ಲಕ್ಷ್ಮೀ ಬಾಯಿಯವರೂ ಬಹು ಭಕ್ತಿವಂತೆಯರು, ಶ್ರೀಗಳಲ್ಲಿ ಅಪಾರ ಆದರ ಭಾವವನ್ನು ಇಟ್ಟುಕೊಂಡವರು. ಅವರು ಈಗಲೂ ತಮ್ಮ ಪವಿತ್ರ ಶಿವಾಚಾರದ ಪರಂಪರೆಯನ್ನು ಕಾಯ್ದುಕೊಂಡು ಬಂದಿದ್ದಾರೆ. ಶಿವಯೋಗಮಂದಿರ ಸಂಸ್ಥೆಯ ಬಗೆಗೆ ಅವರಿಗೆ ಬಹಳ ಅಭಿಮಾನವೂ ಇದೆ. ಅವರ ಚಿರಂಜೀವಿಗಳಾದ ಶ್ರೀ ರಾಚಪ್ಪ ದೇಸಾಯರು ಸುಶಿಕ್ಷಿತರೂ ಸಮಾಜ ಸೇವಾ ಕಾರ್ಯಕರ್ತರೂ ಆಗಿರುವರು. ಶ್ರೀ ತಾಯಿಯವರು ಹಾವೇರಿ ಶ್ರೀಗಳವರನ್ನು ಕರೆಯಿಸಿಕೊಂಡು ಅನೇಕ ಸಲ ತಮ್ಮನತಡಿಯಲ್ಲಿ ಶಿವಪೂಜೆ ಯನ್ನು ಮಾಡಿಸಿದರು.

ಒಂದು ಸಾರೆ ಶ್ರೀಗಳವರು ಶ್ರೀ ಮಲ್ಲಪ್ಪ ದೇಸಾಯಿಯವರ ಆಗ್ರಹದಿಂದ ಕೋಲೂರ ಷಣ್ಮುಖಸ್ವಾಮಿಯ ಗುಡಿಗೆ ದಯಮಾಡಿಸಿದರು. ಸೊಂಡೂರ ಕಾರ್ತಿ ಕೇಯ ಸ್ವಾಮಿಯು ಶ್ರೀ ದೇಸಾಯಿಯವರ ಮನೆದೇವತೆ. ಅಲ್ಲಿಯ ಗದ್ದಿಗೆಗೆ, ಶ್ರಾವಣ ಮಾಸದಲ್ಲಿ ಪ್ರತಿವರ್ಷ ರುದ್ರಾಭಿಷೇಕವನ್ನು ಶ್ರೀ ದೇಸಾಯಿಯವರು ಮಾಡಿಸುತ್ತಾರೆ. ಶ್ರೀ ದೇಸಾಯಿಯವರು ಹಾವೇರಿ ಪೂಜ್ಯರ ಸಮಕ್ಷಮದಲ್ಲಿ ಕುಲದೇವತೆಯ ಗುಡಿಯಲ್ಲಿ ಬಿಲ್ವಪತ್ರೆಯ ಗಿಡವನ್ನು ಹಚ್ಚಲು ನೆಲವನ್ನು ಅಗಿಸ ಹಚ್ಚಿದರು. ಅಲ್ಲಿ ಒಂದು ಗುಪ್ತಗುಹೆಯು ಕಂಡಿತು. ಅಲ್ಲಿ ಶಿವಪೂಜೆಯ ಸಾಮಾನುಗಳು, ದೊಡ್ಡ ದೊಡ್ಡ ಸಮೆಗಳು, ಜಲ ತುಂಬಿದ ಕೊಡಗಳು ದೊರೆತವು. ಒಳಗೆ ದೀಪ ಉರಿಯುವದನ್ನು ಕಂಡು ಶ್ರೀಗಳವರು ಅದು ಶಿವಯೋಗಿಗಳ ಅನುಷ್ಠಾನದ ಜಾಗ್ರತಸ್ಥಾನವೆಂದು ಹೇಳಿ ಅದನ್ನು ಮುಚ್ಚಿಸಿದರು;§ ಅಲ್ಲಿ ಕೆಲವು ದಿನವಿದ್ದು ಮತ್ತೆ ಶಿವಪೂಜೆಯನ್ನು ಮಾಡಿ ಕೊಂಡು ಮರಳಿದರು.

## ಗದಗಿನ ಮಾನ್ವಿಯವರ ಪತ್ರಿಮಠ

ಗದಗ ನಗರದ ಮಾನ್ವಿಯವರ ಮನೆತನದಲ್ಲಿ ಪ್ರಸಿದ್ಧ ವರ್ತಕರೂ ಉದಾರಿ

---

§ ಅಲ್ಲಿಯ ಸಾಮಾನುಗಳನ್ನು ಸರಕಾರದವರು ಒಯ್ದು ಪುಣೆಯಲ್ಲಿ ಪ್ರದರ್ಶನಕ್ಕೆ ಇಟ್ಟರೆಂದು ವದಂತಿ.

CC-0. Jangamwadi Math Collection. Digitized by eGangotri

ಗಳೂ ಆದ ರಾ. ಬ. ಶ್ರೀಮಂತ ಶಿವಪ್ಪಣ್ಣನವರು ಶ್ರೀಗಳವರಲ್ಲಿ ಅನನ್ಯ ಭಕ್ತಿಯುಳ್ಳವರಾಗಿದ್ದರು. ಶ್ರೀಗಳವರು ಎಂದಿಗೂ ನಗರದ ಮಧ್ಯೆ ಪೂಜೆಯನ್ನು ಮಾಡಿಕೊಳ್ಳಲು ಮನಸ್ಸು ಮಾಡುತ್ತಿರಲಿಲ್ಲ. ಅವರಿಗೆ ಪೂಜೆ ಮಾಡಲು ಪ್ರಶಾಂತ ನಿಸರ್ಗ ಸನ್ನಿವೇಶ ಬೇಕು. ಅದನ್ನು ಅರಿತ ಶ್ರೀಮಂತ ಮಾನ್ವಿ ಶಿವಪ್ಪನವರು ಶ್ರೀಗಳವರಿಗಾಗಿ ಪ್ರತ್ಯೇಕ ಒಂದು ಮಠವನ್ನು ಕಟ್ಟಿಸಿ ಅಲ್ಲಿ ಬಿಲ್ವಪತ್ರಿಯ ವೃಕ್ಷಗಳನ್ನು ಬೆಳೆಸಿದರು. ಶ್ರೀಗಳವರ ಪೂಜೆಗಾಗಿ ಈ ಮಠ ಮೀಸಲಾಗಿದ್ದಿತು. ಶ್ರೀಗಳವರು ಗದಗಿಗೆ ದಯಮಾಡಿಸಿದರೆ ಇಲ್ಲಿಯೇ ಪೂಜೆ ನಡೆಯುತ್ತಿತ್ತು. ಒಮ್ಮೆ ಶ್ರೀ. ಜ. ತೋಂಟದಾರ್ಯ ಮಠದಲ್ಲಿ ಪುರಾಣವು ನಡೆದಾಗ ಎರಡು ತಿಂಗಳು ಶ್ರೀಗಳವರು ಇಲ್ಲಿಯೇ ಅನುಷ್ಠಾನ ಮಾಡಿದರು. ಪ್ರಸಿದ್ಧ ನೈಯಾಯಿಕರಾದ ಪಂ. ಕಲಿಗಣನಾಥ ಶಾಸ್ತ್ರಿಗಳು ಮಠದ ಕಾರಭಾರಿಗಳಾಗಿದ್ದರು; ಅವರು ಮತ್ತು ಪೂಜ್ಯರಿಂದ ಅನುಗ್ರಹೀತರಾದ ಹಿಡ್ಕಿಮಠದ ಶ್ರೀ ಚನ್ನವೀರ ಶಾಸ್ತ್ರಿಗಳವರ ಆಗ್ರಹದಂತೆ ಶ್ರೀಗಳವರು ಗದಗಿನಲ್ಲಿ ಆನಂದದಿಂದ ಶ್ರೀ ಶಿವಪ್ಪನವರು ಮತ್ತು ಉಳಿದ ನಗರದ ಭಕ್ತರ ಭಕ್ತಿಯನ್ನು ಸ್ವೀಕರಿಸಿದರು.

ಶ್ರೀಗಳವರು ಅನುಷ್ಠಾನ ಮಾಡಿದ ಅನೇಕ ಸ್ಥಾನಗಳಲ್ಲಿ ಶಿವಯೋಗಮಂದಿರದ ಶಾಖೆಗಳು ಸ್ಥಾಪಿತವಾಗಿವೆ. ಅವುಗಳಲ್ಲಿ ನಿಡಗುಂದಿ ಕೊಪ್ಪ, ಕಪನಳ್ಳಿ, ಹಿರೇಹಾಳ ಮೊದಲಾದ ಗ್ರಾಮಗಳಲ್ಲಿ ಶಾಖಾಮಂದಿರಗಳು ಶ್ರೀಗಳವರ ತಪೋಭೂಮಿಗಳಾಗಿ ಭಕ್ತರನ್ನು ಆಕರ್ಷಿಸಿವೆ.

## ನಿಡಗುಂದಿ ಕೊಪ್ಪದ ಶಾಖಾಮಂದಿರ

ಒಮ್ಮೆ ಹಾನಗಲ್ಲ ಶ್ರೀಗಳವರು ಧಾರವಾಡ ಜಿಲ್ಲೆಯ ರೋಣ ತಾಲೂಕಿನಲ್ಲಿ ಶಿವಯೋಗಮಂದಿರದ ಭಿಕ್ಷೆಗೆಂದು ದಯಮಾಡಿಸಿದರು. ಜೊತೆಯಲ್ಲಿ ಹಾವೇರಿಯ ಪೂಜ್ಯರೂ ಇದ್ದರು. ಒಮ್ಮೆ ವಿನೋದವಾಗಿ ಹಾನಗಲ್ಲ ಶ್ರೀಗಳವರಿಗೆ "ತಾವು ಊರ ಜನರನ್ನು ಬೇಡಿ ಭಿಕ್ಷೆ ತರುತ್ತೀರಿ. ನಾನು ಶಿವನನ್ನು ಬೇಡಿ, ನಿರ್ಜನ ವನದಲ್ಲಿ, ಬೇಡಿದ್ದನ್ನು ತಂದು ಕೊಡುವೆನು"ಎಂದು ಹೇಳಿ ನಿಡಗುಂದಿ-ಕೊಪ್ಪದ ಸನಿಹದಲ್ಲಿಯ ಹಳ್ಳದ ಪತ್ರಿಬನದಲ್ಲಿ ಅನುಷ್ಠಾನಕ್ಕೆ ಕುಳಿತರು. ಆರು ತಿಂಗಳು ಅಖಂಡವಾಗಿ ಅನುಷ್ಠಾನ ನಡೆಯಿತು. ಹಾನಗಲ್ಲ ಶ್ರೀಗಳವರಿಗೆ ಹಾವೇರಿ ಶ್ರೀಗಳವರ ತಪೋಬಲವನ್ನು ಕಂಡು ಬಹು ಸಂತೋಷವಾಯಿತು. ಅವರೇ ಅನುಷ್ಠಾನ ಸಮಾಪ್ತಿಯ ಆರಾಧನೆಯನ್ನು ಮಾಡಿಸಿ ಕ್ರಿ. ಶ. ೧೯೧೫ರಲ್ಲಿ ಬಸವಜಯಂತಿಯ ಶುಭ ದಿನದಲ್ಲಿ ಶಾಖಾಮಂದಿರದ ಅಡಿಗಲ್ಲನ್ನು ಇಡಿಸಿದರು. ಅಂದೇ ಅಲ್ಲಿಯೇ ಶ್ರೀ ಪಂಚಾಕ್ಷರ ಗವಾಯಿಗಳವರ ಸಂಗೀತ ಪಾಠಶಾಲೆಯ ಪ್ರಾರಂಭೋತ್ಸವವೂ ನಡೆಯಿತು. ಆಲೂರ ಸದ್ಭಕ್ತರು ಆಶ್ರಮದ ಕ್ಷೇತ್ರವನ್ನು ಒದಗಿಸಿದರು; ಈ ಶಾಖಾಮಂದಿರವು ನಿರಾತಂಕವಾಗಿ ನಡೆಯಲೆಂಬ ಘನವಾದ ಉದ್ದೇಶದಿಂದ ಕೊಪ್ಪ ಮತ್ತು ಹಾಲಕೆರೆ ಗ್ರಾಮಗಳ ಸದ್ಭಕ್ತರು

CC-0. Jangamwadi Math Collection. Digitized by eGangotri



ನಿಡಗುಂದಿಕೊಪ್ಪದಲ್ಲಿ ಶ್ರೀಗಳವರು ಅನುಷ್ಠಾನ ಮಾಡಿದ ಬಿಲ್ವ ಪತ್ರೆಯ ವನ

CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri



ಕಪನಳ್ಳಿಯ ಶಿವಯೋಗಾಶ್ರಮದ ಭವ್ಯ ಮಂದಿರ

೬೦ ಎಕರೆ ಜಮೀನನ್ನು ದಾನವಾಗಿ ನೀಡಿದರು. ಮೂರು-ನಾಲ್ಕು ವರ್ಷಗಳಲ್ಲಿಯೇ ಶ್ರೀಗಳವರ ತಪಃಪ್ರಭಾವದಿಂದ ಆ ಭೂಮಿ ಪುಣ್ಯಕ್ಷೇತ್ರವಾಗಿ ಕಂಗೊಳಿಸಿತು, ಶಿವನ ಸ್ಥಾನವಾಯಿತು. ಬಿಲ್ವಪತ್ರೆಯ ವೃಕ್ಷಕ್ಕೆ ದೀಕ್ಷೆಮಾಡಿಸಿ ಲಿಂಗಧಾರಣೆಯನ್ನು ಶ್ರೀಗಳವರು ಮಾಡಿಸಿದರು. ಆಶ್ರಮದ ವ್ಯವಸ್ಥೆಗಾಗಿ ಚೆನ್ನಬಸವ ಮಹಾಸ್ವಾಮಿಗಳು ಗೋಕಾಕ ಅವರನ್ನು ನೇಮಿಸಿದರು. ಅವರು ಇಲ್ಲಿಯೇ ತ್ರಿಕಾಲ ಅನುಷ್ಠಾನ ಮಾಡುತ್ತ ಭಕ್ತರನ್ನು ಉದ್ಧರಿಸುತ್ತಿರುವರು; ಪ್ರತಿವರ್ಷ ರಥೋತ್ಸವವನ್ನು ವಿಜೃಂಭಣೆಯಿಂದ ನೇರವೇರಿಸುತ್ತಿರುವರು.

## ಕಪನಹಳ್ಳಿಯ ಶಿವಯೋಗಾಶ್ರಮ

ಹಾನಗಲ್ಲ ಶ್ರೀಗಳವರು ಮಲೆನಾಡಿನಲ್ಲಿಯೂ ಧರ್ಮ ಪ್ರಸಾರ ಕಾರ್‍ಯವನ್ನು ಕೈಕೊಂಡರು. ಈ ಕಾರ್ಯದಲ್ಲಿ ಶ್ರೀಗಳವರಿಗೆ ಆನಂತಪುರ (ಆನಂದಪುರಂ, ತಾ. ಸಾಗರ)ದ ಮುರುಘಾಮಠದ ಶ್ರೀ ಜ. ಲಿಂಗಮಹಾಸ್ವಾಮಿಗಳು, ಗುತ್ತಲದ ಶ್ರೀ ರುದ್ರಮುನಿಸ್ವಾಮಿಗಳು, ಕೆಳದಿಯ ಶ್ರೀ ರೇವಣಸಿದ್ಧ ಪಟ್ಟಾಧ್ಯಕ್ಷರು ಬಹಳವಾಗಿ ಸಹಕರಿಸಿದರು. ಇವರೆಲ್ಲರ ಆಗ್ರಹದಂತೆ ಮಲೆನಾಡಿನಲ್ಲಿ ಜನಸುಧಾರಣೆಗಾಗಿ ಒಂದು ಶಾಖಾಮಂದಿರವನ್ನು ಸ್ಥಾಪಿಸುವ ವಿಚಾರವನ್ನು ಹಾನಗಲ್ಲಶ್ರೀಗಳವರು ಹಾವೇರಿ ಶ್ರೀಗಳವರಿಗೆ ತಿಳಿಸಿದ್ದರು. ಹಾವೇರಿ ಶ್ರೀಗಳವರು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನಲ್ಲಿ ಅನಿಮಿಷದೇವರ ತಪೋಭೂಮಿಯಾದ ಕಪನಳ್ಳಿಯ ನೆರೆಯಲ್ಲಿ ಪ್ರಶಾಂತ ಸ್ಥಾನದಲ್ಲಿ ಅನುಷ್ಠಾನಮಾಡಿ ಶಿವಯೋಗಾಶ್ರಮವನ್ನು ಸ್ಥಾಪಿಸಿದರು. ಅದರಿಂದ ಮಲೆನಾಡಿನ ಭಕ್ತರಲ್ಲಿ ಹೊಸ ಚೈತನ್ಯ ಮೂಡುವಂತಾಯಿತು. ಈ ಆಶ್ರಮವು ಸತತವಾಗಿ ನಡೆಯಲೆಂದು ಶ್ರೀ ಹೊನ್ನಪ್ಪ ಶೆಟ್ಟರ ಚೆನ್ನಪ್ಪನವರು ಹಳೇಪಟ್ಟಣದ ಶ್ರೀ ಹಾಲಪ್ಪ ಶೆಟ್ಟರು* ಮೊದಲಾದವರು ಬಹುವಾಗಿ ಸಹಾಯ ನೀಡಿರುವರು. ಶ್ರೀಗಳವರ ಅಪ್ಪಣೆಯಂತೆ ಮಂದಿರದ ಸಾಧಕರನೇಕರು ಇಲ್ಲಿಗೆ ಬಂದು ಅನುಷ್ಠಾನವನ್ನು ಮಾಡುತ್ತಿದ್ದರು. ಹುಬ್ಬಳ್ಳಿ ಶ್ರೀ ಶಿವಮೂರ್ತಿ ಸ್ವಾಮಿಗಳು, ಇಲಕಲ್ಲ ಶ್ರೀ ಮಹಾಂತದೇಶಿಕರು, ಬಾಗಿಲುಕೋಟೆಯ ಚರಂತಿಮಠದ ಶ್ರೀ ಶಿವಮೂರ್ತಿದೇಶಿಕರು, ಕರವೀರಮಠದ ಶ್ರೀಮಹಾದೇವದೇಶಿಕರು ಲಿಂಗಾಣತಿಯಿಂದ ಬಂದುದನ್ನು ಸ್ವೀಕರಿಸುತ್ತ ಸಂಕಲ್ಪಪೂರ್ವಕವಾಗಿ ಒಂದು ಕೋಟಿ ಮಹಾಮಂತ್ರ ಜಪಾನುಷ್ಠಾನಮಾಡಿ ಶ್ರೀಗಳವರ ಆಶೆಯನ್ನು ಸಫಲಗೊಳಿಸಿದರು.

---

* ಶ್ರೀ ಹಾಲಪ್ಪ ಶೆಟ್ಟರು ಒಡಕು ಹೊಳೆಯಲ್ಲಿ ಅನುಷ್ಠಾನ ಮಾಡುತ್ತಿದ್ದ ಸವಣೂರ ಕಲ್ಮಠದ ಶ್ರೀ ಅಪ್ಪಯ್ಯಸ್ವಾಮಿಗಳವರಲ್ಲಿದ್ದು ಶಿವಯೋಗಾನುಷ್ಠಾನದ ಕ್ರಮವನ್ನು ತಿಳಿದುಕೊಂಡು ಬಂದು ಕಪನಳ್ಳಿಯ ಶಿವಯೋಗಾಶ್ರಮದಲ್ಲಿ ಶಿವಪೂಜಾನುಷ್ಠಾನ ಮಾಡುತ್ತ ಆಶ್ರಮದ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದರು.

CC-0. Jangamwadi Math Collection. Digitized by eGangotri

ಈಗ ಶಿವಯೋಗಾಶ್ರಮದಲ್ಲಿ ಶ್ರೀಗಳಿಂದ ಅನುಗ್ರಹ ಪಡೆದ ಶ್ರೀ ರುದ್ರಮುನಿ ಸ್ವಾಮಿಗಳು ಪೂಜ್ಯರ ಉದ್ದೇಶಗಳಂತೆ ಗೋರಕ್ಷಣೆ, ಕೃಷಿ ಮೊದಲಾದ ಕಾಯಕಗಳಿಗೆ ಉತ್ತೇಜನ ಕೊಟ್ಟು ಅನುಷ್ಠಾನ ಮಾಡುತ್ತ ಜನರಲ್ಲಿ ಸದಾಚಾರವು ಒಡಮೂಡುವಂತೆ ಪ್ರಯತ್ನಿಸುತ್ತಿದ್ದಾರೆ. ಶ್ರೀಗಳವರು ಅಂದವಾದ ನೂತನ ಕಟ್ಟಡವನ್ನು ಕಟ್ಟಿಸಿ ಆಶ್ರಮದ ಶೋಭೆಯನ್ನು ಹೆಚ್ಚಿಸಿದ್ದಾರೆ.

## ಹಿರೇಹಾಳ ಶಾಖಾಮಂದಿರ

ಶಿವಯೋಗಮಂದಿರ ಸಂಸ್ಥೆಯ ಸಮೀಪದಲ್ಲಿಯೇ ರೋಣ ತಾಲೂಕಿನ ಹಿರೇಹಾಳ ಗ್ರಾಮದ ಸಮೀಪದಲ್ಲಿ ಪೂರ್ವದಿಕ್ಕಿಗೆ ಶಾಖಾಮಂದಿರವೊಂದು ಶ್ರೀಗಳವರ ಕೃಪೆಯಿಂದ ನಿರ್ಮಿತವಾಯಿತು. ಶ್ರೀಗಳವರು ಅಲ್ಲಿಯೇ ಕೆಲಕಾಲ ಶಿವಪೂಜೆಮಾಡಿ ಬಿಲ್ವಪತ್ರಿಯ ವೃಕ್ಷಕ್ಕೆ ಶಿವದೀಕ್ಷೆ ಸಂಸ್ಕಾರ ಮಾಡಿಸಿದರು. ಭಕ್ತರ ಆಗ್ರಹದಂತೆ ಶ್ರೀಗಳವರು ಶ್ರೀ ನಿರಂಜನದೇಶಿಕರನ್ನು ಅನುಷ್ಠಾನ ಮಾಡಲು ಇಲ್ಲಿಗೆ ಕಳಿಸಿದರು. ಶ್ರೀ ದೇಶಿಕರ ಅನುಷ್ಠಾನ ಪ್ರಭಾವದಿಂದ ಶಾಖಾಮಂದಿರಕ್ಕೆ ಭಕ್ತರು ಅನೇಕ ಬಗೆಯಾಗಿ ಸಹಾಯ ಸಲ್ಲಿಸಿದರು; ಮಠವನ್ನು ಕಟ್ಟಿದರು. ಈಗ ಮಠವು ಒಹಳ ಜೀರ್ಣವಾಗಿದೆ. ಸದ್ಯದ ಹಾನಗಲ್ಲ ಶ್ರೀಗಳವರಾದ ಶ್ರೀ ಸದಾಶಿವ ಸ್ವಾಮಿಗಳು ನಿಧಿ ಶೇಖರಿಸಿ ಅದರ ಜೀರ್ಣೋದ್ಧಾರಕ್ಕೆ ಪ್ರೇರಣೆ ನೀಡಿದ್ದಾರೆ.

ಹೀಗೆ, ಶ್ರೀಗಳವರು ದಯಮಾಡಿಸಿದಲ್ಲೆಲ್ಲ ಪ್ರಶಾಂತವಾದ ಸ್ಥಾನಗಳನ್ನು ಕಂಡುಹಿಡಿದು ಅಲ್ಲಿ ಶಿವಪೂಜೆಯನ್ನು ಮಾಡಿದರು. ಅವರು ಪಾದವಿಟ್ಟ ಸ್ಥಾನಗಳೆಲ್ಲ ಇಂದು ತಪೋಭೂಮಿಗಳಾಗಿ ಜಾಗ್ರತ ಕ್ಷೇತ್ರಗಳಾಗಿ ಭಕ್ತರನ್ನು ಪುನೀತಗೊಳಿಸುತ್ತಲಿವೆ.

CC-0. Jangamwadi Math Collection. Digitized by eGangotri

11·2·7

# ಕರಣಾಳು ಶ್ರೀಗಳು

## ಶ್ರೀ ಗಂಗಾಧರ ದೇವರು, ಹೊಸಮಠ, ಸವದತ್ತಿ.

ಪರಮಪೂಜ್ಯ ಲಿಂ. ಶ್ರೀ. ನಿ. ಪ್ರ. ಶಿವಬಸವಸ್ವಾಮಿಗಳು, ಹುಕ್ಕೇರಿ ಅವರ ನೆನಹು ಪುಣ್ಯಮಯವಾದುದು. ಆ ಕರುಣಾಮಯ ಮೂರ್ತಿಯನ್ನು ಸ್ಮರಣೆಗೆ ತಂದುಕೊಂಡರೆ ಶ್ರದ್ಧೆಯಿಂದ ಕಂಠ ಗದ್ಗದಿತವಾಗುತ್ತದೆ. ಶ್ರೀಗಳವರ ಕರಣಾಳು ತನವನ್ನು ಹೊಗಳಲು ನನ್ನ ಶಬ್ದಗಳಿಗಳವಲ್ಲ.

ಬಾಲರನು ವೃದ್ಧರನು ಭೂಮೀ
ಪಾಲರನು ಬಡವರನು ಸದಮಲ
ಶೀಲರನು ಗುಣಿಗಳನು ಗೋಬ್ರಾಹ್ಮರನು ಭಕ್ತರನು ।
ಲೋಲತೆಯಲಿ ಸಮಸ್ತಜಾತಿಯ
ಜಾಲವನು ಸರ್ವರನು ಕರುಣಿಸಿ
ಪಾಲಿಸುತಲಿರುತಿರ್ದನೆಮ್ಮಯ ಗುರು ಗುಹೇಶ್ವರನು ॥

ಎಂಬ ಚಾಮರಸ ಮಹಾಕವಿಯ ಉಕ್ತಿಯಂತೆ ಶ್ರೀಗಳವರು ಸಮಸ್ತ ಜಾತಿಯ ಆಬಾಲವೃದ್ಧರನ್ನು ಕರುಣಾಮಯದೃಷ್ಟಿಯಿಂದ ನೋಡುತ್ತಿದ್ದರು. ಅಂತೆಯೆ ಎಲ್ಲ ಸಮಾಜದವರೂ ಶ್ರೀಗಳವರಲ್ಲಿ ಬಹು ಭಕ್ತಿವಿಶ್ವಾಸಗಳಿಂದ ನಡೆದುಕೊಳ್ಳುತ್ತಿದ್ದರು.

'ಆತ್ಮವತ್ ಸರ್ವಭೂತಾನಿ ಯಃ ಪಶ್ಯತಿ ಸ ಪಶ್ಯತಿ'

ಎಂಬ ಗೀತೆಯ ಮಾತಿನಂತೆ ಶ್ರೀಗಳವರು ಸರ್ವರನ್ನು ಕರುಣಾಮಯವಾಗಿ ಕಂಡು ಉದ್ಧರಿಸಿದರು. ಅಂತೆಯೆ ಅವರು ನಿಜವಾದ ಮಹಾತ್ಮರು. ಅವರ ಆತ್ಮವು ವಿಶ್ವಾತ್ಮನ ರೂಪದಲ್ಲಿ ವಿಶಾಲವಾಗಿತ್ತು. ಅವರೊಬ್ಬ ವಿಶ್ವಕುಟುಂಬಿ ಮಹಾ ಶಿವಯೋಗಿಗಳು.

ಶ್ರೀಗಳವರ ಕರುಣೆಯು ಅನೇಕ ಮುಖವಾಗಿದ್ದಿತು. ಜೀವಿಗಳ, ಮಾನವರ ದುಃಖವನ್ನು ಕಂಡರೆ ಅವರ ಮನ ಮರುಗುತ್ತಿತ್ತು. ಒಳ್ಳೆಯದಾಗಲೆಂದು ಅವರು ಮನದಲ್ಲಿಯೇ ಹರಸಿ ಕರುಣೆಯ ದೃಷ್ಟಿಯನ್ನು ಚೆಲ್ಲಿದರೆ ಸಾಕು. ಆ ಕೂಡಲೇ ತಾಪತ್ರಯವೆಲ್ಲ ಪರಿಹಾರವಾಗುತ್ತಿತ್ತು.

ಒಂದೊಂದು ಸಲ ಪ್ರತ್ಯಕ್ಷವಾಗಿಯೂ ರೋಗಿಗಳ ಮೇಲೆ ಬಡವರ ಮೇಲೆ ಕರುಣೆಯನ್ನು ತೋರಿದುದುಂಟು. ಶ್ರೀಗಳವರು ಆಯುರ್ವೇದ ಶಾಸ್ತ್ರವನ್ನು

CC-0. Jangamwadi Math Collection. Digitized by eGangotri

ಕಲಿಯದಿದ್ದರೂ ಹಾನಗಲ್ಲ ಶ್ರೀಗಳವರ ಸಂಪರ್ಕದಿಂದ ವನಸ್ಪತಿಗಳ ಪರಿಜ್ಞಾನ ವನ್ನು ಪಡೆದಿದ್ದರು. ಪ್ರತಿದಿನ ಮುಂಜಾನೆ-ಸಂಜೆ ಬಹಿರ್ದೇಶಕ್ಕೆ ದಯಮಾಡಿದಾಗ ಅಡವಿಯ ದಾರಿಯಲ್ಲಿ ಸಿಕ್ಕ ಗಿಡಮೂಲಿಕೆಗಳನ್ನು ತಂದು, ಅವುಗಳಿಂದ ಔಷಧಿ ಗಳನ್ನು ತಯಾರಿಸಿ ಅನುಪಾನಗಳೊಂಧಿಗೆ ಕೊಟ್ಟು ರೋಗಿಗಳ ರೋಗವನ್ನು ಗುಣ ಪಡಿಸಿದ ಹಲವಾರು ಉದಾಹರಣೆಗಳುಂಟು.

ಕಲಾವಂತರನ್ನು, ಪುರಾಣ - ಕೀರ್ತನಗಳನ್ನು ಹೇಳುವವರನ್ನು ಕಂಡರೆ ಶ್ರೀಗಳವರಿಗೆ ಬಹು ಅಕ್ಕರೆ, ಅವರಿಂದ ಪುರಾಣವನ್ನು ಹೇಳಿಸಿ ಕೇಳಿ ಸಂತಸ ಪಡುವರು. ಅವರಲ್ಲಿ ಕುಂದು ಕೊರತೆಗಳಿದ್ದರೆ ಪ್ರತ್ಯೇಕವಾಗಿ ಕರೆಯಿಸಿ ಆತ್ಮೀ ಯತೆಯಿಂದ, ಅವನ್ನು ಸುಧಾರಿಸಿಕೊಳ್ಳುವಂತೆ ಅಪ್ಪಣೆ ಕೊಡಿಸುವರು. ಕಲ್ಮಠಕ್ಕೆ ಮರಿದೇವರನ್ನು (ಈಗಿನ ಸ್ವಾಮಿಗಳನ್ನು) ನೇಮಿಸುವಾಗ ೬೩ ಪುರಾತನರ ಪುರಾಣ ವನ್ನು ನನ್ನಿಂದ ಹೇಳಿಸಿ, ತಾವೂ ಕೇಳಿ ಆನಂದಪಟ್ಟಿದ್ದರು. "ಪುರಾಣ ಹೇಳುವದ ರಲ್ಲಿ ವಿಖ್ಯಾತನಾಗಿ ಬಾಳು." ಎಂದು ಆಶೀರ್ವದಿಸಿದ್ದರು. ನನ್ನಲ್ಲಿ ಏನಾದರೂ ಕಲೆಯಿದ್ದರೆ ಅದು ಶ್ರೀಗಳವರ ಕೃಪಾದೃಷ್ಟಿಯ ಒಂದು ಸೆಳಕು ಎಂದು ಭಾವಿ ಸಿರುವೆನು.

ಒಂದು ಸಾರೆ ನಮ್ಮ ಮಠದ ನ್ಯಾಯದಲ್ಲಿ ನಮ್ಮ ಗುರುಗಳಾದ ಲಿಂ. ಶ್ರೀ ಪಂಚಾಕ್ಷರ ಸ್ವಾಮಿಗಳು ಮಾಡಿದ ಲಾವಣಿ ತಗಾಯಿ ಸಾಲಗಳಲ್ಲಿ ಕೈಬಿಟ್ಟು ಹೋಗಲಿದ್ದ ಕಣವಿ ಕೆಳಗಿನ ಹಾಲಭಾವಿ ಜಮೀನು ಮತ್ತು ಸ್ಮಶಾನ ಭೂಮಿ ಗಳೆರಡೂ ಶ್ರೀಗಳವರ ಕರುಣೆಯಿಂದಲೇ ಉಳಿದವು. ಗುರುಗಳು ಲಿಂಗೈಕ್ಯರಾದ ಮೇಲೆಯೂ ಮಠಕ್ಕೆ ಏನಾದರೂ ತೊಂದರೆ ಬಂದರೆ, ಕೇಳಿ ಅದನ್ನು ಶ್ರೀಗಳವರು ಪರಿಹರಿಸದೆ ಬಿಡುತ್ತಿರಲಿಲ್ಲ. ಬಡಮಠದವರೆಂದು ಶ್ರೀಗಳವರು ಯಾರನ್ನು ಕಡೆ ಗಣಿಸಿದವರಲ್ಲ. 'ಮನೆ ನೋಡಾ ಬಡವರು, ಮನ ನೋಡಾ ಘನ' ಎಂಬಂತೆ ಶ್ರೀಗಳವರು ಘನಮನದವರಾಗಿದ್ದರು, ವಿಶಾಲಹೃದಯವುಳ್ಳವರಾಗಿದ್ದರು.

ಸರ್ವಮತೀಯರಲ್ಲಿಯ ಆತ್ಮೀಯತೆಯ ಕರುಣಾಮಯ ಸಮತಾಭಾವ, ಸರ್ವರ ಯೋಗಕ್ಷೇಮ ಮತ್ತು ಉದಾರ ತ್ಯಾಗಭಾವ ಇವೆಲ್ಲವು ಶ್ರೀಗಳವರಲ್ಲಿ ಆದರ್ಶಮಯವಾಗಿದ್ದವು. ಶ್ರೀಗಳವರು ನಿರುಪಾಧಿಕಯೋಗಿಗಳಾಗಿದ್ದರು. ಅಂತೆಯೆ ಅವರಿಗೆ ಸಂಸಾರವು ಉಪಾಧಿಯಾಗಿರಲಿಲ್ಲ. ಅವರು ಇದ್ದೂ ಇಲ್ಲದ ಮಹಂತ ರಾಗಿದ್ದರು. ಅವರು ಸಾಕ್ಷಾತ್ ಶಿವಸ್ವರೂಪಿಗಳು; 'ಭಕ್ತಜನ ಭಕ್ತಿಹಿತಕವತಾರ' ಮಾಡಿದವರು.

CC-0. Jangamwadi Math Collection. Digitized by eGangotri

*ಶಿವಯೋಗಿ ಸಾಕ್ಷಾತ್ । ಶಿವನಾದ ಕಾರಣದಿ
ಅವನಿಭೋಗಗಳವಗೆ ತೃಣಗಾಂಬವು ॥ ಪಲ್ಲ ॥

ಏನು ಮೆರಸಿದರೇನು । ಏನು ಹೊದಿಸಿದರೇನು
ಮಾನವರಿಗಾ ಪುಣ್ಯ ಫಲಗಳೆಂದು
ತಾನು ತಾನಾದ ಶಿವ । ಜ್ಞಾನಿಯಾನಂದದಿಂ
ಮೌನನಾಗಿರುತಿಹನು ಮರ್ತ್ಯದೊಳಗೆ ॥ ೧ ॥

ಲಿಂಗಭೋಗಗಳ ಶಿವ । ಲಿಂಗಕೆ ಸಮರ್ಪಿಸುತ
ಹಂಗಿನ ಭೋಗಗಳ ಶಿವಗೆ ಕೊಡನು
ಮಂಗಳಾತ್ಮಕನಾಗಿ । ಭೃಂಗಕುಸುಮನ್ಯಾಯ
ಹ್ಯಾಂಗೊ ಹಾಂಗೆ ಜಗದಿ ಸುಲಭನಾಗಿರುವ ॥ ೨ ॥

ಬಡ ಭಕ್ತ ಜನರಿಗೆ । ಬಡವನಾಗಿರುತಿಹನು
ಕಡು ಧನಿಕರುಗಳಿಗೆ ಧನಿಕನಹನು
ಪೊಡವಿಭಕ್ತರ ಭೋಗ । ದೊಡನಿರ್ದು ಇಲ್ಲದಂತೆ
ಮೃಡ ಮಹಂತಲಿಂಗ ತಾ ಕಡೆಗಿರುವನು ॥ ೩ ॥

ಎಂಬಂತೆ ಶ್ರೀಗಳವರು ಪರಮ ವಿರಾಗಿಗಳಾಗಿ "ಅವರವರ ಭಕ್ತಿಗೆ ಅವರವರ ಭಾವಕ್ಕೆ" ಮೆಚ್ಚಿದ ಕರುಣಾಳು ಶಿವಯೋಗಿಗಳಾಗಿ ಬಾಳಿದವರು.

ಅವರಿಂದು ಪಂಚಭೂತಾತ್ಮಕವಾಗಿ ಮರೆಯಾಗಿದ್ದರೂ, ಲಿಂಗದ ಬೆಳಗಿನಲ್ಲಿ ಮಹಾಬೆಳಗಿನ ಸ್ವರೂಪರಾದ ಅವರು ಭಕ್ತಿಯಿಂದ ಸ್ಮರಿಸಿದವರ ಭಾವದಲ್ಲಿ ಎಂದಿಗೂ ಸಾಕಾರವಾಗಿದ್ದಾರೆ. 'ಆ ಕರುಣಾಳು ಬೆಳಕು' ಹರಿದು ಬಾಳ ಹಾದಿಯ ಮರವೆಯ ಕಗ್ಗತ್ತಲೆಯನ್ನು ಕಳೆಯಲೆಂದು ಅನನ್ಯಭಾವದಿಂದ ಬೇಡುವ.

SRI JAGADGURU VISHWARADHYA
JNANA SIMHASAN JNANAMANDIR
LIBRARY
Jangamawadi Math, Varanasi
Acc. No. 638

* ಕೈವಲ್ಯದರ್ಪಣ (ಶ್ರೀಬಾಲಲೀಲಾ ಮಹಾಂತ ಶಿವಯೋಗಿ ವಿರಚಿತ)
ಸಂಪಾದಕರು: ಪ್ರೊ. ಶಿ. ಶಿ. ಬಸವನಾಳ, ಎಂ. ಎ., (೧೯೫೨) ಪುಟ: ೬೯೩

CC-0. Jangamwadi Math Collection. Digitized by eGangotri

# ಶ್ರೀಗಳವರ ಆದರ್ಶ ಜೀವನ

ಪಂ. ಬಸವಲಿಂಗ ಶಾಸ್ತ್ರಿಗಳು, ಸುರಪುರಮಠ, ಗುಡಗೇರಿ.

ಸಪ್ತಸಾಗರದ ಆದರ್ಶ ದಂಪತಿಗಳಾದ ಗಿರಿಮಲ್ಲಯ್ಯ ಶಿವಗಂಗವ್ವನವರ ಅಕ್ಕರೆಯ ಶಿಶು ಅಥಣಿಯ ತಪಸ್ವಿ ಶೆಟ್ಟರಮಠದ ಮರುಳಸಿದ್ಧ ಶಿವಯೋಗಿಗಳ ಕರುಣೆಯ ವಟುವಾಗಿ ಬೆಳೆಯಿತು. ಶ್ರೀಮರುಳಸಿದ್ಧಸ್ವಾಮಿಗಳು ಶಿವಬಸವ ದೇವರಿಗೆ ಕಿವಿಟೊಪ್ಪಿಗೆ, ಕಪನಿಗಳನ್ನು ತೊಡಿಸಿ ತಮ್ಮ ಕರಜಾತರನ್ನಾಗಿ ಸ್ವೀಕರಿಸಿದರು.

ಶ್ರೀ ಶಿವಬಸವಮರಿದೇವರು ನಿತ್ಯವೂ ಸ್ತೋತ್ರಗಳನ್ನು ಸರಾಗವಾಗಿ ಹಾಡಿ ಪಾಠ ಓದಿ ಮಠದಲ್ಲಿ ಕಸಗೂಡಿಸುವದು, ಸ್ನಾನ ಮಾಡಿ ಗುರುಗಳ ಶಿವಪೂಜೆಗೆ ಅಣಿಮಾಡುವದು, ಕಂತೆಭಿಕ್ಷೆ ತರುವದು, ಇಷ್ಟೆಲ್ಲ ಸೇವೆಯನ್ನು ಚಟುವಟಿಕೆಯಿಂದ ಮಾಡುತ್ತಿದ್ದರು. ನಂತರ ಶಾಲೆಗೆ ಹೋಗುತ್ತಿದ್ದರು; ಎಲ್ಲರ ಪ್ರೀತಿಗೆ ಪಾತ್ರರಾಗಿದ್ದರು. ಆಗ ಇನ್ನು ಅವರಿಗೆ ೧೦–೧೨ ವರ್ಷವಿದ್ದಿರಬೇಕು. ಪ್ರತಿದಿನ ಶಾಲೆಯಿಂದ ಬಂದ ಕೂಡಲೇ ಭಾವಿಗೆ ಹೋಗಿ ಗುರುಗಳ ಬಟ್ಟೆಗಳನ್ನು ತೊಳೆದು ಮಡಿಯಿಂದ ಸೇವೆ ಮಾಡಿ, ಕಂತೆಭಿಕ್ಷೆಯನ್ನು ತಂದು, ಮಠಕ್ಕೆ ಬಂದ ಅತಿಥಿಗಳಿಗೆ ನೀಡಿ ಮತ್ತೆ ಮಧ್ಯಾಹ್ನ ಶಾಲೆಗೆ ಹೋಗುತ್ತಿದ್ದರು. ಚಿಕ್ಕಂದಿನಲ್ಲಿಯೇ ಶ್ರೀಗಳವರು ಬಡವರಿಗೆ ಊಟ ಮಾಡಿಸಿ ಸಂತಸಬಡುತ್ತಿದ್ದರು; ಬಡವರಿಗೆ ಸಹಾಯ ಮಾಡುವದು ಅವರ ಹುಟ್ಟು ಸ್ವಭಾವವಾಗಿತ್ತು, ಶ್ರೀಗಳು ಯಾವಾಗಲೂ ಗಚ್ಚಿನ ಮಠದ ಹಿಂಭಾಗದಲ್ಲಿರುವ ದಿವಾಣಭಾವಿಗೆ ಸ್ನಾನಕ್ಕೆ ಹೋಗುತ್ತಿದ್ದರು. ಈ ಭಾವಿಯ ತೋಟವು ಅಂಜೂರಿ, ಡಾಳಿಂಬ ಮೊದಲಾದ ಹಣ್ಣುಗಳಿಗೆ ಪ್ರಸಿದ್ಧಿ ಪಡೆದಿತ್ತು. ಶ್ರೀಗಳು ಮುರಾರಿ ಎಂಬ ತೋಟಕಾಯುವ ಬಡ ಮನುಷ್ಯನಿಗೆ ನಿತ್ಯವು ಎರಡು ಕಜ್ಜಾಯ ಒಯ್ದು ಕೊಡುತ್ತಿದ್ದರು. ಮುರಾರಿಯು ಶ್ರೀಗಳವರ ಸರಳ ಸ್ವಭಾವ, ದಯಾಳುತನವನ್ನು ಕಂಡು ಮುಗ್ಧನಾಗಿ ಆಗಾಗ ಅವರಿಗೆ ರುಚಿ ರುಚಿಯಾದ ಹಣ್ಣುಗಳನ್ನು ಕೊಡುತ್ತಿದ್ದನು. ಅವನಿಂದಲೇ ಶ್ರೀಗಳವರಿಗೆ ಹಣ್ಣು ಸವಿಯುವ ಅಭ್ಯಾಸವಾಯಿತು. ಯಾವಾಗಲಾದರೂ ಶ್ರೀಗಳವರು ಅಥಣಿಯ ವಿಷಯವಾಗಿ ಬಾಲ್ಯಜೀವನದ ಮಾತು ಬಂದಾಗ ದಿವಾಣಭಾವಿಯ ತೋಟದ ಮುರಾರಿಯನ್ನು ಸ್ಮರಿಸಿ, ಆ ಬಡ ಮನುಷ್ಯನ ಸರಳ ಸ್ವಭಾವವನ್ನು ನೆನೆಸಿ "ಹಣ್ಣು ಸವಿಯಲು ಹಚ್ಚಿದವನು ಅವನೇ" ಎಂದು ನಗುತ್ತ ಹೇಳುತ್ತಿದ್ದರು.

ಶ್ರೀಗಳವರು ಅಥಣಿಯಲ್ಲಿಯೆ ಕನ್ನಡ ಅಭ್ಯಾಸ ಮುಗಿಸಿ, ಅಮರಕೋಶ–ಶಬ್ದ ಸಮಾಸ ಮುಂತಾಗಿ ಸಂಸ್ಕೃತ ಪ್ರವೇಶ ಪಾಠ ಕಲಿತು, ಸಂಗೀತವನ್ನು ಕಲಿಯಲು

CC-0. Jangamwadi Math Collection. Digitized by eGangotri

ಕೆಲವು ಕಾಲ ಮಿರ್ಜಿಗೆ ಹೋದರು; ನಂತರ ಗುರುಗಳ ಅಪ್ಪಣೆ ಪಡೆದು ಬಳ್ಳಾರಿಯ ಶ್ರೀ ಸಕ್ಕರಿ ಕರಡೆಪ್ಪನವರ ಸಂಸ್ಕೃತ ಪಾಠಶಾಲೆಯಲ್ಲಿ ಸಂಸ್ಕೃತ ಕಲಿಯಲು ಬಂದರು. ಇಲ್ಲಿ ಪಂಚಕಾವ್ಯ, ಚಂಪುನಾಟಕಾಂತ ಸಾಹಿತ್ಯವನ್ನು ಶ್ರೀಗಳವರು ಅಭ್ಯಾಸ ಮಾಡಿದರು. ವಿದ್ಯಾರ್ಥಿ ಜೀವನದಲ್ಲಿ ಶ್ರೀಗಳವರು ಯಾವಾಗಲೂ ಏಕಾಂತವಾಸ ಪ್ರಿಯರೂ ವೈರಾಗ್ಯಶೀಲರೂ ಆಗಿದ್ದರು. ಇವರ ಶಾಂತವೃತ್ತಿ, ವಿರತಿ, ತೇಜಸ್ಸುಗಳನ್ನು ಕಂಡು ಸರ್ವರೂ ಮುಗ್ಧರಾಗುತ್ತಿದ್ದರು. ಇವರ ಚುರುಕು ಬುದ್ಧಿಯನ್ನು ಕಂಡ ಭಕ್ತರು ಇವರಿಗೆ ಬೇಕಾದ ಪುಸ್ತಕ-ಬಟ್ಟೆಗಳನ್ನು ಕೊಡಿಸುತ್ತಿದ್ದರು. ಇಲ್ಲಿ ಶ್ರೀಗಳವರಿಗೆ ಸೊಲ್ಲಾಪುರ ಕಿರೀಟಮಠದ ಶ್ರೀನಿಜಗುಣಸ್ವಾಮಿಗಳು, ಪಂ. ಜಗದೀಶ ಶಾಸ್ತ್ರಿಗಳು ಸಹಪಾಠಿಗಳಾಗಿದ್ದರು. ಭಕ್ತಾದಿಗಳಿಂದ ಬಂದ ಹಣವನ್ನು ಶ್ರೀಗಳವರು ಬಡ ವಿದ್ಯಾರ್ಥಿಗಳ ಪುಸ್ತಕ-ಬಟ್ಟೆಯ ಖರ್ಚಿಗಾಗಿ ಕೊಡುತ್ತಿದ್ದರು. ಶ್ರೀ ಜಗದೀಶ ಶಾಸ್ತ್ರಿಗಳೆ ಬಹಳ ಚುರುಕುಬುದ್ಧಿಯುವರು, ಪ್ರತ್ಯುತ್ಪನ್ನಮತಿಗಳು. ಶ್ರೀಗಳವರು ಅವರ ವಿದ್ಯಾಬುದ್ಧಿಗೆ ಮೆಚ್ಚಿ ಕೊನೆಯವರೆಗೂ ಮಾಸಾಶನವನ್ನು ಕೊಡುತ್ತಿದ್ದರೆಂದು ಸೊಲ್ಲಾಪುರದ ಲಿಂ ಶ್ರೀ ನಿಜಗುಣ ಸ್ವಾಮಿಗಳು ಶ್ರೀಗಳವರ ಉದಾರಬುದ್ಧಿಯನ್ನು ಸ್ಮರಿಸಿ ಬಹಳವಾಗಿ ಹೊಗಳುತ್ತಿದ್ದರು.

ಬಳ್ಳಾರಿಯ ಪಾಠಶಾಲೆಯಿಂದ ಬಂದ ಮೇಲೆ ಶ್ರೀಗಳವರು ತೀರ್ಥಕ್ಷೇತ್ರಗಳ ದರ್ಶನವನ್ನು ಮಾಡ ಬಯಸಿದರು. ಗುರುಗಳ ಅನುಮತಿ ಪಡೆದು ಮೊದಲು ಶ್ರೀಶೈಲ ಯಾತ್ರೆಯನ್ನು ಮಾಡಿದರು. ಶ್ರೀಗಳವರು ಆಗಾಗ ಶ್ರೀಶೈಲದ ಯಾತ್ರೆಯಲ್ಲಿ ತಮಗೆ ಆದ ಅನುಭವವನ್ನು ಆನಂದವನ್ನು ಲೀಲಾಮಯವಾಗಿ ವರ್ಣಿಸುತ್ತಿದ್ದರು. ಶ್ರೀಶೈಲದಲ್ಲಿ ಒಂದು ದಿನ ರಾತ್ರಿ ಮಲಗಿದಾಗ ಹುಲಿಯು ಬಂದುದನ್ನು ಹೇಳುತ್ತ 'ಸಿದ್ದಪ್ಪ'ನ ದರ್ಶನವಾಯಿತೆಂದು ವಿನೋದಮಯವಾಗಿ ಅಪ್ಪಣೆಕೊಡಿಸುತ್ತಿದ್ದರು. ಆ ಮೇಲೆ ಶ್ರೀಗಳವರು ಪಾದಚಾರಿಗಳಾಗಿ ಹಂಪೆ, ಕಳಕಮಲ್ಲೇಶ್ವರ, ಶಂಭುಲಿಂಗನ ಬೆಟ್ಟ, ಶ್ರೀ ಎಡೆಯೂರ ಕ್ಷೇತ್ರ, ಉಳವಿ, ಗೋಕರ್ಣ ಮುಂತಾದ ತೀರ್ಥ ಕ್ಷೇತ್ರಗಳ ಸಂದರ್ಶನ ಮಾಡಿ ಅಲ್ಲಲ್ಲಿ ಆನಂದದಿಂದ ಶಿವಪೂಜೆಯನ್ನು ಮಾಡುತ್ತ ಮರಳಿದರು.

ಪ್ರೌಢವ್ಯಾಸಂಗ ಮಾಡಲು ಶ್ರೀಗಳು ಕಾಶಿಗೆ ಪ್ರಯಾಣ ಮಾಡಿದರು. ಆಗ ಶ್ರೀಗಳವರ ಹತ್ತಿರ ಎಂಟುನೂರು ರೂಪಾಯಿಗಳು ಬೇಡದೆ ಭಕ್ತರಿಂದ ಬಂದಿದ್ದವು. ಕಾಶಿಯಲ್ಲಿ ಜಂಗಮವಾಡಿಮಠದಲ್ಲಿ ಇದ್ದುಕೊಂಡು ಪಂಡಿತರಲ್ಲಿ ಪಾಠಕ್ಕೆ ಹೋಗುತ್ತಿದ್ದರು ಕಾಶಿಯಲ್ಲಿ ಅನಂತಪುರದ ಶ್ರೀ ಲಿಂಗಸ್ವಾಮಿಗಳು, ಚಿತ್ರದುರ್ಗದ ಶ್ರೀ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳು, ಜೈನಾಪೂರದ ಶಾಸ್ತ್ರಿಗಳು, ಸೊಲ್ಲಾಪುರದ ಜಗದೀಶ ಶಾಸ್ತ್ರಿಗಳು ಮೊದಲಾದವರು ಶ್ರೀಗಳವರ ಸಹಪಾಠಿಸ್ನೇಹಿತರಾಗಿದ್ದರು. ಇಲ್ಲಿಯೂ ಶ್ರೀಗಳವರು ಬಡವಿದ್ಯಾರ್ಥಿಗಳಿಗೆ ಮಾಸಿಕವನ್ನು

CC-0. Jangamwadi Math Collection. Digitized by eGangotri

ಕೊಟ್ಟು, ಪಂಡಿತರಿಗೆ ದಕ್ಷಿಣೆ ಕೊಟ್ಟು ನ್ಯಾಯಶಾಸ್ತ್ರ, ವೇದಾಂತ-ಉಪನಿಷತ್ತುಗಳನ್ನು ಅಭ್ಯಾಸ ಮಾಡಿದರು.

ಜಂಗಮವಾಡಿಯ ಶಾಸ್ತ್ರಿಗಳ ಸಮುದಾಯದಲ್ಲಿ ಶ್ರೀಗಳವರೊಬ್ಬರೇ ಕ್ರಿಯಾಸ್ಥ (ಪ್ರಸಾದಿಕ)ರಾಗಿದ್ದರು. ಕಾರಣ, ಸರ್ವರಿಗೂ ಇವರೇ ಕ್ರಿಯಾಮೂರ್ತಿಗಳಾಗಿದ್ದ ರೆಂದು ಚಿತ್ರದುರ್ಗದ ಜಗದ್ಗುರುಗಳವರು ಶ್ರೀಗಳವರ ಶೀಲಸ್ವಭಾವ, ವೈರಾಗ್ಯ, ತ್ಯಾಗಗುಣಗಳನ್ನು ಆಗಾಗ ಹೊಗಳಿ ಅಪ್ಪಣೆ ಕೊಡಿಸುತ್ತಿದ್ದರು. ಅಂತೆಯೆ, ಶ್ರೀಗಳವರು ಹಾವೇರಿ ಹುಕ್ಕೇರಿ ಮಠಕ್ಕೆ ಅಧಿಕಾರಿಗಳಾದ ಕೆಲವು ದಿನಗಳ ನಂತರ ಚಿತ್ರದುರ್ಗದ ಜಗದ್ಗುರುಗಳು ಹಾವೇರಿಗೆ ದಯಮಾಡಿಸಿದಾಗ, "ಕಾಶಿಯಲ್ಲಿರುವಾಗ ತಾವು ಸಾದಾ ಇದ್ದಿರಿ. ನಮ್ಮಲ್ಲಿ ಪಾದೋದಕ ಪ್ರಸಾದ ನಡೆಯುತ್ತಿತ್ತು. ಈಗ ತಾವು ದೊಡ್ಡ ಪೀಠಕ್ಕೆ ಅಧಿಕಾರಿಗಳಾಗಿರುತ್ತೀರಿ."ಎಂದು ಶ್ರೀಗಳವರು ಹೇಳಿ ಕಾಶಿಯಲ್ಲಿ ಇಬ್ಬರೂ ಒಟ್ಟಿಗೆ ಪಟ್ಟ ಆನಂದದ ಸವಿಯನ್ನು ಸ್ಮರಿಸಿ ಸಂತೋಷ ಭರಿತರಾದರು. ಶ್ರೀ ಜಗದ್ಗುರುಗಳವರು ಆಗ ಶ್ರೀಗಳವರಿಗೆ "ತಾವು ನಮ್ಮ ಮಠಕ್ಕೆ ಬಂದು ಹೀಗೆ ಪೂಜೆ ಮಾಡಿಕೊಳ್ಳಿರಿ" ಎಂದು ಹೇಳಿದರು. ಅದರಂತೆ ಬಿಳ್ಳೂರ ಶ್ರೀಗಳು ಮತ್ತು ಹಾವೇರಿ ಶ್ರೀಗಳು ಒಂದಾವರ್ತಿ ಚಿತ್ರದುರ್ಗದ ಬೃಹನ್ಮಠಕ್ಕೆ ದಯಮಾಡಿಸಿದ್ದರು; ಹಾವೇರಿಯ ಹೊಂಡದ ಮಠದಲ್ಲಿಯೂ ಆನಂದದಿಂದ ಶಿವ ಪೂಜೆಯನ್ನು ಮಾಡಿಕೊಂಡರು.

ಮುಂದೆ ಶ್ರೀಗಳವರು ಯತಿಪುಂಗವರೂ ಗುರುಗಳೂ ಆದ ಬಿದರಿ ಶ್ರೀ ಕುಮಾರ ಮಹಾಸ್ವಾಮಿಗಳವರ ಪ್ರೇರಣೆಯಂತೆ ಹಾನಗಲ್ಲ ಶ್ರೀಗಳವರೊಂದಿಗೆ ಟೊಂಕ ಕಟ್ಟಿ ಪ್ರಯತ್ನಮಾಡಿ ಶಿವಯೋಗಮಂದಿರವನ್ನು ಸ್ಥಾಪಿಸಿದರು. ಅಲ್ಲಲ್ಲಿ ಸಂಚರಿಸಿ ಭಿಕ್ಷೆ ಮಾಡಿ ಶಿವಯೋಗಮಂದಿರದ ಅಭಿವೃದ್ಧಿ ಕಾರ್ಯವನ್ನು ಕೈಕೊಂಡರು. ಶ್ರೀಗಳವರು ಹಾವೇರಿ ಮಠದಲ್ಲಿಯೂ ಒಂದು ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿ ಸಂಸ್ಕೃತ-ಜ್ಯೋತಿಷ ವಿದ್ಯಾಭ್ಯಾಸಗಳಿಗೆ ಅನುಕೂಲತೆಯನ್ನು ಕಲ್ಪಿಸಿ ಕೊಟ್ಟರು; ಅನೇಕ ವಟುಗಳನ್ನು ಶಾಸ್ತ್ರಿಗಳನ್ನು ವಿದ್ಯಾವಂತರನ್ನಾಗಿ ಮಾಡಿ ಧರ್ಮ ಜಾಗ್ರತಿ ಕಾರ್ಯವನ್ನು ಮುಂದುವರಿಸಿದರು.

ಶ್ರೀಗಳವರು ಪ್ರವಾಸ ಮಾಡುವಾಗ ಅನೇಕ ಭಕ್ತರು ಕಾಣಿಕೆಗಳನ್ನು, ಜಮೀನುಗಳನ್ನು ಅರ್ಪಿಸಿದರು. ಶ್ರೀಗಳವರು ಅವನ್ನೆಲ್ಲ ತಮ್ಮ ಮಠಕ್ಕೆ ಇಟ್ಟು ಕೊಳ್ಳದೆ ಶಿವಯೋಗಮಂದಿರ ಸಂಸ್ಥೆಗೆ ಕೊಟ್ಟರು. ಭಕ್ತರಿಂದ ಏನು ಬಂದರೂ ಅದೆಲ್ಲವೂ ಶಿವಯೋಗಮಂದಿರಕ್ಕೆ ಮೀಸಲು. ಮಂದಿರದ ಬಗೆಗೆ ಶ್ರೀಗಳವರಲ್ಲಿ ಇಷ್ಟು ಅಭಿಮಾನವಿದ್ದಿತು.

CC-0. Jangamwadi Math Collection. Digitized by eGangotri



ಬಾಗಲಕೋಟೆಯಲ್ಲಿ ಶ್ರೀ ಸಾಬಾದಿ ಸೋಮಲಿಂಗಪ್ಪನವರ ಬಂಗ್ಲೆಯ ತೋಟದಲ್ಲಿ
ಲಿಂ. ಪೂಜ್ಯರ ಶಿವಾರ್ಚನೆಗಾಗಿ ಕಟ್ಟಿಸಿದ ಗವಿಯ ಮುಂಭಾಗದಲ್ಲಿ
ಪೂಜ್ಯ ಶ್ರೀ ಹಾನಗಲ್ಲ ಮತ್ತು ಸವದತ್ತಿ ಶ್ರೀಗಳು.

CC-0. Jangamwadi Math Collection. Digitized by eGangotri



ಶ್ರೀ ಶಾಬಾದಿ ಸೋಮಲಿಂಗಪ್ಪನವರ ಬಂಗ್ಲೆಯ ಶಿವಾರ್ಚನೆಯ
ಗವಿಯಲ್ಲಿ ಹಾನಗಲ್ಲ ಶ್ರೀಗಳವರ ಶಿವಾನುಷ್ಠಾನದ ದೃಶ್ಯ

CC-0. Jangamwadi Math Collection. Digitized by eGangotri

ಶ್ರೀಗಳವರು ತಮ್ಮ ಗುರುಪೀಠಗಳ ಬಗೆಗೆ ಬಹು ಭಕ್ತಿಭಾವವನ್ನು ತಳೆದಿದ್ದರು. ಅಥಣಿಯ ಕುಮಾರಮಠ (ಶೆಟ್ಟರ ಮಠ)ದ ಪುರೋಭಿವೃದ್ಧಿಯನ್ನು ಮಾಡಿದರು, ಆ ಮಠದಲ್ಲಿ ಸುಂದರವಾದ ಕಲ್ಲಿನ ಮಹಾದ್ವಾರವನ್ನು ಕಟ್ಟಿಸಿದರು. ಗುರುಗಳ ಗದ್ದುಗೆಯಲ್ಲಿ ನಂದಾದೀಪ, ಪೂಜೆ ಮೊದಲಾದವೂ ತಪ್ಪದೆ ನಡೆಯುವಂತೆ ಯೋಜಿಸಿದ್ದರು. ಅದರಂತೆ ಬಿದರಿ–ಸವದತ್ತಿ ಮಠಗಳ ಜೀರ್ಣೋದ್ಧಾರವನ್ನು ಮಾಡಿ ಯೋಗ್ಯ ಉತ್ತರಾಧಿಕಾರಿಗಳನ್ನು ನೇಮಿಸಿದರು.

ಶ್ರೀಗಳವರು ಯಾನಾಗಲೂ ಬಸವಾದಿ ಪ್ರಮಥರ ನಡೆನುಡಿಯಲ್ಲಿ ವಿಶ್ವಾಸ ವಿಟ್ಟು ಅದರಂತೆ ಆಚರಿಸಿದರು. ಅವರ ಸಹಜ-ಸಾತ್ವಿಕ ಆಚರಣೆಯೇ ಅವರನ್ನು ಅತ್ಯಂತ ಮೇಲ್ಮಟ್ಟಕ್ಕೆ ಮುಟ್ಟಿಸಿದವು. ಅಂತೆಯೆ, ಶ್ರೀಗಳವರು ಕರ್ನಾಟಕದಲ್ಲೆಲ್ಲ ವಿರಕ್ತ ಶ್ರೇಷ್ಠರೆಂದು ಕೀರ್ತಿ ಪಡೆದಿರುವರು. ಶ್ರೀಗಳವರು ಗುಣಪಕ್ಷಪಾತಿಗಳು, ಜಂಗಮ ಪ್ರೇಮಿಗಳು. ಯಾವ ಮೂರ್ತಿಗಳು ಬಂದರೂ ಅವರನ್ನು ಗೌರವಿಸುತ್ತಿದ್ದರು; ಅವರಿಗೆ ಪ್ರಾಚೀನರ ಪವಿತ್ರಾಚರಣೆಯ ಬಗೆಗೆ ತಿಳಿ ಹೇಳುತ್ತಿದ್ದರು.

ಅವಸಾನ ಕಾಲಕ್ಕೆ ಶ್ರೀಗಳವರು ಗುರುಸ್ಥಾನಗಳಾದ ಅಥಣಿ, ಬಿದರಿಗೆ ಹೋಗಿ ಪೂಜ್ಯರ ಗದ್ದುಗೆಗಳ ದರ್ಶನ ಪಡೆದು ಹಾವೇರಿಗೆ ದಯಮಾಡಿಸಿದರು. ನಾಲ್ಕಾರು ದಿನ ವಿಷಮಜ್ವರ ಬಂದು ಪವಡಿಸಿದರು. ಆದರೂ ಶಿವಪೂಜೆಯನ್ನು ಬಿಡಲಿಲ್ಲ. ಕೊನೆಯ ದಿನ ಭಕ್ತರನ್ನು ಕರೆಯಿಸಿ, ಮಠದ ಆಗು-ಹೋಗುಗಳನ್ನು ವಿಚಾರಿಸಿ, "ಉತ್ತರಾಧಿಕಾರಿಗಳನ್ನು ನೀವೇ ಆಯ್ದುಕೊಳ್ಳಿರಿ. ಅದು ನಮ್ಮ ಕೆಲಸವಲ್ಲ. ನಮ್ಮನ್ನೇನು ನಮ್ಮ ಗುರುಗಳು ಆರಿಸಿದ್ದರೇ ? ನಮ್ಮ ಯೋಗ. ನಿಮ್ಮ ಭಕ್ತಿ." ಎಂದು ಅಪ್ಪಣೆ ಕೊಡಿಸಿದರು; ನಿತ್ಯದಂತೆ ಪ್ರಾತಃಕಾಲದ ಪೂಜೆ ತೀರಿಸಿಕೊಂಡು ತೀರ್ಥ–ಪ್ರಸಾದ ತೆಗೆದುಕೊಂಡು ಜಂಗಮಸನ್ನಿಧಿಯಲ್ಲಿ ಇಷ್ಟಲಿಂಗವನ್ನು ನಿರೀಕ್ಷಿಸುತ್ತ ಪ್ರಾಣಲಿಂಗಮುಖವಾಗಿ ಭಾವಲಿಂಗದಲ್ಲಿ ಬೆರೆತು ಮಹಾಶಿವಯೋಗಿ ಎನ್ನಿಸಿಕೊಂಡರು. ಆದುದರಿಂದಲೇ, ಈ ಮಹಿಮರ ಸಮಾಧಿಗೆ ಅನಂತ ಜನರು, ಎಲ್ಲ ಧರ್ಮದವರೂ ಭಕ್ತಿಯಿಂದ ನಡೆದುಕೊಂಡು ತಮ್ಮ ತಮ್ಮ ಮನೋಭೀಷ್ಟಗಳನ್ನು ಪಡೆದು ಧನ್ಯರಾಗುತ್ತಿರುವರು.

CC-0. Jangamwadi Math Collection. Digitized by eGangotri

# ಯುಗಾವತಾರಿ ಜಂಗಮದೇವ

ಶ್ರೀ ವೀರಪ್ಪನವರು ಕೋಟಿ, ಬಿ.ಎ.,ಎಲ್‌ಎಲ್.ಬಿ.,ಸಿವಿಲ್‌ಜಜ್, ಕಾರ್ಕಳ.

ಕರ್ಮಮಯ ಸಂಸಾರವೆಂಬ ಸಂಕೋಲೆಯಲ್ಲಿ ಬಿದ್ದ ಮಾನವನಿಗೆ ಮೋಕ್ಷ ವಿಲ್ಲವೆ ? ಮಾನವನನ್ನು ಉದ್ಧರಿಸುವ ಕರುಣಾಮಯ ಮಹಾನುಭಾವರು ಉದ ಯಿಸುವರೆ ? ಮುಕ್ತಿ ಎಂದರೇನು? ಜೀವನಾರು? ಈ ಜಗದ ಪರಿಯೆಂತು? ಈಶ್ವರನ ಸ್ವರೂಪವೆಂತು ? ಈ ಎಲ್ಲ ಸಂಶಯಗಳನ್ನು ಪರಿಹರಿಸಿ ನಿಜದರಿವನ್ನು ತಿಳಿಸುವ ಗುರು ಬಾರನೆ ? ಈ ಪ್ರಶ್ನೆಗಳು ಪ್ರತಿಯೊಬ್ಬ ಮುಮುಕ್ಷು ಭಕ್ತನ ಹೃದಯದಲ್ಲಿ ಬರುವುದು ಸಹಜವಾಗಿದೆ. ಅನಾದಿಕಾಲದಿಂದ ಇಂದಿನವರೆಗೂ ಈ ಪ್ರಶ್ನೆಗಳು ಮಾನವನನ್ನು ಅಧ್ಯಾತ್ಮದತ್ತ ಒಯ್ಯುತ್ತಿವೆ. ಉಪನಿಷತ್ಕಾಲದಲ್ಲಿಯ ನಚಿಕೇತ, ಸತ್ಯಕಾಮ, ಆರುಣಿಗಳು ಈ ಪ್ರಶ್ನೆಗಳ ಪರಿಹಾರಕ್ಕಾಗಿ ಸಮರ್ಥ ಆಚಾರ್ಯರ ಸನ್ನಿಧಿಯಲ್ಲಿ ಸಮಿತ್ಪಾಣಿಯಾಗಿ ಹೋಗಿ ‘ ಶಿಷ್ಯಸ್ತೇಽಹಂ ಶಾಧಿ ಮಾಂ ಪ್ರಪನ್ನಂ’ ಎಂದು ಪ್ರಾರ್ಥಿಸಿದುದುಂಟು. ಹೊಸಯುಗದ ಪಾಶ್ಚಿಮಾತ್ಯ ಕ್ರೈಸ್ತ ಸಂತರಾದ ಲೂಕ, ಮಾರ್ಕ, ಜೋನ ಮೊದಲಾದವರು ಈ ಅಧ್ಯಾತ್ಮತತ್ತ್ವಗಳ ವಿವೇಚನೆ ಯನ್ನು ರಹಸ್ಯಮಯವಾಗಿ ಮಾಡಿರುವುದುಂಟು. ಮಹಮ್ಮದೀಯ ಪೈಗಂಬರರು, ಸೂಫಿಗಳು ಈ ಪಾರಮಾರ್ಥ ತತ್ತ್ವಗಳನ್ನು ವಿವೇಚಿಸಿರುವುದು ಗಮನೀಯ ವಾದುದು. ಹಿಂದೂಧರ್ಮದ ಕಬೀರದಾಸ, ತುಲಸೀದಾಸ, ಕನಕದಾಸ, ನಿಜ ಗುಣಶಿವಯೋಗಿ, ಮೊದಲಾದ ಸಂತರು, ಹರಿದಾಸರು, ಶಿವಯೋಗಿಗಳು ಜನ್ಮ ವೆತ್ತಿರುವುದರಿಂದಲೇ ಅಧ್ಯಾತ್ಮತತ್ತ್ವಗಳಿಂದು ಉಳಿದು ಮಾನವನಿಗೆ ದಾರಿದೀಪ ಗಳಾಗಿರುವುದು.

ಜಗತ್ತಿನಲ್ಲಿ ಧರ್ಮಕ್ಷಯವು ತಲೆದೋರಿದಾಗ ಪರಮಾತ್ಮನೇ ಅವತರಿಸಿ, ಅಧರ್ಮವನ್ನು ತಡೆದು ಧರ್ಮವನ್ನು ಎತ್ತಿಹಿಡಿಯುವನೆಂದು ಸಾಮಾನ್ಯವಾಗಿ ಎಲ್ಲ ವಿಶ್ವಧರ್ಮಗಳ ನಂಬಿಕೆಯಾಗಿದೆ. ಭಾರತೀಯರಂತೂ ಈ ಅವತಾರವಾದದಲ್ಲಿ ಬಹು ನಂಬಿಕೆಯನ್ನು ತಾಳಿ ಎಂತಹ ಕಠಿಣ ಪ್ರಸಂಗಗಳಲ್ಲಿಯೂ ಧೈರ್ಯಗೆಡದೆ ದೇವನ ಕರುಣೆಗೆ ಮೊರೆಯಿಟ್ಟಿದ್ದಾರೆ. ದೇವನು “ ಸಂಭವಾಮಿ ಯುಗೆ ಯುಗೆ ” ಎಂದು ಅಭಿವಚನವಿತ್ತಿರುವುದರಲ್ಲಿ ಭಾರತೀಯರಿಗೆ ಪೂರ್ಣ ನಂಬುಗೆಯಿದೆ. ಭಗ ವಂತನ ಈ ಅಭಯವಾಣಿ ಭಾರತೀಯರನ್ನು ಆಶಾವಾದಿಗಳನ್ನಾಗಿ ಮಾಡಿದೆ. ಇಸ್ಲಾಂ ಮತ್ತು ಇಸಾಯಿ ಧರ್ಮದ ಅನುಯಾಯಿಗಳೂ ಮಹಮ್ಮದರನ್ನು ಪೈಗಂ ಬರರೆಂದೂ, ಕ್ರೈಸ್ತನನ್ನು ದೇವದೂತನೆಂದು ಕರೆದಿರುವರು, ಅವತಾರಿ ಪುರುಷರೆಂದು ನಂಬಿರುವರು.

CC-0. Jangamwadi Math Collection. Digitized by eGangotri

ಜಗತ್ತಿನ ಉದ್ಧಾರಕ್ಕಾಗಿ ಮಹಾತ್ಮರ, ಶಿವಯೋಗಿಗಳ, ಶರಣರ ರೂಪದಲ್ಲಿ ಶಿವನೇ ಅವತರಿಸುವನೆಂದು ವೀರಶೈವರೂ ದೃಢವಾಗಿ ಭಾವಿಸಿದ್ದಾರೆ. ಬಸವಣ್ಣನವರಂತಹ ಅನೇಕ ಯುಗಪುರುಷರು ಜನ್ಮ ತಾಳಿದುದರಿಂದಲೇ ನಮ್ಮ ಸಮಾಜವಿಂದು ಬಾಳಿ ಬದುಕಿದೆ. ಹದಿನಾಲ್ಕನೆಯ ಶತಮಾನದಲ್ಲಿಯೂ ನೂರೊಂದು ವಿರಕ್ತರು ಅವತರಿಸಿ ಬಸವಣ್ಣನವರ ಕ್ರಾಂತಿಯನ್ನು ಮುಂದುವರಿಸಿ ವೀರಶೈವ ಸಾಹಿತ್ಯ-ಸಂಸ್ಕೃತಿಗಳನ್ನು ಉಳಿಸಿದ್ದಾರೆ.

ವೀರಶೈವರ ಅಷ್ಟಾವರಣದಲ್ಲಿ ಗುರು-ಲಿಂಗ-ಜಂಗಮರು ಆರಾಧ್ಯದೇವತೆಗಳು, ಜಂಗಮಕ್ಕೆ ವೀರಶೈವ ಸಂಸ್ಕೃತಿಯಲ್ಲಿ ಬಹು ವ್ಯಾಪಕವಾದ ಮತ್ತು ಉನ್ನತವಾದ ಅರ್ಥವಿದೆ. ವೀರಶೈವರ ದೃಷ್ಟಿಯಲ್ಲಿ ಜಂಗಮದ ಲಕ್ಷಣಗಳಿವು:

"ಪರರಾಣಿಯರ ನೋಡುವಲ್ಲಿ, ಅಂಧಕನಾಗಿಪ್ಪ ನೋಡಾ ಜಂಗಮನು.
ಪರಧನವ ಕಂಡಲ್ಲಿ, ಹುಲಿಯು ಕಂಡ ಹುಲ್ಲೆಯಂತೆ,
ಭೀತಿಬಡುವ ನೋಡಾ ಜಂಗಮನು.
ದುರ್ಜನ ಸಂಭಾಷಣೆಯ ಕೇಳುವಲ್ಲಿ
ಅತಿಮುಗ್ಧನಾಗಿಪ್ಪ ನೋಡಾ ಜಂಗಮನು.
ದುಷ್ಕರ್ಮಪಥದೊಳರಸುವಲ್ಲಿ
ಕಡು ಜಡ ಪೆಳವ ನೋಡಾ ಜಂಗಮನು.
ವಿಷಯುಗಳೊಳು ನಿಃಕರುಣಿಯಾಗಿಪ್ಪ ನೋಡಾ ಜಂಗಮನು.
ಶಿವನಿಂದಕರ ಸ್ವರಗೇಳುವಲ್ಲಿ
ಬಧಿರನಾಗಿಪ್ಪ ನೋಡಾ ಜಂಗಮನು.
ದುರಾತ್ಮರಿಗೆ ಜ್ಞಾನದ್ರವ್ಯವ ಕೊಡುವಲ್ಲಿ
ಲೋಭಿಯಾಗಿಪ್ಪ ನೋಡಾ ಜಂಗಮನು.
ಕಪಿಲಸಿದ್ಧ ಮಲ್ಲಿಕಾರ್ಜುನನು."

ಇಂತಹ ಗುಣಭರಿತನಾದ ಜಂಗಮನು ಜಗವನುದ್ಧರಿಸಲು ಬಂದ ಸಾಕ್ಷಾತ್ ಶಿವನಲ್ಲದೆ ಮತ್ತೇನು ?

"ಸಮತೆ ಎಂಬ ಕಂಥೆ ಧರಿಸಿಪ್ಪ ನೋಡಾ ಜಂಗಮನು.
ಅಮಿತವೆಂಬ ಭಸ್ಮ ಧರಿಸಿಪ್ಪ ನೋಡಾ ಜಂಗಮನು.
ಲಿಂಗವೆಂಬ ಖರ್ಪರ ಕರಸ್ಥಲದಲ್ಲಿ ಧರಿಸಿಪ್ಪ ನೋಡಾ ಜಂಗಮನು.
ಸರ್ವಜೀವದಯಾಪಾರಿ ಎಂಬ ವಿಮಲ ರುದ್ರಾಕ್ಷಿ ಧರಿಸಿಪ್ಪ ಜಂಗಮನು.
ನಿಸ್ಸಂಗವೆಂಬ ಮೇಖಲಾಪರಿಪೂರ್ಣ ನೋಡಾ ಜಂಗಮನು.
ಸುಜ್ಞಾನವೇ ಕಿರೀಟವಾಗಿ, ಶುದ್ಧ ಜ್ಞಪ್ತಿಯೇ ಮಕುಟವಾಗಿ

CC-0. Jangamwadi Math Collection. Digitized by eGangotri

ನಿರಹಂಕಾರವೇ ಬಹಿರ್ವಾಸಿಯಾಗಿ
ದುರ್ವ್ಯಸನ ದುರ್ಭ್ರಮೆ ಹೃಷೀಕೋತ್ಪಾತ ವಿಜಯ
ಶಿವಯೋಗವಾಗಿ ಚರಿಸುವ ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಮಹಾಜಂಗಮನು."*

ಪರಮಪೂಜ್ಯ ಹಾವೇರಿಯ ಶ್ರೀ ಶಿವಬಸವ ಮಹಾಸ್ವಾಮಿಗಳವರು ಈ ಲಕ್ಷಣಲಕ್ಷಿತರಾದ ಯುಗಾವತಾರಿ ಮಹಾಜಂಗಮದೇವರೆಂದು ಭಾವಿಸಲೇಬೇಕು. ಇಂತಹೆ ಜಂಗಮದೇವರನ್ನು 'ಹರನೆಂದು ಕಂಡು ನರನೆಂದು ಭಾವಿಸಿದರೆ ನರಕ ತಪ್ಪದು' ಎಂಬುದು ಜಂಗಮಪ್ರಾಣಿ ಬಸವಣ್ಣನವರ ವಾಣಿಯಿದು. ಕಾರಣ ನಾವೂ ಇಂಥ ಯುಗಾವತಾರಿ ಜಂಗಮದೇವನ "ಆರಾಧನೆಯ ಮಾಡಿ ಅಮೃತದ ಬೆಳಸ"ನ್ನು ಪಡೆದು ಧನ್ಯರಾಗುವ.

* ವಚನ ಶಾಸ್ತ್ರಸಾರ (ಭಾಗ-೩); ಸಂಪಾದಕ : ಫ. ಗು. ಹಳಕಟ್ಟಿ, ೧೯೩೯ನೆಯ ಮುದ್ರಣ, ಪುಟ: ೧೮೯.

CC-0. Jangamwadi Math Collection. Digitized by eGangotri

# ಶ್ರೀಗಳವರ ಶಿವಯೋಗಲೀಲೆ

ಶ್ರೀ ಟಿ. ಎಸ್. ಕೊಟಗಿ, ಬಿ. ಎ., ಬಿ. ಟಿ., ಗದಗ.

ಸುಖ-ಶಾಂತಿಯ ಸಾಧನ ಮಾರ್ಗವನ್ನರಿತುಕೊಳ್ಳಲು, ಮಹಾನುಭಾವಿಗಳ ಜೀವನ ಚರಿತ್ರೆಯು ಮುಮುಕ್ಷುಗಳಿಗೆ ದಾರಿದೀಪವಾಗಿ ಪರಿಣಮಿಸುವದು. ಏಕಂದರೆ " Example is better than precept. " ತಾತ್ವಿಕ ಬೋಧೆಗಿಂತಲೂ ತತ್ವಾನುಯಾಯಿಗಳ ಜೀವನ ಚರಿತ್ರೆಯು ಹೆಚ್ಚು ಪ್ರಭಾವಶಾಲಿಯಾದುದು. ಅಂತೆಯೆ ಅಂಥ ಮಹಿಮರ ಜೀವನವನ್ನು ಅರಿಕೊಳ್ಳಲು ಪ್ರಯತ್ನ ಪಡಬೇಕು.

ಶಿವಬಸವ ಶಿವಯೋಗಿಗಳು ತಮ್ಮ ನೈತಿಕಾಚರಣೆಯಿಂದ, ಲಿಂಗಾನುಸಂಧಾನ ದಿಂದ, ವೀರವೈರಾಗ್ಯದಿಂದ ಮತ್ತು ಶಿವಯೋಗಲೀಲಾ ವಿಲಾಸದಿಂದ ಮಹಾಂತರೆನಿಸಿ ಕೊಂಡರು, ಶರಣರೆನ್ನಿಸಿಕೊಂಡರು, ನಿರಂಜನ ಮೂರ್ತಿಗಳಾಗಿ ಮೆರೆದರು. ಅದಕ್ಕಾಗಿ ಮಾನವನು ಮೊದಲು ನೈತಿಕ ಬಲಿಶಾಲಿಯಾಗಬೇಕು. ಧರ್ಮಕ್ಕೆ ಮೂಲವಾದುದು ನೈತಿಕ ಬಲವು ಮಾತ್ರ. ನೈತಿಕ ಬಲಶಾಲಿಗೆ ಧರ್ಮದ ನಿಯಮಾಚಾರಗಳು ಹಲವು ಬಗೆಯಿಂದ ಸಹಾಯಕವಾಗಬಲ್ಲವು. ಈಜುವವನಿಗೆ ಈಸುಗುಂಬಳಕಾಯಿಯು ಈಜಲು ಹೇಗೆ ಸಹಾಯಕಾರಿವಾಗಬಲ್ಲುದೋ ಹಾಗೆ, ಜೀವನ ಮಹಾಸಾಗರದಲ್ಲಿ ಈಜುವ ನೀತಿಯುತನಿಗೆ ಧರ್ಮದ ನಿಯಮಾಚಾರಗಳು ಆಧ್ಯಾತ್ಮ ಗುರಿಯನ್ನು ಸಾಧಿಸಲು ಸಹಾಯಕಾರಿಯಾಗುತ್ತವೆ. ಓದು ಅರಿಯದವನು ಅರ್ಥಮಾಡಿ ಕೊಳ್ಳುವದು ಹೇಗೆ? ಅರ್ಥದ ಮರ್ಮವನ್ನರಿಯದೆ ತತ್ವಜ್ಞಾನವಾಗಲಿ ಅಥವಾ ಆಧ್ಯಾತ್ಮ ಗುರಿಯಾಗಲಿ ಸಾಧಿಸಲಾರದು. ಆದುದರಿಂದ ನೀತಿಯುತ ಜೀವನವನ್ನು ನಡೆಯಿಸದವನು ಎಷ್ಟೊಂದು ನಿಯಮಾಚಾರಗಳನ್ನು ಪಾಲಿಸಿದರೇನು ? ಅವನಿಗೆ ಮುಕ್ತಿಯಪ್ಪುದೆ ? ಇಲ್ಲ. ಕಲ್ಲು ಎಷ್ಟೊಂದು ಕಾಲ ನೀರೊಳಗಿದ್ದರೇನು, ಮೃದುವಾಗಬಲ್ಲುದೇ ? ಮಾದ ಲವ ಎಷ್ಟೊಂದು ಕಾಲ ಸಕ್ಕರೆಯ ಪಾಕದಲ್ಲಿದ್ದರೇನು, ಸಿಹಿಯಪ್ಪುದೆ ? ಸಾಧ್ಯವಿಲ್ಲ. ಅದರಂತೆ ನೀತಿಬಾಹಿರನೆಷ್ಟೊಂದು ಕಾಲ ಧರ್ಮದ ಬಾಹ್ಯ ಡಂಭಾಚಾರಗಳನ್ನಾಚರಿಸಿ ದರೂ, ಅವನು ಶಿವಾನುಗ್ರಹಕ್ಕೆ ಅರ್ಹನಾಗಲಾರನು. ಆದುದರಿಂದ ಮಾನವನು ಮೊದಲು ಸದಾಚಾರಿಯಾಗಿದ್ದು, ನೈತಿಕಬಲ ಸಂವರ್ಧನೆಯನ್ನು ಮಾಡಿಕೊಳ್ಳಬೇಕು. ಅಷ್ಟಮದಗಳಿಂದ ಅಲಿಪ್ತನಾಗಿರಬೇಕು. ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ತನ್ನ ಅಳವಿನಲ್ಲಿ ಇಟ್ಟುಕೊಳ್ಳಬೇಕು. ಮನದ ಮುಂದಿನ ಆಶೆ ಮಾಯೆಯೆಂಬುದನ್ನು ಅರಿತು, ಮನದ ಚಾಂಚಲ್ಯವನ್ನು ತಡೆಯಬೇಕು. ಇದೇ ನೈತಿಕ ಆಚರಣೆಗೆ ಪೀಠಿಕೆ ಯಾಗಿದೆ. ಅದಕ್ಕಾಗಿ ಈ ಮಹಾನುಭಾವರು **'मन एव मनुष्याणां कारणं बंध मोक्षयोः ।'** ಎಂದರಿತು, ಮನಸ್ಸಿಗೆ ನೈತಿಕ ಸಂಸ್ಕಾರವನ್ನು ಕೊಟ್ಟು, ಅದನ್ನು ಸಾಧು

CC-0. Jangamwadi Math Collection. Digitized by eGangotri

ಮಾಡಿಕೊಂಡಿದ್ದರು. ಮಾನಸಿಕ ಶಕ್ತಿಯ ಬಗೆಗೆ ಆಂಗ್ಲಕವಿ ಮಿಲ್ಟನ್ನನು ಹೇಳುತ್ತಾನೆ.

*The mind is its own place, and in itself
Can make a Heaven of Hell, a Hell of Heaven.

"ನಾಕವೆಂದರೆ ಏನು, ನರಕವೆನಲೇನು! ನಾಕನರಕಗಳೆರಡ ಸೃಜಿಸ ಬಲ್ಲದು ಮನಸು." ಎಂದು ಕುವೆಂಪುರವರು ಹಾಡಿದ್ದಾರೆ. ಇದೇ ಆದರ್ಶವನ್ನಿಟ್ಟುಕೊಂಡ ಶಿವಬಸವ ಶಿವಯೋಗಿಗಳು ತಮ್ಮ ನೈತಿಕ ಕ್ರಿಯಾಚರಣೆಯಿಂದ ನೈಷ್ಠಿಕ ಬ್ರಹ್ಮಚಾರಿಗಳಾಗಿ, ನಿರಂಜನ ಮೂರ್ತಿಗಳೆನಿಸಿಕೊಂಡು, ಶಿವಯೋಗಲೀಲಾ ರಹಸ್ಯವನ್ನು ಜಗಕೆ ತೋರ್ಪಡಿಸಿದರು. ಅವರ ಸೇವೆಯಲ್ಲಿರ್ದು, ಅವರ ಲಿಂಗಾನುಸಂಧಾನವನ್ನು ನಿರೀಕ್ಷಿಸಿ, ಅನುಭವಿಸಿದ ಕೆಲವು ಸಂದರ್ಭಗಳನ್ನು ಓದುಗರ ವಿವೇಕಕ್ಕಾಗಿಯೂ, ಮುಮುಕ್ಷಗಳ ಮಾರ್ಗದರ್ಶನಕ್ಕಾಗಿಯೂ, ಇಲ್ಲಿ ವಿವೇಚಿಸಲು ಪ್ರಯತ್ನಿಸುವೆ. ಇದರಲ್ಲಿ ಉತ್ಪ್ರೇಕ್ಷೆಗೆ ಆಸ್ಪದವಿಲ್ಲ. ಮತದೃಷ್ಟಿಯನ್ನು ಬದಿಗಿಟ್ಟು, ಮತಿದೃಷ್ಟಿಗೆ ಜನವು ಚೇತೋಹಾರಿಯಾಗಲೆಂದು, ಈ ನಿರಂಜನ ಮೂರ್ತಿಯ ಜೀವನದ ಕೆಲವೊಂದು ಸನ್ನಿವೇಶಗಳನ್ನು ಚಿತ್ರಿಸಲು ಬಯಸುವೆ.

ಹನ್ನೆರಡನೆಯ ಶತಮಾನದಲ್ಲಿ ಮಹಾನುಭಾವಿಗಳಾಗಿ ನಡೆದು ತೋರಿದ ಬಸವಣ್ಣ, ಚೆನ್ನಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ ಮೊದಲಾದ ಮಹಾ ಶಿವಶರಣರ ತತ್ವಮಾರ್ಗಾನುಯಾಯಿಗಳಾಗಿ, ವೀರಶೈವ ಧರ್ಮದ ಚೈತನ್ಯ ಸ್ವರೂಪರಾಗಿ ಬಾಳಿ ಬೆಳಗಿದ ಶಿವಬಸವ ಶಿವಯೋಗಿಗಳು ಶಿವಯೋಗ ಸಮಾಧಿಯನ್ನೈದಿ, ಇಂದಿಗೆ ಹದಿನಾ: ಕ್ಕ ವರುಷಗಳು ಸಂದು ಹೋದವು. ಆದರೂ ಅವರು ಸಮಾಜಕ್ಕೆ ನೀಡಿದ ಸೇವೆ, ಲೋಕದ ಕಲ್ಯಾಣಕ್ಕಾಗಿ ಅವರು ತೋರಿದ ವಿರತಿ, ವ್ಯಕ್ತಿಯ ಉದ್ಧಾರಕ್ಕಾಗಿ ಅವರಲ್ಲಿದ್ದ ಕೃಪಾಬಲ, ಭಕ್ತವೃಂದದ ಮೇಲಿನ ಅವರ ಪ್ರೀತಿ ಮೊದಲಾದವು ಚಿರಸ್ಮರಣೀಯವಾದವುಗಳು. ಅವರು ಶಿವಯೋಗದ ಮಹತಿಯನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು, ಮಹಾಶಿವಯೋಗಿಗಳಾಗಿ, ಶಿವಯೋಗದ ರಹಸ್ಯವನ್ನು ಸಾಧಕರಿಗೆ ಅರುಹಲು, ಶಿವಯೋಗಮಂದಿರದಂಥ ಆಧ್ಯಾತ್ಮ ಸಂಸ್ಥೆಯ ಸಂಸ್ಥಾಪಕರಲ್ಲೊಬ್ಬರಾಗಿ, ಮಾನವ ಕಲ್ಯಾಣವನ್ನು ಬಯಸಿದರು. ಅಷ್ಟಾವರಣ, ಷಟ್‌ಸ್ಥಲಗಳ ಮಾರ್ಗಾನುಯಾಯಿಗಳಾಗಿ, ಜ್ಞಾನಕ್ರಿಯೆಗಳ ಸಾಕಾರಮೂರ್ತಿಯೇ ಜಂಗಮ ರೂಪವನ್ನು ಧರಿಸಿ, ಲೋಕದ ಕಲ್ಯಾಣವನ್ನು ಬಯಸುತ್ತಾ, ಭಕ್ತೋದ್ಧಾರಕ್ಕಾಗಿ ಜಗದಲ್ಲೆಲ್ಲ ಸಂಚರಿಸುತ್ತಿದ್ದ, ಆ ದಿವ್ಯಜ್ಯೋತಿಯು ಇಂದಿಗೂ ನಾಡಿನ ಭಕ್ತರ ಮನದಲ್ಲಿ ನಂದಾದೀಪವಾಗಿ ಬೆಳಗುತ್ತಿದೆ. ಅಜ್ಞಾನಾಂಧಕಾರದಲ್ಲಿ ಮುಳುಗಿ, ಸಂಸಾರ

---

* Milton's Paradise Lost, Book I, Lines 254–255.
Edited by A. W. Verity, M.A., Volume I, Text, Combridge University 1934.

CC-0. Jangamwadi Math Collection. Digitized by eGangotri

ಸಾಗರದ ಅಲೆಗಳ ಹೊಡೆತಕ್ಕೆ ಸಿಲುಕಿ, ಕಷ್ಟಕಾರ್ಪಣ್ಯಗಳನ್ನು ಅನುಭವಿಸುತ್ತ, ದುಃಖ ದುಮ್ಮಾನದಲ್ಲಿ ಹೊರಳಾಡುತ್ತಿದ್ದ ಭಕ್ತಾದಿಗಳಿಗೆ, ಆತ್ಮಜ್ಯೋತಿಯ ಪ್ರತಿಭೆಯಿಂದ ಮಾರ್ಗದರ್ಶಕರಾದ ವೈರಾಗ್ಯಮೂರ್ತಿಗಳವರು. ಅವರು ತೋರಿದ ಲಿಂಗ ನಿಷ್ಠೆ, ವ್ಯಕ್ತಪಡಿಸಿದ ಭಕ್ತವಾತ್ಸಲ್ಯ, ಆಚರಿಸಿದ ವೀರವೈರಾಗ್ಯ, ಬೀರಿದ ತಪಃ ಪ್ರಭಾವ, ತೋರಿದ ನೈತಿಕ ಕ್ರಿಯಾಚರಣೆ-- ಇವು ಪ್ರತಿಯೊಬ್ಬ ಮುಮುಕ್ಷುವಿಗೂ ಅನುಕರಣೀಯವಾಗಿವೆ. ಅವರು ಸಮ್ಯಕ್ ಜ್ಞಾನಿಗಳಾಗಿ, ಮಹಾನುಭಾವಿಗಳಾಗಿ, ಶಿವಯೋಗ ಸಂಪನ್ನರಾಗಿ ನಮಗೆ ಮಾರ್ಗದರ್ಶಕರಾಗಿದ್ದರು. ಅವರು ನಿಂತುದೇ ನಿಜವಾಸವಾಗಿಯೂ, ನೆಲೆಸಿದುದೆ ಸುಕ್ಷೇತ್ರವಾಗಿಯೂ ಪರಿಣಮಿಸುತ್ತಿದ್ದವು. ಕನ್ನಡ ನಾಡಿನಲ್ಲಿ ಅವರು ಸಂಚರಿಸದ ಸ್ಥಳಗಳಿಲ್ಲ. ಅವರ ಅನುಗ್ರಹಕ್ಕಾಗಿ ಕಾತರಭಾವದಿಂದ ಅವರನ್ನು ಕಾಣದ ಭಕ್ತವೃಂದವಿಲ್ಲ. ಸರ್ವವ್ಯಾಪಿಯಾಗಿ, ಮಂಗಲ ಮೂರ್ತಿಯಾಗಿ, ಜಂಗಮರೂಪದಿಂದ ದರ್ಶನಾಕಾಂಕ್ಷಿಗಳಾಗಿ ಬಂದ ಭಕ್ತರ ಮನವ ಬೆಳಗುತ್ತಿದ್ದ ಸಗುಣ ಶಿವಮೂರ್ತಿಯೆ ಅವರು.

ನನ್ನ ತಂದೆಯವರಾದ ಶಿವೈಕ್ಯ ಶಿವಬಸವಾರ್ಯರು ತಮ್ಮ ಅವಸಾನ ಕಾಲದಲ್ಲಿ ತಪಸ್ವಿಗಳ ಪಾದದರ್ಶನಾಕಾಂಕ್ಷಿಗಳಾಗಿ, ಕಾತರಭಾವದಿಂದ ಹಾಸಿಗೆ ಹಿಡಿದಿರುವದನ್ನು ತಿಳಿದು, ಮಹಾತಪಸ್ವಿಗಳಾದ ಶಿವಬಸವ ಶಿವಯೋಗಿಗಳು ಅಥಣಿಯಲ್ಲಿ ಆಗ ತಾವು ಬಿಡುವಿಲ್ಲದ ಶಿವಾನುಭವ ಕಾರ್ಯಕ್ರಮದಲ್ಲಿ ತೊಡಗಿದ್ದರೂ, ಭಕ್ತರ ಆಕಾಂಕ್ಷೆಯನ್ನು ಈಡೇರಿಸುವದಕ್ಕಾಗಿಯೂ, ಶಿವಸಾಯುಜ್ಯ ಪದವಿಯ ಮಾರ್ಗವನ್ನು ತೋರುವದಕ್ಕಾಗಿಯೂ ಬೆಳಗಾಂವಿ ಜಿಲ್ಹೆಯ ಅಥಣಿಯಿಂದ ಧಾರವಾಡ ಜಿಲ್ಹೆಯ ರೋಣ ತಾಲೂಕಿನ ನರೇಗಲ್ಲ ಗ್ರಾಮಕ್ಕೆ ನೇರವಾಗಿ ದಯಮಾಡಿಸಿ, ೧೯೩೭ ರಲ್ಲಿ ನನ್ನ ತಂದೆಯವರಿಗೆ ದರ್ಶನವನ್ನು ಕೊಟ್ಟು ಆಶೀರ್ವದಿಸಿದರು. ಮಗುವು ತನ್ನ ಕಳವಳಕ್ಕಾಗಿ ಹಂಬಲಿಸಿದರೆ, ತಾಯಿಯು ಎಲ್ಲಿಯೇ ಇದ್ದರೂ, ಎಷ್ಟೇ ಕಾರ್ಯಬಾಹಲ್ಯವು ಅವಳಿಗಿದ್ದರೂ, ಮಗುವಿನ ಅಳಲ ನುಡಿಯನ್ನು ಕೇಳಿ, ಅವಳು ಅದಕ್ಕೆ ಪಾಲ್ಗುಡಿಸಲು ಹೇಗೆ ಧಾವಿಸಿ ಬರುವಳೊ, ಹಾಗೆ ಭಕ್ತರ ಇಷ್ಟಾರ್ಥವನ್ನು ಅನುಗ್ರಹಿಸಲು ಮಹಾ ಶಿವಯೋಗಿಯು ತಮ್ಮ ಮುಪ್ಪಿನಾವಸ್ಥೆಯಲ್ಲಿಯೂ ಕಾಯದ ಕಷ್ಟವನ್ನು ಲೆಕ್ಕಿಸದೆ ಬಂದು ಅನುಗ್ರಹಿಸಿದ್ದನ್ನು ನಾನು ಕಂಡಿದ್ದೇನೆ. ಭಕ್ತಿ ಪ್ರಾಧಾನ್ಯವಿದ್ದಲ್ಲಿ ಈ ಮಹಾ ಜಂಗಮಮೂರ್ತಿಯು ತಾನಾಗಿಯೆ ಸುಳಿಯುತ್ತಿತ್ತು. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಶ್ರೀಮಂತರು ದೊಡ್ಡ ಕಾಣಿಕೆಗಳನ್ನು ಅರ್ಪಿಸಲು ಮುಂದೆ ಬಂದರೂ ಅವರಿಗೆ ಸ್ವಾಮಿಯ ಅನುಗ್ರಹವು ದೊರಕುವದು ಕಠಿಣವೆನಿಸುತ್ತಿತ್ತು. ಈ ಮಹಾತ್ಮರಿಗೆ ಬಡವ ಬಲ್ಲಿದರೆಂಬ ಭೇದವಿದ್ದಿಲ್ಲ. ಅವರು ಮೇಲು ಕೀಳೆಂಬ, ಹಿರಿಯ ಕಿರಿಯರೆಂಬ ಭೇದವನ್ನರಿಯರು. ಮುಮುಕ್ಷುಗಳಿಗೆ ಅನುಭಾವ ಸಿದ್ಧಿಯನ್ನು ದಯಪಾಲಿಸುತ್ತ, ನಾಡಿನ ತುಂಬೆಲ್ಲ ಸಂಚರಿಸಿ, ಭಕ್ತರಿಗೆ ಬೇಡಿದಿಷ್ಟಾರ್ಥವನ್ನು ಅನುಗ್ರಹಿಸಿ, ಭಕ್ತೋ

CC-0. Jangamwadi Math Collection. Digitized by eGangotri

ದ್ಧಾರ ಕಾರ್ಯದಲ್ಲಿ ಸದಾ ನಿರತರಾಗಿರುತ್ತಿದ್ದರು. ಅವರು ಜಂಗಮಸ್ಥಲಕ್ಕನುಗುಣ ವಾದ ರೀತಿಯಲ್ಲಿ ಆಚರಣೆಯನ್ನಿಟ್ಟುಕೊಂಡು ಭಕ್ತರ ಮನ ಬೆಳಗುತ್ತಿದ್ದರು. ತಮ್ಮ ಆಚರಣೆಯಿಂದ ಅನುಭಾವದಿಂದ, "ಕ್ರಿಯೆಯೇ, ಜ್ಞಾನ, ಜ್ಞಾನವೇ ಕ್ರಿಯೆ." ಎಂಬ ಶರಣ ಮಾರ್ಗದ ತತ್ವದ ತಿರುಳನ್ನು ಜಗಕೆ ಅಳವಡಿಸಿ ಕೊಟ್ಟರಲ್ಲದೆ, ಕ್ರಿಯಾರಹಿತ ತತ್ವಗೋಷ್ಠಿಯು ಮರುಭೂಮಿಯಲ್ಲಿ ಬೀಜವನ್ನು ನೆಟ್ಟಂತೆ ಎಂದು ಅವರು ಸದಾ ಬೋಧಿಸುತ್ತಿದ್ದರು. ಮಾತು ಜ್ಯೋತಿರ್ಲಿಂಗವಾಗಬೇಕೆಂದು ಪ್ರಭುವು ಬಿತ್ತರಿಸಿದರೆ, ಈ ಮಹಾಶಿವಯೋಗಿಗಳು ಕ್ರಿಯೆಯೇ ಶಿವಸಾಯುಜ್ಯ ಪದವಿಗೆ ಮೂಲಾಧಾರವೆಂದು ಬೋಧಿಸುತ್ತ ಅದನ್ನು ಅವರು ತಮ್ಮ ಜೀವನದುದ್ದಕ್ಕೂ ನಡೆದು ತೋರಿದರು.

ಈ ರೀತಿಯಾಗಿ ಭಕ್ತರ ಹೃದಯ ಪೀಠವನ್ನು ಅವರು ಅಲಂಕರಿಸಿದ್ದರೇ ಹೊರತು ಅವರಿಗೆ ಯಾವ ಸಂದರ್ಭದಲ್ಲಿಯೂ ಒಣಾಡಂಬರದ ಉತ್ಸವಗಳಲ್ಲಿ ಮೆರೆಯುವದು ಸೇರುತ್ತಿದ್ದಿಲ್ಲ. ಆದರೆ ಲಿಂಗಾನಂದಕ್ಕಾಗಿ ಸವದತ್ತಿಯ ಪಶ್ಚಿಮಕ್ಕೆ ನಾಲ್ಕು ಮೈಲಿನ ಅಂತರದಲ್ಲಿರುವ ಒಡಕುಹೊಳೆಯ ತೀರದಲ್ಲಿ ಬಂದು ನೆಲಸಿದಾಗ, ತೆಪ್ಪದ-ತೇರಿನಲ್ಲಿ ಅವರು ಭಕ್ತರೊಂದಿಗೆ ಕೂಡಿ ನಲಿದಾಡುವ ಸಂದರ್ಭವು ಮಾತ್ರ ಚಿತ್ತಾಕರ್ಷಕ ವಾಗಿರುತ್ತಿತ್ತು. ಇಂಥ ಮಹಾಶಿವಯೋಗಿಯ ಬಗೆಗೆ ಬರೆಯುವದೆಂದರೆ ಜೇಂಗೊ ಡಕ್ಕೆ ಬಾಯೊಡ್ಡಿದಂತೆ. ನಾವು ಸವಿಯುವಷ್ಟು ವೇಳೆ ಅದರೊಳಗಿಂದ ಸುಧಾರಸವನ್ನು ಸವಿಯಬಹುದು. ಕಬ್ಬನ್ನು ಎತ್ತ ಸವಿದರೂ ಅದರಿಂದ ಮಾಧುರ್ಯದ ಹೊರತು ಬೇರಾವ ರಸವೂ ಹೊರಹೊಮ್ಮಲಾರದು.

ತ್ರಿಕಾಲ ಲಿಂಗಾನುಸಂಧಾನ ಮಾಡುತ್ತ ಸದಾ ಶಿವಯೋಗ-ನಿದ್ರಾಮುದ್ರೆ ಯಲ್ಲಿಯೆ ತಲ್ಲೀನರಾಗಿರುತ್ತಿದ್ದ ಮಹಾಶಿವಯೋಗಿಗಳವರು. ಅವರ ನೋಟ, ನಡೆ, ನುಡಿ ಎಲ್ಲವೂ ಲಿಂಗರೂಪವಾಗಿದ್ದವು. ಅರುಣೋದಯಕ್ಕಿಂತಲೂ ಪೂರ್ವದಲ್ಲೆದ್ದು, ಅವರು ನಿತ್ಯ ದೈನಂದಿನ ಬಹಿಕ್ರಿಯೆಗಳನ್ನು ಮುಗಿಸುವದಕ್ಕಾಗಿ, ಬಹುದೂರ ಸಂಚಾರ ಕ್ಕಾಗಿ ಹೊರಡುತ್ತಿದ್ದರು. ಅವರ ಸೇವೆಗಾಗಿ ಹಲವಾರು ಬಾರೆ ನಾನು ಅವರ ಸಂಗಡ ತಂಬಿಗೆಯನ್ನು ತೆಗೆದುಕೊಂಡು, ಅವರ ಜೊತೆಗೆ ಬಹಿರ್ದೆಶೆಗೆ ಹೋದ ಅನುಭವವಿದೆ. ನೀರಿನ ಜಲಾಶಯವಿದ್ದಲ್ಲಿಗೆ ಹೋಗಬೇಕು. ಹಲ್ಲುಕಡ್ಡಿಯನ್ನು ತಂದು ಕೊಡಬೇಕು. ಮುಖ ಪ್ರಕ್ಷಾಲನೆಯನ್ನು ಮಾಡಿಸಬೇಕು, ಪಾದಕ್ಕೆ ನೀರೆರೆದು ಪಾದುಕೆಗಳನ್ನು ತೊಳಯಬೇಕು, ಹಸ್ತಪಾವಡದಿಂದ ಪಾದಗಳನ್ನು ಒರಿಸಬೇಕು; ಈ ಕ್ರಿಯೆಗಳೆಲ್ಲವೂ ಲಿಂಗಾರ್ಪಿತವಾಗಿಯೇ ನಡೆಯುತ್ತಿದ್ದವು. ಇಷ್ಟಾದ ಮೇಲೆ ಮಹಾನುಭಾವರ ಅನು ಭವವಾಣಿಯನ್ನು ಆಲಿಸುತ್ತ, ಸಂಚಾರವನ್ನು ಮುಗಿಸಿಕೊಂಡು ಅವರಿಳಿದ ಮಹಾ ಮನೆಗೆ ಮರಳುತ್ತಿದ್ದೆವು. ಆಮೇಲೆ ಅವರನ್ನು ಸ್ನಾನಕ್ಕೆ ಕರೆದೊಯ್ಯಬೇಕು. ಸ್ನಾನ ವನ್ನು ಮುಗಿಸಿಕೊಂಡು, ಮಹಾಶಿವಯೋಗಿಯು ಲಿಂಗಪೂಜೆಗೆ ಕುಳಿತರೆ, ಅವರು ನಿದ್ರೆಹೋಥರೇನೋ ಎಂಬಂತೆ ನಮಗೆ ಭಾಸವಾಗುತ್ತಿತ್ತು. ಅವರು ಶಿವಯೋಗ

CC-0. Jangamwadi Math Collection. Digitized by eGangotri

ನಿದ್ರಾಮುದ್ರೆಯಲ್ಲಿ ಓಲಾಡುತ್ತಿದ್ದುದು ನನಗೆ ಅರ್ಥವಾಗುತ್ತಿದ್ದಿಲ್ಲ. ಅವರು ಮಾತು ಮನಗಳಾಚೆಗಿನ ಲಿಂಗಾನಂದದಲ್ಲಿ ವಿಹರಿಸುತ್ತಿದ್ದರು:

*ದ್ವೀಪ ಏಳರೊಳು ವ್ಯಾಪಿಸಿಕೊಂಡಿರ್ಪುದು ಒಂದೇ ಜ್ಯೋತಿ ನೋಡಾ !
ಅದು ರೂಪವಲ್ಲ ನಿರೂಪವಲ್ಲ;
ಸರ್ವವ್ಯಾಪಾರವ ಹೊದ್ದದ ಸ್ವಯಂಜ್ಯೋತಿ ನೋಡಾ !
ಅದೇ ಎನ್ನ ಪ್ರಾಣಲಿಂಗವೆಂಬ
ಪರತರ ಪರಂಜ್ಯೋತಿ ನೋಡಾ ಅಖಂಡೇಶ್ವರಾ !

ಒಂಬತ್ತು ನಾಳದೊಳಗೆ ತುಂಬಿ ಸೂಸುವ ಮನ ಪವನಂಗಳ
ಒಂದೇ ಮಾರ್ಗದಲ್ಲಿ ನಡೆಸಿ,
ಶಂಕಿನಿನಾಳವನಡರಿ
ಆ ಬ್ರಹ್ಮರಂಧ್ರವ ನುಸುಳಿ
ಶಿಖಾಗ್ರಂಥಿಯನೊಡೆದು
ಪಶ್ಚಿಮದ್ವಾರವ ಪೊಕ್ಕು
ಆ ನಿರಂಜನ ಪೀಠವ ಮೆಟ್ಟಿ
ಮಹಾ ಬೆಳಗಿನ ಪ್ರಭಾಪುಂಜದಿಂದೆರಂಜಿಸುವ
ನಿರಂಜನ ಸಮಾಧಿಯೊಳಗೆ [illegible]
ನಿರಂತರ ಬೆಳಗುತ್ತಿರ್ದೆನಯ್ಯ ಅಖಂಡೇಶ್ವರಾ !

ಇಂಥ ನಿರಂಜನ ಸಮಾಧಿಯಲ್ಲಿರುತ್ತಿದ್ದ ದಿವ್ಯಶಿವಯೋಗಿಯ ಸಾನ್ನಿಧ್ಯದಲ್ಲಿ ಕೆಲವೊಂದು ಕಾಲಕಳೆದು, ಅವರ ಲಿಂಗಲೀಲಾವಿಲಾಸವನ್ನು ಕಂಡು ಆನಂದ ಪಡೆದಿದ್ದರೂ ಅವರ ಘನತೆಯ ಅರಿವು ಆಗ ನನಗೆ ಆಗುತ್ತಿರಲಿಲ್ಲ. ಚಿಕ್ಕವನಾದ ನಾನು ಅವರ ಲಿಂಗಪೂಜೆಯನ್ನು ಮುಗ್ಧಭಾವದಿಂದ ನೋಡುತ್ತಲಿರುತ್ತಿದ್ದೆನಷ್ಟೆ.

ಈ ಶಿವಯೋಗಿಯು ಲಿಂಗಲೀಲಾವಿಲಾಸದಲ್ಲಿದ್ದಾಗ, ಇಷ್ಟಪ್ರಾಣಭಾವಲಿಂಗಗಳನ್ನು ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಲ್ಲಿ ಅನುಗೊಳಿಸಿ, ಷಟ್‌ಸ್ಥಲದ ಪ್ರತಿಯೊಂದು ಮೆಟ್ಟಲನ್ನು ಕ್ರಮೇಣ ಏರುತ್ತ, ತುರೀಯಾವಸ್ಥೆಯ ಸ್ಥಿತಿಯಲ್ಲಿ ಅವರು ಲಿಂಗಯ್ಯನೊಡನಾಡುತ್ತಿದ್ದರು. ಆಗ ಅವರಿಗೆ ಬಾಹ್ಯ ಜಗತ್ತಿನ ಪರಿವೆಯೇ ಇರುತ್ತಿದ್ದಿಲ್ಲ. ಸ್ಥಿತಪ್ರಜ್ಞರಾಗಿ ತಮ್ಮೊಳಗೆ ತಾವು ಸಮಾಧಿಸ್ಥರಾಗಿರುತ್ತಿದ್ದರು.

---

* ಅಖಂಡೇಶ್ವರನ ವಚನಗಳು ( ಶ್ರೀ ಷಣ್ಮುಖಸ್ವಾಮಿಕೃತ ) ಶ್ರೀ ಮುರುಘಾಮಠ ಧಾರವಾಡ ಪ್ರಕಾಶನ (ಪರಿಷ್ಕೃತ ಮೂರನೆಯ ಮುದ್ರಣ ೧೯೫೫); ಪ್ರಾಣಲಿಂಗಿಸ್ಥಲ ವಚನಗಳು ೧೧೩–೧೧೪

CC-0. Jangamwadi Math Collection. Digitized by eGangotri

ಪದ್ಮಾಸನವನ್ನು ಹಾಕಿಕೊಂಡು ಪೂಜೆಗೆ ಕುಳಿತಾಗ ಹಸ್ತದಲ್ಲಿ ಲಿಂಗಯ್ಯನನ್ನು ಮಂಡಿಸಿ, ಮಂತ್ರೋಚ್ಚಾರಣೆಯ ಮಾಡುತ್ತ, ಮಜ್ಜನಕ್ಕೆರೆದು, ವಿಭೂತಿಯ ಧರಿಸಿ, ಧೂಪದೀಪವನ್ನು ತೋರಿ, ಶಿವನಾಮ ಜಪವಂಗೈಯುತ್ತ, ಜಪಮಾಲೆಯು ಅವರ ಕೈಯಲ್ಲಿ ಬರುವ ಹೊತ್ತಿಗೆ, ಕರಸ್ಥಲದಲ್ಲಿದ್ದ ಲಿಂಗಯ್ಯನನ್ನು ಅವರು ಉರಸ್ಥಲದಲ್ಲಿ ಮಂಡಿಸುತ್ತಿದ್ದರು. ನಟ್ಟದೃಷ್ಟಿಯಿಂದ ಲಿಂಗಯ್ಯನನ್ನು ಕೆಲಹೊತ್ತು ನೋಡಿ, ನೆನೆದು, ನಲಿದು ಆಮೇಲೆ ಲಿಂಗಯ್ಯನ ಸಂಗಡ ಅವರು ಸಂಭಾಷಣೆಗೆ ಆರಂಭಿಸುತ್ತಿದ್ದರು. ಆಗ ಅವರ ನುಡಿಗಳು ಮಾತ್ರ ನನಗೆ ಕೇಳಿಸುತ್ತಿದ್ದವು. ಆದರೆ ಲಿಂಗಯ್ಯನ ನುಡಿಗಳು ನಮಗೆ ಹೇಗೆ ಕೇಳಿಸಬೇಕು ? ಈ ವಿಲಕ್ಷಣ ಸ್ಥಿತಿಯು ಕೆಲಹೊತ್ತು ನಡೆದ ಮೇಲೆ ಮಾತುಗಳು ಸಂಪೂರ್ಣ ನಿಂತು, ಅಲ್ಲಿ ಮೌನಮುದ್ರೆಯು ಕಾಣ ಹತ್ತಿತು. ಇದೇ ಲಿಂಗನಿದ್ರಾಮುದ್ರೆಯು. ಉರಸ್ಥಲದಲ್ಲಿದ್ದ ಲಿಂಗಯ್ಯನನ್ನು ಕೆಲ ಹೊತ್ತು ಅನಿಮಿಷ ದೃಷ್ಟಿಯಿಂದ ನಿರೀಕ್ಷಿಸಿ, ನಕ್ಕು ನಲಿದು, ಕೊನೆಗೆ ಅವರು ಭಾವ ಸಮಾಧಿಯನ್ನೈದುತ್ತ ತುರೀಯಾವಸ್ಥೆಯಲ್ಲಿ ಲೋಲಾಡುತ್ತಿದ್ದರು. ಆಗ ಅವರು ಸ್ಥೂಲ, ಸೂಕ್ಷ್ಮ, ಕಾರಣ ಶರೀರದ ಕ್ರಿಯೆಗಳೆಲ್ಲವನ್ನು ನಿಲ್ಲಿಸಿ, ಭಾವಲಿಂಗದಲ್ಲಿರುತ್ತಿದ್ದರು.

§ತನುವಿನ ಕೈಯಲ್ಲಿ ಮೂರ್ತಿಗೊಂಡಿರ್ದ
ಘನಮಹಾಲಿಂಗದೊಡನೆ
ಮನಬಂದು ಬೇಟವ ಮಾಡಲು
ತನುಮನವೆರಡು ಉರಿನುಂಗಿದ ಕರ್ಪುರದಂತೆ
ಕಾಣಾ ಅಖಂಡೇಶ್ವರಾ !

ಎನ್ನುವಂತೆ ಶ್ರೀಗಳವರು ಅವಿರಳ ಶಿವಯೋಗ ಸಮಾಧಿಯಲ್ಲಿರುತ್ತಿದ್ದರು. ಮಹಾದೇವಿಯಕ್ಕನವರು ಕಲ್ಯಾಣಪಟ್ಟಣದ ಹೊರಗಡೆಯಲ್ಲಿ ಬರುತ್ತ ಇದ್ದಾಗ, ಅಲ್ಲಮ ಪ್ರಭುಗಳ ಅಪ್ಪಣೆಯ ಮೇರೆಗೆ ಕಿನ್ನರಿ ಬೊಮ್ಮಯ್ಯಗಳು ಅಕ್ಕನವರನ್ನು ಪರಿಕಿಸ ಲೋಸುಗ ಮುಂದೆ ಬಂದಾಗ, ಅಕ್ಕಗಳು ತುರೀಯಾವಸ್ಥೆಯಲ್ಲಿ ನಿಂದು, ಕಿನ್ನರಯ್ಯಗಳಿಗೆ ತಾವು ನಿಃಕಾಮಿ ಎಂಬುದನ್ನು ಹೇಗೆ ತೋರಿಸಿಕೊಟ್ಟರೊ ಹಾಗೆಯೆ ಶಿವಬಸವ ಸ್ವಾಮಿಗಳ ಲಿಂಗಲೀಲಾವಿಲಾಸವು. ಅದನ್ನು ಪ್ರತ್ಯಕ್ಷ ಕಾಣುವದೊಂದು ಭಾಗ್ಯ !

ಭಕ್ತನು ಯಾವಾಗಲೂ ಲಿಂಗದೊಳಗಿದ್ದು, ಲಿಂಗಭೋಗೋಪಭೋಗಿಯಾಗ ಬೇಕೆಂಬುದೇ ವೀರಶೈವ ಧರ್ಮದ ಮೂಲತತ್ವ. ಇನ್ನುಳಿದ ಧರ್ಮಗಳು ಸಹ ಪರ್ಯಾಯದಲ್ಲಿ ಇದೇ ತತ್ವವನ್ನೇ ಬೋಧಿಸುತ್ತವೆ. ಶರೀರ ಪೋಷಣೆಗೆ ಬೇಕಾ

---

§ ಅಖಂಡೇಶ್ವರ ವಚನಗಳು ( ಶ್ರೀ ಷಣ್ಮುಖ ಸ್ವಾಮಿ ಕೃತ ) ಶ್ರೀ ಮುರುಘಾ ಮಠ, ಧಾರವಾಡ, ಪ್ರಕಾಶನ; ವಚನ ೯೩೧.

CC-0. Jangamwadi Math Collection. Digitized by eGangotri

ಗುವ ಅನ್ನವನ್ನು ಶಿವನಿಗೆ ಅರ್ಪಿಸಿ, ಅದನ್ನೇ ಭಕ್ತನಾದವನು ಶಿವಾರ್ಪಣಭಾವದಿಂದ ಅರ್ಪಿತ ಮಾಡಿಕೊಳ್ಳಬೇಕು. ಏಕೆಂದರೆ " ಲಿಂಗವೆ ಪತಿ, ತಾನೆ ಸತಿ. " ಎಂಬ ಭಾವದಿಂದ ನಮ್ಮ ಕಾಯವನ್ನೇ ಶಿವನಿಗೆ ಅರ್ಪಿತಗೊಳಿಸಿದ ಮೇಲೆ, ಅದರ ಆಗು-ಹೋಗುಗಳು ಶಿವನಿಗೆ ಸಂಬಂಧಿಸಿದವು ಆದುದರಿಂದ ಅದರ ಪೋಷಣೆಗಾಗಿ ನಮಗೆ ಸ್ವಾತಂತ್ರ್ಯವು ಇರುವದಿಲ್ಲ. " We should eat to live but not to live to eat." ಅಂದರೆ "ನಾವು ಬದುಕುವದಕ್ಕಾಗಿ ಉಣ್ಣಬೇಕಲ್ಲದೆ, ಉಣ್ಣುವದಕ್ಕಾಗಿ ಬದುಕುವದಲ್ಲ. " ಎಂಬ ನಾಣ್ನುಡಿಯು ಪಾರಮಾರ್ಥಿಕಕ್ಕೇರಿದಾಗ ಇದೇ ಮತವನ್ನೆ ಪ್ರತಿಪಾದಿಸುತ್ತದೆ. ಶ್ರೀಗಳು ಪುನಃ ಸ್ಥೂಲಶರೀರಕ್ಕೆ ಬಂದು, ನೈವೇದ್ಯವನ್ನು ಪ್ರಸಾದರೂಪದಿಂದ ಆಸ್ವಾದಿಸುತ್ತಿದ್ದರು. ಸುಶ್ರಾವ್ಯವಾದ ವಾದ್ಯ ಗೀತೆಗಳನ್ನು ಆಲಿಸುವದು, ಸುಗಂಧದ್ರವ್ಯ ಮತ್ತು ಪುಷ್ಪಗಳ ಸೌರಭವನ್ನು ಸವಿಯುವದು, ಆಪ್ಯಾಯನ ಮುಖದಿಂದಲೇ ಅವರು ಮಾಡುತ್ತಿದ್ದುದನ್ನು ನಾನು ಕಂಡು ಅನುಭವಿಸಿದ್ದೇನೆ. ಇದೇ ಷಡಂಗಗಳಲ್ಲಿ ಷಡ್‌ಲಿಂಗಗಳನ್ನು ಮೂರ್ತಗೊಳಿಸುವದು.

ಅಂತೂ ಈ ಮಹಾನಿರಂಜನಮೂರ್ತಿಯು ಅಷ್ಟಾವರಣಗಳಿಂದ ಒಡಗೂಡಿಕೊಂಡು, ಷಡ್‌ಲಿಂಗಗಳನ್ನು ಷಡಂಗಗಳಲ್ಲಿ ನೆಲೆಗೊಳಿಸಿ, ವಿಶ್ವಾಸ, ನಿಷ್ಠೆ, ಸಾವಧಾನ, ಸ್ವಾನುಭವ, ಅರಿವು, ನಿರ್ಭಾವ ಪಾದಗಳಿಂದ ಅನುಕ್ರಮವಾಗಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಸ್ಥಿತಿಯವರೆಗೆ ಹೋಗಿ ಮುಟ್ಟುತ್ತಿದ್ದರು. ಅಂದರೆ ವಿಶ್ವಾಸದಿಂದ ಭಕ್ತನಾಗಿ, ಆ ವಿಶ್ವಾಸದೊಳಗಿನ ನಿಷ್ಠೆಯಿಂದ ಮಹೇಶ್ವರನಾಗಿ, ಆ ನಿಷ್ಠೆಯೊಳಗಿನ ಸಾವಧಾನದಿಂದ ಪ್ರಸಾದಿಯಾಗಿ, ಆ ಸಾವಧಾನದೊಳಗಿನ ಅರಿವಿನಿಂದ ಶರಣನಾಗಿ, ಆ ಅರಿವು ನಿಜದಲ್ಲಿ ಸಮರಸಭಾವವನೈದಿದ ನಿರ್ಭಾವ ಸ್ಥಿತಿಯೆ ಐಕ್ಯಸ್ಥಲಕ್ಕೆ ಭಕ್ತನನ್ನು ಒಯ್ದು ಮುಟ್ಟಿಸುವದು.

ऊर्ध्वशून्यमधःशून्यं मध्यशून्यं निरामयम् ।
सर्वशून्यमनभ्यासं समाधिस्तस्य लक्षणम् ॥

ಹೀಗೆ ಮೇಲೆ, ಕೆಳಗೆ, ಮಧ್ಯದಲ್ಲಿ- ಎಲ್ಲ ಕಡೆಗೂ ತಾನಾಗಿಯೇ ಪರಿಶುದ್ಧವಾದ ನಿತ್ಯ ನಿರಂಜನ ನಿರ್ವಿಕಲ್ಪ ಸ್ಥಿತಿಯೇ ಸಮಾಧಿ. ಇಂತಹ ಸಮಾಧಿಯಲ್ಲಿ ಆ ಜಂಗಮ ಮೂರ್ತಿಯು ಶೋಭಿಸುತ್ತಿತ್ತು. ಕೊನೆಗೆ ಆರಳಿದು ಮೂರಾಗಿ, ಮೂರಳಿದು ಎರಡಾಗಿ, ಎರಡಳಿದು ಒಂದಾಗಿ, ಲಿಂಗದೊಳು ಬೆರೆದು, ಲಿಂಗವೇ ತಾನಾಗಿ ಪೂಜ್ಯಪೂಜಕ ಭಾವವನ್ನೂ ಕೂಡ ಮೀರಿ ಐಕ್ಯಸ್ಥಿತಿಯಲ್ಲಿ ಓಲಾಡುತ್ತಿದ್ದರು. ಮಹಾನುಭಾವಿಗಳ ದರ್ಶನ ಸ್ಪರ್ಶನದಿಂದ ಮುಕ್ತಿಯಪ್ಪುದು ಎಂದು ಶ್ರೀ ತೋಂಟದ ಸಿದ್ಧಲಿಂಗೇಶ್ವರರು ಆಪ್ಪಣೆಕೊಡಿಸಿದ ಈ ವಚನವು ಶ್ರೀಗಳವರ ಜೀವನದಲ್ಲಿ ಸಮನ್ವಯಿಸುತ್ತಿತ್ತು :

CC-0. Jangamwadi Math Collection. Digitized by eGangotri

ಶಮೆ, ದಮೆ, ವಿವೇಕ, ವೈರಾಗ್ಯ, ಪರಿಪೂರ್ಣಭಾವ, ಶಾಂತಿ,
ಕಾರುಣ್ಯ, ಶ್ರದ್ಧೆ, ಸತ್ಯ, ಸದ್ಭಕ್ತಿ, ಶಿವಜ್ಞಾನ, ಶಿವಾನಂದ
ಉದಯವಾದ ಮಹಾಭಕ್ತನ ಹೃದಯದಲ್ಲಿ ಶಿವನಿಪ್ಪ.
ಆತನ ದರ್ಶನ, ಸ್ಪರ್ಶನ, ಸಂಭಾಷಣೆಯಿಂದ ಕೇವಲ
ಮುಕ್ತಿಯಪ್ಪುದು ತಪ್ಪದಯ್ಯಾ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

ಕಾರಣ ಹದಿನಾಲ್ಕು ವರುಷಗಳ ಹಿಂದೆ ಶಿಖಿಕರ್ಪುರನ್ಯಾಯದಂತೆ ಶಿವಯೋಗಸಮಾಧಿಯನ್ನೈದಿದ ಈ ಶಿವಯೋಗಿವರ್ಯನ ಶಿವಯೋಗರಹಸ್ಯವನ್ನರಿತು ಸರ್ವರೂ ಸುಖ ಶಾಂತಿಯನ್ನು ಪಡೆಯಲೆಂದು ಹಾರೈಸುವೆ.

CC-0. Jangamwadi Math Collection. Digitized by eGangotri



ಹಾವೇರಿ ಪೂಜ್ಯರ ಜನ್ಮಭೂಮಿಯಾದ ಸಪ್ತಸಾಗರದ ಬಳಿ ಹರಿದಿರುವ
ಕೃಷ್ಣಾ ನದಿಯ ದೃಶ್ಯ.

CC-0. Jangamwadi Math Collection. Digitized by eGangotri

ಪರಮಪೂಜ್ಯ ಲಿಂ. ಹಾವೇರಿ ಶ್ರೀಗಳವರು ಕೃಷ್ಣಾನದಿಯ ತೀರದಲ್ಲಿ ಅನುಷ್ಠಾನ ಮಾಡಿದ ತನ್ಮನ ತಡಿಯಲ್ಲಿರುವ ಸ್ಥಾನ



ಎಡಹಳ್ಳಿ ದೇಸಗತಿಯವರ ಗದ್ದುಗೆಗಳು ತನ್ಮನತಡಿ



ಎಡಹಳ್ಳಿ ಶ್ರೀಮಂತ ಮಲ್ಲಪ್ಪ ದೇಸಾಯರ ಗದ್ದುಗೆ
[ ಆರ್. ಎಂ. ದೇಸಾಯರ ಕೃಪೆಯಿಂದ ]

CC-0. Jangamwadi Math Collection. Digitized by eGangotri

# ಪವಾಡ ಪುರುಷರು

## ಪ್ರೊ. ಜಿ. ಎಂ. ಉಮಾಪತಿ ಶಾಸ್ತ್ರಿ, ಎಂ. ಎ.

ಸಾಮಾನ್ಯವಾಗಿ ಜಗತ್ತಿನ ಎಲ್ಲ ಧಾರ್ಮಿಕ ಆಚಾರ್ಯರ ಮತ್ತು ಮಹಾ ಪುರುಷರ ಜೀವನದಲ್ಲಿ ಅತಿಮಾನವೀಯ ಶಕ್ತಿಯನ್ನು ಕಾಣುತ್ತೇವೆ. ಬುದ್ಧ, ಕ್ರೈಸ್ತ, ಮಹಮ್ಮದ, ಕಬೀರ ಮೊದಲಾದ ಎಲ್ಲ ಸಂತರ ಶರಣರ ಕಾವ್ಯಮಯ ಜೀವನ ಚರಿತೆಗಳಲ್ಲಿ ಪವಾಡಗಳು ವಿಪುಲವಾಗಿ ಬರುತ್ತವೆ. ಈ ಸಂತರು ತಾವಾಗಿಯೇ ಪವಾಡಗಳನ್ನು, ಅದ್ಭುತ ಚಮತ್ಕಾರಗಳನ್ನು ಜನರಿಗೆ ತೋರಿಸಿ ಕೀರ್ತಿಯನ್ನು ಪಡೆಯಬೇಕೆಂಬ ಅಳಿಯಾಶೆಯುವರಲ್ಲ. ಅವರೆಲ್ಲರೂ ಸಾಮಾನ್ಯ ಮಾನವರಂತೆಯೆ ಹುಟ್ಟಿದರು. ಆದರೆ ಅವರು ತಮ್ಮ ಜೀವನವನ್ನು ಸಾಮಾನ್ಯ ಪಶು ಪಕ್ಷಿಗಳಂತೆ ಬರಿಯ ಆಹಾರ ನಿದ್ರೆಗಳಲ್ಲಿ ಕಳೆಯದೆ, ಅದನ್ನು ಪವಿತ್ರವಾದ ಮೇಲ್ಮಟಕ್ಕೆ ಒಯ್ಯಲು ಸಾಧನೆ ಮಾಡಿದರು ಸಿದ್ಧಿ ಪಡೆದರು; ಉಳಿದವರನ್ನು ಆ ಮಾರ್ಗದಲ್ಲಿ ಒಯ್ಯಲು ಪ್ರಯತ್ನಿಸಿದ ಲೋಕಹಿತೈಷಿಗಳು. ಅವರು ಉಪದೇಶಿಸಿದುದು ಮಾನವ ಧರ್ಮ, ವಿಶ್ವಧರ್ಮ. ದೇವನು ಮಾನವನಲ್ಲಿಯೇ ವಿವೇಕ ರೂಪದಲ್ಲಿ ಇದ್ದಾನೆ ಸದಸದ್ವಿಚಾರವೇ ವಿವೇಕ, ಈ ಸುವಿವೇಕವೇ ಸಂಪ್ರಜ್ಞೆಯೇ ಮಾನವನನ್ನು ಸಂತ್ಸದ ಕಡೆಗೆ ಒಯ್ಯುತ್ತದೆ. ಈ ಸುಜ್ಞಾನವಿರುವದರಿಂದಲೇ ಮಾನವನ ಮಟ್ಟ ಪಶುಪಕ್ಷಿಗಿಂತ ಮೇಲಾಗಿದೆ. ಆದುದರಿಂದಲೇ ಮಾನವನ ಜೀವನಕ್ಕೆ ಶ್ರೇಷ್ಠತೆ ಬಂದಿರುವುದು. ಈ ತತ್ತ್ವವನ್ನು ಪ್ರಪಂಚದ ಎಲ್ಲ ಧರ್ಮಗಳೂ, ಏಕವಾಕ್ಯತೆಯಿಂದ ಒಪ್ಪಿಕೊಂಡಿವೆ. ನಮ್ಮ ರಾಷ್ಟ್ರದ ಸನ್ಮಾನ್ಯ ಉಪಾಧ್ಯಕ್ಷರೂ ವಿಶ್ವವಿಖ್ಯಾತ ದಾರ್ಶನಿಕರೂ ಆದ ಡಾ. ಸರ್ವಪಲ್ಲಿ ರಾಧಾಕೃಷ್ಣನ್ ಅವರು ಇದನ್ನೆ ಸಮರ್ಥಿಸಿದ್ದಾರೆ:

"Religions teach that God is in man, that man is possessed of the power to choice between good and evil; and this power to make a choice makes him a man and distinguishes him from the animal, and lends sacredness to human life."*

---

* Religion and Society– by S. Radhakrishnan, ( Lecture : Religion and the new world order ) P. 55.

CC-0. Jangamwadi Math Collection. Digitized by eGangotri

ಮಹಾತ್ಮಾ ಯೇಸು ಕ್ರಿಸ್ತನೂ ಆಕಾಶದಲ್ಲಿ ಹಾರಾಡುವ ಪಕ್ಷಿಗಳು ಉತ್ತುವದಿಲ್ಲ, ಬಿತ್ತುವದಿಲ್ಲ, ಬೆಳೆಯುವದಿಲ್ಲ, ಕೊಯ್ಯುವದಿಲ್ಲ, ಮತ್ತು ರಾಶಿ ಮಾಡುವದಿಲ್ಲ; ಆದರೂ ದೇವನ ಕೃಪೆಯಿಂದ ಅವು ತಿನ್ನುತ್ತವೆ, ಬದುಕುತ್ತವೆ. ಅವುಗಳಿಗಿಂತಲೂ ಮಾನವನು ನಿಕೃಷ್ಟನೇ ?" ಎಂದು ಕೇಳುತ್ತಾನೆ:

" Behold the fowls of the air : for they sow not, neither do they reap, nor gather into barns; yet your heavenly father feedeth them, Are ye not much better than they ? "§

ಧರ್ಮವೆಂದರೆ ಬರಿಯ ಬೂಟಾಟಿಕೆಯಲ್ಲಿ, ಒಣ ಆಡಂಬರವಲ್ಲ. ಧರ್ಮವು ಮಾನವನ ಜೀವನವನ್ನು ಪರಿಶುದ್ಧಗೊಳಿಸುವ ಒಂದು ಮಹಾ ಸಾಧನ. ಧೈರ್ಯ, ಕ್ಷಮೆ, ದಮೆ, ಅಸ್ತೇಯ (ಕದಿಯದಿರುವುದು), ಶೌಚ, ಇಂದ್ರಿಯನಿಗ್ರಹ (ಶಮೆ), ಬುದ್ಧಿ, ವಿದ್ಯೆ, ಸತ್ಯ, ಅಕ್ರೋಧ ಇವು ಧರ್ಮ ಪುರುಷನ ಹತ್ತು ಜೀವನಾಡಿಗಳಾಗಿವೆ :

धृतिः क्षमा दमोऽस्तेयं शौचमिन्द्रियनिग्रहः ।
धीर्विद्या सत्यमक्रोधो दशकं धर्मलक्षणम् ॥†

ಎಂದು ಮನುವು ಧರ್ಮದ ಲಕ್ಷಣಗಳನ್ನು ಹೇಳಿರುವನು. ಈ ಲಕ್ಷಣಗಳು ಪ್ರಪಂಚದ ಎಲ್ಲ ಧರ್ಮಗಳಲ್ಲಿಯೂ ರೂಪುಗೊಂಡಿವೆ. ಮಹಾತ್ಮರು ಈ ವಿಶಾಲ ಧರ್ಮವನ್ನು ತಮ್ಮ ಜೀವನದಲ್ಲಿ ಅಳವಡಿಸಿ ಕೊಂಡಿರುತ್ತಾರೆ. ಬಸವಣ್ಣನವರು 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ.' ಎಂಬ ವಚನದಲ್ಲಿ ವಿಶ್ವ ಧರ್ಮದ ತಿರುಳನ್ನೆ ಹೇಳಿದ್ದಾರೆ. ಅಸತ್ಯ ಮೊದಲಾದ ದುರ್ಗುಣರೂಪ ಅಧರ್ಮದಿಂದ ಮಾನವನ ಜೀವನ ದೂಷಿತವಾಗುತ್ತದೆ. ಆ ಅಧರ್ಮವನ್ನು ತೊಡೆದು ಹಾಕಿ ಅಂತರಂಗ–ಬಹಿರಂಗ ಶುದ್ಧಿಯನ್ನು ಸಂತರು ಪಡೆಯುತ್ತಾರೆ. ಅವರ ಈ ಅಧ್ಯಾತ್ಮ ಸಾಧನೆಯೇ ದೇವನನ್ನು ಕಾಣುವ ಮಾರ್ಗ. ನಿರ್ಮಲಾಂತಃಕರಣದಲ್ಲಿಯೇ ನಿತ್ಯ ನಿರ್ಮಲ ಪರಮಾತ್ಮನ ನಿವಾಸವಿರುವುದು.

ಮನಸ್ಸು ಶುದ್ಧ ಅಶುದ್ಧವೆಂದು ಎರಡು ಪ್ರಕಾರ. ಅಶುದ್ಧವು ಕಾಮ ಸಂಕಲ್ಪ ಮಯವಾದುದು, ಶುದ್ಧವು ಕಾಮದಿಂದ ದೂರವಾದುದೆಂಬ ಉಪನಿಷತ್ತಿನ ಮಾತು ಸೂಕ್ತವಾಗಿದೆ:

---

§ The Holy Bible ( The New Testament), St. Matthe w; Chapture 6, 26.

† मनुस्मृति : अध्याय ६, श्लोक ९२;

CC-0. Jangamwadi Math Collection. Digitized by eGangotri

मनो हि द्विविधं प्रोक्तं शुद्धं चाशुद्धमेव च ।
अशुध्दं कामसंकल्पं शुध्दं कामविवर्जितम् ॥*

ಮಾನವನ ಮನವು ಕಾಮ (ವಿಷಯವಾಸನೆ), ವ್ಯಾಪಾದ (ದ್ವೇಷ), ವಿಹಿಂಸಾ ಎಂಬ ವಿತರ್ಕಗಳಿಂದ ದೂಷಿತವಾಗಿರುತ್ತದೆ ಈ ವಿತರ್ಕಗಳನ್ನು ನೈಷ್ಕರ್ಮ್ಯ (ಏಕಾಂತವಾಸ), ಅವ್ಯಾಪಾದ (ಮೈತ್ರಿ), ಮತ್ತು ಅವಿಹಿಂಸೆ ಭಾವನೆಗಳಿಂದ ರೂಪಾಂತರಿಸುವದು ಪ್ರಜ್ಞೆಯ ಮಾರ್ಗವೆಂದು ಬುದ್ಧದೇವನು 'ಮಜ್ಝಿಮ ನಿಕಾಯ'ದ 'ದ್ವೇಧಾವಿತಕ್ಕ ಸುತ್ತ'ದಲ್ಲಿ ಉಪದೇಶಿಸಿರುವನು. ಅಂತೆಯೆ, ಬುದ್ಧ ದೇವನ ಅಷ್ಟಾಂಗಿಕ ಯೋಗಮಾರ್ಗದಲ್ಲಿ ಸಮ್ಯಕ್ತ್ವಕ್ಕೆ ಬಹು ಮಹತ್ತ್ವ ಬಂದಿರು ವುದು. ಮಾನವನ ದೃಷ್ಟಿ, ವಚನ, ಕರ್ಮ, ಆಜೀವ (ಉದ್ಯೋಗ), ವ್ಯಾಯಾಮ (ಶಮ-ದಮ), ಸ್ಮೃತಿ ಎಲ್ಲವೂ 'ಸಮ್ಯಕ್' ಆಗಿರಬೇಕು, ಪರಿಶುದ್ಧವಾಗಿರ ಬೇಕೆಂಬುದು ಬುದ್ಧದೇವನ ಅನುಭವದ ಮಾತು. ಇಂತಹ ಪರಿಶುದ್ಧಿಯನ್ನು ಪಡೆಯಲು ಮಹಾತ್ಮರು ಬಹು ಸಾಧನೆ ಮಾಡುತ್ತಾರೆ. ಇದನ್ನು ಮಹಾಕವಿ ಚಾಮರಸನ ಪ್ರಭುಲಿಂಗ ಲೀಲೆಯ 'ಸುಬೋಧೆ'ಯಲ್ಲಿ§ ಕರಣಗಳ ಕಾಳಗವೆಂದು ಹೇಳಬೇಕು. ಅಲ್ಲಮಪ್ರಭುದೇವರು ಈ ಇಂದ್ರಿಯ ವಿಜಯಲೀಲೆಯನ್ನು ತೋರಿ ಮಾಯಾಕೋಲಾಹಲರೆಂದು ಪ್ರಸಿದ್ಧ ಪಡೆದಿರುವರು. ಬೋಧಿಸತ್ವವನು ಕೂಡ ಮಾರನನ್ನು ಗೆದೆದು ಭಗವಾನ್ ಬುದ್ಧನೆನಿಸಿಕೊಂಡನು. ಈ ಮಾರವಿಜಯವನ್ನು ಮಹಾಕವಿ ಅಶ್ವಘೋಷನು ಬುದ್ಧಚರಿತ್ರೆಯಲ್ಲಿ ಬಹು ರಮ್ಯವಾಗಿ ವರ್ಣಿಸಿರುವನು. "ಮನುಷ್ಯಜಾತಿಯ ಕಲ್ಯಾಣಕ್ಕಾಗಿ ಯಾರಾದರೂ ಮುಂದಾದರೆ ಅವರ ಮೇಲೆ ದಾಳಿ ಮಾಡುವ ಮೊದಲ ಮಾರಸೇನೆ ಎಂದರೆ ಕಾಮೋಪಭೋಗದ ವಾಸನೆಯೆ. ಅದನ್ನು ಹತ್ತಿಕ್ಕಿ ಮುಂದಕ್ಕೆ ಹೆಜ್ಜೆ ಇಡುವಷ್ಟರಲ್ಲಿ ಅರತಿ (ಅಸಂತೋಷ) ಹುಟ್ಟು ವದು. ಆ ಮೇಲೆ ಹಸಿವೆ, ನೀರಡಿಕೆ ಮುಂತಾಗಿ ಒಂದರ ಹಿಂದೊಂದು ಮುಂದೆ ಬಂದು ನಿಲ್ಲುವವು. ಮತ್ತು ಈ ಎಲ್ಲ ವಾಸನೆ ಮತ್ತು ವಿಕಾರಗಳನ್ನು ಗೆಲ್ಲದ ಹೊರತು ಕಲ್ಯಾಣಪ್ರದ ತತ್ತ್ವದ ಸಾಕ್ಷಾತ್ಕಾರವಾಗುವದು ಎಂದಿಗೂ ಶಕ್ಯವಿಲ್ಲ.

---

* अमृतबिन्दूपनिषत्, १

§ಕಾಳೆಗದ ಕಥೆಯಲ್ಲ ವಿಷಯಗ
ಳೇಳಿಗೆಯ ವಿಧಿಯಲ್ಲ ಹೊಟ್ಟೆಯ
ಹೂಳಲಿಕೆ ಹಿಂಸೆಯನು ಮಾಡುವ ಹೊಲಬು ತಾನಲ್ಲ
ಕಾಳೆಗವು ಕರಣದಲಿ ಸುರತದ
ಕೀಲು ಕುಂಡಲಿಯಲ್ಲಿ ತೃಪ್ತಿಯ
ದಾಳಿ ಗಗನದೊಳೆಂದು ಪೇಳುವುದೀ ಸುಬೋಧೆಯಲಿ
—ಪ್ರಭುಲಿಂಗಲೀಲೆ, ಗತಿ: ೧, ಪದ್ಯ: ೩

CC-0. Jangamwadi Math Collection. Digitized by eGangotri

ಆದ್ದರಿಂದ ಬುದ್ಧದೇವನು ಮಾರನನ್ನು ಸೋಲಿಸಿದನೆಂದು ಎಂದರೆ ಇಂತಹ ಮನೋವೃತ್ತಿಗಳನ್ನು ಜಯಿಸಿದನು ಎಂದು ತಿಳಿಯಬೇಕು"† ಬುದ್ಧದೇವನ ಜೀವನದ ಈ ಕರಣ ವಿಜಯವೇ 'ಪ್ರಜ್ಞಾಪಾರಮಿತಾ' ಮೊದಲಾದ ಗ್ರಂಥಗಳ ಸಂದೇಶವಾಗಿದೆ. ಸ್ವಾರ್ಥ, ಸಂಕುಚಿತ ಹಾಗೂ ಕಲುಷಿತ ಮನೋವೃತ್ತಿಗಳ ಪರಿಷ್ಕಾರದಿಂದ ಪ್ರಜ್ಞಾಪಾರಮಿತತೆಯನ್ನೂ ಸಂಬುದ್ಧಿಯನ್ನೂ ಪಡೆಯಬಹುದಾಗಿದೆ :

"The chief message of the Pranja Paramita books is that perfect wisdom can be attained only by the complete and total extinction of all self-interest...."‡

ಮಾನವನ ನಿತ್ಯದ ವ್ಯವಹಾರಗಳೆಲ್ಲ ಇಚ್ಛೆ, ಜ್ಞಾನ, ಕ್ರಿಯೆಗಳ ರೂಪದಲ್ಲಿ ಪ್ರಕಟವಾಗುತ್ತವೆ. ಸಾಮಾನ್ಯ ಮಾನವನ ಈ ವ್ಯವಹಾರಗಳು ಸ್ವಾರ್ಥಮೂಲವಾಗಿರುತ್ತವೆ. ಅಂತೆಯೇ, ಅವು ಅಶಾಂತಿಗೆ ಕಾರಣವಾಗುತ್ತವೆ, ದುಃಖಮಯವೆನಿಸುತ್ತವೆ. ಆದರೆ ಮಹಾತ್ಮರ ವ್ಯವಹಾರಗಳು ಕಾಮಮೂಲವಾಗಿರದೆ ಲೋಕಹಿತಭಾವನೆಯಿಂದ ಕೂಡಿ ಮಂಗಳಮಯವಾಗಿರುತ್ತವೆ. ಅವರು ನೋಡಿದುದೆಲ್ಲ ಶಿವಮಯವಾಗಿರುತ್ತದೆ, ಮುಟ್ಟಿದುದೆಲ್ಲ ನಿರಾಮಯವಾಗುತ್ತದೆ, ಮಾಡಿದುದೆಲ್ಲ ಮಹಾಶ್ಚರ್ಯವಾಗುತ್ತದೆ, ನುಡಿದುದೆಲ್ಲ ವೇದವಾಗುತ್ತದೆ. ಸದಿಚ್ಛೆ, ಸುಜ್ಞಾನ; ಸತ್ಕ್ರಿಯೆಗಳೆ ಅವರ ಸಕಲ ಸಂಪದ. ಅದನ್ನೆ ಗೀತೆಯಲ್ಲಿ ದೈವೀ ಸಂಪತ್ ಎಂದು ಹೇಳಿದೆ. ಅಭಯ, ಸಾತ್ತ್ವಿಕವೃತ್ತಿ, ಜ್ಞಾನಯೋಗ, ದಾನ, ಇಂದ್ರಿಯನಿಗ್ರಹ, ಯಜ್ಞ, ಸ್ವಾಧ್ಯಾಯ, ತಪಸ್ಸು, ಸರಳತೆ, ಅಹಿಂಸೆ, ಸತ್ಯ, ಅಕ್ರೋಧ, ತ್ಯಾಗ, ಶಾಂತಿ, ಪಿಸುಣತೆಯಿಲ್ಲದಿರುವುದು, ಭೂತದಯೆ, ಅಲೋಲುಪತೆ, ಮೃದುತ್ವ, ಲಜ್ಜೆ, ಅಚಂಚಲತೆ, ತೇಜಸ್ಸು, ಕ್ಷಮೆ, ಧೃತಿ, ಶುಚಿತ್ವ, ಅದ್ರೋಹ ಮತ್ತು ವಿನಯ ಇವೆಲ್ಲ ಗುಣಗಳು ದೈವೀ ಸಂಪತ್ತನ್ನು ಪಡೆದು ಹುಟ್ಟಿದವನಲ್ಲಿ ಇರುವವೆಂದು ಗೀತೆಯು ಹೇಳುತ್ತದೆ.* ಮಹಾತ್ಮರು ಈ ದೈವೀ ಸಾಧನಸಂಪತ್ತಿಯಿಂದ ಕಾಮಾದಿಗಳನ್ನು ಗೆಲಿದು ನಿರ್ಭಯರಾಗಿರುತ್ತಾರೆ. ಅವರ ಈ ಪಾರಮಾರ್ಥ ವಿಜಯ ನಿಜವಾಗಿಯೂ ಒಂದು ಪವಾಡವೆ. ಮಹಾ

---

† ಭಗವಾನ್ ಬುದ್ಧ (ಮೂಲ ಮರಾಠಿ) ಲೇ: ಶ್ರೀ ಧರ್ಮಾನಂದ ಕೋಸಂಬೀ, ಅನುವಾದಕರು: ಆದ್ಯ ರಂಗಾಚಾರ್ಯ; ಸಾಹಿತ್ಯ ಅಕಾಡಮಿ, ಹೊಸದಿಲ್ಲಿ (ಪ್ರಥಮ ಮುದ್ರಣ-೧೯೫೬) ಪುಟ: ೧೮೧-೧೮೩;

‡ Buddhism (Its Essence and Development) by Edward Coze, Bruno Cassirer : Oxford (Second Edition-1953) Chapture III pp. 94–85.

* ಭಗವದ್ಗೀತೆ ಅಧ್ಯಾಯ ೧೬; ಶ್ಲೋಕಗಳು ೧-೩

CC-0. Jangamwadi Math Collection. Digitized by eGangotri

ತ್ಮರು ಆದರ್ಶ ವೀರರು ಹೊರಗಿನ ಶತ್ರುಗಳೊಡನೆ ಕಾದಿ ಗೆಲ್ಲುವದು ಸುಲಭ. ಆದರೆ ಒಳಗಿನ ವೈರಿಗಳನ್ನು ಗೆದೆಯುವುದು ಬಹು ಕಠಿನ. ಅದನ್ನು ಸಂತರು ಸಾಧಿಸುತ್ತಾರೆ. ಆದುದರಿಂದಲೇ ಅವರು ನಮ್ಮ ದೃಷ್ಟಿಯಲ್ಲಿ ಬಹಳ ಆದರದ ಸ್ಥಾನವನ್ನು ಪಡೆದಿರುತ್ತಾರೆ. ಅವರ ನಡೆನುಡಿಗಳೆಲ್ಲ ನಮಗೆ ಅದ್ಭುತವಾಗಿ ಕಾಣುತ್ತವೆ.

ವೀರಪುರುಷರ ಪರಾಕ್ರಮಗಳ ವರ್ಣನೆಯನ್ನು ಹೇಳುವ ಪ್ರಾಕೃತಗೀತಕ್ಕೆ ಪವಾಡವೆಂದು ಹೆಸರು.§ ಮರಾಠಿಯಲ್ಲಿ ಶಿವಾಜಿ ಮಹಾರಾಜನ ಕಾಲದ (೧೬ ನೆಯ ಶತಮಾನ) ಅಗಿನದಾಸ ಮತ್ತು ಪೇಶವೆ ಕಾಲದ (೧೭ ನೆಯ ಶತಮಾನ) ರಾಮಜೋಶಿ ಮೊದಲಾದ ಕವಿಗಳು ಲಾವಣಿ ಮತ್ತು ಪವಾಡಾಗಳ ರೂಪದಲ್ಲಿ ವೀರ ಗೀತಗಳನ್ನು-ಕಾವ್ಯಗಳನ್ನು ರಚಿಸಿರುವರು. ಕನ್ನಡ ಮತ್ತು ತೆಲುಗಿನಲ್ಲಿಯೂ ಪವಾಡ ಕಾವ್ಯಗಳು ವಿಪುಲವಾಗಿವೆ.* ಇವನ್ನು ಮಹಾತ್ಮರ ಚರಿತ್ರೆ, ಪುರಾಣ ಲೀಲೆಗಳೆಂದು ಕರೆಯುತ್ತೇವೆ. ಪಾಲ್ಕುರಿಕೆಯ ಸೋಮನಾಥ ಮತ್ತು ಭೀಮ ಕವಿಯ ಬಸವಪುರಾಣಗಳಲ್ಲಿ ಪವಾಡಗಳು ವಿಪುಲವಾಗಿ ಬಂದಿವೆ.† ಕನ್ನಡ

---

§ "पवाडा, पोवाडा पुं. पराक्रमी पुरुषाचा वर्णनाचें एक प्राकृत गीतविशेष।" मराठी भाषेचा सरस्वती कोष : विद्याधर वामन भिडे, १९३०.

* ಕಿಟೆಲ್ಲರ ಶಬ್ದಕೋಶದಲ್ಲಿ : ಪವಾಡ PAVADA. A vow of determination to effect an object; fanatical, obstinate, pompous or morvellous words or acts (My : Te; T ಪಾವಾಡ, Mhr. ಪವಾಡಾ, a panegyric or ecomias.ic piece in a kind of recounting the achievements of a warrior, the talents of a scholar, virtues of a person)

† ಚೆನ್ನಬಸವ ಪುರಾಣದಲ್ಲಿ–

'ಪವಾಡಗಳಂ ಮಾಡಿ ಶಿವನ ಕೃಪೆಯಂ ಪಡೆದರ್'

—ಸಂಧಿ ೫೫, ಪದ್ಯ ೪೭

ಕುಮಾರವ್ಯಾಸನ ಭಾರತದಲ್ಲಿ :

ಕೇಳು ಜನಮೇಜಯ ಧರಿತ್ರೀ
ಪಾಲಕರು ನಿಮ್ಮ ಪೂರ್ವನೃ-
ಪಾಲಕರು ಸರಹಸ್ಯಸಾಂಗೋಪಾಂಗ ವಿದ್ಯೆಗಳ
ಸ್ಥೂಲದಲಿ ಸೂಕ್ಷ್ಮದಲಿ ಬಹಳ ವಿ
ಶಾಲದಲಿ ಸಂಕೋಚದಲಿ ಲಘು
ಪಾಳಿಯಲಿ ಹಾರದಲ್ಲಿ ವಿವಿಧಾನುಪ್ರಯೋಗದಲಿ

ಎಡಬಲದ ಮಯಣಾಮ ಹೊಳಹಿನ
ಕಡಲ ತೆರೆವೆರೆಯದತಿ ಬವರಿಯ
ಬಿಡದೆ ದುವ್ವಾಳಿಗಳ ಸೂಟಿಯ ಸರಳ ಸೋಹಿನಲಿ

CC-0. Jangamwadi Math Collection. Digitized by eGangotri

ಪುರಾಣ-ಕಾವ್ಯಗಳು ಪವಾಡಗಳಿಲ್ಲದೆ ಶೋಭಿಸುವುದಿಲ್ಲ. ಈ ಪವಾಡಗಳಿರುವದರಿಂದಲೇ ಜನರು ಈ ಪುರಾಣ-ಕಾವ್ಯಗಳನ್ನು ಓದುವುದು, ಕೇಳುವುದು.

ಮಹಾತ್ಮರ ಈ ಅದ್ಭುತ ಪವಾಡಗಳನ್ನು ಅವರ ಚರಿತೆಗಳಲ್ಲಿ ಕಾಣಬಹುದಾಗಿದೆ. ಭಗವಾನ್ ಬುದ್ಧನ ಲೀಲೆಗಳ ಸಾರ ಸಂಗ್ರಹವನ್ನು ಶ್ರೀ ಧರ್ಮಾನಂದ ಕೋಸಂಬಿಯವರು ಸಂಗ್ರಹಿಸಿದ್ದಾರೆ. ಬುದ್ಧನ ಚರಿತೆಯಲ್ಲಿ ಜನ್ಮಜನ್ಮಾಂತರದ ಲೀಲೆಗಳು ಇವೆ. ಅವನ್ನು ಜಾತಕಗಳೆಂದು ಕರೆಯುತ್ತಾರೆ. ಮಹಾತ್ಮರು ಮಾನವರಿಗಾಗಿ ಅನೇಕ ಕಷ್ಟನಷ್ಟಗಳನ್ನು ಅನುಭವಿಸುತ್ತಾರೆ. ದುಷ್ಟರು ಭೌತಿಕ ಬಲ ಪ್ರಯೋಗಮಾಡಿ ಪರಿ ಪರಿಯಿಂದ ಅವರನ್ನು ಪೀಡಿಸುತ್ತಾರೆ. ಆದರೂ ಅವರು ತಮ್ಮ ಆತ್ಮಬಲದಿಂದ ಅವನ್ನು ಜಯಿಸುವುದುಂಟು.

ಬುದ್ಧದೇವನಿಗೆ ದೇವದತ್ತನು ಬಂಧುವಾಗಿದ್ದರೂ ಪ್ರತಿದ್ವಂದಿಯಾಗಿರುತ್ತಾನೆ. ಅಜಾತಶತ್ರು ರಾಜನು ದೇವದತ್ತನ ಮಾತು ಕೇಳಿ ಅನೇಕ ರೀತಿಯಿಂದ ಬುದ್ಧದೇವನನ್ನು ಪೀಡಿಸುತ್ತಾನೆ. ಕೊಲ್ಲಲೆಂದು ಕಳಿಸಿದ ಕೊಲೆಗಡುಕರು ಬುದ್ಧದೇವನ ಸಂಘದಲ್ಲಿ ದೀಕ್ಷಿತರಾಗುತ್ತಾರೆ. ದೇವದತ್ತನು ಗೃಧ್ರಕೂಟ ಬೆಟ್ಟದ ಎತ್ತರದಿಂದ ಬುದ್ಧದೇವನ ಮೇಲೆ ಬಂಡೆಯೊಂದನ್ನುಉರುಳಿಸುತ್ತಾನೆ. ಅದರಿಂದಲೂ ಬುದ್ಧನಿಗೆ ಏನೂ ಪ್ರಾಣಾಪಾಯವಾಗಲಿಲ್ಲ. ಭಗವಂತ ಬುದ್ಧನು ರಾಜಗೃಹಕ್ಕೆ ಭಿಕ್ಷಾಟನೆಗೆಂದು ಹೋದಾಗ ದೇವದತ್ತನು ಮದವೇರಿದ ಆನೆಯೊಂದನ್ನು ಭಗವಂತನ ಮೈಮೇಲೆ ಏರಿ ಹೋಗುವಂತೆ ಮಾಡುತ್ತಾನೆ. ಆ ಆನೆಯು ಭಗವಂತನ ಪಾದ ಧೂಳಿಯನ್ನು ತನ್ನ ತಲೆಯ ಮೇಲಿಟ್ಟುಕೊಂಡು ವಿನೀತವಾಗಿ ಮರಳುತ್ತದೆ. ಹೀಗೆ ಸಚರಾಚರ ಪ್ರಾಣಿಗಳೂ ಬುದ್ಧದೇವನ ಕರುಣಾಮಯ ಪ್ರಭಾವದಲ್ಲಿ ತಮ್ಮ ದುಷ್ಟಪ್ರವೃತಿಗಳನ್ನು ಕಳೆದುಕೊಂಡು ಸಾತ್ತ್ವಿಕವೃತ್ತಿಯುಳ್ಳವಾಗುತ್ತದೆ. ಇಂತಹ ಅನೇಕ ಪವಾಡಗಳು ಬುದ್ಧದೇವನ ಚರಿತೆಯಲ್ಲಿ ಓದುಗರ ಮನವನ್ನು ಸೆಳೆಯುತ್ತವೆ. ಬುದ್ಧದೇವನು ತನ್ನ ಕೃಪಾದೃಷ್ಟಿಯಿಂದ ಅಂಗುಲಿಮಾಲನೆಂಬ ಕ್ರೂರನನ್ನು ವಿನೀತನನ್ನಾಗಿ ಮಾಡುತ್ತಾನೆ. ಅಂಗುಲಿಮಾಲನು ಕೊಲೆಸುಲಿಗೆಗಳಿಂದ ಜನರನ್ನು ಹಿಂಸಿಸುತ್ತಿದ್ದವನು. ಅವನನ್ನು ಸೋಲಿಸುವದು ರಾಜನ ಸೇನೆಗೂ ಸಾಧ್ಯವಾಗಿರಲಿಲ್ಲ. ಅಹಿಂಸೆಯಿಂದ ಮೈತ್ರಿಯಿಂದ, ಹಿಂಸೆಯನ್ನು ದ್ವೇಷವನ್ನು ಮಾರ್ಪಡಿಸುವ ಈ ಅದ್ಭುತ ಕಾರ್ಯ ಮಹಾತ್ಮರದು. ಭಗವಾನ್ ಬಸವೇಶ್ವರನ ಜೀವನವು

---

ಕಡುಗಲಿಗೇರಾಟದಲಿ ಮಿಗೆ
ಝುಡಿ ಪವಾಡ ಪೃಥಾಯತಿಕೆಗಿದು
ಪಡಿಯ ನಳ ರೇವಂತರೆಂದುದು ರಾವುತಿಕೆಗಳಲಿ

—ಆದಿಪರ್ವ, ಸಂಧಿ ೭, ಪದ್ಯ ೧-೩

CC-0. Jangamwadi Math Collection. Digitized by eGangotri

ಇಂತಹೆ ಲೀಲೆಗಳ ಭಂಡಾರವಾಗಿದೆ. ಅವನ ನಾಲ್ವತ್ತೆರಡು ಪವಾಡಗಳು ಪುರಾಣಗಳಲ್ಲಿ ಪ್ರಸಿದ್ಧವಾಗಿವೆ. ಬದನೆಕಾಯಿಗಳನ್ನು ಕೊರಳಲ್ಲಿ ಕಟ್ಟಿಕೊಂಡು ನಡುರಾತ್ರಿಯಲ್ಲಿ ಕಳ್ಳತನಕ್ಕೆಂದು ಬಂದವರನ್ನು ತನ್ನ ವಿನಯದ ಮಾತುಗಳಿಂದ ದಯಾಪೂರಿತ ದೃಷ್ಟಿಯಿಂದ ಶರಣರನ್ನಾಗಿ ಮಾಡುವ ಕಾರ್ಯ ಎಂತಹ ಅದ್ಭುತವಾದುದು ? ಪತಿತರನ್ನು ಪಾವನರನ್ನಾಗಿ ಮಾಡುವ ಕಾರ್ಯ ಶಿವಶರಣರದು.

ಮಹಾತ್ಮಾ ಯೇಸುವಿನ ಜೀವನದಲ್ಲಿ ಇಂತಹೆ ದಿವ್ಯ ಘಟನೆಗಳು ಅನೇಕವಾಗಿವೆ. ಇವನ್ನು Miracles ಎಂದು ಕರೆಯಲಾಗಿದೆ. ಬೈಬಲಿನ ಹೊಸ ಒಡಂಬಡಿಕೆ (New Testament)ಯಲ್ಲಿ ಯೇಸುವಿನ ಲೀಲೆಗಳು ಬಹು ಮಾರ್ಮಿಕವಾಗಿವೆ. ಒಂದು ದಿನ ಸಾವಿರಾರು ಭಕ್ತರು ಯೇಸುವನ್ನು ಹಿಂಬಾಲಿಸಿ ಬಂದರು. ಸಂಜೆಯಾಯಿತು. ಯೇಸುವಿನ ಶಿಷ್ಯರು ಅವರಿಗೆಲ್ಲ ಊಟಕ್ಕೆ ನೀಡುವದೆಂತು ಎಂದು ಯೋಚನೆಯಲ್ಲಿದ್ದರು; ಯೇಸುವಿನಲ್ಲಿ ಅರಿಕೆ ಮಾಡಿಕೊಂಡರು. ಯೇಸುವು ಶಿಷ್ಯರ ಹತ್ತಿರವಿದ್ದ ಕೆಲವು ರೊಟ್ಟಿಯ ತುಣುಕುಗಳನ್ನು ತರಿಸಿ ಅವನ್ನು ಕೈಯಿಂದ ಮುಟ್ಟಿ ಹಂಚಲು ಅಪ್ಪಣೆ ಮಾಡಿದನು. ಒಂದೊಂದು ತುಣುಕಿನಿಂದಲೇ ಎಲ್ಲರೂ ತೃಪ್ತಿಪಟ್ಟರಂತೆ! ಒಂದು ದಿನ ಉಪದೇಶ ಮಾಡಿ ಬೆಟ್ಟದಿಂದ ಇಳಿಯುವಾಗ ಮಹಾರೋಗಿಯೊಬ್ಬನು ಯೇಸುವಿನ ಪಾದಗಳಲ್ಲಿ ಬಿದ್ದು ದೈನ್ಯದಿಂದ ಪ್ರಾರ್ಥಿಸಿದನು. ಯೇಸುವು ಅವನಿಗೆ ಅಭಯವಿತ್ತು ಹಸ್ತವನ್ನು ಮುಟ್ಟಿಸಿದನು. ಆ ರೋಗಿಯು ರೋಗವೆಲ್ಲ ಹೋಗಿ ನಿರ್ಮಲನಾದನು.§

ಗ್ರೀಕದೇಶದ ದಾರ್ಶನಿಕರನ್ನು ಮತ್ತು ಅವರ ರೋಮನ್ ಅನುಯಾಯಿಗಳನ್ನು ಬಿಟ್ಟರೆ ಇಡಿಯ ಯುರೋಪದ ಎಲ್ಲ ಪ್ರಾಚೀನ ಮಹಾತ್ಮರ ಜೀವನದಲ್ಲಿ ಈ ಪವಾಡಗಳನ್ನು ಕಾಣುತ್ತೇವೆ. ಪ್ರಕೃತಿಯು ಕೆಲವು ತ್ರಿಕಾಲಾಬಾಧಿತ ನಿಯಮಗಳ ಕ್ರಮಕ್ಕೊಳಪಟ್ಟಿದೆಯೆಂಬ ದಾರ್ಶನಿಕ ವಿಚಾರ ಕ್ರೈಸ್ತನದಾಗಿರಲಿಲ್ಲ. ಶ್ರದ್ಧೆ ಮತ್ತು ಪ್ರಾರ್ಥನೆಯಿಂದ ಮಾನವನು ಪ್ರಕೃತಿಯ ಮೇಲೆ ನಿಯಾಮಕ ಶಕ್ತಿಯನ್ನು ಪಡೆಯಬಲ್ಲನೆಂಬ ಆತ್ಮವಿಶ್ವಾಸ ಅವನಲ್ಲಿ ಬೇರೂರಿದ್ದಿತು.* ಈ ದೈವೀ ಶಕ್ತಿಯಿಂದ, ಸದಿಚ್ಛೆಯ ಬಲದಿಂದ, ಪ್ರಕೃತಿಯ ನಿಯಮಗಳೇ ಒಂದೊಂದು ಸಲ ವಿಪರ್ಯಸ್ತವಾಗಿ ಕಾಣಬಹುದು. ಯೇಸುಕ್ರಿಸ್ತನ ಕಾಲದಲ್ಲಿ ಜನರು ಬಹಳ ಅಂಧಶ್ರದ್ಧೆಯಲ್ಲಿದ್ದರು, ಬಹಳ ಅಸಂಸ್ಕೃತ ಸ್ಥಿತಿಯ

§ "And Jesus put forth his hand, and touched him, saying, I will; be thou clean. And immediately his leprosy was cleansed." –Bible (New Testament), Miracles of healing, St. Matthew, 8, 9.

* Renan's Life of Jesus. Translated, with an introduction, by William G. Hutchison, Chapture XVI, Miracles, pp. 162–163.

CC-0. Jangamwadi Math Collection. Digitized by eGangotri

ಲ್ಲಿದ್ದರು. ಧರ್ಮದ ಹೆಸರಿನಲ್ಲಿ ಅನೇಕರು ಅವರ ಅಂಧಶ್ರದ್ಧೆಗೆ ಪ್ರಚೋದನೆ ಯನ್ನಿತ್ತಿದ್ದರು. ಕ್ರೈಸ್ತನ ಮಾತೃಭೂಮಿಯಾದ ಪೆಲಿಸ್ಟೈನದ ಜನರಿಗೆ ಗ್ರೀಕರ ವೈದ್ಯವಿಜ್ಞಾನವಿನ್ನೂ ತಿಳಿದಿರಲಿಲ್ಲ. ಆದುದರಿಂದ ಮಾಟಗಾರರು ಅನೈಸರ್ಗಿಕವಾದ, ಕಠೋರವಾದ, ಅಮಾನವೀಯ ಅನೇಕ ರೀತಿಗಳಿಂದ ರೋಗಿ ಗಳನ್ನು ಗುಣಪಡಿಸುವ ಮತ್ತು ಮಾಟಮಂತ್ರಗಳಿಂದ ದೆವ್ವಗಳನ್ನು ಬಿಡಿಸುವ ರೂಢಿಗಳನ್ನು ನೋಡಿ ಕ್ರೈಸ್ತನಿಗೆ ಕರುಣೆ ಬಂದಿತು. ಶತಮಾನಗಳಿಂದ ಜನ ತೆಯಲ್ಲಿ ರೂಢವಾಗಿದ್ದ "ಮಾನವನು ದೇವರ ಕೈಗೊಂಬೆ. ದೈವದ ಮುಂದೆ ಅವನ ಆಟನೇನೂ ನಡೆಯದು." ಎಂಬ ಹೀನ ಭಾವನೆಯನ್ನು ತೊಡೆದು ಹಾಕಿ ಕ್ರೈಸ್ತನು "ಮಾನವ! ನೀನು ಜಗವನ್ನು ಬೆಳಗುವ ದೀಪವಾಗಿದ್ದೀ."* ಎಂಬ ಆತ್ಮವಿಶ್ವಾಸವನ್ನು ಅವರಲ್ಲಿ ಹುಟ್ಟಿಸಿದನು. ಅವನ ಬೆಟ್ಟದ ಮೇಲಿನ ಉಪದೇಶವು ನಿರಾಶರಾದ ಮಾನವರಲ್ಲಿ ಆಶೆಯ ಪ್ರಕಾಶವನ್ನು ಮೂಡಿಸಿತು :

Blessed are the poor in spirit : for theirs is the kingdom of heaven.

× × ×

Blessed are the merciful : for they shall obtain mercy.

Blessed are the pure in heart : for they shall see God.§

ದೀನದುಃಖಿಗಳಿಗಾಗಿಯೇ ದೇವನ ರಾಜ್ಯವಿರುವದು. ದೀನರ ಮೇಲೆ ದಯದೋರಿದವರಿಗೇ ಅವನ ಕರುಣೆ ದೊರೆಯುವುದು. ಪವಿತ್ರಾತ್ಮರು ಮಾತ್ರ ದೇವನನ್ನು ಕಾಣುವರೆಂದು ಯೇಸುವು ಉಪದೇಶಿಸಿದಾಗ ಜರುಸಲೇಮದ ಸಂತ್ರಸ್ತ ಜನರಿಗೆ ಕ್ರೈಸ್ತನ ರೂಪದಲ್ಲಿ ಭಗವಂತನೇ ಅವತರಿಸಿದಂತಾಯಿತು. ಅವ ನನ್ನು ಅವರು ದೇವದೂತನೆಂದು ಪವಾಡಪುರುಷನೆಂದು ಕರೆದು ಹಿಂಬಾಲಿಸಿದರು.

ಯೇಸುವಿನ ಪವಾಡಗಳೆಲ್ಲ ಸಾಮಾನ್ಯವಾಗಿ ಅವನ ದಯಾಳುಭಾವವನ್ನು ವ್ಯಕ್ತಮಾಡುತ್ತವೆ. ಅವನ ಲೀಲೆಗಳೆಲ್ಲ ರೋಗಿಗಳನ್ನು ಗುಣಪಡಿಸುವ, ದೀನ ದಲಿತರಿಗೆ ಅಭಯ ನೀಡುವ ಜನಸೇವೆಯ (Miracles of healing) ರೂಪ ದಲ್ಲಿವೆ. ದೀನರಿಗೆ ಬೇಕಾಗಿರುವದು ಧನವಲ್ಲ. ಅವರು ಬೇಡುವದು ಸದ್ಭಾವ. ರೋಗಿಯೊಬ್ಬ ಬಹು ಬೇನೆಯಿಂದ ಬಳಲಿದಾಗ, ಅವನಿಗೆ ಸಾಂತ್ವನೆಯ ಕಳ

* "Ye are the light of the world." Bible, St. Matthew, 5, 14.

§ Bible, St. Matthew, ( Sermon on the mount) 5 : 3, 7. 8,

CC-0. Jangamwadi Math Collection. Digitized by eGangotri

ಕಳಿಯ ಅಭಯವಾಣಿ ಸಂಜೀವಿನಿ ಔಷಧಕ್ಕಿಂತಲೂ ಹೆಚ್ಚಿನ ಶಕ್ತಿಯನ್ನು ಕೊಡ ಬಲ್ಲುದು. ರೋಗಿಗಳಿಗೆ ದಯಾಭಾವದ ಮಾನಸಿಕ ಉಪಚಾರ ಹೆಚ್ಚು ನೆಮ್ಮದಿ ಯನ್ನುಂಟು ಮಾಡುವದು. ಒಮ್ಮೊಮ್ಮೆ ರಾಜವೈದ್ಯರ ದಿವ್ಯೌಷಧಿಗಳು, ಪದವೀಧರ ಡಾಕ್ಟರರ ಹೆಚ್ಚಿನ ಚಿಕಿತ್ಸೆಗಳೂ ರೋಗಿಯನ್ನು ಗುಣಪಡಿಸಲಾ ರವು. ಆದರೆ ದಾಯಿಯ ದಯಾಪೂರಿತ ನಡೆನುಡಿಗಳಿಂದ ಅದೇ ರೋಗಿಯು ಬೇಗ ಗುಣಮುಖನಾಗುತ್ತಾನೆ. ಸದ್ಭಾವದ ಪ್ರಭಾವವಿದೆಂದು ಇಂದಿನ ಮಹಾ ಮಹಾ ವಿಜ್ಞಾನಿಗಳೂ ಒಪ್ಪುತ್ತಾರೆ. "ಎಲ್ಲರೂ ಸುಖವನ್ನು ಕಾಣಲಿ. ಯಾರೂ ದುಃಖವನ್ನು ಹೊಂದದಿರಲಿ" "**सर्वे भद्राणि पश्यन्तु मा कश्चित् दुःखमाप्नुयात्**" ಎಂಬ ಉಪನಿಷತ್ಕಾಲದ ಋಷಿಗಳ ಸ್ವಸ್ತಿಪಾಠದಲ್ಲಿ ಈ ಸದ್ಭಾವ ಒಡ ಮೂಡಿದೆ. ಈ ಸಂಸ್ಕೃತಿ ಪೌರ್ವಾತ್ಯ ದೇಶದ ಹಿರಿಮೆ. ಕ್ರೈಸ್ತನು ಇಂತಹ ಸಂಸ್ಕೃತಿಯ ಸಂಸ್ಕಾರವನ್ನು ಪ್ರಸಾರದಲ್ಲಿ ತಂದ ಪೌರ್ವಾತ್ಯ ಮಹಾತ್ಮನು. ಕ್ರೈಸ್ತನು ರಾಜಕೀಯದಿಂದ ದೂರವಿದ್ದು ಜನರ ಸೇವೆಯನ್ನು ಮಾಡುವದ ಕ್ಕಾಗಿ ತನ್ನ ಜೀವನವನ್ನ ಮುಡುಪಾಗಿರಿಸಿದ ಯುಗಾವತಾರಿ ಮಹಾಪುರುಷನು. ಮಕ್ಕಳಂತಹ ಮುದ್ದು ಸ್ವಭಾವದ ಜನರ ಗುಂಪೇ ಅವನಿಗೆ ಸಾಮ್ರಾಜ್ಯವಾಗಿತ್ತು.

ಇಸ್ಲಾಮಧರ್ಮದ ಸಂಸ್ಥಾಪಕನಾದ ಮಹಮ್ಮದ ಪೈಗಂಬರನು ವಿಶ್ವದ ಮಹಾಪುರುಷರಲ್ಲಿ ಒಬ್ಬನಾಗಿದ್ದಾನೆ. ಅರಬ ದೇಶದಲ್ಲಿಯ ಜನರು ಅನಾಗರಿಕರೂ ಅಸಂಸ್ಕೃತರೂ ಆಗಿದ್ದರು. ಅವರಿಗೆ ನಿಜವಾದ ಧರ್ಮದ ತತ್ವಗಳನ್ನು ಹೇಳಿ ಅವರ ಮನವೊಲಿಸಲು ಮಹಮ್ಮದನು ಬಹುವಾಗಿ ಪ್ರಯಾಸಪಟ್ಟನು, ಅನೇಕ ತೊಂದರೆಗಳನ್ನು ಅನುಭವಿಸಿದನು. ಆದರೂ ಭಗವಂತನ ಉಪದೇಶಗಳನ್ನು ಜನತೆಯಲ್ಲಿ ಪ್ರಸಾರ ಮಾಡುವ ಕಾರ್ಯವನ್ನು ಬಿಡಲಿಲ್ಲ. ಮಹಮ್ಮದನಲ್ಲಿ ಭಗವದ್ಭಕ್ತಿ, ಭೂತದಯೆ, ನ್ಯಾಯನಿಷ್ಠುರತೆ ಮೊದಲಾದ ದಿವ್ಯ ಗುಣಗಳು ಅನುಪಮವಾಗಿದ್ದವು. ಅವನ ಸರಳವೃತ್ತಿ, ದಯಾಳುತೆ ಮತ್ತು ಹಿತಮಿತಭಾಷೆಯ ಪ್ರಭಾವದಿಂದ ಇಡಿಯ ಅರಬ ಜನಾಂಗವೇ ಸುಸಂಸ್ಕೃತವಾಯಿತು. ಒಮ್ಮೆ ಯುದ್ಧ ದಲ್ಲಿ ಶತ್ರುಗಳನ್ನು ಶಪಿಸುವಂತೆ ಅವನ ಅನುಯಾಯಿಗಳು ಮಹಮ್ಮದನಿಗೆ ಪ್ರೇರಣೆ ಮಾಡಲು "ನಾನು ಶಪಿಸುವದಕ್ಕಾಗಿ ಈ ಲೋಕಕ್ಕೆ ಬಂದಿಲ್ಲ; ಮಧುರ ವಚನಗಳನ್ನಾಡಿ ಜನರನ್ನಾಶೀರ್ವದಿಸುವದಕ್ಕೋಸ್ಕರ ಭಗವಂತನು ನನ್ನನ್ನಿಲ್ಲಿಗೆ ಕಳುಹಿಸಿದ್ದಾನೆ"* ಎಂದು ಹೇಳಿ ಉದ್ರಿಕ್ತರಾದ ಅನುಯಾಯಿಗಳಿಗೆ ಶಾಂತ ರಾಗಲು ಉಪದೇಶಿಸಿದನು. ದಯಾಳು ಮಹಮ್ಮದನು ದುಃಖಿಗಳನ್ನು ಕಂಡು ಮರುಗಿ ಅವರಿಗೆ ಎಲ್ಲ ತೆರನಾದ ಸಹಾಯವನ್ನು ಸಲ್ಲಿಸುತ್ತಿದ್ದನು. ತಾನು

---

*ಪೈಗಂಬರ ಮಹಮ್ಮದನು: ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ., ೧೯೩೦, ಹದಿಮೂರನೆಯ ಅಧ್ಯಾಯ (ಮಹಮ್ಮದನ ರೂಪವೂ ಗುಣಗಳೂ) ಪುಟ ೧೧೫;

CC-0. Jangamwadi Math Collection. Digitized by eGangotri

ದಿನದಲ್ಲಿ ಸಂಪಾದಿಸಿದುದೆಲ್ಲವನ್ನು ಸಾಯಂಕಾಲ ಬಡವರಿಗೆ ದಾನ ಮಾಡಿ ಬಿಡುತ್ತಿದ್ದನು. ನಾಳೆಗೆಂದು ಚಿಂತಿಸುತ್ತಿರಲಿಲ್ಲ, ಕೂಡಿಡುತ್ತಿರಲಿಲ್ಲ. "ಊಹೆದ್ ಪರ್ವತವೇ ಚಿನ್ನವಾಗಿ ನನ್ನೆದುರು ರಾಸಿ ಬಿದ್ದರೆ ನಾನು ನಿರಾತಂಕವಾಗಿ ಅದನ್ನು ಬಡವರೆಲ್ಲರಿಗೂ ಆನಂದದಿಂದ ಹಂಚಿಬಿಟ್ಟೇನು; ಅಷ್ಟು ಚಿನ್ನವೂ ನನ್ನಲ್ಲಿ ಮೂರು ದಿನಗಳಿಗಿಂತ ಹೆಚ್ಚಾಗಿ ಉಳಿಯಲಾರದು"§ ಎಂದು ಹೇಳುತ್ತಿದ್ದನಂತೆ. ಒಮ್ಮೆ ಒಬ್ಬ ಮನುಷ್ಯನು ನೀರಡಸಿ ಬಳಲುತ್ತಿದ್ದ ನಾಯಿಗೆ ಬಾವಿಯಿಂದ ನೀರು ಸೇದಿ ಕುಡಿಸಿದ್ದನ್ನು ಕಂಡು "ಭಗವಂತನ ಸೃಷ್ಟಿಗೆ ಸೇರಿದ್ದ ಆ ಮೂಕ ಪ್ರಾಣಿಗೆ ಕರುಣೆಯನ್ನು ತೋರಿಸಿದ್ದಕ್ಕಾಗಿ ಆತನಿಗೆ ಸ್ವರ್ಗಲೋಕದಲ್ಲಿ ಮನ್ನಣೆ ದೊರೆಯುವದು." ಎಂದು ಹೇಳಿದನಂತೆ.† ದೀನರಾದ ವಿಧವೆಯರಲ್ಲಿ ಅನಾಥ ಬಾಲಕರಲ್ಲಿ, ರೋಗಿಗಳಲ್ಲಿ ಮಹಮ್ಮದನಿಗೆ ವಿಶೇಷವಾದ ಅನುಕಂಪೆಯಿದ್ದಿತು. ಕುರಾನಿನಲ್ಲಿ ಮಹಮ್ಮದನು "ಮತಬಾಹಿರನು ಯಾವನೆಂಬುದನ್ನು ಬಲ್ಲೆಯಾ? ಅನಾಥರಾದ ಬಾಲಕರ ವಿಷಯದಲ್ಲಿ ಯಾವನು ಕ್ರೌರ್ಯವನ್ನು ತೋರಿಸುವನೋ, ದೀನರಿಗೆ ತಾನು ಸಹಾಯ ಮಾಡದೆ, ಸಹಾಯ ಮಾಡುವಂತೆ ಇತರರನ್ನೂ ಪ್ರೇರಿಸದೆ ಯಾವನು ಇರುವನೋ ಅವನೇ ಮತಬಾಹಿರನು."‡ ಎಂದು ಹೇಳಿರುವ ವಚನ ಅವನ ಘನತೆಯನ್ನು ಎತ್ತಿ ತೋರಿಸುತ್ತದೆ.. "ಯಾರು ಪಾಪದೂರರಾಗಿ ನಿರಹಂಕಾರವೃತ್ತಿಯಿಂದ ಜೀವಿಸುವರೋ, ಅವರು ಮಾತ್ರವೇ ನನ್ನ ಸಮೀಪಕ್ಕೆ ಬರುವರು" ಎಂಬ ಕುರಾನಿನ ಭಗವದುಕ್ತಿಯಲ್ಲಿ ಮಹಮ್ಮದನಿಗೆ ಪೂರ್ಣ ವಿಶ್ವಾಸವಿದ್ದಿತು. ಅಂತೆಯೇ ಅವನು ನಿತ್ಯವೂ ತಪ್ಪದೇ ಭಗವಂತನನ್ನು ಧ್ಯಾನಿಸುತ್ತಿದ್ದನು. ದಿನಕ್ಕೆ ಐದು ಸಲ ನಮಾಜು ಮಾಡಲು ತಪ್ಪುತ್ತಿರಲಿಲ್ಲ. ತನ್ನ ಜೀವನದ ಕೊನೆಯ ಗಳಿಗೆಯಲ್ಲಿ ಜ್ವರದ ಬಾಧೆಯಿಂದ ನಿತ್ರಾಣನಾಗಿದ್ದರೂ ತಲೆಗೆ ಒದ್ದೆಯ ಬಟ್ಟೆಯನ್ನು ಬಿಗಿದುಕೊಂಡು ನಮಾಜು ಮಾಡಲು ಮಸೀದಿಗೆ ಹೋಗಿ ಭಗವಂತನಲ್ಲಿ ಕೊನೆಯ ಪ್ರಾರ್ಥನೆಯನ್ನು ಸಲ್ಲಿಸಿದನಂತೆ. ಮಹಮ್ಮದನ ದೈವಭಕ್ತಿ ಮತ್ತು ನಿರ್ಮಲವಾದ ಅಂತಃಕರಣ, ದಯಾಳುತನ ಮೊದಲಾದ ಸದ್ಗುಣಗಳನ್ನು ಕಂಡೇ ಅರಬರೆಲ್ಲ ತಮ್ಮ ದುರ್ವೃತ್ತಿಗಳನ್ನು ಬಿಟ್ಟು ಇಸ್ಲಾಂ ಧರ್ಮಾನುಯಾಯಿಗಳಾದರು. ಮಹಮ್ಮದನ ಸಾಧು ಜೀವನವೇ ಒಂದು ಮಹಾಪವಾಡವೆಂದು ಹೇಳಬಹುದು.

ವಿಶ್ವದ ಮಹಾತ್ಮರೆಲ್ಲರೂ ದಯೆಯೆ ಮೂಲವಾದ ಧರ್ಮದ ಜಾಡಿನಲ್ಲಿಯೆ ನಡೆದು ಮಾನವ ಕುಲಕೋಟಿಯನ್ನು ಉದ್ಧರಿಸಲು ಪ್ರಯತ್ನಿಸಿದ್ದಾರೆ.

---

§ಪೈಗಂಬರ ಮಹಮ್ಮದನು : ಸಿ. ಕೆ. ವೆಂಕಟರಾಮಯ್ಯ, ಎಂ. ಎ., ಎಲ್ ಎಲ್ ಬಿ. ೧೯೩೦, ಹದಿಮೂರನೆಯ ಅಧ್ಯಾಯ (ಮಹಮ್ಮದನ ರೂಪವೂ ಗುಣಗಳೂ) ಪುಟ: ೧೧೭

† ಅದೇ, ಪುಟ: ೧೧೯ ‡ ಅದೇ;

CC-0. Jangamwadi Math Collection. Digitized by eGangotri

ಅವರ ಸಾತ್ವಿಕ ಸಾಧನಾಮಯ ಜೀವನದಲ್ಲಿ ತಾವಾಗಿಯೇ ಸಾಮಾನ್ಯಮಾನವನಲ್ಲಿಲ್ಲದ ಅಪೂರ್ವ ಘಟನೆಗಳು ನಡೆದುದುಂಟು, ನಡೆಯುವದುಂಟು. ಅವನ್ನೆ ನಾವು ಮಹಾತ್ಮ್ಯ, ಲೀಲೆ, ಪವಾಡವೆಂದು ಕರೆಯುತ್ತೇವೆ. ಅವು ಜನರಲ್ಲಿ ಸಾತ್ವಿಕಭಾವವನ್ನೂ ನಿಷ್ಠೆಯನ್ನೂ ಮೂಡಿಸಲು ಸಹಕಾರಿಯಾಗುತ್ತವೆ.

ಇಂತಹ ಮಹಾತ್ಮರ ಮಾಲಿಕೆಯಲ್ಲಿ ಹಾವೇರಿಯ ಲಿಂ. ಪೂಜ್ಯ ಶ್ರೀ ಶಿವಬಸವ ಮಹಾಸ್ವಾಮಿಗಳವರು ಪ್ರಕಾಶಮಾನವಾಗಿದ್ದಾರೆ. ಅವರು ನಿಜವಾದ ವೀರಶೈವ ಮಹಾಶಿವಯೋಗಿಗಳು.

ವೀರಶೈವವು ವಿಶ್ವಧರ್ಮಗಳಲ್ಲಿ ಒಂದಾಗಿದೆ. ಶಿವಾಗಮಗಳಲ್ಲಿ ವೀರಶೈವನ ಲಕ್ಷಣಗಳನ್ನು ಸವಿಸ್ತಾರವಾಗಿ ಸಕ್ರಮವಾಗಿ ಹೇಳಿದೆ: ಪಿಸುಣತೆ, ಮಾತ್ಸರ್ಯ, ದ್ರೋಹ, ಪರಪೀಡನಗಳಿಲ್ಲದಿರುವುದೇ ವೀರಶೈವ ಸದಾಚರಣೆಯು. ಅವನು ಪ್ರಾಣ ಹೋದರೂ ಪರಹಿಂಸೆಗೆಂದು ಆಯುಧಗಳನ್ನು ಮುಟ್ಟಲಾರನು.§ ದೀಕ್ಷೆಯನ್ನು ಪಡೆದು ಲಿಂಗಧಾರಿಯಾದ ವೀರಶೈವನು ಕುತ್ಸಿತವಾದ, ನೀಚವಾದ, ಶುಷ್ಕವಾದ ಕರ್ಮಗಳನ್ನು ಆಚರಿಸನು* ವೀರಶೈವ ಸದಾಚಾರದಲ್ಲಿ ಭೂತದಯೆಯೆ ಮೂಲವಾಗಿದೆ. ಪ್ರಾಣಿಹಿಂಸೆಯನ್ನು ಮಾಡದಿರುವವನೇ ವೀರಶೈವನೆಂದು ಹೇಳಿದೆ.† ವೀರಶೈವಮತಾನುಯಾಯಿಯಾಗಿ ಪ್ರಾಣಹಿಂಸೆಯನ್ನು ಮಾಡುವವನು ಈ ಮರ್ತ್ಯಲೋಕದಲ್ಲಿ ಜೀವಿಸಿರುವಾಗಲೇ ಚಾಂಡಾಲನೆಂದು ಅಪಕೀರ್ತಿ ಪಡೆಯುವನು. ಸತ್ತಮೇಲೆ ನರಕವನ್ನು ಅನುಭೋಗಿಸುವನೆಂದು ವಿಧಿಸಿದೆ.‡ ಭಕ್ತಿ, ಕರ್ಮಕ್ಷಯ, ಬುದ್ಧಿ, ವಿಚಾರ, ದರ್ಪಸಂಕ್ಷಯ, ಸಮ್ಯಕ್ ಜ್ಞಾನ ಇವು ಶಿವನಿಗೆ ಪ್ರಿಯವಾದ ಉಪಾಂಗ ಷಟ್‌ಸ್ಥಲಗಳಾಗಿವೆ.÷ ಈ

---

§ न पैशुन्यं न मात्सर्यं न द्रोहं नापि पीडनम् ।
न स्पृशेदायुधं क्वापि प्राणैः कण्ठगतैरपि ॥ ९१ ॥

—पारमेश्वरतन्त्र, वारदग्रन्थमाला, १९०५; पटल, ५;

* दीक्षितो वीरशैवायां दीक्षायां धृतलिंगकः ॥ ७८ ॥
न नीचमारेत् कर्म नायासं नापि कुत्सितम् ।..... ॥ ५७ ॥

—पारमेश्वरतन्त्र, पटल ५;

† न प्राणिपीडनपरो वीरशैवः स उच्यते ॥ ३१ ॥

—अदे, पटल ९;

‡ यः कुर्याद् वीरशैवस्थः पीडनं प्राणिनां भुवि ।
स जीवन्नेव चाण्डालो मृतो नरकमश्नुते ॥ ७१ ॥

÷ भक्तिः कर्मक्षयो बुद्धिः विचारो दर्पसंक्षयः ।
सम्यग् ज्ञानमिति प्रोक्तं स्थलषट्कं मम प्रियम् ॥ ४१ ॥

CC-0. Jangamwadi Math Collection. Digitized by eGangotri

ಶಿವಮತದ ಜ್ಞಾನಮಾತ್ರದಿಂದಲೇ ಪಾಪಿಗಳೂ ಕೂಡ ಮುಕ್ತಿಪಡೆಯುವರು. ಏಕೆಂದರೆ, ಶೈವಮತವನ್ನು ಹೊಂದಬೇಕು, ಅದರಲ್ಲಿಯೂ ವೀರಶೈವಾಚರಣೆಯಲ್ಲಿರಬೇಕು, ಭಕ್ತಿ ಮತ್ತು ಭೂತದಯೆಗಳ ಹೊಂದಿರಬೇಕು. ಶೈವನ್ನು ಕೈವಲ್ಯವು ಈ ತೆರನಾಗಿ ನಾಲ್ಕು ವಿಧವಾಗಿದೆ.* ದಯಾಭಾವನೆ ವೀರಶೈವರ ಪರತರ ಕರ್ಮವು. ಶಿವನನ್ನು ಕಾಣಲು ಭೂತಗಳಲ್ಲಿಯ ಅನುಕಂಪೆ ಬಹು ಮುಖ್ಯವಾದ ಸಾಧನವಾಗಿದೆ.§

विराक्तिर्विषयग्रामे वीरशैवस्य लक्षणम् ॥ ६२ ॥
शन्तिर्निष्ठा भूतिदया चितवृत्तिनिरोधनम् ।
सर्वत्रेश्वर तादात्म्यं वीरशैवस्य लक्षणम् ॥६३ ॥

ವಿಷಗಳಲ್ಲಿ ವಿರಾಗ, ಶಾಂತಿ, ನಿಷ್ಠೆ, ಭೂತದಯೆ, ಚಿತ್ತವೃತ್ತಿಗಳ ನಿರೋಧಗಳೊಂದಿಗೆ ಸರ್ವವನ್ನೂ ಶಿವಮಯವೆಂದು ಭಾವಿಸುವವನೇ ನಿಜವಾದ ವೀರಶೈವನೆಂದು ಆಗಮಗಳು ಹಾವೇರಿಯ ಶ್ರೀ ಶಿವಬಸವ ಶಿವಯೋಗಿಗಳಂಥ ಮಹಾತ್ಮರನ್ನು ಲಕ್ಷಿಸಿ ಹೇಳಿದಂತಿದೆ †

ಶಿವಾಗಮಗಳಲ್ಲಿ ಶಿವಯೋಗಿಯು ನಿರಾಭಾರಿ ದೇಶಿಕವರ್ಯನು ವಿಷಯ ಲೋಲುಪನಾಗನು, ಎಂದಿಗೂ ವಿಷಯ ಸುಖವನ್ನು ಹೊದ್ದನು, ಮನದಲ್ಲಿಯೂ ಸ್ತ್ರೀಯನ್ನೂ ನೆನೆಯನು, ಯಾರನ್ನು ಅವಮಾನಗೊಳಿಸನು, ಜಾತಿಭೇದವನ್ನು ಗಣಿಸನು, ಜಾತಿದ್ವೇಷವನ್ನು ಮಾಡಿದನು, ಪರರ ಗುಣದೋಷಗಳನ್ನು ಎಣಿಸಿ ಯಾರನ್ನೂ ಎಂದಿಗೂ ಎಲ್ಲಿಯೂ ಸ್ತುತಿಸನು ಹಾಗೂ ನಿಂದಿಸನು. ಇಂತಹ ತುರ್ಯವೀರವ್ರತನಾದ ನಿರಾಭಾರಿ ಶಿವಯೋಗಿಯು ನಿಮಿಷವಾಗಲಿ ನಿಮಿಷಾರ್ಧವಾಗಲಿ ಕುಳಿತ ತಾಣವೇ ಶಿವನ ಮಂದಿರವಾಗುವದು. ಅವನ ದೃಷ್ಟಿಗೆ ಬಿದ್ದುದೆಲ್ಲ ಪವಿತ್ರವಾಗುವಲ್ಲಿ ಸಂದೇಹವಿಲ್ಲ; ಅವನೆ ತುರ್ಯನು ಶಿವನೂ ಆದುದರಿಂದ ಅವನ ದೃಷ್ಟಿಪಾತದಿಂದ ಅಶುದ್ಧವು ಶುದ್ಧವಾಗುವದು; ಲೌಕಿಕ ಭೋಗ

---

* मन्मते ज्ञानमात्रेण मुच्येयुरपि पापिनः ॥ १०७ ॥
लाभः शैवमतस्यैको वीरशैवप्रवर्तनम् ।
भक्तिर्भूतदया चेति मत्कैवल्यं चतुर्विधम् ॥ १०२ ॥
—पारमेश्वर तन्त्र, पटल १;

§ भावनैव परं कर्म दयैका वीरशैविनः ॥ ७५ ॥
दया भूतेषु तस्यैकं साधनं प्राप्तये मम ॥ ७६ ॥
—ಅದೇ, ಪಟಲ ೧೦;

† ಅದೇ, ದಟಲ ೯;

CC-0. Jangamwadi Math Collection. Digitized by eGangotri

ಭಾಗ್ಯವೆಲ್ಲ ಅವನಿಗೆ ಅಕಿಂಚನವಾದುದು, ಅದರಲ್ಲಿ ಅವನಿಗೆ ಲೇಶಮಾತ್ರವೂ ಆಸಕ್ತಿಯಿಲ್ಲ; ಸಂಗ್ರಹ ಬುದ್ಧಿಯಿಲ್ಲ; ನಿರುಪದ್ರವಿಯಾಗಿ ವನದಲ್ಲಿ ವಾಸ, ಮೌನ ಬಿಕ್ಷಾಟನ, ಶಿವಾತ್ಮಕ ಭಕ್ತಿ, ಪೂಜೆ, ಧ್ಯಾನ, ಸ್ಮರಣೆಗಳು, ಪ್ರಪಂಚದಲ್ಲಿ ಅನಾಸಕ್ತಿ ಇರುವಂತೆ ಪರಹಿಂಸೆಯು ಮಾಡದಿರುವಲ್ಲಿ ಆಸಕ್ತಿ, ಏಕಾಂತವಾಸ, ಅಸಂಗ್ರಹ ಬುದ್ಧಿ, ಉದಾರಭಾವ, ಸಮಾಧಿ, ಆಸನ, ನಿಷ್ಠೆ, ಶತ್ರು ಮಿತ್ರರಲ್ಲಿ ಸಮತ್ವ, ಕಷ್ಟದಲ್ಲಿ ಧೈರ್ಯಗೆಡದಿರುವದು, ಸಿರಿಯಲ್ಲಿ ಗರ್ವಿತನಾಗದಿರುವದು. ಇವೇ ಮೊದಲಾದ ಲಕ್ಷಣಗಳುಳ್ಳವನೇ ನಿಜವಾದ ನಿರಾಭಾರಿಯು† ನಿಜವಿರಕ್ತನು. ಪೂಜ್ಯ ಹಾವೇರಿ ಶ್ರೀಗಳವರಲ್ಲಿ ಈ ಎಲ್ಲ ಲಕ್ಷಣಗಳು ಪರಿಪೂರ್ಣವಾಗಿದ್ದವು. ಅಂತೆಯೆ ಅವನ ಜೀವನ ದೈವೀಸಂಪತ್ತಿಯಿಂದ ಬೆಳಗಿದ್ದಿತು.

ಶ್ರೀಗಳವರ ಜೀವನದಲ್ಲಿ ಈ ಸಂಪತ್ತಿಯ ಪ್ರಭಾವವನ್ನು ಅನೇಕರು ಪ್ರತ್ಯಕ್ಷ ಕಂಡವರುಂಟು, ಕೇಳಿದವರುಂಟು. ಅವುಗಳನ್ನು ನಾವು ಪವಾಡವೆಂದರೂ ಸರಿಯೆ, ಲೀಲೆಗಳೆಂದರೂ ಸರಿಯೆ. ಅವೆಲ್ಲವುಗಳಲ್ಲಿ ಮಾನವೀಯತೆ ವ್ಯಾಪಿಸಿದೆ, ಸಾತ್ವಿಕತೆ ಒಡಮೂಡಿದೆ. ಅವರ ಈ ದಿವ್ಯಗುಣಗಳ ಸ್ಮರಣೆ ಮಾತ್ರದಿಂದಲೇ ನಮ್ಮ ಮನದ ಮಾಲಿನ್ಯ ಕಳೆದು ದಿವ್ಯ ಭಾವ ಮೂಡಿಬರಬಹುದಾಗಿದೆ.

---

† निमिषं निमिषार्धं वा यत्रोपविशते क्वचित् ।
तुर्यवीरव्रतो विद्धि तन्ममालयमीश्वरि ॥ ७८ ॥
तद्दृष्टिपथगं सर्वमनवद्यं न संशयः ।
अशुद्धमपि तच्छुद्धं यतस्तुर्योऽस्म्यहं शिवः ॥ ७९ ॥
अकिंचनत्वं निर्बाधो वासश्च विजने वने ।
मौनं भिक्षाटनं भक्तिः पूजा ध्यानमनुस्मृतिः ॥ ७० ॥
अलक्ष्यत्वं यथागारे अन्याहिंसनमादरः ।
विरक्तिः शान्तिदान्ती च कामलोभादिवर्जनम् ॥ ७१ ॥
अग्रामावेशनं शक्त्या चासंग्रह उदारता ।
समाधिरासनं निष्ठा समत्वं प्रियविप्रिये ॥ ७२ ॥
कृच्छ्रेऽप्यधैर्यसंत्यागमौद्धत्यं नापि सम्पदि ।
इत्यादिलक्षणोपेतं तं निराभारवीरगम् ॥ ७३ ॥

—पारमेश्वर तन्त्र, पटल १६;

CC-0. Jangamwadi Math Collection. Digitized by eGangotri

# ಶ್ರೀಗಳವರ ದಿವ್ಯಪ್ರಭೆ

**ಶ್ರೀ ಚನ್ನಪ್ಪ ಗುರಪ್ಪ ಹುಂಡೇಕಾರ, ಬಿ.ಎ.,ಎಲ್‌ಎಲ್.ಬಿ., ಗದಗ.**

ಶಿವಸಾಕ್ಷಾತ್ಕಾರದ ನಿಜವಾದ ಸಾಧನ ಮತ್ತು ಶ್ರೀ ಮನ್ನಿರಂಜನ ಪ್ರಣವ ಸ್ವರೂಪಿಗಳಾದ ಲಿಂಗೈಕ್ಯ ಪರಮ ಪೂಜ್ಯ ಹಾವೇರಿ ಹುಕ್ಕೇರಿ ಮಠದ ಶ್ರೀ ಶಿವಬಸವ ಮಹಾ ಸ್ವಾಮಿಗಳಲ್ಲಿ ಈ ಲೇಖಕನು ಕಂಡ ದಿವ್ಯ ಪ್ರಭೆ ಹಾಗೂ ಅವರ ಪವಾಡಗಳನ್ನು ಇಲ್ಲಿ ನಿರೂಪಿಸಿರುವೆನು.

ಈಗ ಭರತ ಖಂಡದಲ್ಲಿ ಹಿಮಾಚಲದಿಂದ ಕನ್ಯಾಕುಮಾರಿಯ ವರೆಗೆ ಧರ್ಮದ ಅರಿವು ಜನರಲ್ಲಿ ಹೊರಚಿಮ್ಮುತ್ತಿರುವಂತೆ ಕಂಡು ಬರುತ್ತದೆ. ರಾಷ್ಟ್ರದ ನಾಯಕರು ಮತ್ತು ಧರ್ಮನಿಷ್ಠರು ಮುಕ್ತಕಂಠದಿಂದ ಧರ್ಮದ ಮಹತ್ವದ ಬಗ್ಗೆ ಒತ್ತಿ ಹೇಳುತ್ತಿರುವರು. ಧರ್ಮದ ಜಾಗ್ರುತಿಯ ಬಗೆಗೆ ಅನೇಕ ಗ್ರಂಥಗಳು ಹೊರ ಬೀಳುತ್ತಿರುವವು. ಅನೇಕ ಧಾರ್ಮಿಕ ಪರಿಷತ್ತುಗಳೂ ಆಗಾಗ್ಗೆ ನಡೆಯುತ್ತಿರುವವು. ಇವೆಲ್ಲವುಗಳೂ ಶುಭ ಲಕ್ಷಣಗಳೆಂದೇ ಹೇಳಬಹುದು. ಆದರೆ ಇಂಥ ಚಟುವಟಿಕೆ ಗಳಿಂದ ನಿಜವಾದ ಧರ್ಮದ ಜಾಗ್ರುತಿಯ ಆಗಬಹುದೇ? ಹಿಂದಕ್ಕೊಮ್ಮೆ ಈ ದೇಶವು ತನ್ನ ಅತಿ ಉಜ್ವಲವಾದ ಆಧ್ಯಾತ್ಮಿಕ ತೇಜಸ್ಸಿನಿಂದ ಜಗತ್ತಿನಲ್ಲಿ ದೇದೀಪ್ಯಮಾನವಾಗಿ ಬೆಳಗಿದಂತೆ ಇನ್ನೊಮ್ಮೆ ಜಗತ್ತಿನ ಭೌತಿಕ ರಾಷ್ಟ್ರಗಳಿಗೆ ಅಧ್ಯಾತ್ಮದಲ್ಲಿ ಏಕೈಕ ಮಾರ್ಗ ದರ್ಶಕ ರಾಷ್ಟ್ರವಾಗಿ ತನ್ನನ್ನು ಪರಿವರ್ತಿಸಿಕೊಂಡು ಮಾರ್ಗದರ್ಶನ ಮಾಡಬಹುದೇ ? ಎಂಬ ಪ್ರಶ್ನೆಗಳು ನಮ್ಮ ಕಣ್ಣಮುಂದೆ ನಿಲ್ಲುತ್ತವೆ.

ಚತುರನಾದ ಹಾವಾಡಿಗನು ಒಂದು ಮಾವಿನ ಗೊಟ್ಟವನ್ನು ನಮ್ಮ ಮುಂದೆ ನೆಲದಲ್ಲಿ ಹೂಳುತ್ತಾನೆ. ಅದನ್ನು ಮಣ್ಣಿನಿಂದ ಮುಚ್ಚಿ, ಅದಕ್ಕೆ ನೀರು ಹಾಕಿ ತನ್ನ ಪುಂಗಿಕಾಯಿಂದ ಊದಿ ಆ ಗೊಟ್ಟವನ್ನು ಮಾವಿನ ಗಿಡವನ್ನಾಗಿ ಮಾಡುತ್ತಾನೆ. ಆ ಗಿಡವು ಕ್ಷಣಾರ್ಧದಲ್ಲಿ ಎಲೆ, ಹೂಗಳನ್ನು ಹಾಗೂ ಮಾವಿನ ಕಾಯಿಗಳನ್ನು ಬಿಡುತ್ತದೆ. ಆದರೆ ಆ ಮಾವಿನ ಗಿಡವು ನಿಜವಾದ ಮಾವಿನ ಗಿಡವೋ? ನಿಜವಾದ ಗಿಡವಾದಲ್ಲಿ ಅದು ನೆಲದ ಮೇಲೆ ಬೆಳೆದಂತೆ ನೆಲದೊಳಗೂ ಬೇರುಗಳನ್ನು ಬಿಟ್ಟು ಸ್ವತಂತ್ರವಾಗಿ ನಿಂತಿರುತ್ತದೆಯೊ ?

ಅದರಂತೆ ನಾವು ಮಾತಿನಿಂದ ಸುರಿಸುವ ಸುರಿಮಳೆಯಿಂದ ನಮ್ಮ ಹೃದಯದಲ್ಲಿ ನಿಜವಾದ ಪರಿವರ್ತನೆಯು ಆಗಬಹುದೋ ? ಅದರಿಂದ ಈ ತ್ರಿಗುಣಾತ್ಮಕವಾದ ಜಗತ್ತಿನಲ್ಲಿ ಕಾರ್ಯಕಾರಣ ಭಾವದಿಂದ ತೋರಿಬರುವ ದಾರಿ ತಪ್ಪಿದ ನಮ್ಮ ಚಿತ್ತ, ಬುದ್ಧಿ, ಅಂತಃಕರಣಗಳ ಪರಿವರ್ತನೆಯಾಗಿ ಅದರಿಂದ ಮಿತಿ ಮೀರಿ ಬೆಳೆಯುತ್ತಿರುವ

CC-0. Jangamwadi Math Collection. Digitized by eGangotri

ನಮ್ಮ ಜೀವಭಾವವು ಮಾಯವಾಗಿ ಅದರ ಸ್ಥಳದಲ್ಲಿ ನಿಜವಾದ ಶಿವಭಾವವು ನೆಲೆಗೊಳ್ಳಬಹುದೇ ? ಮತ್ತು ಹೀಗೆ ನಮ್ಮ ಅಂತರ್ಯದಿರುವು ಪರಿವರ್ತನೆ ಯಾಗದಿದ್ದಲ್ಲಿ ನಿಜವಾದ ಆಧ್ಯಾತ್ಮಿಕ ಪ್ರಗತಿಯು ಸಾಧ್ಯವೇ ? ಅದರಿಂದ ದೇಶದಲ್ಲಿ ಆಧ್ಯಾತ್ಮಮಯವಾದ ಸುಖ, ಶಾಂತಿ, ಆನಂದಾದಿ ಸದ್ಗುಣಗಳು ಒಡಮೂಡಿ ಮಾನವನ ನಿಜವಾದ ಉತ್ಕರ್ಷಗೆ ಸಾಧನಗಳಾಗುವವೋ ಎಂಬ ವಿಚಾರಗಳು ನಮ್ಮನ್ನು ಬಾಧಿಸುತ್ತವೆ.

ನಾವು ಪ್ರಮಾಣಿಕರೆನಿಸಬಹುದು. ನಿತ್ಯವಂತರೆನಿಸಬಹುದು. ಅಹಿಂಸಾ ಸತ್ಯ ಅಸ್ತೇಯಾದಿ ಸದ್ಗುಣಗಳು ನಮ್ಮಲ್ಲಿ ತಲೆದೋರದೆ ನಾವು ನಾಗರಿಕರೆನಿಸಿ ರಾಷ್ಟ್ರ ಜೀವಿಗಳಾಗಬಹುದು. ಧಾರ್ಮಿಕ ವಾಙ್ಮಯದಲ್ಲಿ ಪರಿಣಿತರಾಗಿ ಶಾಸ್ತ್ರ ಪುರಾಣ ಪ್ರವಚನಗಳನ್ನು ಹೇಳಬಹುದು. ಆದರೆ ಇಷ್ಟರಿಂದಲೇ ನಿಜವಾದ ಆಧ್ಯಾತ್ಮಿಕ ಜೀವಿಗಳಾಗಬಹುದೆ ? ನಿಜವಾದ ಶಿವಭಾವಿಗಳ ನಾಯಕತ್ವವಿಲ್ಲದೆ ಈ ರಾಷ್ಟ್ರವು ತನ್ನ ದೇದೀಪ್ಯಮಾನವಾದ ಶಿವತೇಜಸ್ಸಿನಿಂದ ತಾನು ಬೆಳಗಿ, ಜಗತ್ತಿನ ಇತರ ದೇಶಗಳ ಮೇಲೆ ತನ್ನ ಅಧ್ಯಾತ್ಮಿಕ ಪ್ರಭಾವವನ್ನು ಯಶಸ್ವಿಯಾಗಿ ಬೀರಿ ಭೌತಿಕ ಸಂಪತ್ತು, ವಿದ್ಯೆ, ಸಂಸ್ಕೃತಿ, ವಿಜ್ಞಾನಗಳಲ್ಲಿ ಮಿತಿ ಮೀರಿ ಬೆಳೆಯುತ್ತಿರುವ ಅವರ ಭೌತಿಕ ದೃಷ್ಟಿಕೋಣವನ್ನು ಹಾಗೂ ನೋಟದ ರಂಗನ್ನು ಪರಿವರ್ತಿಸುವ ಸಾಮರ್ಥ್ಯವನ್ನು ಪಡೆಯಬಹುದೇ ?

ನಿಜವಾದ ಶಿವಭಾವವು ನಮ್ಮಲ್ಲಿ ಬೆಳೆಯದೆ ಕೇವಲ ಭೌತಿಕ ವಿಕಾಸದಿಂದ ನಮ್ಮ ಅನುಪಮ ಗುರಿಯನ್ನು ಮುಟ್ಟಲಾರವೆಂದು ಧಾರಾಳವಾಗಿ ಹೇಳಬಹುದು. ಅನುಭಾವರೂಪ ದಿವ್ಯಜ್ಞಾನದಿಂದಲ್ಲದೆ ಕೇವಲ ಜ್ಞಾನೇಂದ್ರಿಯ ಗಮ್ಯವಾದ ಜ್ಞಾನಾನುಭವದಿಂದ ಯಾರೂ ನಿಜವಾದ ಶಿವಾನುಭಾವಿಗಳಾಗಲಾರರು. ಶಿವಭಾವದ ಪ್ರಗತಿಯಾಗದೆ ಯಾರೂ ಅನ್ಯರ ಮೇಲೆ ತಮ್ಮ ಪ್ರಭಾವಯುತವಾದ ತೇಜಸ್ಸನ್ನು ಬೀರಿ ಅವರನ್ನು ಆಧ್ಯಾತ್ಮಿಕ ಜೀವಿಗಳನ್ನಾಗಿ ಪರಿವರ್ತಿಸಲಾರರು. ಅಂದರೆ "ಅಂಗ ಲಿಂಗ ಸಂಬಂಧದ ನಿಲುಕಡೆಯನರಿಯದೆ ಘೋರ ತಪವ ಮಾಡಿದರೇನು ? ಗಾಳಿಯ ಆಹಾರವ ಕೊಂಡರೇನು ? ತರಗೆಲೆಯ ಮೆದ್ದರೇನು ? ಗಿರಿಗಹ್ವರದೊಳಿದ್ದರೇನು ? ಅಂಗ ಲಿಂಗ ಸಂಗದಿಂದಲ್ಲದೇ ಅಂತರಂಗದಲ್ಲಿ ಅರಿವು ತಲೆದೋರದು. ಅಂತರಂಗದಲ್ಲಿ ಅರಿವು ತಲೆದೋರದಲ್ಲದೆ ಆತ್ಮಲಿಂಗದ ಆದ್ಯಂತವನರಿಯಬಾರದು. . ಆತ್ಮಲಿಂಗದ ಆದ್ಯಂತವನರಿಯದೆ ಘೋರ ತಪವ ಮಾಡಿದರೆ ಅದು ಏತಕ್ಕೂ ಪ್ರಯೋಜನವಿಲ್ಲ ಕಾಣಾ ? ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ"

ವೀರಶೈವರು ತಮ್ಮ ಸಾಮಾಜಿಕ ರಚನೆಯಲ್ಲಿ ತಮ್ಮ ಮಿಗಿಲಾದ ಸಂಸ್ಕೃತಿಗೆ ಅನುಗುಣವಾಗಿ ಶಿವಯೋಗಿಗಳಿಗೆ ಅತಿ ಹಿರಿದಾದ ಸ್ಥಾನವನ್ನು ಕಲ್ಪಿಸಿರುವರು.

CC-0. Jangamwadi Math Collection. Digitized by eGangotri

ಮೂರು ದೃಷ್ಟಿಗಳಿಂದ ಶಿವಯೋಗಿಗಳ ಸ್ಥಾನವು ಅತಿ ಮಹತ್ವದ್ದಾಗಿ ಕಂಡು ಬರುವದು. ವೀರಶೈವ ಶಿವಯೋಗಿಗಳು ವಾಡಿಕೆಯಾಗಿ ಇತರ ಧರ್ಮದವರು ಅನುಸರಿಸುವ ಆಧ್ಯಾತ್ಮಿಕ ಪ್ರಗತಿಯ ಊರ್ಧ್ವಗಾಮಿಯಾದ ಮಾರ್ಗವನ್ನು ದೂರೀಕರಿಸಿ ನೇರವಾದ ಶಿವಸಾಕ್ಷಾತ್ಕಾರದ ಮಾರ್ಗವನ್ನು ಅನುಸರಿಸುವರು. ಇದರಿಂದ ಅವರಲ್ಲಿ ಸ್ವಯಂಸ್ಫೂರ್ತಿಯಿಂದ ತಲೆದೋರುವ ಶಿವಯೋಗ ಸಿದ್ಧಿಯಿಂದ ಉಂಟಾಗುವ ಅವರ ಸಂಕಲ್ಪ ವಿಕಲ್ಪ ರಹಿತವಾದ ತ್ರಿಕಾಲಜ್ಞಾನವು, ವಾಕ್‌ಸಿದ್ಧಿಯೂ ಹಾಗೂ ಅವರಲ್ಲಿ ಪವಾಡಗಳು ತಲೆದೋರುವವು. ಕಾರ್ಯಕಾರಣ ಭಾವದ ಪರಂಪರೆಯಿಂದ ಅತಿ ಗೊಂದಲಮಯವಾದ ಮಾನವನ ಸಂಸಾರವು ಅವನನ್ನು ದಿಙ್ಮೂಢನನ್ನಾಗಿ ಮಾಡಿದಾಗಅವರು ಅವನಿಗೆ ತಮ್ಮ ಕೃಪಾದೃಷ್ಟಿಯಿಂದ ಯೋಗ್ಯ ಮಾರ್ಗದರ್ಶನ ಮಾಡುವರು. ಮಾನವನಿಗೆ ಈ ಸಂಸಾರದಲ್ಲಿ ವಿರತಿ ಹುಟ್ಟಿ ಮನಸ್ಸು ಪರಿಪಕ್ವವಾಗಿ ಶಿವಸಾಕ್ಷಾತ್ಕಾರದ ಹಂಬಲದಿಂದ ತನ್ನ ಅಂತರಾತ್ಮನ ಸ್ಥಿತಿಯಲ್ಲಿ ತಳಮಳಿಸುತ್ತಿರುವ ಮುಮುಕ್ಷುವಿಗೆ, ಅವನ ಅಧಿಕಾರವನ್ನು ಅರಿತು ಅವನಿಗೆ ಲಿಂಗಾಂಗ ಸಮರಸವನ್ನು ಅನುಗ್ರಹಿಸುವರು. ಇಂಥ ಶಿವಯೋಗಿಗಳ ಕಲ್ಪನೆಯು ವೀರಶೈವರ ವಿಶಿಷ್ಟ ಲಕ್ಷಣವೆಂದು ಹೇಳಬಹುದು.

ಈ ಒರೆಗಲ್ಲಿನಿಂದ ಹಾವೇರಿ ಹುಕ್ಕೇರಿ ಮಠದ ಮಹಾಸ್ವಾಮಿಗಳನ್ನು ನೋಡಿದರೆ ಅವರು ದಿವ್ಯವ್ಯಕ್ತಿಗಳೆಂದು ನಿಃಸಂದೇಹವಾಗಿ ಕಂಡು ಬರುವದು. ನಾನು ಕಂಡಂತೆ ಶ್ರೀಗಳವರು ತಮ್ಮ ಶಾರೀರದಲ್ಲಿಯ ಪಂಚಕೇಂದ್ರಗಳನ್ನು ಶುದ್ಧಗೊಳಿಸಿ ನಿರ್ಮಲ ಹಾಗೂ ಶುದ್ಧಾತ್ಮರ ಸ್ಥಿತಿಯನ್ನು ಮೀರಿ ತಮ್ಮ ಮನೋಮಯ ಶರೀರದಲ್ಲಿರುವ ಆಜ್ಞಾಚಕ್ರವನ್ನು ತಮ್ಮ ಇಚ್ಛಾಮಾತ್ರದಿಂದ ತಕ್ಕಮಟ್ಟಿಗೆ ತೆರೆಯುವ ಹಾಗೂ ಮುಚ್ಚುವ ಸಾಧನೆಯನ್ನು ಮಾಡಿದ್ದರು. ಮಾನವ ತನ್ನ ಆಜ್ಞಾಚಕ್ರವನ್ನು ತನ್ನ ಇಚ್ಛಾ ಮಾತ್ರದಿಂದ ತೆರೆಯುವ ಹಾಗೂ ಮುಚ್ಚುವ ಶಕ್ತಿಯನ್ನು ಎರಡು ಸಾಧನೆಗಳಿಂದ ಸಾಧಿಸಬಹುದು. ಇದರಲ್ಲಿ ಶ್ರೀಗಳವರು ಯಾವ ಸಾಧನೆಯನ್ನು ಅನುಸರಿಸಿದ್ದರೆಂಬುವದನ್ನು ನಾನು ಹೇಳಲಾರೆ. ಅನೇಕ ವರ್ಷಗಳ ವರೆಗೆ ಶ್ರೀಗಳವರ ಸನ್ನಿಧಿಯಲ್ಲಿ ಆಗಾಗ್ಗೆ ಒಡನಾಡುವ ಸುಯೋಗವು ನನಗೆ ದೊರೆತಿದ್ದರೂ ನಾನು ಅವರು ಅನುಸರಿಸಿದ ಸಾಧನೆಯ ಬಗ್ಗೆ ಅವರನ್ನು ಕೇಳಲಿಲ್ಲ. ಆದರೆ ಶ್ರೀಗಳು ನನಗೆ ಪಂಚಶಕ್ತಿಗಳಿಂದ ನಿರ್ಮಾಣವಾದ ಈ ಸಂಕಲ್ಪ ಸೃಷ್ಟಿಯಲ್ಲಿ ತೋರಿಬರುವ ವಿದ್ಯಾ ಅವಿದ್ಯಾತತ್ವದಿಂದಉದ್ಭವಿಸಿರುವ ವ್ಯವಸಾಯಾತ್ಮಿಕ ಬುದ್ಧಿಯು ಜಾಲವಾಡುವದರಿಂದ ಕ್ರಮಸೃಷ್ಟಿಯಲ್ಲಿ ಧರ್ಮದ ಊರ್ಧ್ವಗಾಮಿಯಾದ ಮಾರ್ಗದಿಂದ ನಿಜವಾದ ಶಿವಸಾಕ್ಷಾತ್ಕಾರವು ಸಹಜವಾಗಿ ಹಾಗೂ ಸುಲಭವಾಗಿ ಆಗಲಾರದೆಂದು ಹೇಳುತ್ತಿದ್ದದರಿಂದ, ಊರ್ಧ್ವಗಾಮಿಯಾದ ಮಾರ್ಗವನ್ನು ಬಿಟ್ಟು ನೇರವಾದ ಶಿವಯೋಗ ಸಾಧನೆಯಿಂದ ತಮ್ಮ ಆಜ್ಞಾಚಕ್ರವನ್ನು ಇಚ್ಛಾಮಾರ್ಗದಿಂದ ತಕ್ಕಮಟ್ಟಿಗೆ ತೆರೆಯುವ ಹಾಗೂ

CC-0. Jangamwadi Math Collection. Digitized by eGangotri

ಮುಚ್ಚುವ ದಿವ್ಯ ಶಕ್ತಿಯನ್ನು ಸಾಧಿಸಿರಬೇಕೆಂದು ನನ್ನ ನಂಬಿಗೆ. ಈ ಸಾಧನೆಯಿಂದ ಶ್ರೀಗಳವರಲ್ಲಿ ತ್ರಿಕಾಲಜ್ಞಾನ ಹಾಗೂ ವಾಕ್‌ಸಿದ್ಧಿಯೂ ಅಳವಟ್ಟಿದ್ದವೆಂದು ಹೇಳ ಬಹುದು. ಸೂಕ್ಷ್ಮವಾಗಿ ಶ್ರೀಗಳವರನ್ನು ನೋಡಿದರೆ ಅವರು ಯಾವಾಗಲೂ ಈ ಸಾಂಸಾರಿಕ ವಿಚಾರಗಳಿಂದ ಅಂತರ್ಯದಲ್ಲಿ ಸಂಕಲ್ಪ ವಿಕಲ್ಪ ರಹಿತರಾಗಿ ಶಿವಭಾವ ದಲ್ಲಿರುತ್ತಿದ್ದರು. ಸಾಮಾನ್ಯವಾಗಿ ನೋಡುವವರಿಗೆ ಅವರು ಅನೇಕ ಭೌತಿಕ ವಿಚಾರ ಗಳಲ್ಲಿ ತೊಡಗಿರುವಂತೆ ಕಂಡು ಬರುತ್ತಿತ್ತು. ಆದರೆ ಒಳಗೆ ಪರಿಪಕ್ವವಾಗಿ ಸುಕ್ಕು ಗಟ್ಟಿದ ಹಣ್ಣು ತೋರಿಕೆಗೆ ಮೇಲಿನ ಸಿಪ್ಪೆಯಿಂದ ಅವಿನಾಭಾವದಿಂದ ಇರು ವಂತೆ ಕಂಡು ಬಂದರೂ ಅದು ಒಣಗಿದ ಹೊರಗಿನ ಸಿಪ್ಪಿಯಿಂದ ಪೃಥಕ್ ಭಾವದಿಂದ ಇರುವಂತೆ, ಶ್ರೀಗಳವರು ನಿಜವಾಗಿ ಸಾಂಸಾರಿಕ ವಿಚಾರಗಳಿಂದ ಅಲಿಪ್ತರಾಗಿ ಕೇವಲ ಶಿವಭಾವದಲ್ಲಿ ಇರುತ್ತಿದ್ದುದು ಸೂಕ್ಷ್ಮದೃಷ್ಟಿಯವರಿಗೆ ಹೊಳೆಯದೆ ಇರುತ್ತಿರಲಿಲ್ಲ. ಅವರ ಸನ್ನಿಧಿಯಲ್ಲಿ ಅಜಮಾಸು ೨೫ ವರ್ಷ ಆಗಾಗ್ಗೆ ಒಡನಾಡಿದ ಈ ಲೇಖಕನಿಗೆ ಅವರ ಅನೇಕಾನೇಕ ತ್ರಿಕಾಲಜ್ಞಾನದ ಹಾಗೂ ವಾಕ್‌ಸಿದ್ಧಿಯ ಪವಾಡಗಳ ಉದಾಹರಣೆಗಳು ಅನುಭವಕ್ಕೆ ಬಂದಿರುತ್ತವೆ. ಆದರೆ ಅವೆಲ್ಲವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಉಲ್ಲೇಖಿಸಬಯಸಿರುವೆನು.

ಶ್ರೀಗಳವರು ಒಂದು ವರ್ಷ ಮೇ ತಿಂಗಳಲ್ಲಿ ಗದಗಿನಲ್ಲಿ ಆನಂದಾಶ್ರಮದಲ್ಲಿದ್ದರು. ಆಗ ಒಂದು ದಿವಸ ಸಾಯಂಕಾಲ ೮ ಘಂಟೆಯ ಸಮಯದಲ್ಲಿ ಈ ಲೇಖಕನು ಅಲ್ಲಿಯೇ ಇದ್ದನು. ಆವಾಗ ಹಾವೇರಿಮಠದಲ್ಲಿದ್ದ ಚನ್ನಬಸಯ್ಯ ಎಂಬುವನು ಹಾವೇರಿಯಿಂದ ಬಂದು ಶಿರಸಾಷ್ಟಾಂಗ ಹಾಕಿ ಹಾವೇರಿಯ ಹತ್ತಿ ಮಡಿವಾಳಪ್ಪ ನವರು ತಮ್ಮನ್ನು ಅತ್ಯವಸರದಿಂದ ಕರದುಕೊಂಡು ಬರಬೇಕೆಂದು ನನ್ನನ್ನು ಕಳುಹಿಸಿ ರುವೆಂದು ಕೈಮುಗಿದು ಬಿನ್ನೈಸಿದನು. "ಹಾವೇರಿ ಮುನಸಿಪಾಲಿಟಿಯವರು ಶ್ರೀಗಳವರ ಮಠದ ಸಮೀಪದ ಮುಂದಿನ ಬೈಲಿನಲ್ಲಿ ನಾಲ್ಕು ಶೌಚಕೂಪಗಳನ್ನು ಕಟ್ಟಿಸಬೇಕೆಂದು ತೀರ್ಮಾನಿಸಿ ಅವುಗಳನ್ನು ಕಟ್ಟಿಸಲಿಕ್ಕೆ ಪ್ರಾರಂಭಮಾಡಿ ಅವಸರದಿಂದ ಕಟ್ಟಿಸುವ ಕೆಲಸ ನಡಿಸಿರುತ್ತಾರೆ; ಮತ್ತು ಮಡಿವಾಳಪ್ಪನವರು ಆಗಿನ ಮುನಸಿಪಾಲ್ಟಿ ಅಧ್ಯಕ್ಷ ರಿಗೂ ಹಾಗೂ ಸ್ಟ್ಯಾಂಡಿಂಗ ಮತ್ತು ಸ್ಯಾನಿಟರಿ ಕಮೀಟಿ ಚೇರಮನ್ನರಿಗೂ ತಾವೂ ಹೇಳಿ ಹಾಗೂ ಎರಡನೆಯವರ ಕಡೆಯಿಂದ ಸಹ ಹೇಳಿಸಿದರೂ ಕೇಳಲೊಲ್ಲರು; ಮತ್ತು ಸದರಿ ಶೌಚಕೂಪಗಳು ಮುಗಿಯಲಿಕ್ಕೆ ಬಂದಿರುತ್ತವೆ; ಮತ್ತು ಜನರು ಅವುಗಳಲ್ಲಿ ಮಲ ಮೂತ್ರ ವಿಸರ್ಜನೆ ಮಾಡಲಿಕ್ಕೆ ಹತ್ತಿದರೆ ಮಠದಲ್ಲಿ ದುರ್ವಾಸನೆ ಬರುತ್ತದೆ; ಆದ್ದರಿಂದ ಶ್ರಿಗಳವರನ್ನು ಅವಸರದಿಂದ ಕರಕೊಂಡು ಬರಬೇಕೆಂದು ನನ್ನನ್ನು ಕಳಿಸಿರುತ್ತಾರೆ. ತಾವು ದಯವಿಟ್ಟು ನಾಳೆ ಮುಂಜಾನೆ ಗಾಡಿಗೆ ಹಾವೇರಿಗೆ ದಯಮಾಡಿಸಬೇಕು"ಎಂದು ಅರಿಕೆ ಮಾಡಿಕೊಂಡನು. ಶ್ರಿಗಳವರು ಸುಮ್ಮನೇ ಕುಳಿತರು. ನಾನು ತಾವು ನಾಳೆಗೆ ಹಾವೇರಿಗೆ ದಯಮಾಡಿಸಿ ಪ್ರಯತ್ನಮಾಡಲೇಬೇಕೆಂದು ಅತಿ

CC-0. Jangamwadi Math Collection. Digitized by eGangotri

ಆಗ್ರಹದಿಂದ ಅರಿಕೆ ಮಾಡಿಕೊಂಡು ಮನೆಗೆ ಬಂದೆನು. ಮರುದಿವಸ ಮುಂಜಾನೆ ೫ ಘಂಟೆಗೆ ಶ್ರೀಗಳವರು ಚನ್ನಬಸಯ್ಯನನ್ನು ಸಂಗಡ ಕರೆದುಕೊಂಡು ನನ್ನ ಮನೆಗೆ ದಯಮಾಡಿಸಿ ನನ್ನನ್ನು ಎಬ್ಬಿಸಿದರು. ನಾನು ಮುಗ್ಧನಾಗಿ ಎದ್ದು ಶ್ರೀಗಳವರಿಗೆ ಸಾಷ್ಟಾಂಗಹಾಕಿ ನಿಂತೆನು. ಕೂಡಲೇ ಶ್ರೀಗಳವರು ತಾವು ಮುಂಜಾನೆ ಬಿಡುವ ಗಾಡಿಗೆ ಬಾಗಲಕೋಟೆಗೆ ದಯಮಾಡಿಸುತ್ತೇವೆಂದೂ ೮-೧೦ ದಿವಸಗಳಲ್ಲಿ ಪುನಃ ಗದಗಿಗೆ ಬರುತ್ತೇವೆಂದು ಹೇಳಿದರು. ನಾನು ಚಕಿತವಾಗಿ"ಬುದ್ಧಿ, ಈಗ ಚನ್ನಬಸಯನು ಬಂದಿರುತ್ತಾನೆ. ಹಾವೇರಿ ಕೆಲಸವು ಬಹಳ ಅವಸರದ್ದು ಅದೆ. ತಾವು ದಯವಿಟ್ಟು ಹಾವೇರಿಗೆ ದಯಪಾಲಿಸಬೇಕು" ಎಂದು ಹೇಳಿದೆನು. ಅದಕ್ಕೆ ಶ್ರೀಗಳವರು "ಹಾವೇರಿ ಕೆಲಸವನ್ನು ನೀವು ಮಾಡಿರಿ. ಶಿವನು ಅದನ್ನು ನಿಮ್ಮಿಂದ ಮಾಡಿಸುತ್ತಾನೆ"ಎಂದು ಹೇಳಿ ಹೆಚ್ಚಿಗೆ ಮಾತನಾಡದೇ ದಯಮಾಡಿಸಿ, ಮುಂಜಾನೆಯ ಗಾಡಿಗೆ ಬಾಗಲಕೋಟೆಗೆ ದಯಮಾಡಿಸಿ ಬಿಟ್ಟರು. ಮತ್ತು ಚನ್ನಬಸಯ್ಯನು ಕಣ್ಣೀರುಹಾಕುತ್ತಾ ಸ್ವಾಮಿಗಳು ನಿಮ್ಮ ಕಡೆಗೆ ಹೋಗೆಂದು ನನಗೆ ಹೇಳಿ ಗಾಡಿಗೆ ದಯಮಾಡಿಸಿದರೆಂದು ಹೇಳಿ ನಮ್ಮ ಮನೆಯಲ್ಲಿ ಕುಳಿತು ಬಿಟ್ಟನು. ನಾನು ಮುಗ್ಧನಾದೆನು. ಶೌಚಕೂಪಗಳನ್ನು ಕಟ್ಟುವ ಕೆಲಸ ಹಾವೇರಿಯಲ್ಲಿ, ನಾನು ಗದಗಿನಲ್ಲಿ. ಮೇ ತಿಂಗಳಾದ್ದರಿಂದ ಹಾವೇರಿಯ ಸಿವ್ಹಿಲ ಕೋರ್ಟಿನ ಸೂಟಿ ಮತ್ತು ೩೦ ದಿವಸಗಳ ನೋಟಿಸ ಕೊಡದೆ ಮುನಸಿಪಾಲಿಟಿಯ ಮೇಲೆ ದಾವಾ ಮಾಡಲಿಕ್ಕೆ ಬರುವಂತೆ ಇಲ್ಲ. ಹೀಗಾಗಿ ನನಗೆ ಯಾವುದೂ ತಿಳಿಯದಾಗಿ ಹಾಗೇ ಅರ್ಧ ತಾಸಿನವರೆಗೆ ಕುಳಿತೆನು. ಅಷ್ಟರಲ್ಲಿ ಒಂದು ವಿಚಾರವು ಅಕಸ್ಮಾತ್ತಾಗಿ ಹೊಳೆದು ತಟ್ಟನೆ ಒಂದು ಕಾಗದ ತೆಗೆದು, ಮೆ. ಧಾರವಾಡ ಕಲೆಕ್ಟರ ಸಾಹೇಬರಿಗೆ ಒಂದು ಅರ್ಜಿಯನ್ನು ಬರೆದು, ಇದನ್ನು ಒಯ್ದು ಧಾರವಾಡದಲ್ಲಿ ಒಬ್ಬ ವಕೀಲರನ್ನು ಹಾಜರ ಮಾಡಿಸಿ, ಈ ಅರ್ಜಿ ಸಾಹೇಬರ ಕಡೆಗೆ ಕೊಡಲಿಕ್ಕೆ ಹೇಳಿ ಚನ್ನಬಸಯ್ಯನನ್ನು ಧಾರವಾಡಕ್ಕೆ ಕಳಿಸಿದೆನು. ಅವನು ಧಾರವಾಡಕ್ಕೆ ಹೋಗಿ ಆ ಅರ್ಜಿಯನ್ನು ತನ್ನ ಪರಿಚಯವಿದ್ದ ಒಬ್ಬ ಚಿಟ್ಣೀಸರಿಗೆ ತೋರಿಸಲಾಗಿ ಅವರು ಅದನ್ನು ತೆಗೆದುಕೊಂಡು ತಾವು ಕೂಡಲೆ ಟಿಪ್ಪಣಿಹಾಕಿ ಕಲೆಕ್ಟರ ಸಾಹೇಬರ ಮುಂದೆ ಇಟ್ಟರಂತೆ. ಕೂಡಲೆ ಕಲೆಕ್ಟರ ಸಾಹೇಬರು ಬಂದೀಹುಕುಂ ಮಾಡಿ ಮುನಸಿಪಾಲಿಟಿಗೆ ಸಂಬಂಧಪಟ್ಟ ಅಧಿಕಾರಸ್ಥರಿಗೆ ತಾರಿನಿಂದ ಬಂದು ಇಡಲಿಕ್ಕೆ ತಿಳಿಸಿದರು. ಮುಂದೆ ಮುಂದಿನ ಕೆಲಸವು ಬಂದಾಗಿ ೬-೭ ತಿಂಗಳ ನಂತರ ಕಲೆಕ್ಟರ ಸಾಹೇಬರು ಹಾವೇರಿಗೆ ಹೋದಾಗ ತಾವೇ ಸ್ವತಃ ಜಾಗಾ ನೋಡಿ ಇಲ್ಲಿ ಶೌಚಕೂಪಗಳನ್ನು ಕಟ್ಟಬಾರದೆಂದು ಕಾಯಂ ಹುಕುಂ ಮಾಡಿದರು. ಆದರಿಂದ ಶೌಚಕೂಪಗಳನ್ನು ಕಟ್ಟುವ ಕೆಲಸವು ಬಂದಾಗಿ ಅಲ್ಲಿಂದ ಕಟ್ಟಿದ ಅರ್ಧಕಟ್ಟಿದ ಶೌಚಕೂಪಗಳು ಸಹ ತೆಗೆಯಲ್ಪಟ್ಟವು.

ಒಮ್ಮೆ ಒಬ್ಬ ಸ್ವಾಮಿಗಳು (ಅವರು ಇನ್ನೂ ಜೀವಂತರಾಗಿದ್ದಾರೆ) ಒಬ್ಬ ಒಬ್ಬ ಗೃಹಸ್ಥರ ಬಹು ಕಿಮ್ಮತ್ತಿನ ಅಸ್ತಿಯನ್ನು ಲಿಲಾವು ಮಾಡಿಸುವ ಜತ

CC-0. Jangamwadi Math Collection. Digitized by eGangotri

ವೀಜಿನಲ್ಲಿದ್ದರು. ಆಗ ಆಸ್ತಿಯ ಮಾಲಕರು ಶ್ರೀಗಳವರ ಸನ್ನಿಧಿಗೆ ಬಂದು ಆ ಸ್ವಾಮಿಗಳಿಗೆ ಹೇಳಿ ಆಪಸಾತಿನಲ್ಲಿ ತೀರಿಸಿ ಬಿಡಬೇಕೆಂದು ಹೇಳಿಕೊಂಡರು. ಆಗ ಪೂಜ್ಯರಾದ ಶಿವಬಸವ ಮಹಾಸ್ವಾಮಿಗಳು ಆಗಲೆಂದು ಆ ಸ್ವಾಮಿಗಳನ್ನು ಕರದುಕೊಂಡು ಬರಲು ತಮ್ಮ ಮನುಷ್ಯನನ್ನು ಕಳಿಸಿದರು. ಆದರೆ ಆ ಸ್ವಾಮಿಗಳು ಬರಲಿಲ್ಲ. ಕುಂಟನೆವ ಹೇಳಿ ಶ್ರೀಗಳವರ ಹತ್ತರ ಬರುವದನ್ನು ತಪ್ಪಿಸಿಕೊಂಡರು. ಆಗ ಈ ಲೇಖಕನು ಶ್ರೀಗಳವರ ಸನ್ನಿಧಿಯಲ್ಲಿದ್ದನು. ಶ್ರೀಗಳವರು ನನಗೆ ತಟ್ಟನೆ "ಆ ಸ್ವಾಮಿಗಳು ಬಹಳ ಗೊಂದಲದಲ್ಲಿ ಬಿದ್ದು ಬಹಳ ಹಣವನ್ನು ವ್ಯಯಮಾಡಿಕೊಂಡು ಆಸ್ತಿಯನ್ನು ಕಾಣದೆ ಹೋಗುತ್ತಾರೆಂದು ಅವರಿಗೆ ಪತ್ರ ಬರೆ" ಎಂದು ಹೇಳಿದರು. ಅದಕ್ಕೆ ನಾನು ಆ ಸ್ವಾಮಿಗಳು ಈಗಾಗಲೇ ಡಿಕ್ರಿಮಾಡಿಕೊಂಡು ಆಸ್ತಿಯುನ್ನು ಲಿಲಾವಿಗೆ ತಂದಿರುತ್ತಾರೆ. ಮತ್ತು ಲಿಲಾವು ಇನ್ನು ೮ ದಿವಸಗಳಲ್ಲಿಯೇ ಇರುತ್ತದೆಂದು ಹೇಳಿದೆನು. ಅದಕ್ಕೆ ಶ್ರೀಗಳವರು "ಹುಚ್ಚು, ಅವರ ಹುಚ್ಚುತನ. ಅವರಿಗೆ ಮುಂದೆ ಗೊತ್ತಾಗುತ್ತದೆ." ಎಂದು ಅಂದರು. ಮುಂದೆ ಲಿಲಾವು ಆಗುವದರೊಳಗಾಗಿಯೇ ಮತ್ತೊಬ್ಬರು ಅದೇ ಆಸ್ತಿಯ ಬಗ್ಗೆ ಆ ಸ್ವಾಮಿಗಳ ಮೇಲೆ ದಾವಾ ಮಾಡಿ ಲಿಲಾವು ಆಗಬಾರದೆಂದು ಕೋರ್ಟಿನಿಂದ ಬಂದಿ ಹುಕ್ಕುಂ ಮಾಡಿಸಿದರು. ಮುಂದೆ ಆ ಸ್ವಾಮಿಗಳು ಪುಷ್ಕಳ ಹಣ ಖರ್ಚು ಮಾಡಿ ೧೫-೨೦ ವರ್ಷ ಬಡಿದಾಡಿದರೂ ಈಗ್ಯೂ ಸ್ವಾಮಿಗಳಿಗೆ ಆ ಬಹು ಕಿಮ್ಮತ್ತಿನ ಆಸ್ತಿ ಕಬ್ಜಾಸಿಗದೆ ನಿರಾಶೆಯಿಂದ ಕೈಬಿಡಬೇಕಾಯಿತು. ಇದು ಶ್ರೀಗಳವರಲ್ಲಿದ್ದ ತ್ರಿಕಾಲಜ್ಞಾನ ಹಾಗೂ ವಾಕ್‌ಸಿದ್ಧಿಯ ಉದಾಹರಣೆ.

ಶ್ರೀಗಳವರು ಹೆಂಪಸಾಗರಕ್ಕೆ ದಯಮಾಡಿಸಿ ಈ ಲೇಖಕನ ಮನೆಯಲ್ಲಿದ್ದರು. ಆಗ್ಗೆ ಒಂದು ದಿನ ಒಬ್ಬ ಭಕ್ತನು ಎರಡು ಸೇರು ಅಂಜೀರಹಣ್ಣುಗಳನ್ನು ತೆಗೆದುಕೊಂಡು ಬಂದು ಶ್ರೀಗಳವರ ಮುಂದಿಟ್ಟು ಸಾಷ್ಟಾಂಗಹಾಕಿ ಕುಳಿತನು. ನಾನು ಶ್ರೀಗಳವರಿಗೆ ಅವನು ಒಳ್ಳೇ ಭಕ್ತನೆಂದು ಹೇಳಿದೆನು. ತಟ್ಟನೆ ಮಹಾಸ್ವಾಮಿಗಳು ನನಗೆ ಕೋಟಿಖೋಲಿಯಿಂದ ಒಂದು ತೆಂಗಿನಕಾಯಿ ತರಲಿಕ್ಕೆ ಹೇಳಿದರು. ನಾನು ತಂದು ಶ್ರೀಗಳವರ ಕೈಯಲ್ಲಿ ಕೊಟ್ಟೆನು. ಆಗ ಶ್ರೀಗಳವರು ಆ ಕಾಯಿಯ ಮೇಲೆ ಪ್ರಣಮವನ್ನು ಬರೆದು ಬಂದ ಭಕ್ತನಿಗೆ ಆ ಕಾಯಿಯನ್ನು ಕೊಟ್ಟು "ಇದನ್ನು ಪೂಜಿಸು. ನಿನಗೆ ಬರುವ ಗಂಡಾಂತರ ದೂರವಾಗಿ ಹೋದ ಪ್ರಾಣವು ಬರುತ್ತದೆ" ಎಂದು ಹೇಳಿ ಆಶೀರ್ವಾದ ಮಾಡಿ ಕಳಿಸಿದರು. ನಾನು ನನ್ನ ಮನಸ್ಸಿನಲ್ಲಿ ಶ್ರೀ ಮಹಾಸ್ವಾಮಿಗಳಿಗೆ ಲೌಕಿಕಜ್ಞಾನದ ತೂಕವು ಇರುವದಿಲ್ಲವೆಂದು ಅಂದುಕೊಂಡೆನು. ಆದರೆ ವಿಚಿತ್ರಗತಿಯಿಂದ ಮರುದಿವಸ ಆ ಭಕ್ತನ ೧೪ ವರ್ಷಗಳ ಮಗನು ಪಟಹಾರಿಸಲಿಕ್ಕೆ ಹೋದಾಗ ಅಲ್ಲಿ

CC-0. Jangamwadi Math Collection. Digitized by eGangotri

ಬೇರೆ ಹುಡುಗರ ಸಂಗಡ ಜಗಳಮಾಡಿದನು; ಅವರು ಅವನನ್ನು ಕೆಡವಿದರು. ಅವನ ಎದೆಯ ಮೇಲೆ ಕುಳಿತು ಮುಷ್ಟಿಯಿಂದ ಬಹಳವಾಗಿ ಆ ಹುಡುಗನನ್ನು ಗುದ್ದಿದ್ದರಿಂದ ಹುಡುಗನು ಪ್ರಾಣಹೋದಂತಾಗಿ ಬಿದ್ದನು. ಅವನ ಮನೆಯವರು ಬಂದು ಆ ಹುಡುಗನನ್ನು ಎತ್ತಿಕೊಂಡು ತಮ್ಮ ಮನೆಗೆ ಒಯ್ದು ಎಷ್ಟು ಉಪಚಾರ ಮಾಡಿದರೂ ಪ್ರಾಣ ಬರಲಿಲ್ಲವಾಯಿತು. ಮನೆಯವರೆಲ್ಲರೂ ಅಳಹತ್ತಿದರು. ಮುಂದೆ ಹೊಲಕ್ಕೆ ಹೋಗಿದ್ದ ಆ ಹುಡುಗನ ತಂದೆಗೆ ಈ ಸುದ್ದಿಯನ್ನು ಮುಟ್ಟಿಸಲು ಅವನು ಅಳುತ್ತ ಓಡಿ ಬಂದು "ನಿನ್ನೆ ನಮ್ಮ ತಾತನು ಹೇಳಿದ್ದಾನೆ" ಎಂದು, ಅವಸರದಿಂದ ಕೈಕಾಲು ಮುಖ ತೊಳೆದುಕೊಂಡು ಆ ಕಾಯಿಯನ್ನು ತೊಳೆದು, ಆ ನೀರನ್ನು ಆ ಹುಡುಗನ ಬಾಯಿಯಲ್ಲಿ ಹಾಗೂ ಕಿವಿಯಲ್ಲಿ ಹಾಕಿದನು. ಮುಂದೆ ಸ್ವಲ್ಪ ಹೊತ್ತಿನ ಮೇಲೆ ಆ ಹುಡುಗನ ಪ್ರಾಣ ಬಂದಿತು. ಆ ಮೇಲೆ ಆ ಭಕ್ತನು ತನ್ನ ಮಗನನ್ನು ಶ್ರೀಗಳವರ ಸನ್ನಿಧಿಗೆ ಕರೆದುಕೊಂಡು ಬಂದು ಸಾಷ್ಟಾಂಗ ಹಾಕಿಸಿ "ತಾತಾ, ನನ್ನ ಮಗನ ಪ್ರಾಣವನ್ನು ಕೊಟ್ಟು ಕೃಪೆಮಾಡಿದಿ" ಎಂದು ಭಕ್ತಿರಸದಿಂದ ಕಣ್ಣೀರುಗಳನ್ನು ಹಾಕಿದನು.

ಒಮ್ಮೆ ಶ್ರೀಗಳವರು ಗದಗಿನಲ್ಲಿ ಆನಂದಾಶ್ರಮದಲ್ಲಿ ಇದ್ದರು. ಒಂದು ದಿವಸ ಮುಂಜಾದೆ ೬ ಘಂಟೆಗೆ ನಾನು ತಿರುಗಾಡಲಿಕ್ಕೆಂದು ಆಶ್ರಮದ ಕಡೆಗೆ ಹೋದೆನು. ಸ್ವಾಮಿಗಳು ಆಶ್ರಮದಲ್ಲಿದ್ದರು. ನಾನು ಹೋಗಿ ಸಾಷ್ಟಾಂಗ ಹಾಕಿ, "ಬುದ್ಧೀ, ಇನ್ನೂ ಸಂಚಾರಕ್ಕೆ ದಯಮಾಡಿಸಿಲ್ಲವಲ್ಲ" ಎಂದು ಕೇಳಿದೆನು. ಅದಕ್ಕೆ ಶ್ರೀಗಳವರು "ವಕೀಲರೇ ಯಾರಿಗೋ ಅಜಾರಿ ಆಗಿದೆ. ಅವರ ಮನೆಯವರು ಈಗ ದರ್ಶನಕ್ಕೆ ಬರುತ್ತಾರೆ. ಅವರು ಬಂದಾಗ್ಗೆ ನಾವು ಇರದೆ ಇದ್ದರೆ ಅವರಿಗೆ ನಿರಾಶೆಯಾಗುತ್ತದೆ. ಆದ್ದರಿಂದ ಕುಳಿತಿದ್ದೇವೆ" ಎಂದು ಅಂದರು. ಅದಕ್ಕೆ ನಾನು 'ಯಾರಿಗೆ ಅಜಾರಿ ಆಗಿದೆ ಸ್ವಾಮಿ?' ಎಂದು ಕೇಳಿದೆನು. ಅದಕ್ಕೆ ಶ್ರೀಗಳವರು "ನಮಗೂ ಗೊತ್ತಿಲ್ಲ. ಶಿವನ ಪ್ರೇರಣೆಯಾಯಿತು. ಕುಳಿತು ಕೊಳ್ಳಿರಿ." ಎಂದು ಅಪ್ಪಣೆ ಮಾಡಿದರು. ಅರ್ಧತಾಸು ಕುಳಿತುಕೊಳ್ಳುವಷ್ಟರಲ್ಲಿ ಕರ್ಜಗಿ ಶೆಟ್ಟರು ಕಾರು ತೆಗೆದುಕೊಂಡು ಅಲ್ಲಿಗೆ ಬಂದು "ಬುದ್ಧೀ, ನಮ್ಮ ಮಗಳಿಗೆ ಒಮ್ಮಿಂದೊಮ್ಮೆಲೆ ಬಹಳ ಅಜಾರಿ ಆಗಿದೆ. ಆಕೆಯನ್ನು ಕಾರಿನಲ್ಲಿ ಕರೆದುಕೊಂಡು ಬಂದು ಡಾಕ್ಟರ ಗೋಡಬೋಲೆಯವರ ದವಾಖಾನೆಯಲ್ಲಿ ಮಲಗಿಸಿ ಇಲ್ಲಿಗೆ ಬಂದೆನು. ಆಶೀರ್ವಾದವಾಗಬೇಕು" ಎಂದು ಅಂದರು. ಅದಕ್ಕೆ ಶ್ರೀಗಳವರು "ಕುಳಿತು ಕೊಳ್ಳಿರಿ. ಗಾಬರಿಯಾಗಬೇಡಿರಿ. ಶಿವನು ಗುಣ ಮಾಡುತ್ತಾನೆ." ಎಂದು ಅಭಯವಿತ್ತು ನನಗೆ "ವಕೀಲರೇ, ಶಿವನ ವಾರಂಟು ಬಂದಿತು." ಎಂದು ನಗೆಮುಖದಿಂದ ಅಂದರು. ಶೆಟ್ಟರ ಮಗಳಿಗೆ ಆ ಕೂಡಲೇ ಗುಣವಾಯಿತು.

೧೯೫೩ ನೆಯ ಇಸ್ವಿಯಲ್ಲಿ ನಾನು ಹಾಗೂ ಶ್ರೀಮಾನ್ ಮಾನ್ವಿ ಸಿದ್ರಾಮಪ್ಪನವರು ಶಿವಯೋಗಮಂದಿರದ ಮ್ಯಾನೇಜಿಂಗ ಟ್ರಸ್ಟಿಗಳಾಗಿದ್ದಾಗ, ಮಳೆ ಇಲ್ಲದೆ

CC-0. Jangamwadi Math Collection. Digitized by eGangotri

ಶ್ರೀ ಹುಕ್ಕೇರಿ ಮಠ, ಹಾವೇರಿ




ಶ್ರೀ ಶಿವಬಸವೇಶ್ವರ ಫ್ರೀ-ಬೋರ್ಡಿಂಗಿನ ವಿದ್ಯಾರ್ಥಿಗಳು

CC-0. Jangamwadi Math Collection. Digitized by eGangotri

ಬೇರೆ ಹುಡುಗರ ಸಂಗಡ ಜಗಳಮಾಡಿದನು; ಅವರು ಅವನನ್ನು ಕೆಡವಿದರು. ಅವನ ಎದೆಯ ಮೇಲೆ ಕುಳಿತು ಮುಷ್ಟಿಯಿಂದ ಬಹಳವಾಗಿ ಆ ಹುಡುಗನನ್ನು ಗುದ್ದಿದ್ದರಿಂದ ಹುಡುಗನು ಪ್ರಾಣಹೋದಂತಾಗಿ ಬಿದ್ದನು. ಅವನ ಮನೆಯವರು ಬಂದು ಆ ಹುಡುಗನನ್ನು ಎತ್ತಿಕೊಂಡು ತಮ್ಮ ಮನೆಗೆ ಒಯ್ದು ಎಷ್ಟು ಉಪಚಾರ ಮಾಡಿದರೂ ಪ್ರಾಣ ಬರಲಿಲ್ಲವಾಯಿತು. ಮನೆಯವರೆಲ್ಲರೂ ಅಳಹತ್ತಿದರು. ಮುಂದೆ ಹೊಲಕ್ಕೆ ಹೋಗಿದ್ದ ಆ ಹುಡುಗನ ತಂದೆಗೆ ಈ ಸುದ್ದಿಯನ್ನು ಮುಟ್ಟಿಸಲು ಅವನು ಅಳುತ್ತ ಓಡಿ ಬಂದು "ನಿನ್ನೆ ನಮ್ಮ ತಾತನು ಹೇಳಿದ್ದಾನೆ" ಎಂದು, ಅವಸರದಿಂದ ಕೈಕಾಲು ಮುಖ ತೊಳೆದುಕೊಂಡು ಆ ಕಾಯಿಯನ್ನು ತೊಳೆದು, ಆ ನೀರನ್ನು ಆ ಹುಡುಗನ ಬಾಯಿಯಲ್ಲಿ ಹಾಗೂ ಕಿವಿಯಲ್ಲಿ ಹಾಕಿದನು. ಮುಂದೆ ಸ್ವಲ್ಪ ಹೊತ್ತಿನ ಮೇಲೆ ಆ ಹುಡುಗನ ಪ್ರಾಣ ಬಂದಿತು. ಆ ಮೇಲೆ ಆ ಭಕ್ತನು ತನ್ನ ಮಗನನ್ನು ಶ್ರೀಗಳವರ ಸನ್ನಿಧಿಗೆ ಕರೆದುಕೊಂಡು ಬಂದು ಸಾಷ್ಟಾಂಗ ಹಾಕಿಸಿ "ತಾತಾ, ನನ್ನ ಮಗನ ಪ್ರಾಣವನ್ನು ಕೊಟ್ಟು ಕೃಪೆಮಾಡಿದಿ" ಎಂದು ಭಕ್ತಿರಸದಿಂದ ಕಣ್ಣೀರುಗಳನ್ನು ಹಾಕಿದನು.

ಒಮ್ಮೆ ಶ್ರೀಗಳವರು ಗದಗಿನಲ್ಲಿ ಆನಂದಾಶ್ರಮದಲ್ಲಿ ಇದ್ದರು. ಒಂದು ದಿವಸ ಮುಂಜಾದೆ ೬ ಘಂಟೆಗೆ ನಾನು ತಿರುಗಾಡಲಿಕ್ಕೆಂದು ಆಶ್ರಮದ ಕಡೆಗೆ ಹೋದೆನು. ಸ್ವಾಮಿಗಳು ಆಶ್ರಮದಲ್ಲಿದ್ದರು. ನಾನು ಹೋಗಿ ಸಾಷ್ಟಾಂಗ ಹಾಕಿ, "ಬುದ್ಧೀ, ಇನ್ನೂ ಸಂಚಾರಕ್ಕೆ ದಯಮಾಡಿಸಿಲ್ಲವಲ್ಲ" ಎಂದು ಕೇಳಿದೆನು. ಅದಕ್ಕೆ ಶ್ರೀಗಳವರು "ವಕೀಲರೇ ಯಾರಿಗೋ ಅಜಾರಿ ಆಗಿದೆ. ಅವರ ಮನೆಯವರು ಈಗ ದರ್ಶನಕ್ಕೆ ಬರುತ್ತಾರೆ. ಅವರು ಬಂದಾಗ್ಗೆ ನಾವು ಇರದೆ ಇದ್ದರೆ ಅವರಿಗೆ ನಿರಾಶೆಯಾಗುತ್ತದೆ. ಆದ್ದರಿಂದ ಕುಳಿತಿದ್ದೇವೆ" ಎಂದು ಅಂದರು. ಅದಕ್ಕೆ ನಾನು 'ಯಾರಿಗೆ ಅಜಾರಿ ಆಗಿದೆ ಸ್ವಾಮಿ?' ಎಂದು ಕೇಳಿದೆನು. ಅದಕ್ಕೆ ಶ್ರೀಗಳವರು "ನಮಗೂ ಗೊತ್ತಿಲ್ಲ. ಶಿವನ ಪ್ರೇರಣೆಯಾಯಿತು. ಕುಳಿತು ಕೊಳ್ಳಿರಿ." ಎಂದು ಅಪ್ಪಣೆ ಮಾಡಿದರು. ಅರ್ಧತಾಸು ಕುಳಿತುಕೊಳ್ಳುವಷ್ಟರಲ್ಲಿ ಕರ್ಜಗಿ ಶೆಟ್ಟರು ಕಾರು ತೆಗೆದುಕೊಂಡು ಅಲ್ಲಿಗೆ ಬಂದು "ಬುದ್ಧೀ, ನಮ್ಮ ಮಗಳಿಗೆ ಒಮ್ಮಿಂದೊಮ್ಮೆಲೆ ಬಹಳ ಅಜಾರಿ ಆಗಿದೆ. ಆಕೆಯನ್ನು ಕಾರಿನಲ್ಲಿ ಕರೆದುಕೊಂಡು ಬಂದು ಡಾಕ್ಟರ ಗೋಡಬೋಲೆಯವರ ದವಾಖಾನೆಯಲ್ಲಿ ಮಲಗಿಸಿ ಇಲ್ಲಿಗೆ ಬಂದೆನು. ಆಶೀರ್ವಾದವಾಗಬೇಕು" ಎಂದು ಅಂದರು. ಅದಕ್ಕೆ ಶ್ರೀಗಳವರು "ಕುಳಿತು ಕೊಳ್ಳಿರಿ. ಗಾಬರಿಯಾಗಬೇಡಿರಿ. ಶಿವನು ಗುಣ ಮಾಡುತ್ತಾನೆ." ಎಂದು ಅಭಯವಿತ್ತು ನನಗೆ "ವಕೀಲರೇ, ಶಿವನ ವಾರಂಟು ಬಂದಿತು." ಎಂದು ನಗೆಮುಖದಿಂದ ಅಂದರು. ಶೆಟ್ಟರ ಮಗಳಿಗೆ ಆ ಕೂಡಲೇ ಗುಣವಾಯಿತು.

೧೯೪೨ ನೆಯ ಇಸ್ವಿಯಲ್ಲಿ ನಾನು ಹಾಗೂ ಶ್ರೀಮಾನ್ ಮಾನ್ವಿ ಸಿದ್ರಾಮಪ್ಪನವರು ಶಿವಯೋಗಮಂದಿರದ ಮ್ಯಾನೇಜಿಂಗ ಟ್ರಸ್ಟಿಗಳಾಗಿದ್ದಾಗ, ಮಳೆ ಇಲ್ಲದೆ

CC-0. Jangamwadi Math Collection. Digitized by eGangotri

ಶ್ರೀ ಹುಕ್ಕೇರಿ ಮಠ, ಹಾವೇರಿ




ಶ್ರೀ ಶಿವಬಸವೇಶ್ವರ ಫ್ರೀ-ಬೋರ್ಡಿಂಗಿನ ವಿದ್ಯಾರ್ಥಿಗಳು

CC-0. Jangamwadi Math Collection. Digitized by eGangotri

ಹಾವೇರಿ ಹುಕ್ಕೇರಿ ಮಠದ ಶ್ರೀ ರಾಜೋಟೇಶ್ವರ ಕರ್ತೃಗದ್ದುಗೆ



ಶ್ರೀ ಶಿವಬಸವೇಶ್ವರ ಫ್ರೀ-ಬೋರ್ಡಿಂಗಿನ ಮ್ಯಾನೇಜಿಂಗ ಟ್ರಸ್ಟಿಗಳು

CC-0. Jangamwadi Math Collection. Digitized by eGangotri

ಮಂದಿರದಲ್ಲಿದ್ದ ೨೫೦ ಆಕಳುಗಳಿಗೆ ಹಿಡಿ ಮೇವು ಇಲ್ಲ. ಮತ್ತು ಮಂದಿರದಲ್ಲಿ ಪ್ರತಿ ದಿವಸ ೧೦೦ ಜನರು ಊಟವಾಗುತ್ತಿದ್ದು ಒಂದು ಕಾಳೂ ಇಲ್ಲ. ಏನು ಮಾಡ ಬೇಕೆಂದು ಜನರಲ್ ಮ್ಯಾನೇಜರರು ನನಗೆ ರಿಪೋರ್ಟ ಮಾಡಿದರು. ಕೂಡಲೇ ನಾನು ಆಹಾರ ಧಾನ್ಯಗಳನ್ನು ಖರೀದಿ ಮಾಡುವ ಬಗ್ಗೆ ಹಾಗೂ ಆಕಳುಗಳನ್ನು ಹುಲಿಗಿಗೆ ಅಥವಾ ಹಾನುಗಲ್ಲಿಗೆ ಕಳಿಸುವ ಬಗ್ಗೆ ಅಧಿಕಾರ ಪಡೆಯುವ ಕುರಿತು ಸ್ಪೆಶಲ ಟ್ರಸ್ಟಬೋರ್ಡಿನ ಮೀಟಿಂಗನ್ನು ಗದಗಿನಲ್ಲಿ ಕರೆದನು. ಶ್ರೀಗಳವರು ಸದರೀ ಸಂಸ್ಥೆಯ ಆಜೀವ ಅಧ್ಯಕ್ಷರಾಗಿದ್ದು ಮೀಟಿಂಗಿಗೆ ದಯಮಾಡಿಸಿದರು. ಮತ್ತು ತುರ್ತಾನುತುರ್ತ ಕಾಳ ಖರೀದಿ ಮಾಡಬೇಕೆಂಬ ವಿಷಯವನ್ನು ಮೀಟಿಂಗಿನಲ್ಲಿ ತಂದರೆ ಶ್ರೀಗಳವರು ಅಧ್ಯಕ್ಷಸ್ಥಾನದಿಂದ ತಟ್ಟನೆ ತಮ್ಮ ಕಣ್ಣು ಮುಚ್ಚಿ "ಕಾಳು ಖರೀದಿ ಮಾಡಬೇಡಿರಿ; ಮತ್ತು ಆಕಳುಗಳನ್ನು ಎಲ್ಲಿಗೂ ಹೊಡೆದು ಕಳಿಸಬೇಡಿರಿ" ಎಂದು ಹೇಳಿದರು. ಮುಂದೇನು ಮಾಡಬೇಕೆಂದು ನಾನು ನಿಷ್ಠುರದಿಂದ ಮಾತ ನಾಡಿದೆನು. "ಶಿವನು ಎಲ್ಲ ಅನುಕೂಲ ಮಾಡುವನು. ಶಿವನ ಕೃಪೆಯಿದೆ" ಎಂದು ಶ್ರಿಗಳವರು ಅಪ್ಪಣೆ ಕೊಡಿಸಿದರು. ಅದಕ್ಕೆ ನಾನು ಸಮ್ಮನೆ ಇರದೆ, ಕಾಳು ಎಲ್ಲಿಂದ ಬರುತ್ತವೆಂದು ಕೇಳಿದೆನು. ನಾವು ತರಿಸಿ ಕೊಡುತ್ತೇವೆಂದು ಅಂದರು. ಎಲ್ಲಿಂದ ಎಂದು ನಾನು ಆತುರನಾಗಿ ಮಾತಾಡಿದೆನು. ಶ್ರೀಗಳವರು ಶ್ರೀಮನ್ನಿರಂಜನ ಪ್ರಣಮ ಸ್ವರೂಪಿಗಳಾದ ನವಲಗುಂದ ಮಹಾಸ್ವಾಮಿಗಳ ಕಡೆಗೆ ನೋಡಿ "ಹಾವೇರಿ ಹಾಗೂ ಬ್ಯಾಡಗಿಗೆ ಹೋಗಿ ಭಿಕ್ಷಾ ಮಾಡಿರಿ" ಎಂದು ಹೇಳಿದರು. ಅದಕ್ಕೆ ನಾನು "ಮೆ|| ಧಾರವಾಡ ಕಲೆಕ್ಟರ ಸಾಹೇಬರು ಕಾಳುಗಳನ್ನು ಶಿವಯೋಗಮಂದಿರಕ್ಕೆ ತರ ಲಿಕ್ಕೆ "ಪರಜಿಲ್ಹೆಯಾಗುವದರಿಂದ ಬಿಲ್ಕೂಲ ಪರವಾನಿಗಿ ಕೊಡುವದಿಲ್ಲ ಬುದ್ಧಿ! ತಮಗೆ ಕಾಯಿದೆ ಗೊಂದಲದ ಪರಿಚಯವಿಲ್ಲ" ಎಂದು ಸತ್ತಾದಿಂದ ಜೋರಾಗಿ ಬಿನ್ನವಿಸಿಕೊಂಡೆನು. ಅದಕ್ಕೆ ಶ್ರಿಗಳವರು ನಾವು ಪರವಾನಿಗಿ ಕೊಡಿಸುತ್ತೇವೆಂದು ಅಂದರು. ಮುಂದೆ ನವಲಗುಂದದ ಶ್ರಿಗಳವರು ಹೋಗಿ ೮ ದಿವಸಗಳಲ್ಲಿ ಹಾವೇರಿ ಹಾಗೂ ಬ್ಯಾಡಿಗಿ ಊರುಗಳಲ್ಲಿ ೨೦೦ ಚೀಲ ಜೋಳ, ೧೦೦ ಚೀಲ ಅಕ್ಕಿ ಹಾಗೂ ೮ ಅಂಡಿಗಿ ಮೆಣಸಿನಕಾಯಿ ಭಿಕ್ಷಾಮಾಡಿದೆ, ತರಿಸಿಕೊಳ್ಳಿರೆಂದು ನನಗೆ ಪತ್ರ ಬರೆದರು. ನಾನು ಮೆ. ಧಾರವಾಡ ಕಲೆಕ್ಟರ ಸಾಹೇಬರ ಕಡೆಯಿಂದ ಪರವಾನಗಿ ಕೊಡಿಸಿರೆಂದು ರಾವಬಹಾದ್ದೂರ ಶಾಂತಪ್ಪಣ್ಣ ಯಳಮಲಿ ಹಾಗೂ ದಿವಾಣ ಬಹಾದ್ದೂರ ಶಿವಪ್ಪಣ್ಣ ನವರು ಮಾನ್ವಿ ಇವರನ್ನು ಕೇಳಲಾಗಿ ಅವರಿಬ್ಬರೂ ನಕ್ಕರು. ಕಲೆಕ್ಟರರ ಸಾಹೇಬರು ಒಯ್ಯಲಿಕ್ಕೆ ಪರವಾನಗಿ ಕೊಡುವದಿಲ್ಲವೆಂದು ಅಂದರು. ಶ್ರೀಗಳವರು ಪರವಾನಿಗಿ ಕೊಡಿಸುತ್ತೇವೆಂದು ಹೇಳಿದ್ದಾರೆಂದು ನಾನು ಅವರಿಗೆ ಹೇಳಿದೆನು. ಅದಕ್ಕೆ ಅವ ರಿಬ್ಬರು "ಅವರು ಮಹಾಶಿವಯೋಗಿಗಳು. ಅವರ ಮುಂದೆ ನಮ್ಮ ಬುದ್ಧಿ ಸರಿ ಯುವದಿಲ್ಲ; ತಾರು ಕೊಟ್ಟು ಅವರನ್ನು ಕರಿಸಿಕೊಂಡು ಪ್ರಯತ್ನ ಮಾಡಿರಿ" ಎಂದು ಹೇಳಿದರು. ಆದ್ದರಿಂದ ಅವಸರದಿಂದ ಗದಗಿಗೆ ದಯಮಾಡಿಸಬೇಕೆಂದು ಹಾವೇ

CC-0. Jangamwadi Math Collection. Digitized by eGangotri

ರಿಗೆ ತಾರು ಕೊಟ್ಟೆನು. ಶ್ರೀಗಳವರು ದಯಮಾಡಿಸಿ ತಮ್ಮನ್ನು ಸಾಹೇಬರ ಕಡೆಗೆ ಕರೆದು ಕೊಂಡು ಹೋಗಿರೆಂದು ಹೇಳಲಾಗಿ, ದಿವಾಣಬಹಾದ್ದೂರರವರು "ಬುದ್ಧಿ, ಕಲೆಕ್ಟರರು ಪರವಾನಿಗಿ ಕೊಡುವದಿಲ್ಲ. ಒಂದು ವೇಳೆ ತಮ್ಮನ್ನೇ ಕರಕೊಂಡು ಹೋಗಬೇಕೆಂದು ಅಂದರೆ, ಕಲೆಕ್ಟರ ಸಾಹೇಬರು ಧಾರವಾಡದಲ್ಲಿ ಇರುವ ಬಗ್ಗೆ ಫೋನ ಮಾಡುತ್ತೇವೆ" ಎಂದು ಹೇಳಿ ಫೋನ ಮಾಡಲಾಗಿ ಮೆ|| ಕಲೆಕ್ಟರ ಸಾಹೇಬರು ಫೋನಿನಲ್ಲಿಯೇ ದಿವಾಣ ಬಹಾದ್ದೂರರವರಿಗೆ "ಶ್ರೀಗಳನ್ನು ಇಲ್ಲಿಯವರೆಗೆ ಕರೆದುಕೊಂಡು ಬರಬಾರದು. ನಿಮ್ಮ ಕಾರಕೂನನ್ನು ಕಳಿಸಿಕೊಡಿರಿ. ನಾನು ಪರವಾನಿಗಿ ಕೊಟ್ಟು ಕಳಿಸುತ್ತೇನೆ." ಎಂದು ಹೇಳಿದರು. ಸಂಜೆ ಹೊತ್ತಿಗೆ ದಿವಾಣಬಹಾದ್ದೂರರ ಕಾರಕೂನನು ೨೦೦ ಚೀಲ ಜೋಳ ಹಾಗೂ ೧೦೦ ಚೀಲ ಅಕ್ಕಿಯನ್ನು ವಿಜಾಪುರ ಜಿಲ್ಲೆಯಲ್ಲಿರುವ ಶಿವಯೋಗ ಮಂದಿರಕ್ಕೆ ಒಯ್ಯಲಿಕ್ಕೆ ಪರಮಿಟ್ಟು ಕೊಟ್ಟು ಕಳಿಸಿದನು. ಎಲ್ಲ ಚೀಲ ಗಳೂ ಸಕಾಲಕ್ಕೆ ಶಿವಯೋಗಮಂದಿರಕ್ಕೆ ಮುಟ್ಟಿದವು. ಇಷ್ಟರಲ್ಲಿ ಶಿವಯೋಗ ಮಂದಿರದಲ್ಲಿ ಬಹಳ ಮಳೆಯಾಗಿ ಹುಲ್ಲು ಚಿಗಿಯಲಿಕ್ಕೆ ಹತ್ತಿದ್ದರಿಂದ ಆಕಳುಗಳು ಮೇಯುತ್ತಾವೆಂದು ನನಗೆ ಜನರಲ ಮ್ಯಾನೇಜರ ಕಡೆಯಿಂದ ರಿಪೋರ್ಟ ಬಂದಿತು. ಮತ್ತು ಮೀಟಿಂಗಿನಲ್ಲಿ ಶ್ರೀಗಳವರು ಮಂದಿರದಲ್ಲಿ ನೀರಾವರಿ ಎಂಜಿನ ಹಾಕಲಿಕ್ಕೆ ಹೇಳಿದರು. ಅದಕ್ಕೆ ನಾನು "ಬುದ್ಧಿ, ಮಂದಿರಕ್ಕೆ ಈಗ ೩೮ ಸಾವಿರ ರೂಪಾಯಿ ಸಾಲವದೆ. ಎಂಜಿನ ಹಾಕಲಿಕ್ಕೆ ದುಡ್ಡು ಎಲ್ಲಿ ಇದೆ?" ಎಂದು ಅಂದೆನು. "ಕಾಳಜಿ ಮಾಡಬೇಡಿರಿ. ಶಿವನು ಅನುಕೂಲ ಮಾಡಿಕೊಡುತ್ತಾನೆ" ಎಂದು ಅಪ್ಪಣೆ ಕೊಡಿ ಸಿದರು. ಮತ್ತು ಸ್ವಲ್ಪ ದಿವಸಗಳಲ್ಲಿಯೇ ಮುಂಬೈ ಜೀವದಯಾ ಸಂಘದವರು ಬಂದು ೩,೨೦೦ ರೂಪಾಯಿಗಳ ಚಕ್ಕು ಹಾಗೂ ೫೦ ಚೀಲ ಸಿಮೆಂಟ ಕೊಟ್ಟು ಹೋದರು. ಮುಂದೆ ಶಿವಯೋಗಮಂದಿರದಲ್ಲಿ ಎಂಜಿನ ಹಾಕಲ್ಪಟ್ಟಿತು.

ಸಂಕ್ಷಿಪ್ತದಲ್ಲಿ ಹೇಳಬೇಕಾದರೆ, ಸಮಾಜವು ಉದ್ಧಾರವಾಗಬೇಕಾದರೆ ಇಂಥ ಮಹಾನುಭಾವರಿಂದಲೇ. ನನ್ನ ಇಪ್ಪತ್ತೈದು ವರ್ಷಗಳ ಅನುಭವದಲ್ಲಿ ಶ್ರೀಗಳ ವರ ಪವಾಡಗಳ ಸಾವಿರಾರು ಉದಾಹರಣೆಗಳನ್ನು ನೋಡಿದ್ದೇನೆ. ಇಂಥ ಮಹಾ ಶಿವಯೋಗಿವರ್ಯರು ನಮಗೆ ದೊರೆಯುವದು ಅತಿ ದುರ್ಲಭ. ಲಿಂಗೈಕ್ಯ ಪರಮ ಪೂಜ್ಯ ಹಾನಗಲ್ ಕುಮಾರ ಮಹಾಸ್ವಾಮಿಗಳು ಮತ್ತು ಹಾವೇರಿ ಶಿವಬಸವ ಮಹಾಸ್ವಾಮಿಗಳು ಲಿಂಗಾಂಗ ಸಮರಸ ಭಾವದಿಂದ ಬೆರೆತು ಶ್ರೀಮದ್ವೀರಶೈವ ಶಿವಯೋಗ ಮಂದಿರವನ್ನು ಸ್ಥಾಪಿಸಿ ಅದರ ಕಾರ್ಯವನ್ನು ಮಾಡಿದರು. ಒಂದೇ ಮಾತಿನಲ್ಲಿ ಹೇಳುವವಾದರೆ, ಆ ಶಿವಯೋಗಿ ಸಾಮ್ರಾಟನಾದ ಎಡಿಯೂರ ಶ್ರೀ ಮದನಾದಿ ಶ್ರೀ ಶ್ರೀ ಶ್ರೀ ಶ್ರೀಸಿದ್ಧಲಿಂಗನು ಸಮಾಜದ ಉದ್ಧಾರಕ್ಕಾಗಿ ಹಾಗೂ ಶಿವಯೋಗಮಂದಿರದ ಕಾರ್ಯವನ್ನು ಪೂರ್ಣಗೊಳಿಸುವದಕ್ಕಾಗಿ ಆ ಎರಡೂ ಶಿವ ಶಿವಜ್ಯೋತಿಗಳನ್ನು ಪುನಃ ಈ ಮಾನವ ಜಗತ್ತಿಗೆ ಕಳಿಸಿಕೊಡುವ ಕೃಪೆ ಮಾಡ ಲೆಂದು ಅನನ್ಯ ಭಕ್ತಿಯಿಂದ ಹಾರೈಸುತ್ತೇನೆ.

CC-0. Jangamwadi Math Collection. Digitized by eGangotri

# ಶ್ರೀಗಳವರ ಪವಾಡಗಳು

## ಶ್ರೀ ಚನ್ನಪ್ಪ ಪುಟ್ಟಪ್ಪ ಚೌಶೆಟ್ಟಿ, ಹಾವೇರಿ.

ಈ ಮೇಲ್ಕಂಡ ಶಿವಯೋಗಿಗಳು ಅಥಣಿ ತಾಲೂಕ ಸಪ್ತಸಾಗರದಲ್ಲಿ ಶಕೆ ೧೭೭೯ ನೇ ಆನಂದನಾಮ ಸಂವತ್ಸರದ ಮಾಘ ಬ. ೧೪ ಶುಕ್ರವಾರ ಮಹಾ ಶಿವರಾತ್ರಿಯ ದಿನ (ಇಸ್ವಿ ೧೮೫೭) ಬೆಳಗಿನ ೪ ಘಂಟೆಗೆ ಹಿರೇಮಠದ ಗಿರಿಮಲ್ಲಯ್ಯ ನವರ ಧರ್ಮಪತ್ನಿಯಾದ ಪರಮಮಾತೋಶ್ರೀ ಶಿವಗಂಗವ್ವನ ಪುಣ್ಯ ಗರ್ಭ ದಲ್ಲಿ ಜನಿಸಿದರು. ೬-೭ ವರ್ಷದ ವರೆಗೆ ತಂದೆ ತಾಯಿಗಳ ಹತ್ತಿರ ಬೆಳೆದು ದೊಡ್ಡವರಾದರು. ಅಥಣಿ ಶೆಟ್ಟರ ಮಠದ ಪರಮ ಶಿವಯೋಗಿಗಳಾದ ಮುರುಘಸಿದ್ಧ ಸ್ವಾಮಿಗಳು ಸಪ್ತಸಾಗರಕ್ಕೆ ಗಿರಿಮಲ್ಲಯ್ಯನವರ ಮನೆಗೆ ಬಂದು ಈ ವಟುವಿನ ಭಿಕ್ಷವನ್ನು ಬೇಡಿದರು. ಆಗ ದಂಪತಿಗಳು ಸಂತೋಷದಿಂದ ಶ್ರೀಗಳಿಗೆ ವಟು ವನ್ನು ಅರ್ಪಿಸಿದರು. ಅಲ್ಲಿ ಅವರು ೭–೮ ವರ್ಷ ಕನ್ನಡ ಭಾಷೆ ಹಾಗೂ ಧಾರ್ಮಿಕ ವಿದ್ಯೆಯನ್ನು ಕಲಿತರು. ಮುಂದೆ ಬಳ್ಳಾರಿ ಸಕ್ಕರಿ ಕರಡೆಪ್ಪನವರ ಪಾಠಶಾಲೆಯಲ್ಲಿ ಸಂಸ್ಕೃತ-ಕನ್ನಡ ಸಾಹಿತ್ಯಗಳನ್ನು ಕಲಿತರು.

ಮುಂದೆ ಕಾಶಿಗೆ ಹೋದರು. ಅಲ್ಲಿ ಸಂಸ್ಕೃತ ಮತ್ತು ಧಾರ್ಮಿಕ ವಿಷಯ ಅಭ್ಯಾಸ ಮಾಡಿದರು. ಇತ್ತ ಅಥಣಿ ಮುರುಘಸಿದ್ಧ ಸ್ವಾಮಿಗಳಿಗೆ ಜಡ್ಡು ಹೆಚ್ಚಾ ಯಿತು. ಅಷ್ಟರಲ್ಲಿ ಈ ಶಿವಬಸವ ದೇವರು ತಿರುಗಿ ಬಂದರು (೧೯೦೩). ಕಾಶಿ ಯಿಂದ ಬಂದ ಸ್ವಲ್ಪ ದಿನದಲ್ಲಿಯೇ ತಮ್ಮ ಗುರುಗಳು ಲಿಂಗೈಕ್ಯರಾದರು. ಅವರು ಅಂತ್ಯ ಕಾಲಕ್ಕೆ ಬಿದರಿ ಶ್ರೀಗಳಿಗೆ ಇವರನ್ನು ಒಪ್ಪಿಸಿದರು. ನಂತರ ಬಿದರಿಗೆ ಹೋದರು. ಮುಂದೆ ಹಾನಗಲ್ಲ ಶ್ರೀಗಳು ಹಾಗೂ ಬಿದರಿ ಕುಮಾರ ಸ್ವಾಮಿಗಳು ಸವದತ್ತಿಯಲ್ಲಿ ಬಸವ ಪುರಾಣದ ಕಾಲಕ್ಕೆ ಕೂಡಿದರು. ಅಲ್ಲಿ ಬಸವ ಪುರಾಣವನ್ನು ಈ ಶಿವಬಸವ ಮರಿದೇವರು ಒಂದು ತಿಂಗಳ ವರೆಗೆ ಹೇಳಿ ದರು. ಎಲ್ಲರೂ ಮೆಚ್ಚುವಂತೆ ಬಿಚ್ಚಿ ಬಿಚ್ಚಿ ಹೇಳಿದರು.

ಮುಂದೆ ೧೯೦೪ ರಲ್ಲಿ ಧಾರವಾಡದ ಮಹಾಸಭೆಗೆ ಈ ಶಿವಬಸವ ಮಹಾ ಸ್ವಾಮಿಗಳೂ ದಯಮಾಡಿಸಿದ್ದರು. ಹಾನಗಲ್ಲ ಕುಮಾರ ಸ್ವಾಮಿಗಳಿಗೆ ಹಾವೇರಿ ಭಕ್ತರು ಹುಕ್ಕೇರಿ ಮಠಕ್ಕೆ ಒಬ್ಬ ಯೋಗ್ಯ ಸ್ವಾಮಿಗಳನ್ನು ಕೊಡಲಿಕ್ಕೆ ಬಿನ್ನ ವಿಸಿಕೊಂಡಿದ್ದರು. ಮಹಾಸಭೆಗೆ ಹಾವೇರಿ ಪ್ರಮುಖ ಭಕ್ತರು ೮–೧೦ ಜನರು ಹೋಗಿದ್ದರು ಹಾನಗಲ್ಲ ಶ್ರೀಗಳು ಇವರೇ ನಿಮ್ಮ ಮಠದ ಸ್ವಾಮಿಗಳು ಎಂದು ತೋರಿಸಿದರು, ಹಾವೇರಿ ಭಕ್ತರು ಒಪ್ಪಿಕೊಂಡರು. ನಂತರ ೧೯೦೫ ರಲ್ಲಿ

CC-0. Jangamwadi Math Collection. Digitized by eGangotri

ಹಾವೇರಿಯಲ್ಲಿ ಒಳ್ಳೇ ವೈಭವದಿಂದ ಪಟ್ಟಾಭಿಷೇಕವಾಯಿತು. ಮುಂದೆ ೨-೩ ವರ್ಷದ ವರೆಗೆ ಹುಕ್ಕೇರಿ ಮಠದಲ್ಲಿ ಒಳ್ಳೇ ಅನುಷ್ಠಾನ ತಪಶ್ಚರ್ಯಗಳನ್ನು ಸಾಧಿಸಿ ಹಾನಗಲ್ಲ ಶ್ರೀಗಳ ಜೊತೆಗೆ ಸಮಾಜ ಸೇವೆಗೆ ಅಣಿಯಾದರು. ೧೯೦೮ ರಲ್ಲಿ ಬಾಗಲಕೋಟೆ ವೀರಶೈವ ಮಹಾಸಭೆಯಲ್ಲಿ ಪಾಸಾದ ಪ್ರಕಾರ ೧೯೦೯ ರಲ್ಲಿ ಮಲಪ್ರಭಾ ನದಿಯ ತೀರದಲ್ಲಿ ಮಹಾಶಿವಯೋಗಿಗಳಾದ ಇಳಕಲ್ಲ ಮಹಾಂತ ಸ್ವಾಮಿಗಳು ತೋರಿಸಿದ ಸ್ಥಾನದಲ್ಲಿ ಇಂದಿರುವ ಶಿವಯೋಗ ಮಂದಿರದ ಸ್ಥಾಪನೆಯಾಯಿತು. ಈ ಶಿವಬಸವ ಮಹಾಸ್ವಾಮಿಗಳ ಗುರುಗಳು ಹುಕ್ಕೇರಿಮಠದ ಸಿದ್ಧಲಿಂಗಸ್ವಾಮಿಗಳು. ಇವರು ಇಲ್ಲಿ ಸಮೀಪದ ಹಳ್ಳಿಯ ಭಕ್ತರ ಮನೆಯವರು. ಅವರನ್ನು ಮಠಕ್ಕೆ ಅರ್ಪಿಸಿದ್ದರು. ಅವರು ಹೆಚ್ಚು ವಿದ್ಯಾಭ್ಯಾಸ ಮಾಡದಿದ್ದರೂ ಮಹಾ ಪೂಜಾನಿಷ್ಠರೂ ವಾಕ್‌ಸಿದ್ಧರೂ ಮಹಾತಪಸ್ವಿಗಳೂ ಆಗಿದ್ದರು. ಅವರ ಸಂಗಡ ಠಕ್ಕ ಭಕ್ತರು ಮಾತನಾಡಲು ಹೆದರುತ್ತಿದ್ದರು. ಒಳ್ಳೇ ಸುಶೀಲ ಸಂಪನ್ನ ಭಕ್ತರನ್ನು ಕಂಡರೆ ಸಂಪೂರ್ಣ ಆಶೀರ್ವದಿಸುತ್ತಿದ್ದರು. ಇಂಥ ಮಹಿಮರು ಇದೇ ಶಿವಬಸವ ಸ್ವಾಮಿಗಳು ೧೦-೧೨ ವರ್ಷದವರಿದ್ದಾಗ ಇಲ್ಲಿಗೆ ಒಮ್ಮೆ ನೋಡಲಿಕ್ಕೆ ಬಂದಿದ್ದರಂತೆ ಆಗ " ನೀನು ನಮ್ಮ ಮಠದಲ್ಲಿಯೇ ಇದ್ದು ಬಿಡಪ್ಪಾ" ಎಂದಿದ್ದರಂತೆ. ನಾನು ಒಲ್ಲೆ. ಊರಿಗೆ ಹೋಗುತ್ತೇನೆಂದು ಹೇಳಿ ಅಥಣಿಗೆ ಹೊರಟರು. ಆಗ ಅವರು "ಯಾವಾಗಾದರೂ ನೀನು ಇದೇ ಮಠಕ್ಕೆ ಬರತಕ್ಕವನು" ಎಂದು ಅಪ್ಪಣೆ ಕೊಡಿಸಿದ್ದರೆಂದು ಇಲ್ಲಿಯ ಹಿರಿಯರು ಹೇಳುತ್ತಾರೆ. ಪರಮ ತಪಸ್ವಿಗಳ ಮಾತು ಸುಳ್ಳಾಗಬಹುದೇ ? ಇನ್ನು ಪವಾಡಗಳ ಬಗ್ಗೆ ಕೆಲವು ಮಾತುಗಳನ್ನು ಬರೆಯುತ್ತೇನೆ.

ಇವರು ಸಣ್ಣವರಿದ್ದಾಗ ಬಿದರಿ ಶ್ರೀಗಳವರ ಸಂಗಡ ಹಳ್ಳಿಯಿಂದ ಸವದತ್ತಿಗೆ ಬರುತ್ತಿದ್ದರು. ಕಾಲು ನೋಯುತ್ತವೆ ಎಂದು ಅನ್ನಲಿಕ್ಕೆ ಹತ್ತಿದರು ಶಿವಬಸವ ದೇವರು. ಶ್ರೀಗಳು ರಮ್ಮಿಸಿ ಕೆಲವು ದಾರಿ ನಡೆಸಿದರು. ಹಟವು ಜೋರಾಯಿತು. ಆಜು ಬಾಜು ಹೊಲದಲ್ಲಿ ನೋಡಿದರೆ ಯಾರೂ ಇಲ್ಲ. ಮಟುವು ಬಹಳ ರೋದನ ಮಾಡಿದ ಕೂಡಲೇ ಯಾರೋ ಒಬ್ಬ ವೃದ್ಧರು. ವಿಭೂತಿ ರುದ್ರಾಕ್ಷಿಗಳನ್ನು ಧರಿಸಿಕೊಂಡವರು, ಎತ್ತಿಕೊಳ್ಳಲಿಕ್ಕೆ ಶ್ರೀಗಳ ಅಪ್ಪಣೆ ಬೇಡಿದರು. ಅಪ್ಪಣೆ ಪ್ರಕಾರ ಆ ವೃಧ್ಧರು ಮಠದ ಸಮೀಪ ಬಂದ ಕೂಡಲೇ ಮರಿದೇವರನ್ನು ಇಳಿಸಿಹೋದರು. ಮಠದವರೆಗೆ ಕರೆದರೂ ಬರಲಿಲ್ಲ. ಮುಂದೆ ೨-೩ ನಿಮಿಷಗಳಲ್ಲಿ ತಿರುಗಿ ನೋಡಿದರೆ ಆ ವೃದ್ಧರು ಎಲ್ಲಿಯೂ ಕಾಣಲಿಲ್ಲ. ಇದಲ್ಲವೇ ಜಂಗಮರ ಮಹಿಮೆಗೆ ಶಿವನೇ ಬಂದದ್ದು?

ಒಂದು ದಿನ ಮಧ್ಯಾಹ್ನ ಜಕ್ಕಲಿ ಗೌಡರಮನೆಗೆ ಶಿವಪೂಜೆಗೆ ಶ್ರೀಗಳು ದಯಮಾಡಿಸಿದರು. ಅಭಿಷೇಕಕ್ಕೆ ಆಕಳ ಹಾಲು ಬೇಕು ಎಂದು ಹೇಳಿದರು.

CC-0. Jangamwadi Math Collection. Digitized by eGangotri

ಗೌಡರು "ಎಲ್ಲ ದನಗಳು ಅಡವಿಗೆ ಮೇಯಲಿಕ್ಕೆ ಹೋಗಿವೆ. ಮನೆಯಲ್ಲಿ ಒಂದು ಬರಡ ಆಕಳು ಮಾತ್ರ ಇದೆ" ಎಂದು ಹೇಳಿದರು. "ಶಿವನ ಕಾರ್ಯಕ್ಕೆ ಶಿವನೇ ಕೊಡುತ್ತಾನೆ. ಅದನ್ನೇ ಬೆನ್ನು ಚಪ್ಪರಿಸಿ ಹಿಂಡಿರಿ." ಅಂದರು. ಅಭಿಷೇಕಕ್ಕೂ ಅವರ ಪ್ರಸಾದಕ್ಕೂ ಸಾಕಾಗುವಷ್ಟು ಹಾಲನ್ನು ಆಕಳು ಕೊಟ್ಟಿತು. ನೀನೊಲಿದರೆ ಬರಡು ಹೈನಾಗದೆ ?

ಸವದತ್ತಿಯಲ್ಲಿ ಅಪ್ಪಯ್ಯಸ್ವಾಮಿಗಳ ಪಟ್ಟಾಭಿಷೇಕದ ಕಾಲಕ್ಕೆ ಅಲ್ಲಿ ಕಾರ್ಯಗಳನ್ನು ನಿರ್ವಹಿಸಿದ ಫೌಜದಾರರು ಶ್ರೀ ಕೆಳಗೇರಿಯವರು ಪೋಲೀಸ ಖಾತೆಯಲ್ಲಿ ಇದ್ದರು. ಎರಡು ಹೊತ್ತು ಸ್ನಾನವಿಲ್ಲದೆ ಪ್ರಸಾದ ನೀರು ವಗೈರೆ ಏನೂ ತೆಗೆದುಕೊಳ್ಳುತ್ತಿದ್ದಿಲ್ಲ. ಇಷ್ಟು ಆಚಾರವಂತರು ಪಟ್ಟಾಭಿಷೇಕದ ಕಾಲಕ್ಕೆ ವಿಶೇಷ ಶ್ರಮವಹಿಸಿ ದುಡಿದರು. ಆಗ ಹಾವೇರಿ ಶ್ರೀಗಳೇ ಎಲ್ಲ ವ್ಯವಸ್ಥೆಯ ಮುಖ್ಯಸ್ಥರು. ಅವರಿಗೆ ವಿಶೇಷ ಆನಂದವಾಯಿತು. ಸಾಹೇಬರ ತಾಯಿಯು ಸಾಹೇಬರಿಗೆ ಸಂತಾನವಿಲ್ಲವೆಂದು ಅರಿಕೆ ಮಾಡಿದಳು. ಅವರ ಮಾತಿನಂತೆ ಶ್ರೀಗಳು ಸತಿ ಪತಿಗಳಿಬ್ಬರನ್ನು ಕರೆದು ಎರಡು ಫಲಗಳನ್ನು ಕೊಟ್ಟರು. ಆಶೀರ್ವಾದದಂತೆ ಒಬ್ಬ ಕುಲಪುತ್ರನು ಹುಟ್ಟಿದನು. ಗುರುವಿನ ಆಶೀರ್ವಾದದಿಂದ ಹುಟ್ಟಿದ್ದರಿಂದ "ಗುರುಪುತ್ರ" ಎಂದು ನಾಮಕರಣವಾಯಿತು. ಅವರು ಈಗ ಬಿ.ಎ., ಎಲ್ಎಲ್.ಬಿ. ವಕೀಲರಾಗಿ ಧಾರವಾಡದಲ್ಲಿ ಇರುವರು.

ಹಾವೇರಿಗೆ ಬಂದ ಕೆಲವು ವರ್ಷದಲ್ಲಿ, ಅಜಮಾಸ ೧೯೩೫ ರ ಸುಮಾರಕ್ಕೆ ಶ್ರೀಗಳ ಶಿಷ್ಯನೊಬ್ಬನು ಮರೆತೊ ಅರಿತೊ ಬೆಣ್ಣೆಯ ಬದಲು ದೊಡ್ಡ ಅಡಕಿ ಬೆಟ್ಟದಷ್ಟು ಸುಣ್ಣವನ್ನು ನೀಡಿದನು. ಅವರು ನನ್ನನ್ನು ಪರೀಕ್ಷಿಸಲಿಕ್ಕೆ ಬಂದದೆ ಎಂದು ಸಾಸಿವೆ ಕಾಳಿನಷ್ಟು ಮಾಡಿ ನುಂಗಲಿಕ್ಕೆ ಹತ್ತಿದರು. ಆಗಿನ ಕಾಲದ ಹಿರಿಯರಾದ ಶ್ರೀ ವಾಲಿ ಬಸಪ್ಪನವರು, ಶ್ರೀ ಯಾದವಾಡ ವೀರಸಂಗಪ್ಪನವರು ದೇವರ ಮನೆಯ ಮುಂದೆಯೇ ಕುಳಿತವರು ಆ ಸುಣ್ಣವನ್ನು ಗದ್ದಿಗಿಯಲ್ಲಿ ನಂದಿಸಲು ಹೇಳಿದರು. ಆದರೂ ಶ್ರೀಗಳು ಕೇಳಲಿಲ್ಲ. ಪೂರಾ ಮುಗಿಸಿ ಬಿಟ್ಟರು. ಮುಂದೆ ೨-೩ ದಿವಸ ಸ್ವಲ್ಪ ಮಜ್ಜಿಗೆ ವಗೈರೆ ಕೊಟ್ಟು ಉಪಚರಿಸಲಾಯಿತು. "ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯಾ" ಅಲ್ಲವೇ ಬಸವಣ್ಣನವರು ಹೇಳಿದ್ದು ?

ಕಾಮಧೇನು ಕಲ್ಪವೃಕ್ಷವನ್ನು ಕೊಡುವ ಯೋಗ್ಯತೆಯುಳ್ಳ ಪಾದವಲ್ಲವೇ ? ಕಣ್ಮುಟ್ಟ ನೋಡಿದ ಅನೇಕ ವಿಷಯುಗಳನ್ನು ಲಿಂ. ವೇ. ಬುದ್ದಯ್ಯನವರು ಪುರಾಣಿಕ ಧಾರವಾಡ ಇವರು ನನಗೆ ಹೇಳಿದ್ದರು. ಅವರು ಎಡಹಳ್ಳಿ ಶ್ರೀಮಂತ ಮಲ್ಲಪ್ಪ ದೇಸಾಯರಲ್ಲಿ ಮುಖ್ಯ ಕಾರಭಾರಿಗಳಾಗಿದ್ದರು.

CC-0. Jangamwadi Math Collection. Digitized by eGangotri

ಅದೇ ಶ್ರಾವಣದಲ್ಲಿ ಅಥಣಿಗೆ ಹೋದಾಗ ಶ್ರೀಗಳಲ್ಲಿ ಊರಿಗೆ ಹೋಗುವ ಮುಂದೆ ಆಶೀರ್ವಾದ ತೆಗೆದುಕೊಳ್ಳಲಿಕ್ಕೆ ಹೋಗಿದ್ದೆನು. ತೀವ್ರ ಆಶೀರ್ವಾದ ಕೊಡಲಿಲ್ಲ. ಬಿದರಿಗೆ ಹೊಗೋಣ, ಶಿವಮಂದಿರಕ್ಕೆ ಹೋಗೋಣ ಹಾಗೆ ಹೇಳುತ್ತಾ ಕೈಯಲ್ಲಿ ಟಿಂಗು ಹಿಡಕೊಂಡು ಕೊಡಲೇ ಇಲ್ಲ. ನನಗೆ ಸ್ವಲ್ಪ ಸಂಶಯ ಬಂದಿತು. ಕೊನೆಗೆ ನನ್ನ ಜುಲುಮಿಗೆ ಆಶೀರ್ವಾದ ಕೊಟ್ಟರು. ಏನೋ ಆ ದಿವಸ ವಿಘ್ನ ವದೆ ಎಂದು ಅವರ ಶಂಕೆ. ಮನೆಗೆ ಹೋದ "ಮೇಲೆ ಊರಿಗೆ ಹೋದನೋ ಇಲ್ಲೋ ನೋಡಿ ಬಾ" ಎಂದು ಸೇವಕನಿಗೆ ಹೇಳಿ " ಹೋಗಿರಬಹುದು " ಎಂದು ಸೇವಕರು ಹೇಳಿದರೂ 'ನೋಡಿ ಬಾ' ಅಂದರು. ಅವರ ಅಪ್ಪಣೆಯಂತೆ ನನಗೆ ಮನೆಗೆ ಹೋದಕೂಡಲೆ ಥಂಡಿ ಜ್ವರ ಬಂದು ಆ ದಿವಸ ಪ್ರಯಾಣ ಬಂದಾಗಿತ್ತು. ಈ ಸೂಚನೆ ಅವರಿಗೆ ಮೊದಲೆ ಗೊತ್ತು, ಅದಕ್ಕೇ ಆಶೀರ್ವಾದ ಕೊಡುವದು ಶಡ ಮಾಡಿದರು; ಹಾಗು ಪ್ರಯಾಣ ಮಾಡಿಲ್ಲವೆಂದು ನಿಶ್ಚಯವಾಗಿ ಹೇಳಿದ್ದರು.

ಶಿವಯೋಗ ಮಂದಿರದ ಹತ್ತರ ಗುಡ್ಡದ ಮೇಲೆ ತಪಸ್ಸು ೩ ತಿಂಗಳ ವರೆಗೆ ಮಾಡಿದ್ದು ಎಲ್ಲರಿಗೂ ಗೊತ್ತಿರುವದಷ್ಟೇ? ಆಗ ಹಾವೇರಿಯ ಎಲಿಗಾರ ವೀರಪ್ಪ ನೆಂಬ ಶಿಷ್ಯನಿದ್ದನು. ರಾತ್ರಿ ೯ ಘಂಟೆಗೆ ನಡುವೆ ಪಡದೆ ಇಳಿಬಿಟ್ಟು ಒಳಗೆ ಶಿವ ಪೂಜೆಗೆ ಕುಳಿತಿದ್ದರು. ಆಗ ಚಿರ್ಚು ಬಂದು ಗುಡಿಸಲದ ಎದುರಿಗೆ ಕುಳಿತಿದೆ. ವೀರಪ್ಪನು ಹೆದರಿ ಪಡದೆ ಸರಿಸಿ ಒಳಗೆ ಹೋದನು. ಆಗ ಶ್ರೀಗಳು "ಯಾಕೆ ಘಾಬರಿಯಿಂದ ಬಂದಿ" ಎಂದು ಕೇಳಿದರು. "ಹೊರಗೆ ಚಿರ್ಚು ಬಂದಿದೆ" ಎಂದನು. ಆಗ ಶ್ರೀಗಳು "ಸತ್ತಿದ್ದರೆ ರಾಜಾ ಆಗಿ ಹುಟ್ಟುತ್ತಿದ್ದಿ. ಯಾಕೆ ಬಂದಿ?" ಎಂದರು. ತಾವು ಶಿವಪೂಜೆ ತೀರಿಸಿಕೊಂಡು ಹೋಗುವವರೆಗೂ ಚಿರ್ಚು ಅಲ್ಲಿಯೇ ಮಲಗಿತ್ತು. ಆ ಮೇಲೆ " ಒಂದು ಬಾಳೆಹಣ್ಣು ಒಗೆದು ಹೋಗು " ಎಂದು ಅಪ್ಪಣೆ ಮಾಡಿದರು. ನಂತರ ಅದು ಸದ್ದಿಲ್ಲದೆ ಹೋಯಿತು. ಇದು ತಪಸ್ವಿಗಳ ಪುಣ್ಯಾ ಶ್ರಮದ ಪ್ರಭಾವವಲ್ಲವೇ?

ಹಾವೇರಿಯಲ್ಲಿ ಸುರುವಿನಲ್ಲಿಯೇ ಹಳೇ ಕಟಗಿ ಮಠವಲ್ಲಿ ಪ್ರತಿ ದಿವಸ ಜಂತಿಯಿಂದ ಒಂದು ನಾಗರ ಹಾವು ಶಿವಪೂಜಾ ಕಾಲಕ್ಕೆ ಬಂದು ಶಿವಪೂಜಾ ಮುಗಿಯುವವರೆಗೆ ಕುಳಿತು ಹಾಲು ಕೊಟ್ಟ ನಂತರ ಹೋಗುತ್ತಿತ್ತು. ಮೊದಲು ಸೇವಕನಿಗೆ ಹಾಲು ಕೊಡಲು ಹೇಳಿದಾಗ ಹೆದರುತ್ತಿದ್ದನು. ೨-೩ ದಿವಸ ಕೊಟ್ಟು ರೂಢಿಯಾದ ನಂತರ ಒಂದು ಮೊಳದ ಅಂತರವಲ್ಲಿ ಬಟ್ಟಲನ್ನು ಇಟ್ಟು ಬಂದ ನಂತರ ಹಾಲು ಕುಡಿದು ಜಂತಿಯಲ್ಲಿ ಹೋಗುತ್ತಿತ್ತು. ಇದು ಅವರ ಭಾವಿ ಶಿವಯೋಗ ಸಾಧನೆಯ ಪ್ರಭಾವವಲ್ಲವೇ?

ಇನ್ನು ಅವರ ಅಂತ್ಯಕಾಲದ ವರ್ಣನೆಯನ್ನು ಹೇಳಿ ಈ ವಿಷಯವನ್ನು ಮುಗಿ ಸುತ್ತೇನೆ. ಅವರು ನಾಲ್ಕಾರು ತಿಂಗಳಿಂದಲೇ ಅವರ ಮುಖದ ಮೇಲೆ ದಣಿದಂತೆ

CC-0. Jangamwadi Math Collection. Digitized by eGangotri

ಕಾಣುತ್ತಿತ್ತು. ಕಡೆಯ ಶ್ರಾವಣ. ಶೆಟ್ಟರ ಮಠದಲ್ಲಿ ಮುಧೋಳ ಶ್ರೀ ಮೃತ್ಯುಂಜಯ ಸ್ವಾಮಿಗಳಿಂದ ಪುರಾಣ ನಡೆಯಿತು. ಮುಧೋಳದ ಶ್ರೀಗಳು ಒಳ್ಳೇ ರಸವತ್ತಾಗಿ ಪುರಾಣ ಹಾಗೂ ಶೂನ್ಯ ಸಂಪಾದನೆಯನ್ನು ಹೇಳಿದರು. ಪುರಾಣಕ್ಕೆ ಸಾಲುವಷ್ಟು ೧೨೦೦ ರೂ. ವರ್ಗಣಿ ಮಠದಲ್ಲೆ ಭಕ್ತರಿಂದ ಕೂಡಿತು. ನಂತರ ತಮ್ಮ ಗುರುಗಳಾದ ಮರುಳಸಿದ್ಧ ಶಿವಯೋಗಿಗಳಲ್ಲಿ ತಮ್ಮ ಸಮಾಧಿಯನ್ನು ಎಲ್ಲಿ ಮಾಡಿಸಿಕೊಳ್ಳಲಿ ಎಂದು ಕೇಳಿದರು. ಗದ್ದಿಗೆಯಿಂದ ನಿಮ್ಮ ಇಚ್ಛಾ ಇದ್ದಲ್ಲಿ ಮಾಡಿಸಿಕೊಳ್ಳಬಹುದು ಅಂತಾ ಅಪ್ಪಣೆ ಆದ ವಿಷಯವನ್ನು ಶ್ರೀಗಳ ಶಿಷ್ಯರು ಹೇಳಿದರು. ಕಡೆಯ ಶ್ರಾವಣದಲ್ಲಿ ಅಥಣಿಯಲ್ಲಿ ೧೮-೧೫ ದಿವಸ ಪುರಾಣ ನಡೆದ ಕಾಲಕ್ಕೆ ಇರುವ ಪ್ರಸಂಗವು ನನಗೂ ಬಂದಿತ್ತು. ಯಾಕೆಂದರೆ, ಅಲ್ಲಿ ನನ್ನ ಅಳಿಯಂದಿರಾದ ಶ್ರೀ ವೀರಪ್ಪನವರು ಕೋಟಿ ಇವರು ನ್ಯಾಯಾಧೀಶರಿದ್ದರು. ಅದಕ್ಕಾಗಿ ಅಲ್ಲಿಗೆ ಹೋಗಿದ್ದೆ. ಆಗಿನ ಕಾಲಕ್ಕೆ ಶಿವಯೋಗಮಂದಿರ, ಹಾವೇರಿ, ಅಥಣಿ, ಈ ಮೂರು ಸ್ಥಳಗಳಲ್ಲಿ ಎಲ್ಲಿ ತಮ್ಮ ಸಮಾಧಿಯನ್ನು ಮಾಡಿಸಿ ಕೊಳ್ಳಬೇಕೆಂಬ ವಿಚಾರದಲ್ಲಿದ್ದರು. ಶಿವಯೋಗ ಮಂದಿರದಲ್ಲಿ ದೊಡ್ಡವರ ಹತ್ತಿರ ಎಂದರೆ, ಹಾನಗಲ್ಲ ಶ್ರೀಗಳ ಮಗ್ಗಲಿಗೆ, ತಮ್ಮ ಸಮಾಧಿ ಮಾಡಿಸಿ ಕೊಳ್ಳುವದು ಅವರಿಗೆ ಮನಸ್ಸಿದ್ದಿಲ್ಲವೆಂದು ಇಲ್ಲಿಯ ಒಬ್ಬ ಹಿರಿಯರ ಎದುರಿಗೆ ಹೇಳಿದ್ದರು.

ಇಲ್ಲಿ, ಅಥಣಿಯಲ್ಲಿಯೂ ಸಮಾಧಿಯಾಗುವ ಬಗೆಗೆ ಅವರಿಗೆ ಮನಸ್ಸು ಪೂರ್ಣವಿದ್ದಿಲ್ಲ. ಹಾವೇರಿಯೇ ಅವರಿಗೆ ಉಳಿದ ಸ್ಥಾನವೆಂದಂತಾಯಿತು. ಆದರೆ ಇಲ್ಲಿಯ ಜನರಿಗೆ ಖರ್ಚು ಮಾಡುವದು ಒಜ್ಜೆ ಆಗುತ್ತದೆ ಎಂಬ ಚಿಂತೆ ಇತ್ತು ಅಷ್ಟರಲ್ಲಿ ಒಬ್ಬ ಭಕ್ತರು ಜವಾಬದಾರಿ ಹೊತ್ತು ಹೇಳಿದರು. ೧೫ ದಿವಸ ಮುಂಚಿತವಾಗಿ ಹುಬ್ಬಳ್ಳಿಗೆ ಬಂದರು. ನಂತರ ಸವದತ್ತಿಗೆ ಹೋಗುವ ವಿಚಾರವಿತ್ತು. ಅದಕ್ಕೂ ಮನಸ್ಸು ಮಾಡದೇ ಹಾವೇರಿಗೆ ದಯಮಾಡಿಸಿದರು. ತಾವು ಹಣ್ಣಾಗಿದ್ದೀರಿ. ಇನ್ನು ಎಲ್ಲಿಗೂ ದಯಮಾಡಿಸಬಾರದೆಂದು ಹಾವೇರಿಯ ಭಕ್ತರು ಬಿನ್ನವಿಸಿ ಕೊಂಡರು. ಅಷ್ಟರಲ್ಲಿ ಶ್ರೀ ಬ್ಯಾಳಿ ನಾಗಪ್ಪನವರು ಬಾಗಲಕೋಟಿ ಕಾಲೇಜ ಕಟ್ಟಡದ ಅನಾವರಣ ಸಮಾರಂಭಕ್ಕೆ ಕರೆಯಲಿಕ್ಕೆ ಬಂದರು. "ಶ್ರೀಗಳು ಮೈಯಲ್ಲಿ ಆರಾಮು ಇಲ್ಲ" ಎಂದು ಹೇಳಿದರು. ಅದೇ ಕಾಲಕ್ಕೆ ಶ್ರೀ ಕಬ್ಬೂರ ದಾನಪ್ಪನವರು ಬ್ಯಾಡಗಿ ಇವರು ಸಹ ಬಿನ್ನಹ ಮಾಡಲಿಕ್ಕೆ ಒಂದಿದ್ದರು. ಅವರಿಗೂ ಇದೇ ಉತ್ತರ. ಲಿಂಗೈಕ್ಯ ಸೂಚನೆಯನ್ನು ೪-೬ ತಿಂಗಳ ಮುಂಚಿತವಾಗಿ ಅವರು ತಿಳಿದಂತೆ, ಪುನಃ ಪುನಃ ನಡೆದ ಸಂಗತಿಯಿಂದ ತಿಳಿಯಿತು. ೮ ದಿವಸದಿಂದ ಸಣ್ಣಾಗಿ ಜ್ವರ ಬರಲಿಕ್ಕೆ ಹತ್ತಿದವು. ಆದರೂ ಓಡಾಡುತ್ತಿದ್ದರು. ೩ ದಿವಸ ಮುಂಚಿತವಾಗಿ ಅಂದರ ಶುಕ್ರವಾರ ಬೆಳಿಗ್ಗೆ ನನಗೆ ಹಿತ್ತಲದಲ್ಲಿ ಬಾವಿ ಕಟ್ಟೆಯ ಮೇಲೆ ದರ್ಶನವಾಯಿತು. ತಾವಾಗಿಯೇ– "ಚನ್ನಪ್ಪಾ! ದಯಮಾಡಿಸುತ್ತೇವೆ. ಸಾಕಾಯಿತು" ಅಂದರು. "ಇಷ್ಟು ಲಗು ಹ್ಯಾಗೆ ಬುದ್ಧೀ. ಇನ್ನೂ ೪-೬ ವರ್ಷ

CC-0. Jangamwadi Math Collection. Digitized by eGangotri

ಇರಬೇಕು'' ಎಂದು ಹೇಳಿದೆನು. "ಇಲ್ಲಾ ಸಾಕಾಗಿದೆಯಪ್ಪಾ ! ಬೇಸರ ಬಂತು" ಅಂದರು. ಅಂದರೆ ೧೫-೨೦ ದಿವಸದಲ್ಲಿ ದಯಮಾಡಿಸುತ್ತಾರೆ ಎಂದು ನಾನು ತಿಳಿದುಕೊಂಡದ್ದು. ಅದು ಸಂಭವಿಸಿದ್ದು ರವಿವಾರ ದಿವಸವೇ. ಶನಿವಾರ ರಾತ್ರಿ ಹುಬ್ಬಳ್ಳಿ ಡಾ॥ ತಗ್ಗಿನಮನಿ ಬಂದಿದ್ದರು. ಅಪ್ಪರಲ್ಲಿ ೨-೩ ಸಾರೆ ಬಂದು ಹೋಗಿದ್ದರು. ಆ ದಿವಸ ಅವರು ಪರೀಕ್ಷಿಸಿದಾಗ ನಾಡಿ ಹ್ಯಾಗೆ ಅವೆ ಎಂದು ಕೇಳಿದೆವು " ಸಡಿಲು ಬಿಟ್ಟರೆ ನಾಡಿ ಚೆನ್ನಾಗಿ ಹತ್ತುತ್ತವೆ ಬಿಗಿಯಾಗಿ ಹಿಡಿದರೆ ನಾಡಿಯೇ ಹತ್ತುವದಿಲ್ಲ. ಅವರು ಬೇಕಾದರೆ ಇನ್ನೂ ೧೦ ವರ್ಷ ಇರಬಹುದು, ಅಥವಾ ನಾಳೆಯೇ ದಯಮಾಡಿಸಬಹುದು ಅವರು ಇಚ್ಛಾಮರಣಿಗಳು. ಅವರ ಮಹಿಮೆ ಯಾರಿಗೂ ತಿಳಿಯದು. " ಅಂದರು ಆಗ ರಾತ್ರಿ ೫-೬ ಜನರು ಬೆಳತನಕ ಎಚ್ಚರಿದ್ದರು. ಅವರಲ್ಲಿ ಹೆಲಗಣ್ಣ ಉಳಿವೆಪ್ಪನೆಂಬವರು ಅವರು ಸಾಧಾರಣ ಸ್ಥಿತಿವಾನರು. ಶ್ರೀಗಳಿಗೆ ಪದೆ ಪದೆ ತಾವೇ ಅಡಿಗೆ ಮಾಡಿ ಕೊಡುತ್ತಿದ್ದರು. ಶ್ರೀಗಳು ಬೆಳಗಿನ ೪ ಘಂಟೆಗೆ ಟಾಯಮ್ ಎಷ್ಟು ಆಗಿದೆ ಎಂದು ಕೇಳಿದರು "೪ ಘಂಟೆ ಆಗಿರಬಹುದು" ಎಂದನು. ಪುನಃ ಅರ್ಧಘಂಟೆಯ ನಂತರ "ಒಬ್ಬ ಶಿವಯೋಗಿಗಳು ಬಂದಿದ್ದರು ನೋಡಿದೆಯಾ ?'' ಎಂದು ಅಪ್ಪಣೆ ಮಾಡಿದರು. "ನಾನು ನೋಡಲಿಲ್ಲಾ" ಎಂದು ಉಳಿವೆಪ್ಪ ಅಂದನು. " ನಿಮ್ಮಂಥವರ ಕಣ್ಣಿಗೆ ಹ್ಯಾಗೆ ಕಾಣಬೇಕು ! ಶಿವಯೋಗಿಯು ಬಂದು ಶಿವನ ಅಪ್ಪಣೆ ಆಗಿದೆ ದಯಮಾಡಿಸಬೇಕು ಎಂದು ಹೇಳಿದರು. ಕಾರಣ ನಾಳೆ ಬೆಳಿಗ್ಗೆ ದಯಮಾಡಿಸುತ್ತೇವೆ'' ಎಂದು ಹೇಳಿ ಪ್ರಾತರ್ವಿಧಿಗಳನ್ನು ಮುಗಿಸಿ ೧೦ ಘಂಟೆ ಸುಮಾರಕ್ಕೆ ಹಿತ್ತಲದಲ್ಲಿ ದಯಮಾಡಿಸಿ ಸ್ನಾನ ಮಾಡಿ ಶಿವಪೂಜೆಗೆ ಕುಳಿತರು. ಶುಕ್ರವಾರವೇ ತಾರು ಮಾಡಿ ಮುನವಳ್ಳಿ ಶ್ರೀಗಳನ್ನು, ಸವದತ್ತಿ ಶ್ರೀಗಳನ್ನು ಬರ ಮಾಡಿಸಿಕೊಂಡಿದ್ದರು. ಸ್ನಾನ ಮಾಡಿ ಮೈತುಂಬ ವಿಭೂತಿ ಧರಿಸಿ ಮುನವಳ್ಳಿ ಜಡಿ ಸ್ವಾಮಿಗಳ ತೊಡೆಯ ಮೇಲೆ ಪವಡಿಸಿದರು ಸಂಪೂರ್ಣ ಎಚ್ಚರದಲ್ಲಿದ್ದರು. ಒಬ್ಬ ಮರಿದೇವರು ಕಿವಿಯಲ್ಲಿ "ಶಿವಾ, ಶಿವಾ" ಅನ್ನಿರಿ ಎಂದು ಹೇಳಿದರು. "ನನಗೆ ಎಚ್ಚರವಿದೆ. ನೀವು ಅನ್ನಿರಿ" ಎಂದು ಹೇಳಿದರು. ಹೊರಗೆ ನೂರಾರು ಭಕ್ತರು ಅಳುತ್ತ ಲಿಂಗೈಕ್ಯದ ಮಹಿಮೆಯನ್ನು ನೋಡುತ್ತ ನಿಂತಿದ್ದರು. ಹೆಸವನ್ನು ವಾರೆಯಾಗಿ ಹಿಡಿದಿದ್ದರು. ಲಿಂಗವೆಲ್ಲಿ ಕಳಚುವದೋ ಎಂದು ನೋಡುವವರಿಗೆ ಹೆದರಿಕೆ. ಅಂಟು ಹಚ್ಚಿ ನಿಲ್ಲಿಸಿದಂತೆ ನಿಂತಿದೆ. ಪ್ರಾಣವಿದೆಯೇ ಎಂದು ಕೇಳಿದಾಗ "ಹೋಗಿ ೫ ನಿಮಿಷವಾಯಿತು" ಅಂದರು. ಲಿಂಗವು ಹಸ್ತದಲ್ಲಿ ಹಾಗೇ ನಿಂತಿದೆ. ಬೆರಳು ಸಹ ಮುಡಚಿಲ್ಲ. ಕಣ್ಣಾರೆ ಕಂಡ ವಿಷಯ, ಬಣ್ಣದ ಮಾತಲ್ಲ. ಎಷ್ಟೋ ಶಿವಯೋಗಿಗಳು ಮಾತನಾಡದೇ ಯೋಗ ಸಮಾಧಿಯಲ್ಲಿ ರಾತ್ರಿಯೇ ದಯಮಾಡಿಸುತ್ತಾರೆ. ಈ ಲಿಂಗನಿಷ್ಠ ಶಿವಯೋಗಿಯು ಲಿಂಗವನ್ನು ನೋಡುತ್ತ ನೋಡುತ್ತ ಶಿವಧ್ಯಾನದಲ್ಲಿ ಮಹಾತ್ಮಾ ಬಸವಣ್ಣ, ನೀಲಮ್ಮನವರಂತೆ ಲಿಂಗದೊ

CC-0. Jangamwadi Math Collection. Digitized by eGangotri



ಲಿಂ. ಶ್ರೀ. ನಿ. ಪ್ರ. ಶಿವಬಸವ ಮಹಾಸ್ವಾಮಿಗಳವರು, ಹಾವೇರಿ.
(ಲಿಂಗೈಕ್ಯರಾಗುವ ಕೆಲವು ದಿನ ಮೊದಲು ಪ್ರಸನ್ನಮುದ್ರೆಯಲ್ಲಿ ಮುಹೂರ್ತ ಮಾಡಿದಾಗ)

CC-0. Jangamwadi Math Collection. Digitized by eGangotri



ಹಾವೇರಿಯ ಹುಕ್ಕೇರಿ ಮಠದಲ್ಲಿರುವ ಶ್ರೀಗಳವರ ಗದ್ದುಗೆ

CC-0. Jangamwadi Math Collection. Digitized by eGangotri

ಳಗೆ ಅಡಗಿದರು. ಅವರ ಮಹಿಮೆಯನ್ನು ಎಷ್ಟೆಂತ ವರ್ಣಿಸಬೇಕು? ಕೂಡಲ ಸಂಗಮನಲ್ಲಿ ಬಸವಣ್ಣನವರು ಲಿಂಗೈಕ್ಯವಾದದ್ದು ಹೀಗೆಯೇ ಆಗಿರಬಹುದೇ? ಎಂದು ನೆನಪಿಗೆ ಬಂದಿತು. ಶಕೆ ೧೮೬೭ ನೇ ಪಾರ್ಥಿವನಾಮ ಸಂವತ್ಸರದ ಪುಷ್ಯ ಶು. ೧೧ ರವಿವಾರ ಹಗಲು ೧೦ಕ್ಕೆ ಘಂಟೆಗೆ, ತಾ|| ೧೩-೧-೧೯೪೬, ನೇ ಇಸ್ವಿ ದಿವಸ ಆ ಮಹಾ ಶಿವಯೋಗಿಯು ನಂದಾದೀಪವು ಅಡಗಿ ಶಿವನಲ್ಲಿ ಬೆರೆದು ಪುನಃ ಅದೇ ಮಠದಲ್ಲಿ, ಶಿವನ ಅಪ್ಪಣೆಯ ಪ್ರಕಾರ ಅದೇ ಗದ್ದಿಗೆಯಲ್ಲಿ ಅವಿರತವಾಗಿ ಕುಳಿತಿದೆ. ಇಂಥ ಶಿವಯೋಗಿಗಳ ಬಗೆಗೆ ಮಹಾತ್ಮಾ ಬಸವಣ್ಣನವರು ಹೇಳಿರುವದೇನಂದರೆ:-

ನಿಷ್ಠೆಯಿಂದ ಲಿಂಗವ ಪೂಜಿಸಿ
ಮತ್ತೊಂದು ಪಥವನರಿಯದ ಶರಣರು,
ಸರ್ಪದ ಹೆಡೆಯ ಮಾಣಿಕದಂತಿಪ್ಪರು.
ಕೂಡಲ ಸಂಗಮದೇವ ನಿಮ್ಮ ಶರಣರು.

ಹಾವೇರಿಯಲ್ಲಿರುವ ಆ ಶಿವಯೋಗಿಯ ಮಹಿಮೆಯನ್ನು ನೋಡಿರಿ. ಗದ್ದಿಗೆಯ ದರ್ಶನಕ್ಕೆ ಪ್ರತಿ ದಿವಸ ನೂರಾರು ಜನರು ಬರುವರು. ಸೋಮವಾರವಂತೂ ಒಂದು ಜಾತ್ರೆಯಂತೆ ದರ್ಶನಕ್ಕೆ ಬರುತ್ತಾರೆ. ಪ್ರತಿವರ್ಷ ಇದೇ ಪುಷ್ಯ ಶು. ೧೧ ಮಿತಿಗೆ ೬ ದಿವಸ ಪುರಾಣ ಪುಣ್ಯ ಕಥೆಗಳು, ಕುಸ್ತಿಗಳೂ ಆಗುತ್ತವೆ. ೫-೬ ತಾಲೂಕಿನ ಜನರು ಹಾಗೂ ಕರ್ನಾಟಕದ ಎಲ್ಲ ಭಾಗದ ಹರ ಚರ ಮೂರ್ತಿಗಳು ಕೂಡಿ ವಿಶೇಷ ವೈಭವದಿಂದ ಜಾತ್ರೆಯು ನಡೆಯುತ್ತದೆ. ಇದೇ ಪ್ರಕಾರ ಉತ್ತರೋತ್ತರ ನಡೆದು ಜನರಿಗೆ ಧರ್ಮದಲ್ಲಿ ಅಭಿರುಚಿ ಹುಟ್ಟಿ ಸುಖ ಸಂಪತ್ತು ಬೆಳೆಯಲೆಂದು ಹಾರೈಸುತ್ತೇನೆ.

ಆ ಮಹಾ ಶಿವಯೋಗಿ ಶಿವಬಸವೇಶನು ನಮ್ಮೆಲ್ಲರನ್ನು ಸದಾ ಅನುಗ್ರಹಿಸಲಿ.

CC-0. Jangamwadi Math Collection. Digitized by eGangotri

# ಶ್ರೀಗಳವರ ಪ್ರವಾಸ-ಲೀಲೆಗಳು

## ಶ್ರೀ ಮ. ಘ. ಚ. ಶಾಂತವೀರ ಪಟ್ಟಾಧ್ಯಕ್ಷರು, ಸಿಂದಗಿ.

ಇಪ್ಪತ್ತನೆಯ ಶತಮಾನದಲ್ಲಿ, ಕರ್ನಾಟಕದಲ್ಲಿ ಬೆಳಗಿದ ದಿವ್ಯ ಜ್ಯೋತಿಗಳಲ್ಲಿ, ನಮ್ಮ ಲಿಂ. ಹಾವೇರಿಯ ಶ್ರೀ ಶಿವಬಸವ ಶಿವಯೋಗಿಗಳವರೊಬ್ಬರು.

ಅತ್ಯಾಧುನಿಕ ಜಗತ್ತಿನ ಆಧ್ಯಾತ್ಮಿಕ ರಂಗದಲ್ಲಿ ಶ್ರೀಗಳವರು ತಮ್ಮ ತೇಜಸ್ವಿ ಜೀವನದಿಂದ ಅವತಾರಿ ಪುರುಷರೆನಿಸಿದರು ! ಧಾರ್ಮಿಕ ಜಾಗ್ರತಿಯಲ್ಲಿ ತಮ್ಮ ತ್ಯಾಗಪೂರ್ಣ ಯೋಗಜೀವನದಿಂದ ದಾರ್ಶನಿಕರೆನಿಸಿದರು.

ಈ ಮಹಾತ್ಮರ ಪ್ರವಾಸ ಪ್ರಸಂಗದಲ್ಲಿಯ ಮಹತ್ವದ ಕೆಲವು ಘಟನೆಗಳು, ನನ್ನ ಸ್ಮೃತಿ ಪಟಲದ ಮೇಲೆ ಅಚ್ಚೊತ್ತಿವೆ. ಅವುಗಳನ್ನೇ ಇಲ್ಲಿ ಚಿತ್ರಿಸಲು ಪ್ರಯತ್ನಿಸುವೆ. ಇದರಿಂದ ಮಹಾತ್ಮರ ಮಹತಿಯ ಅರಿವು ತಿಳಿದು ಬಾರದೇ ಇರದು. " ಮಹಾತ್ಮರ ನಡೆ ಪಾವನ, ನುಡಿ ಪವಿತ್ರ " ವೆಂಬ ಶರಣರ ಸತ್ಯದ ದರುಶನವಿದೆ ಇಲ್ಲಿ !

ಪೂಜ್ಯ ಶ್ರೀಗಳವರು ತಮ್ಮ ಬಾಲ್ಯ ಜೀವನವನ್ನು ಅಥಣಿಯ ಶ್ರೀಮುರುಳಸಿದ್ಧ ಸ್ವಾಮಿಗಳವರಲ್ಲಿ ಕಳೆದು ಕೆಲವರ್ಷಗಳ ನಂತರ ಬಿದರಿ ಕುಮಾರ ಸ್ವಾಮಿಗಳವರ ಆಶ್ರಯದಲ್ಲಿ ಸೇವಾತತ್ಪರರಾಗಿ, ಅವರ ಕೃಪಾಪಾತ್ರರಾಗಿ ಬೆಳೆದರು. ಮುಂದೆ ಬಳ್ಳಾರಿಯ ಶರಣರಾದ ಶ್ರೀ ಸಕ್ಕರಿಯ ಕರಡೆಪ್ಪನವರಲ್ಲಿ ಅಭ್ಯಸಿಸಿ ಆಮೇಲೆ ಕಾಶಿಗೆ ಪ್ರಯಾಣ ಮಾಡಿ, ಅಲ್ಲಿ ಕೆಲಕಾಲ ಧಾರ್ಮಿಕ ಅಭ್ಯಾಸಮಾಡಿ, ನಾಡಿನ ತುಂಬೆಲ್ಲ ಸಂಚಾರ ಕೈಕೊಂಡರು.

ಜನಜಾಗ್ರತಿಯನ್ನು ಮಾಡುವದಕ್ಕಿಂತ ಮೊದಲು, ತಮ್ಮ ಆತ್ಮಜಾಗ್ರತಿಗಾಗಿ ಏಕಾಗ್ರತೆಯ ಅನುಷ್ಠಾನ ಅವಶ್ಯವೆಂದರಿತು ಸರ್ವಶ್ರೇಷ್ಠವೂ, ಪ್ರಶಾಂತವೂ ಆದ ಶ್ರೀಶೈಲ ಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದರು.

### ಶ್ರೀಶೈಲ ಕ್ಷೇತ್ರದಲ್ಲಿ

ಒಬ್ಬರೇ ಪಾದಚಾರಿಗಳಾಗಿ, ಆ ನಿಬಿಡವಾದ ಕಾಂತಾರದಲ್ಲಿ, ಬೆಟ್ಟವನ್ನು ಏರುತ್ತ ಮಳೆ ಚಳಿಗೆ ಅಳುಕದೆ, ಕಾಡುಮೃಗಗಳಿಗಂಜದೆ, ದೇಹದ ದಣುವಿನ ಬೇಸರ ವಿಲ್ಲದೆ, ನಿಶ್ಚಲ ಮನಸ್ಸಿನಿಂದ, ಸತತ ೨೦ ದಿನಗಳ ಪ್ರಯಾಣದ ನಂತರ, ಶ್ರೀಮಲ್ಲಿಕಾರ್ಜುನನ ದರ್ಶನ ಪಡೆದರು. ನಿರ್ಜನವಾದ ಬೆಟ್ಟದ ನೆತ್ತಿಯ ಮೇಲೆ

CC-0. Jangamwadi Math Collection. Digitized by eGangotri

ಗುಡಿಯಲ್ಲಿಯ ಲಿಂಗ ಒಂದೇ; ಪೂಜೆಗಾಗಿ ಪೂಜಾರಿಗಳೂ ಇಲ್ಲದ ನಿರ್ಜನ ವನ. ಸುತ್ತಲೂ ಎತ್ತ ನೋಡಿದತ್ತ, ಮುಗಿಲೆತ್ತರ ಬೆಳೆದ ಮರಗಳು - ಬಿದಿರ ಮೆಳೆಗಳು. ಹಗಲು ಹೊತ್ತಿನಲ್ಲಿಯೇ - ಇರುಳಿನ ಕಲ್ಪನೆಯನ್ನು ತರುವಂಥ ಅಂಧಕಾರ ! ಪಕ್ಷಿಗಳ ಕಿಲಿಕಿಲಾಟ - ವನ್ಯ ಮೃಗಗಳ ಕೂಗಾಟ - ಚೀರಾಟ ಬಿಟ್ಟರೆ ಇಡಿಯ ವನವೆಲ್ಲ ನಿಶ್ಶಬ್ದ, ನೀರವ ! ಭೂತದ ಮನೆಯಂತೆ ಭೀಕರವಾಗಿ ತೋರುವ ಈ ವನದಲ್ಲಿ ಭಯಬಾರದೇ ಇದ್ದೀತೇ ? ( ಇದು ಸುಮಾರು ೫೦ ವರುಷಗಳ ಹಿಂದಿನ ಶ್ರೀಶೈಲದ ಸ್ಥಿತಿ ) ಆದರೆ ಶ್ರೀಗಳವರಿಗೆ ಭಯದ ಭೀತಿ ಇಲ್ಲ. ಚಂಚಲವಾದ ಮನವನ್ನು ಸ್ಥಿರವಾಗಿ ನಿಲ್ಲಿಸಬೇಕಾದರೆ ಇದಕ್ಕಿಂತ ಬೇರೆ ಪ್ರಶಾಂತವಾದ ಸ್ಥಳವಿಲ್ಲವೆಂದರಿತರು. ಬೆಟ್ಟದ ಕೊಳ್ಳದ ಒಂದು ಗುಹೆಯಲ್ಲಿ ಹೋಗಿ ಅನುಷ್ಠಾನಕ್ಕೆ ಕುಳಿತುಬಿಟ್ಟರು. ಗಿರಿಮಲ್ಲೇಶಾ ! ನನಗೆ ನೀನೇ - ಜೊತೆ - ಗತಿ - ಮತಿ ಎಂದು ನಂಬಿ, ಅನನ್ಯ ಭಕ್ತಿಯಿಂದ ಪ್ರಾರ್ಥಿಸಿ, ಸತತ ೩ ತಿಂಗಳುಗಳವರೆಗೆ ತಮ್ಮ ಪ್ರಖರವಾದ ಅನುಷ್ಠಾನವನ್ನು ಪೂರೈಸಿ, ಆತ್ಮಜಾಗ್ರುತಿಯ ಜೊತೆಗೆ ಆಧ್ಯಾತ್ಮಿಕ ಶಕ್ತಿಯನ್ನು ಪಡೆದು ಪ್ರಕಾಶಮಾನರಾಗಿ ಹೊರಬಂದರು. ಶ್ರೀಗಳವರ ದಿವ್ಯ ಶಕ್ತಿಯ ದ್ಯೋತಕವಾಗಿ ಪರಿಣಮಿಸಿತು ಈ ಶ್ರೀಶೈಲವಾಸ !

ಸಿದ್ಧ ಬುದ್ಧರಾಗಿ, ಮುಂದೆ ನಾಡಿನಲ್ಲಿ ನವಜಾಗ್ರತಿಗಾಗಿ ಬದ್ಧರಾಗಿ ಹೊರಬಿದ್ದರು. ಬಸವನ ವಾಣಿಯ ವೀಣೆಯೊಡನೆ ಹಾಡುತ್ತ, ಶರಣರ ನಡೆಯ ತೋರುತ್ತ, ಪ್ರಭುವಿನ ಪ್ರಕಾಶ ಬೀರುತ್ತ, ಅಖಂಡ ೪೦ ವರುಷ ತಮ್ಮ ಧರ್ಮ ಜೀವನವನ್ನು ತಮ್ಮ ಕರ್ಮ ಜೀವನದಿ ಸವೆಸುತ್ತ, ಜನರನೆಚ್ಚರಿಸುತ್ತ ಉದ್ಧರಿಸಿದರು. ಧರ್ಮ ಕರ್ಮಗಳ ಸಮನ್ವಯದಿಂದ, ವೀರಶೈವ ತತ್ವದ ತಿರುಳನ್ನು ವಿಶ್ವಕ್ಕೆ ಸಾದರ ಪಡಿಸಿ " ಶಿವ–ಬಸವ " ಎಂಬ ನಾಮವನ್ನು ಸಾರ್ಥಕಗೊಳಿಸಿದರು.

## ಶಿವಯೋಗ ಮಂದಿರದಲ್ಲಿ

ಒಂದು ದಿನ ಶ್ರೀಗಳವರು ಶಿವಯೋಗಮಂದಿರಕ್ಕೆ ಹೊರಟರು. ರಾತ್ರಿ ೧೦ ಘಂಟೆಗೆ ಬದಾಮಿ ಸ್ಟೇಶನ್‌ದಿಂದ ಇಳಿದು ಟಾಂಗಾಮಾಡಿಕೊಂಡು ಹೊರಟಿದ್ದರು. ಟಾಂಗಾದವನು ಗುರುಗಳಿಗೆ "ಪೂಜ್ಯರೇ ! ಇಲ್ಲಿಂದ ಶಿವಯೋಗಮಂದಿರ ೧೦ ಮೈಲು ಆಗುತ್ತದೆ. ಈಗ ರಾತ್ರಿ ಬಹಳವಾಗಿದೆ. ಬದಾಮಿಯಲ್ಲಿ ವಸತಿ ಮಾಡಿ ಬೆಳಗ್ಗೆ ಅಲ್ಲಿಗೆ ಹೊರಡಬಹುದು" ಎಂದು ವಿನಂತಿಸಿಕೊಂಡನು. ಆಗ ಶ್ರೀಗಳವರು "ಇಲ್ಲಪಾ ಅಲ್ಲಿಗೆ ಈಗಲೇ ಹೋಗಬೇಕಾಗಿದೆ. ಲಿಂಗಾರ್ಚನೆ ಈ ಹೊತ್ತು ಅಲ್ಲಿಯೇ ಆಗಬೇಕಾಗಿದೆ. ಶಿವನ ಇಚ್ಛೆ ಮೀರಲು ಸಾಧ್ಯವಿಲ್ಲ. ನಡೆ ಹೊರಡೋಣ ಅಂಜುವ ಕಾರಣವಿಲ್ಲ". ಎಂದು ಹೇಳಿದರು. ಟಾಂಗಾದವನು, ಪೂಜ್ಯರ ಮಾತನ್ನು ಮೀರಲಾರದೆ ಹೊರಟುಬಿಟ್ಟನು. ಕತ್ತಲೆಯ ರಾತ್ರಿ ಸಮಯ. ತಾರೆಗಳ ಮಿಂಚಿ ಹೊಳೆವ

CC-0. Jangamwadi Math Collection. Digitized by eGangotri

ನಸು ಬೆಳಕಿನ ಜೊತೆಗೆ ಟಾಂಗೆಗೆ ಹಚ್ಚಿದ ಎರಡು ಮೇಣಬತ್ತಿಯ ಮಿಣುಕು ಬೆಳಕು; ಹೂಡಿದ ಕುದುರೆಯ ಟಪ್ ಟಪ್ ಎಂಬ ಖುರದ ಧ್ವನಿ ಜೊತೆಗೆ ಕಟ್ಟಿದ ಗೆಜ್ಜೆಯ ಗಿಲ್ ಗಿಲ್ ಎಂಬ ನಿನಾದ ತಾಳಹಾಕುತ್ತಿತ್ತು. ಐದು-ಆರು ಮೈಲ ಟಾಂಗಾ ಹೋಗಿರ ಬಹುದು. ಅಷ್ಟರಲ್ಲಿ ನಡುದಾರಿಯ ಅಡವಿಯಲ್ಲಿ ಒಂದು ಚಿರ್ಚವು ಹಾರಿ ಬಂದು ಟಾಂಗಾದ ಎದುರಿನಲ್ಲಿ ಬಂದು ನಿಂತುಬಿಟ್ಟಿತು. ಆ ಎಂದು ಬಾಯಿ ತೆರೆದು ನೀಳ ವಾದ ನಾಲಿಗೆ ಚಾಚಿ ಬಾಲವನ್ನು ಮೇಲೆತ್ತಿ ಮೈನಿಮಿರಿ ನಿಂತಿರುವ ಹುಲಿಯನ್ನು ನೋಡಿ, ಟಾಂಗಾದವನು ಅಂಜಿ ನಡುಗಹತ್ತಿದನು. ಟಾಂಗಾ ನಿಂತುಬಿಟ್ಟಿತು. ಗುರು ಗಳಿಗೆ ಹೇಳಬೇಕೆಂದರೆ ಬಾಯಿಯಿಂದ ಮಾತುಗಳೇ ಹೊರಡದಾಗಿದೆ. ಶ್ರೀಗಳ ವರು ಇವನ ಸ್ಥಿತಿಯನ್ನು ನೋಡಿ ಮನದಲ್ಲಿಯೇ ನಸುನಕ್ಕು ಅವನಿಗೆ ಧೈರ್ಯ ವನ್ನು ಕೊಡುತ್ತ ಆ ಪ್ರಾಣಿಯ ಕಡೆಗೆ ದಿಟ್ಟಿಸಿ ನೋಡುತ್ತ "ಏಕೆ ತಡೆಗಟ್ಟು ವಿಯೋ? ಹೊರಟು ಹೋಗು. ಶಿವನ ಪೂಜೆಗೆ ತೊಂದರೆ ಪಡಿಸಬೇಡ. ಸರಿ, ದಾರಿ ಬಿಡು." ಎಂದು ಮನುಷ್ಯರ ಜೊತೆಗೆ ಮಾತನಾಡುವಂತೆ ನುಡಿದದ್ದನ್ನು ಕೇಳುತ್ತಲೇ ಆ ಕ್ರೂರ ಮೃಗವು ದಾರಿ ಬಿಟ್ಟು ಸುಮ್ಮನೆ ಹೊರಟು ಹೋಯಿತು. ಇದನ್ನು ನೋಡಿ ಟಾಂಗಾದವನು ಚಕಿತನಾಗಿ ಭಯಭಕ್ತಿಯಿಂದ ಶ್ರೀಗಳವರ ಅಡಿಗಳಿಗೆ ಎರಗಿದನು.

ಅವರನ್ನು ಶಿವಯೋಗಮಂದಿರದಲ್ಲಿ ಬಿಟ್ಟು ಬರುವಾಗ್ಗೆ "ಗುರುಗಳೇ, ನಾನು ಈಗಲೇ ಹೊರಡಬೇಕು. ಮತ್ತೆ ನಸುಕಿನ ಗಾಡಿಗಾಗಿ ಸ್ಟೇಶನ್‌ದಲ್ಲಿ ಇರಬೇಕಾಗಿದೆ. ಅಪ್ಪಣೆಯಾಗಬೇಕು" ಎಂದು ಟಾಂಗಾದವನು ಬೇಡಿಕೊಳ್ಳಲು ಶ್ರೀಗಳವರು ಅವನ ಜೊತೆಗೆ ಒಬ್ಬನನ್ನು ಕಳುಹಿಸಲು ಹೇಳಿದರು. ಟಾಂಗಾದವನು ಹೊರಡುತ್ತ ಮತ್ತೆ ಶ್ರೀಗಳವರಲ್ಲಿ ಬಂದು, "ಪೂಜ್ಯರೇ ! ಮತ್ತೆ ದಾರಿಯಲ್ಲಿ ಆ ಪ್ರಾಣಿಯು ನನಗೆ ಗಂಟು ಬಿದ್ದರೆ, ಏನು ಮಾಡಲಿ?" ಎಂದು ಬಿನ್ನವಿಸಿ ಕೊಳ್ಳಲು, ಆಗ ಶ್ರೀಗಳವರು ನಕ್ಕು ಒಂದು ಕಾಯಿಯನ್ನು ತರಿಸಿ ಮಂತ್ರಿಸಿ ಕೊಡುತ್ತ "ಮತ್ತೆ ದಾರಿಯಲ್ಲಿ ಆ ಪ್ರಾಣಿಯು ನಿನಗೆ ಭೆಟ್ಟಿಯಾದರೆ, ಅಂಜದೇ ಇದನ್ನು ತೋರಿಸಿ ಬಿಡು. ಅದು ಹೊರಟು ಹೋಗುತ್ತದೆ" ಎಂದು ಹೇಳಿ ಕಳುಹಿಸಿ ಕೊಟ್ಟರು. ಬರುವಾಗ್ಗೆ ಆ ಚಿರ್ಚವು ಯಾವ ಸ್ಥಾನದಲ್ಲಿ ಭೆಟ್ಟಿಯಾಗಿತ್ತೊ ಹೋಗುವಾಗ ಅದೇ ಸ್ಥಳದಲ್ಲಿ ಎದುರಾಯಿತು. ಹೊಳೆವ ಅದರ ಕಣ್ಣುಗಳನ್ನು ನೋಡುತ್ತಲೇ ಟಾಂಗಾದವನ ಎದೆ ನಡುಗಿತು. ಆದರೆ ಶ್ರೀಗಳವರು ಮಂತರಿಸಿ ಕೊಟ್ಟಿರುವ ಕಾಯಿಯವನ್ನು ಧೈರ್ಯದಿಂದ ಕೈಯಲ್ಲಿ ತೆಗೆದುಕೊಂಡು ತೋರಿಸುತ್ತ ಕಣ್ಣು ಮುಚ್ಚಿ ಶ್ರೀಗಳವರನ್ನು ಸ್ಮರಿಸುತ್ತಲೇ, ಒಮ್ಮೆ ಅದು ಗುಡುಗಿ ಹೊರಟು ಹೋಯಿತು. ಟಾಂಗಾದವನು ಆನಂದದಿಂದ ಮಹಾತ್ಮರ ತಪಶ್ಶಕ್ತಿಯನ್ನರಿತು ಶ್ರೀಗಳ ದರ್ಶನ ಭಾಗ್ಯವನ್ನು ಕೊಂಡಾ ಡುತ್ತ ಹೊರಟು ಹೋದನು !

CC-0. Jangamwadi Math Collection. Digitized by eGangotri

## ಹುಬ್ಬಳ್ಳಿಯಲ್ಲಿ ಪೂಜೆಗೆ ಕುಳಿತಾಗ

ಒಮ್ಮೆ ಶ್ರೀಗಳವರು, ಹುಬ್ಬಳ್ಳಿಯ ಶ್ರೀ ಚರಲಿಂಗ ಸ್ವಾಮಿಗಳ ಕಲಬುರ್ಗಿಯ ಮಠದಲ್ಲಿ ಇಳಿದುಕೊಂಡಿದ್ದರು. ಆ ದಿನ ಅವರ ಮನದ ಸ್ವಾಸ್ಥ್ಯವೇ ಕದಡಿ ಹೋಗಿತ್ತು. ದೃಷ್ಟಿ ಅಂತರ್ಮುಖವಾಗಿ, ಮೌನವೇ ಮೂಕವೇದನೆಯ ದ್ಯೋತಕವಾಗಿತ್ತು. ಪೂಜೆಯ ವೇಳೆಯಾಗಲು ಹೋಗಿ ಸ್ನಾನ ತೀರಿಸಿಕೊಂಡು ಪೂಜೆಗೆ ಕುಳಿತರು. ದಿನದ ಸಂಭ್ರಮವಿಲ್ಲ. ಮುಂಬರುವ ವಿಪ್ಲವದ ಸೂಚನೆಯಂತೆ ಗಂಭೀರ ಶಾಂತಿ ನೆಲಿಸಿತ್ತು. ಅಂಗದ ಮೇಲಿನ ಲಿಂಗೈಯನನ್ನು ತೆಗೆದು ಅಂಗೈಯಲ್ಲಿಟ್ಟುಕೊಂಡು ಮಂಗಲ ಮಜ್ಜನವ ಮಾಡಿ, ವಿಭೂತಿಯನ್ನು ಧರಿಸುವದಕ್ಕಾಗಿ ತಮ್ಮ ವಿಭೂತಿಯ ಗಟ್ಟಿಯ ಕಡೆ ನೋಡುತ್ತಲೇ ಆ ವಿಭೂತಿ ಗಟ್ಟಿಯು ಒಮ್ಮೆಲೇ ಒಡೆದು ಎರಡು ಹೋಳಾಗಿ ಬಿಟ್ಟಿತು. ಶ್ರೀಗಳವರು ಈ ವಿಚಿತ್ರವನ್ನು ನೋಡಿ ವಿಸ್ಮಯರಾಗಿ, ಕ್ಷಣ ಕಾಲ ಚಿಂತಿಸುತ್ತಲೇ "ಅಯ್ಯೋ, ಶಿವ ಶಿವಾ! ಶಿವ ಶಿವಾ!" ಎಂದು ನುಡಿಯುತ್ತ ಮಾಡುತ್ತಿರುವ ತಮ್ಮ ಲಿಂಗೈಯ್ಯನ ಪೂಜೆಯನ್ನು ಅಷ್ಟಕ್ಕೇ ಬಿಟ್ಟು ಎದ್ದುಬಿಟ್ಟರು. ಆಗ ಅವರ ಸೇವಕನು ಎಂದೂ ಇಲ್ಲದ ಇಂದಿನ ಈ ವಿಚಿತ್ರ ಸ್ಥಿತಿಗತಿಯನ್ನು ನೋಡಿ ಗಾಬರಿಗೊಂಡನು. ನಮ್ರತೆಯಿಂದ "ಗುರುಗಳೇ! ಪೂಜೆಯನ್ನು ಪೂರ್ತಿ ಮುಗಿಸದೆ ಎದ್ದುಬಿಟ್ಟಿರಲ್ಲ? ನನ್ನಿಂದ ಏನಾದರೂ ಅಪರಾಧ ಸಂಭವಿಸಿದೆಯೇ? ಏಕೆ? ಬುದ್ಧೀ, ಏನಾಯಿತು?" ಎಂದು ಕೇಳಲು ಶ್ರೀಗಳವರು ಆಗ ಆ ಒಡೆದ ವಿಭೂತಿ ಗಟ್ಟಿಯ ಕಡೆಗೆ ಕೈಮಾಡಿ ತೋರಿಸಿದರು. ಸೇವಕನು "ಪೂಜ್ಯರೇ ಮಠದಲ್ಲಿಯ ಬೇರೆ ಶುದ್ಧ ವಿಭೂತಿಯನ್ನು ತರುವೆ, ತಾವು ಪೂಜೆಯನ್ನು ಮಾಡಿ ಮುಗಿಸಬೇಕು." ಎಂದು ಬೇಡಿಕೊಂಡನು. ಆಗ ಶ್ರೀಗಳವರು ಅವನಿಗೆ "ಅಯ್ಯೋ! ಹುಚ್ಚಾ! ನಮ್ಮ ವಿಭೂತಿ ಗಳೊಬ್ಬರು ನಮ್ಮನ್ನಗಲಿ ಹೋದ ಮೇಲೆ ಬೇರೆ ವಿಭೂತಿ ಏಕೆ? ಪೂಜೆ ಏಕೆ? ಈಗಲೆ; ನಾನು ಅಲ್ಲಿಗೆ ಹೋಗಬೇಕಾಗಿದೆ. ಅವರ ಅಂತ್ಯ ದರುಶನವೇ ಇಂದೆ ನಗೆ ಶ್ರೇಷ್ಠ ಪೂಜೆ! ನಡೆ, ಏಳು ನಾನು ಅಥಣಿಗೆ ಹೊರಡುತ್ತೇನೆ. ಬೇಗ ನೀನು ಸಾಮಾನುಗಳನ್ನು ಜೋಡಿಸಿಕೊಂಡು ಬಾ" ಎಂದು ನುಡಿದು ಅಲ್ಲಿ ಹೆಚ್ಚು ನಿಲ್ಲದೆ ಹೊರಟುಬಿಟ್ಟರು. ಶ್ರೀಗಳವರು ಸ್ಟೇಶನ್ ತಲುಪಿ ಹತ್ತು-ಹದಿನೈದು ನಿಮಿಷಗ ಳಾಗಿರಬೇಕು. ಅಷ್ಟರಲ್ಲಿ ತಾರಿನಿಂದ ಸುದ್ದಿ ತಿಳಿದು ಬಂದಿತು. ಅಥಣಿಯ ಶ್ರೀ ಶಿವಯೋಗಿಗಳು ಲಿಂಗೈಕ್ಯರಾದರೆಂಬ ವಾರ್ತೆ ಅಲ್ಲಿ ಎಲ್ಲರನ್ನು ದುಃಖಿರನ್ನಾಗಿ ಮಾಡಿತು. ಆಗ ಶ್ರೀಗಳವರ ನುಡಿ ನಡೆಯ ಅರ್ಥ ಆಗ ಎಲ್ಲರಿಗೂ ಆಗಿ ಆಶ್ಚರ್ಯ ಚಕಿತರನ್ನಾಗಿ ಮಾಡಿತು. ಶ್ರೀಗಳವರ ತ್ರಿಕಾಲ ಜ್ಞಾನವನ್ನರಿತ ಭಕ್ತರೆಲ್ಲರೂ ಅವರನ್ನು ಮಹಿಮಾಪುರುಷರೆಂದು ಕೊಂಡಾಡಿದರು.

## ಅಥಣಿಯಲ್ಲಿ

ಹುಬ್ಬಳ್ಳಿಯಿಂದ ಶ್ರೀಗಳು ಅಥಣಿಗೆ ಬಂದರು. ಆಗ ಅಷ್ಟರಲ್ಲಿ ನಾಡಿನ ನಾನಾ ಕಡೆಯಿಂದ ಅಸಂಖ್ಯ ಭಕ್ತಾದಿಗಳೂ, ಅನೇಕ ಶರಣ ಶರಣೆಯರೂ, ಹಿರಿ

CC-0. Jangamwadi Math Collection. Digitized by eGangotri

ಕಿರಿಯ ಸಹಸ್ರಾರು ಸ್ವಾಮಿಗಳವರೂ ಬಂದು ಕೂಡಿದ್ದರು. ಅಂದಿನ ಅಥಣಿಯ ದೃಶ್ಯ ಕೈಲಾಸದ ಕಲ್ಪನೆಯನ್ನು ತರುವಂತಿತ್ತು. ಅಥಣಿಯ ಭಾಗ್ಯ ಪುರುಷನ ಅಲ್ಲಲ್ಲ, ಕನ್ನಡ ನಾಡಿನ ಶ್ರೇಷ್ಠ ಯೋಗೀಶ್ವರನ ಅಂತ್ಯ ದರುಶನಕ್ಕಾಗಿ ಬಂದ ಸಹಸ್ರಾರು ಜನರಿಂದ ಮಠವು ತುಂಬಿ ಹೋಗಿತ್ತು. ಎಲ್ಲಿ ನೋಡಿದರಲ್ಲಿ ಭಜನೆ, ಶಿವ ನಾಮ, ಯೋಗೀಶ್ವರನ ಜಯ ಜಯಕಾರ, ಶಿವಯೋಗಿಗಳ ಪಾರ್ಥಿವ ಶರೀರ ಪುಷ್ಪ ಹಾರ ಪತ್ರಿಗಳಿಂದ ಮುಚ್ಚಿಹೋಗಿತ್ತು. ಸುಮಂಗಲೆಯರ ಸಹಸ್ರಾರು ಆರ ತಿಗಳ ಬೆಳಕು, ಭಕ್ತಾದಿಗಳು ತಂದು ಹಚ್ಚಿದ ಕರ್ಪುರದ ಧೂಪ-ದೀಪ, ಮಂಗಲ ವಾದ್ಯದೊಡನೆ ನಡೆಸಿದ ಜಯ ಘೋಷ! ಇಡೀ ಆಕಾಶವನ್ನೆಲ್ಲ ವ್ಯಾಪಿಸಿ ಬಿಟ್ಟಿತ್ತು. ಕೊನೆಗೆ ಶ್ರೀ ಶಿವಯೋಗಿಗಳವರ ಸಮಾಧಿಯ ಕಾಲಕ್ಕೆ ಅಲ್ಲಿ ನೆರೆದ ಭಕ್ತರೆಲ್ಲರೂ ಮುಕ್ತಕಂಠದಿಂದ ಜಯ ಜಯಕಾರ ಮಾಡುತ್ತ ಆ ಕಾರ್ಯವನ್ನು ಶ್ರೀಗಳವರ ನೇತೃತ್ವದಲ್ಲಿ ಮುಕ್ತಾಯಗೊಳಿಸಿದರು.

## ಶೇಡಬಾಳ ಸ್ಟೇಶನ್‌ದಲ್ಲಿ

ಶ್ರೀಗಳವರು ಅಥಣಿಯಲ್ಲಿ ಇದ್ದಾಗ, ಹುಬ್ಬಳ್ಳಿಯ ಮೂರಸಾವಿರ ಮಠದ ನ್ಯಾಯದ ಸಲುವಾಗಿ ಶ್ರೀಗಳವರಿಗೆ ಬರಲಿಕ್ಕೆ ಕರೆ ಬಂದಿತ್ತು. ಹುಬ್ಬಳ್ಳಿಗೆ ಹೋಗು ವದಕ್ಕಾಗಿ ಶೇಡಬಾಳ ಸ್ಟೇಶನ್‌ಕ್ಕೆ ಬಂದಿದ್ದರು. ಸ್ವಲ್ಪ ಹೊತ್ತಿನಲ್ಲಿ ಗಾಡಿ ಬರುವ ದಿತ್ತು. ಆಗ ಶ್ರೀಗಳವರು ಸಂಚಾರಕ್ಕೆಂದು ಹೊರಟು ನಿಂತರು. ಸೇವಕನು "ಬುದ್ಧಿ! ಇಷ್ಟರಲ್ಲಿಯೇ ಗಾಡಿ ಬರುವದಿದೆ. ಸಿಗ್ನಲ್ ಕೊಟ್ಟಿದೆ" ಎಂದು ತಿಳಿಸಲು "ಹೌದಪ್ಪಾ! ಗಾಡಿ ಬರುತ್ತದೆ. ಬರಲಿ. ನಾನೇನು ಮಾಡಲಿ! ಈಗಲೇ ಸಂಚಾರಕ್ಕೆ ಹೋಗಬೇ ಕಾಗಿದೆ. ಶಿವನ ಇಚ್ಛೆ! ಗಾಡಿ ತಪ್ಪಿದರೂ ಚಿಂತೆ ಇಲ್ಲ" ಎಂದು ನುಡಿದವರೇ ಹೊರಟು ಬಿಟ್ಟರು. ಅವರು ಅತ್ತ ಹೋಗುತ್ತಲೇ ಗಾಡಿಯು ಇತ್ತ ಬಂದೇ ಬಿಟ್ಟಿತು. ಆಗ ಸೇವಕನು ಗಾಬರಿಯಾಗಿ ಗಡಬಿಡಿಯಿಂದ, ಸ್ಟೇಶನ್ ಮಾಸ್ತರರ ಹತ್ತಿರ ಹೋಗಿ ವಿನಯಪೂರ್ವಕವಾಗಿ, "ಮಾಸ್ತರರೇ, ಗಾಡಿಯನ್ನು ಸ್ವಲ್ಪ ತಡ ಮಾಡಿ ಬಿಡು ವಂತೆ ಮಾಡಿರಿ. ನಮ್ಮ ಶ್ರೀಗಳವರು ಬಯಲಿಗೆ ಹೋಗಿದ್ದಾರೆ. ಇಷ್ಟರಲ್ಲಿಯೇ ಬರು ತ್ತಾರೆ. ನಾವು ಈ ಹೊತ್ತು ಹುಬ್ಬಳ್ಳಿಗೆ ಅವಶ್ಯವಾಗಿ ಹೋಗಬೇಕಾಗಿದೆ" ಎಂದು ಹೇಳಿಕೊಂಡನು. ಮಾಸ್ತರರು ಶ್ರೀಗಳವರ ಹೆಸರನ್ನು ಕೇಳುತ್ತಲೇ "ಆಗಲಿ, ನೊಡೋಣ. ಸ್ವಲ್ಪ ವೇಳೆ ತಡೆಯಬಹುದು" ಎಂದು ಹೇಳಿದರು. ಸೇವಕನು ಶ್ರೀಗಳವರ ಬರು ವನ್ನೇ ಆತುರತೆಯಿಂದ ಎದರು ನೋಡಹತ್ತಿದನು. ೧೦-೧೫ ನಿಮಿಷಗಳಾದರೂ ಶ್ರೀಗಳವರು ಬರಲಿಲ್ಲ. ಆಗ ಗಾರ್ಡನು ಗಾಡಿ ಬಿಡುವನಾಗಿ ಹೇಳಿದನು. ಮಾಸ್ತ ರರೂ ಗಡಬಿಡಿ ಮಾಡಹತ್ತಿದರು. ಸೇವಕನು "ಸ್ವಾಮೀ, ಸ್ವಲ್ಪ ಹೊತ್ತು ತಡೆ ಯಿರಿ, ಗುರುಗಳು ಬರುತ್ತಾರೆ. ಇನ್ನೊಂದು ಐದು ನಿಮಿಷ ತಡೆಯಿರಿ." ಎಂದು ಬಿನ್ನವಿಸಿಕೊಂಡನು. ಅರ್ಧ ಗಂಟೆ ಕಳೆದರೂ ಶ್ರೀಗಳವರ ಸುಳುವಿಲ್ಲ. ಕೊನೆಗೆ

CC-0. Jangamwadi Math Collection. Digitized by eGangotri

ಹಾವೇರಿಯ ಶಿವಬಸವ ನಗರದಲ್ಲಿರುವ



ಶ್ರೀ ಕುಮಾರೇಶ್ವರ ವೈದಿಕ ಜ್ಯೋತಿಷ್ಯ ಪಾಠಶಾಲೆಯ ಸಂಸ್ಥಾಪಕರಾದ ಶ್ರೀ ಮ. ಚ. ಘ. ಶಾಂತವೀರ

CC-0. Jangamwadi Math Collection. Digitized by eGangotri

ಗಾರ್ಡನು ಬೇಸತ್ತು ಗಾಡಿ ಬಿಡಲು ವ್ಹಿಸಲ್ ಕೊಟ್ಟನು. ಅಷ್ಟರಲ್ಲಿ ಸೇವಕನು ಗುರುಗಳು ಹೊರಟು ಬರುತ್ತಿರುವದನ್ನು ನೋಡಿ ಅಲ್ಲಿಯೇ ಗಾರ್ಡ ಸಾಹೇಬನ ಹತ್ತಿರ ಓಡಿ ಬಂದು "ಅಗೋ,ಅಲ್ಲಿ ನೋಡಿರಿ ಮಾಸ್ತರರೇ! ಗುರುಗಳು ಬಂದೇ ಬಿಟ್ಟರು"ಎಂದು ಕೈಮಾಡಿ ತೋರಿಸಿ ಹೇಳಲು, ಆಗ ಗಾಡಿಯನ್ನು ತಡೆಯಲು ಮತ್ತೆ ಸಂಜ್ಞೆ ಮಾಡಿದನು. ಶ್ರೀಗಳವರು ಕೈಕಾಲು ತೊಳೆದುಕೊಂಡು ಬಂದೇ ಬಿಟ್ಟರು. ಸ್ಟೇಶನ್ ಮಾಸ್ತರರು ಶ್ರೀಗಳವರಿಗೆ ನಮಸ್ಕರಿಸಿ, "ಪೂಜ್ಯರೇ, ತಮಗಾಗಿ ಗಾಡಿಯನ್ನು ನಿಯಮಿತ ವೇಳೆಯನ್ನು ಮೀರಿ ನಿಲ್ಲಿಸಬೇಕಾಯಿತು"ಎಂದು ನುಡಿದರು. ಆಗ ಶ್ರೀಗಳು ಮುಗುಳು ನಗೆ ನಕ್ಕು, "ಒಳ್ಳೆಯದು ಮಾಡಿದೆಯಪ್ಪಾ, ಇರಲಿ, ಈಗ ನಿನ್ನ ಮಗನಿಗೆ ಹೇಗೆ ಇದೆ? " ಎಂದು ಕೇಳಿದರು. ಆಗ ಮಾಸ್ತರರು ಆಶ್ಚರ್ಯಚಕಿತರಾದರು. "ಪೂಜ್ಯರೇ, ಎರಡು ದಿನಗಳಿಂದ ಸ್ಮೃತಿಯೇ ಬಂದಿಲ್ಲ. ೧೫ ದಿನಗಳಿಂದ ಬಂದ ಜ್ವರ ಬಿಟ್ಟಿಲ್ಲ. ಆದರೂ ನಿರಾಶೆಯಲ್ಲಿಯೂ ಆಸೆಯಿಂದ ಉಪಚಾರ ನಡೆಸಿದ್ದೇನೆ." ಎಂದು ನಮ್ರವಾಗಿ ದುಃಖದಿಂದ ಹೇಳಿಕೊಳ್ಳಲು, ಶ್ರೀಗಳು, "ಹೌದಪಾ! ಈಗ ನಾನು ಅದಕ್ಕಾಗಿಯೇ ಹೋಗಿದ್ದೆ. ಸಂಚಾರಕ್ಕಾಗಿ ಅಲ್ಲ. ಅಲ್ಲಿಯ ಒಂದು ವನಸ್ಪತಿಯ ಗಿಡಕ್ಕೆ ನೀರು ಹಾಕಬೇಕಾಗಿತ್ತು. ಹೋಗಿ ಹಾಕಿ ಬಂದೆ. ನೀನು ನನಗಾಗಿ ಹೋಗುವ ಗಾಡಿಯನ್ನು ತಡೆದೆ. ನಾನು, ನಿನ್ನ ಮಗನ ಹೋಗುವ ಜೀವವನ್ನು ತಡೆಯಬೇಕಾಯ್ತು. ಇರಲಿ, ಇನ್ನೇನು ಅಂಜುವ ಕಾರಣವಿಲ್ಲ. ಒಂದೆರಡು ದಿನಗಳಲ್ಲಿ ಅವನಿಗೆ ಗುಣವಾಗುತ್ತದೆ. ಚಿಂತಿಸಬೇಡ" ಎಂದು ಆಶೀರ್ವಾದ ಮಾಡಿ, "ಎಲ್ಲವೂ ಶಿವನ ಇಚ್ಛೆ!" ಎಂದು ನುಡಿದು ಗಾಡಿ ಹತ್ತಿದರು. ಗಾಡಿಯು ಹೊರಟಿತು. ಆಕಸ್ಮಿಕವಾಗಿ ಉಂಟಾದ ಶ್ರೀಗಳವರ ಈ ಯೋಗಾಯೋಗದಿಂದ ಮಾಸ್ತರರಿಗೆ ಆದ ಆನಂದ ಹೇಳತೀರದು. ಮುಂದೆ ಒಂದೆರಡು ದಿನಗಳಲ್ಲಿ ಮಾಸ್ತರರ ಮಗನಿಗೆ ಪ್ರಜ್ಞೆ ಬಂದು, ಜ್ವರ ನಿಂತು ಬಿಟ್ಟಿದ್ದವು. ಮಹಾತ್ಮರ ತಪಃಶಕ್ತಿ ಅಪಾರವಾಗಿತ್ತು, ಅದ್ಭುತವಾಗಿತ್ತು.

## ಸಿಂದಗಿಯಲ್ಲಿ

೧೯೪೬ ರಲ್ಲಿ ನನ್ನ ಪಟ್ಟಾಧಿಕಾರದ ಮಹೋತ್ಸವಕ್ಕಾಗಿ ಇಲ್ಲಿಗೆ ಶ್ರೀಗಳವರು ದಯಮಾಡಿಸಿದ್ದರು. ಎರಡು-ಮೂರು ದಿವಸಗಳ ಉತ್ಸವಕಾರ್ಯಗಳನ್ನು ತಾವೇ ಸ್ವತಃ ನಿಂತು ಯಶಸ್ವಿ ರೀತಿಯಿಂದ ನಡೆಯಿಸಿ, ನನಗೆ ಪಟ್ಟಾಧಿಕಾರದ ಜೊತೆಗೆ ಧರ್ಮಾಧಿಕಾರವನ್ನು ಒಪ್ಪಿಸಿ ಆಶೀರ್ವದಿಸಿದರು. ಶ್ರೀಗಳವರ ಆಗಮನಕ್ಕಾಗಿ ಇಲ್ಲಿಯ ಭಕ್ತ ಜನರು ಅವರಿಗೆ ಸಂಭ್ರಮದ ವೈಭವಯುತ ಸ್ವಾಗತವನ್ನು ನೀಡಿದರು. ಆಗ ಮತ್ತೆ ಬೇರೆ ಅನೇಕ ಶ್ರೀಗಳವರು ಬಂದಿದ್ದರು. ಶ್ರೀಗಳವರ ದರುಶನದಿಂದ ನಮ್ಮೂರು ಪಾವನವಾಯಿತು. ಇಲ್ಲಿಯ ಪಟ್ಟಣಶೆಟ್ಟಿಯವರ ಮನೆತನವೆಂದರೆ ಬಹು ಪ್ರಸಿದ್ಧಿಯನ್ನು ಪಡೆದಿತ್ತು. ಆದರೆ ಕೆಲವು ದಿನಗಳಿಂದ ಕಾಲಗತಿಗೆ ಅನು

CC-0. Jangamwadi Math Collection. Digitized by eGangotri

ಸರಿಸಿ, ಅದು ತನ್ನ ಮೊದಲಿನ ಅನುಭವವನ್ನು ಕಳೆದುಕೊಂಡು ಕಳೆಗುಂದಿತ್ತು. ಒಟ್ಟಾಗಿದ್ದ ಮನೆತನ ಒಡೆದು ಹರಿದು ಹಂಚಿಕೊಂಡಿತ್ತು. ಉದ್ಯೋಗ ಕಳೆದುಕೊಂಡು ಸಂಪತ್ತು ಕರಗಿ ಹೋಗಿತ್ತು. ಹೆಸರಾದ ಮನೆತನ ಹೆಸರಿಲ್ಲದ ಸ್ಥಿತಿಗಿಳಿದಿತ್ತು. ಒಂದು ದಿನ ಶ್ರೀಗಳವರ ಪೂಜಾ ಕಾಲಕ್ಕೆ ಪಟ್ಟಣಶೆಟ್ಟಿಯ ಬಂಧುಗಳೆಲ್ಲರೂ ದರ್ಶನಕ್ಕಾಗಿ ಬಂದಿದ್ದರು. ಶ್ರೀಗಳು ತಮ್ಮ ಪೂಜಾ ವಿಧಿಗಳೆನ್ನೆಲ್ಲ ತೀರಿಸಿ ಬಂದು, ಬಂದ ಭಕ್ತರಿಗೆಲ್ಲ ದರುಶನ ಕೊಟ್ಟರು. ಆಗ ಪಟ್ಟಣಶೆಟ್ಟಿಯವರ ಮನೆತನದ ಪೂರ್ವ ಚರಿತೆಯನ್ನೂ ಕೇಳಿದರು. ಅವರ ಧರ್ಮಬುದ್ಧಿಯನ್ನೂ, ತ್ಯಾಗಗುಣವನ್ನೂ ಮೆಚ್ಚಿಕೊಂಡರು. ಆದರೆ ಇಂದಿನ ಸ್ಥಿತಿಗತಿಯನ್ನೂ ಕೇಳಿ ಮರುಗಿದರು. ಆಗ ಈ ಎಲ್ಲ ಬಂಧುಗಳಿಗೂ ಆಶೀರ್ವಾದ ಮಾಡುತ್ತ, "ಅಪ್ಪಗಳಿರಾ! ಬಡತನಕ್ಕಾಗಿ ಮರುಗಬೇಡಿರಿ. ನಿಮ್ಮ ರೀತಿ-ನೀತಿ ಧರ್ಮ ಹಿಡಿದು ಬದುಕು ಮಾಡಿರಿ. ಭಕ್ತಿ ಬಿಡಬೇಡಿರಿ; ಎಂದೂ ಶಿವನು ನಿಮಗೆ ಕಲ್ಯಾಣ ಮಾಡುವನು. ಚಿಂತೆ ಮಾಡಬೇಡಿರಿ." ಎಂದು ಮನಃಪೂರ್ವಕವಾಗಿ ಹರಿಸಿದರು. ಅವರ ಕೃಪಾಶೀರ್ವಾದದಿಂದ ಈಗ ಎಲ್ಲರೂ ದುಡಿದು ಉಂಡುಟ್ಟು ಸುಖದಿಂದ ಇದ್ದಾರೆ. ತಪಸ್ವಿಗಳ ಆಶೀರ್ವಚನ ನವ ಜೀವನಕ್ಕೆ ನಾಂದಿಯಾಗಿದೆ. ಇದೇನು ಪುರಾಣಗಳ ಪವಾಡವಲ್ಲ. ಈ ಪ್ರಸಂಗ, ಪ್ರತ್ಯಕ್ಷ ನಡೆದುದಾಗಿದೆ.

ಮರುದಿನ ಮಧ್ಯಾಹ್ನ ೩ ಘಂಟೆಯ ಸಮಯ, ಶ್ರೀಗಳು ಸುಖಾಸೀನರಾಗಿ ಕುಳಿತಾಗ, ಒಬ್ಬ ಭಕ್ತನು ದರ್ಶನಕ್ಕಾಗಿ ಬಂದು ನಮಸ್ಕರಿಸಿ ಕುಳಿತುಕೊಂಡನು. ಶ್ರೀಗಳು ಆತನಿಗೆ "ಅಪ್ಪಾ, ನಿನ್ನ ಹೆಸರೇನು? ಯಾವ ಊರು? ಎಲ್ಲವೂ ಸೌಖ್ಯ ತಾನೆ?" ಎಂದು ಕೇಳಿದರು. ಆಗ ಭಕ್ತನು "ಗುರುಗಳೇ! ನಾನು ಇಲ್ಲಿಯೇ ಸಮೀಪದ ಗೋಲಗೇರಿಯವನು. ನನ್ನ ಹೆಸರು ಗೋಲಪ್ಪಾ ಎಂದು ಕರೆಯುತ್ತಾರೆ. ತಮ್ಮ ಆಶೀರ್ವಾದದಿಂದ ಎಲ್ಲವೂ ಕ್ಷೇಮ! ತಾವು ಬಂದ ಸಂಗತಿ ತಿಳಿದು ದರ್ಶನಕ್ಕಾಗಿ ಬಂದೆ" ಎಂದು ನುಡಿದನು. ಶ್ರೀಗಳವರು ಅವನಿಂದ ಗೊಲ್ಲಾಳೇಶ್ವರನ ಚರಿತ್ರೆಯನ್ನೂ, ಗುಡಿಯ ಸ್ಥಿತಿಯನ್ನೂ, ಜಾತ್ರೆಯ ವಿಷಯವಾಗಿಯೂ ಕೇಳಿ ತಿಳಿದುಕೊಂಡರು. ಆ ಭಕ್ತ ಗೋಲಪ್ಪನು ಆಶೀರ್ವಾದ ಪಡೆದು ಹೊರಟು ಹೋದನು. ಮುಂದೆ ಮರುಕ್ಷಣದಲ್ಲಿಯೇ ಶ್ರೀಗಳವರಿಗೆ ಏನೋ ನೆನಪಾಗಿ, ಅಲ್ಲಿದ್ದವರೊಬ್ಬರನ್ನು ಕರೆದು "ಆಗಲೇ ಬಂದು ಹೋದ ಆ ಗೋಲಗೇರಿಯ ಗೋಲಪ್ಪನನ್ನು ಕರೆದುಕೊಂಡು ಬನ್ನಿರಿ. ಮತ್ತು ಆತನಿಗೆ ಊಟ ಮಾಡಿಸಿ ಕಳುಹಿಸಿರಿ" ಎಂದು ಆಜ್ಞೆ ಮಾಡಿದರು. ಮುಂದೆ ಆ ಗೋಲಪ್ಪನು ಊರಲ್ಲಿ ಎಷ್ಟು ಹುಡುಕಿದರೂ ಸಿಗಲಿಲ್ಲ. ಶ್ರೀಗಳವರು ಈ ಸಂಗತಿಯನ್ನು ಕೇಳಿ, ಮನದಲ್ಲಿಯೇ ಮರುಗಿದರು. "ಶಿವ ಶಿವಾ! ಗೊಲ್ಲಾಳಾ ಬರುವೆನಪ್ಪಾ ನಿನ್ನ ದರುಶನಕ್ಕೆ. ಮರೆತ ಮನವನ್ನು ಎಚ್ಚರಿಸಿದೆ." ಎಂದು ತಮ್ಮಲ್ಲಿ ತಾವೇ ನುಡಿದು, ಹತ್ತಿರದಲ್ಲಿದ್ದವರನ್ನು ಕರೆದು

CC-0. Jangamwadi Math Collection. Digitized by eGangotri

"ಈ ಹೊತ್ತು ಗೋಲಗೇರಿಗೆ ಹೋಗಬೇಕಾಗಿದೆ. ಕಾರಣ ಹೊರಡುವ ವ್ಯವಸ್ಥೆ ಮಾಡಿರಿ" ಎಂದು ಹೇಳಿ ಸ್ನಾನಕ್ಕಾಗಿ ಹೊರಟರು. ಆಗ ಸಂಜೆ ಆರು ಘಂಟೆ ಯಾಗಿತ್ತು. ಗೋಲಗೇರಿಗೆ ಮೋಟರ ಹೋಗುವದು ಸಾಧ್ಯವಿರಲಿಲ್ಲ. ಊರಲ್ಲಿ ಮತ್ತೆ ಬೇರೆ ಮೋಟಾರುಗಳಿಲ್ಲ. ಚಕ್ಕಡಿಯನ್ನು ಕಟ್ಟುವದೆಂದರೆ ರಾತ್ರಿ ಬಹಳ ವಾಗುತ್ತದೆ. ಏನು ಮಾಡಬೇಕು ಎಂದು ಇಲ್ಲಿ ವಿಚಾರಿಸುತ್ತಿರಲು, ಶ್ರೀಗಳವರ ಪೂಜೆ ಮುಗಿಯಲು, ರಾತ್ರಿ ೮ ಘಂಟೆಯಾಯಿತು. ಅಷ್ಟರಲ್ಲಿ ಒಬ್ಬನು ಮಠಕ್ಕೆ ಬಂದು ಗೋಲಗೇರಿಗೆ ಹೋಗಲು ಒಬ್ಬ ಸಾಹುಕಾರರ ಮೋಟಾರು ಬಂದು ನಿಂತಿದೆ. ಆತನಿಗೆ ಶ್ರೀಗಳವರು ಬರುವವರಿದ್ದಾರೆ, ಕರೆದುಕೊಂಡು ಹೋಗು ವದಾಗಿ ಕೇಳಿಕೊಳ್ಳಲು, ಆತನು ಒಪ್ಪಿಕೊಂಡಿದ್ದಾನೆ ಎಂದು ತಿಳಿಸಿದನು. ಇದನ್ನು ಕೇಳಿ ಅಲ್ಲಿದ್ದವರಿಗೆಲ್ಲ ಆನಂದ ಆಶ್ಚರ್ಯಗಳೆರಡೂ ಒಮ್ಮೆಲೇ ಉಂಟಾದವು. ಆಗ ಶ್ರೀಗಳವರನ್ನು ಗೋಲಗೇರಿಗೆ ಕರೆದುಕೊಂಡು ಹೊರಟೆವು. ಅವರ ಜೊತೆ ಯಲ್ಲಿ ಆಗ ನವಲಗುಂದ, ಗುಳೇದಗುಡ್ಡ, ಅಮೀನಗಡ, ಶ್ರೀಗಳೂ ಮತ್ತು ಸದ್ಯದ ಹಾವೇರಿ ಶ್ರೀಗಳೂ, ತೆಲಸಂಗ, ಯಾದವಾಡ, ಮಲಘಾಣ, ಶ್ರೀಗಳೂ ಇದ್ದರು.

## ಗೋಲಗೇರಿಯಲ್ಲಿ

ಗೋಲಗೇರಿಯ ಭಕ್ತರೆಲ್ಲರೂ ಶ್ರೀಗಳವರು ಬಂದ ಸುದ್ದಿ ತಿಳಿಯುತ್ತಲೇ ಅವರನ್ನು ಮಂಗಲವಾದ್ಯದೊಡನೆ ವೈಭವದಿಂದ ಎದಿರುಗೊಂಡು ಗೊಲ್ಲಾಳೇ ಶ್ವರನ ಗುಡಿಗೆ ಕರೆದುಕೊಂಡು ಹೋದರು. ವಿಶಾಲವಾದ ಗುಡಿಯ ಆವಾರ ವನ್ನೆಲ್ಲ ನೋಡುತ್ತ, ಗೊಲ್ಲಾಳನ ಗರ್ಭ ಗುಡಿಯನ್ನು ಪ್ರವೇಶಿಸುತ್ತಲೇ ಗುಡಿ ಯೊಳಗಿನ ಮೇಲಿನ ದೊಡ್ಡದಾದ ಘಂಟೆಯು ತನ್ನಿಂದ ತಾನೇ ಕಳಚಿ ಕೆಳಗೆ ಬಿದ್ದಿತು. ಅಲ್ಲಿ ನೆರೆದ ಜನರೆಲ್ಲರೂ "ಇದೇನು ? ಹೀಗೇಕಾಯಿತು" ಎಂದು ಗಾಬರಿ ಯಾದರು. ಶ್ರೀಗಳವರೂ ಕೂಡ ಈ ವಿಚಿತ್ರವನ್ನು ನೋಡಿ ಮೂಕವಿಸ್ಮಿತ ರಾದರು. ಇದು ಮುಂದೆ ಬರಲಿರುವ ತಮ್ಮ ಅವತಾರ ಸಮಾಪ್ತಿಯ ಮುನ್ ಸೂಚನೆಯುಂದರಿತರು. ಶ್ರೀಗಳವರು ಗೊಲ್ಲಾಳೇಶ್ವರನ ಲಿಂಗದ ಸಮೀಪಕ್ಕೆ ಹೋಗಿ ಕುಳಿತುಬಿಟ್ಟರು. ಭಕ್ತರು ಕರ್ಪುರವನ್ನು ಹಚ್ಚಿದರು. ಊದುಬತ್ತಿಯ ಸುವಾಸನೆ ಗುಡಿಯನ್ನೆಲ್ಲ ವ್ಯಾಪಿಸಿ ಬಿಟ್ಟಿತ್ತು. ಜಾಗಟೆಯ ಜೊತೆಗೆ ನಗಾರಿ ಧ್ವನಿ, ಮಂಗಲ ಭಜನೆ, ಭಾವುಕರನ್ನು ಭಕ್ತಿಪರವಶರನ್ನಾಗಿ ಮಾಡಿತ್ತು. ಶ್ರೀಗಳವರು ತದೇಕ ಚಿತ್ತದಿಂದ ಲಿಂಗವನ್ನು ದಿಟ್ಟಿಸಿ ನೋಡುತ್ತ "ಹೇ! ಗೊಲ್ಲಾಳಾ! ಕೊನೆಯ ಕಾಲಕ್ಕೆ ನಿನ್ನ ದರುಶನವಾಯಿತಪ್ಪಾ. ನಿನ್ನ ನೋಡಿ ಮನಕ್ಕೆ ತೃಪ್ತಿಯಾಯಿ ತಪ್ಪಾ! ನಾನು ಬರುವದಕ್ಕೂ ಈ ಗಂಟೆ ಬೀಳುವದಕ್ಕೂ, ವಿಚಿತ್ರವೇ! ಆಯಿ ತಪ್ಪಾ ಆಯಿತು. ಇನ್ನೇನು ೩ ತಿಂಗಳೋ ಅಥವಾ ಮೂರು ವರುಷೋ? ಆಗಲಿ. ಕರೆದಾಗ ಬರುವೆನಪ್ಪಾ. ಶಿವನ ಇಚ್ಛೆ ಮೀರಲುಂಟೇ? ನಿನ್ನ ನೋಡಿ ಧನ್ಯ

CC-0. Jangamwadi Math Collection. Digitized by eGangotri

ನಾದೆನಪ್ಪಾ. ನಿನ್ನ ಭಕ್ತಿಯೇ ಭಕ್ತಿ ! ನಿನ್ನ ಶಕ್ತಿಯೇ ಶಕ್ತಿ !" ಎಂದು ಕೊಂಡಾಡಿ ಕೆಲಕಾಲ ಅಲ್ಲಿಯೇ ವಿಶ್ರಮಿಸಿ ಮುಂದೆ ಅಲ್ಲಿ ನೆರೆದ ಭಕ್ತರನ್ನೆಲ್ಲ ಉದ್ದೇಶಿಸಿ ಉಪದೇಶ ಮಾಡಿ, ಆಶೀರ್ವದಿಸಿ ಸಿಂದಗಿಗೆ ಪ್ರಯಾಣ ಬೆಳಸಿದರು.

ಮುಂದಿನ ತಮ್ಮ ಜೀವನದ ಕೊನೆಯ ಮೂರು ವರುಷಗಳನ್ನು ಹೆಚ್ಚಾಗಿ ಹಾವೇರಿಯ ತಮ್ಮ ಮಠದಲ್ಲಿಯೇ ಕಳೆದರು. ತಮ್ಮ ದಿವ್ಯ ಭವ್ಯ ಜೀವನವನ್ನು ೧೯೪೭ ರಲ್ಲಿ ಶಿವಲಿಂಗದಲ್ಲಿ ಬೆರೆಸಿ ಬಯಲಾದರು. ಅವರ ಜೀವನ ಚರಿತೆ ನಮ್ಮೆಲ್ಲರಿಗೆ ಪವಿತ್ರ, ಪಾವನ ! ಅವರನ್ನು ಪಡೆದ ನಮ್ಮ ಕರುನಾಡಿನ ಭಾಗ್ಯವೇ ಭಾಗ್ಯ ! ಶ್ರೀಗಳವರ ಚರಣಕ್ಕೆ ಅನಂತ ಭಕ್ತಿಪೂರ್ವಕ ಪ್ರಣಾಮಗಳು.

CC-0. Jangamwadi Math Collection. Digitized by eGangotri

# ನಾನು ಕಂಡ ಮಹಿಮೆಗಳು

ಶ್ರೀ. ಸಿ. ಎಸ್. ಹಿರೇಮಠ.

ಕಾರವಾರ ಜಿಲ್ಹೆಯಲ್ಲಿ "ಕಾವಲವಾಡ" ವೆಂಬುವದೊಂದು ಸಣ್ಣಗ್ರಾಮವಿದೆ. ಆ ಗ್ರಾಮವು ಧಾರವಾಡ ಜಿಲ್ಹೆಯ ಕಲಘಟಗಿ ತಾಲೂಕಿನ ಕೂಡಲಗಿ ಗ್ರಾಮಕ್ಕೆ ಬಹಳ ಸಮೀಪವಿದೆ. ಕಾವಲಗಾಡ ಗ್ರಾಮದಲ್ಲಿ ಪುರಾತನ ಕಾಲದ ಒಂದು ಸೋಮೇಶ್ವರ ದೇವಾಲಯವಿದೆ. ಕೆಲವು ವರ್ಷಗಳ ಹಿಂದೆ ದುಡ್ಡು ಎಬ್ಬಿಸುವವರು (ಕಳ್ಳರು) ಸೋಮೇಶ್ವರ ದೇವರ ಎದುಗಿದ್ದ ಶ್ರೀ ಬಸವಣ್ಣನ ಮೂರ್ತಿಯನ್ನು ಒಡೆದುಹಾಕಿ, ಅದರ ಕೆಳಗಿದ್ದ ದ್ರವ್ಯ ತೆಗೆದುಕೊಂಡು ಹೋದರೆಂದು ವಾರ್ತೆಯಿದೆ. ನಂತರ ಆ ಗ್ರಾಮದವರು ಮತ್ತೊಂದು ಕಲ್ಲಿನ ಬಸವಣ್ಣನ ಮೂರ್ತಿಯನ್ನು ತಂದು, ಅದನ್ನು ಆ ಊರಿನ ಆಗಿನ ಕನ್ನಡ ಶಾಲಾ ಮಾಸ್ತರರಿಂದ ಸ್ಥಾಪನೆಮಾಡಿಸಿದರಂತೆ. ಅನಾದಿಕಾಲದ ಬಸವಣ್ಣನ ಮೂರ್ತಿ ನಾಶಗೊಳಿಸಲ್ಪಟ್ಟ ನಂತರ ಆ ಗ್ರಾಮಕ್ಕೆ ಎಲ್ಲ ರೀತಿಯಿಂದಲೂ ಪೀಡೆಯುಂಟಾಗಿ, ಬೆಳೆದ ಪೀಕು ಸಹ ಹೊಟ್ಟೆಗೆ ಸಾಲು ವಷ್ಟು ಬಾರದೆ, ಅಲ್ಲಿಯ ಜನರು ಅತಿಶಯ ಕಷ್ಟದಲ್ಲಿ ತಮ್ಮ ಜೀವನವನ್ನು ಕಳೆಯ ಲಾರಂಭಿಸಿದರಂತೆ. ಆ ಗ್ರಾಮದಲ್ಲಿದ್ದ ದೊಡ್ಡದೊಡ್ಡ ಮನೆತನದ ಜೈನರೆಲ್ಲರೂ ಅಲ್ಲಿಂದ ತಮ್ಮ ತಮ್ಮ ಮನೆಗಳ ಇಮಾರತಿಯ ಕಟ್ಟಿಗೆ ಮೊದಲಾದವುಗಳನ್ನು ಸಹಿತ ಕಿತ್ತುಕೊಂಡು ಕಲಘಟಗಿ ಸಮೀಪದಲ್ಲಿರುವ ಹೊಲೀಕಟ್ಟಿ ಕಡೆಗೆ ಹೋಗಿ ನೆಲಿಸಿದರಂತೆ. ಕಾವಲವಾಡ ಗ್ರಾಮದಲ್ಲಿ ಉಳಿದ ಜನರು ತಮ್ಮ ಗ್ರಾಮದ ಜಮೀನುಗಳು ಮೊದಲು ಒಳ್ಳೇ ಫಲದ್ರೂಪವಾಗಿದ್ದು ಮತ್ತು ಅಲ್ಲಿಯ ಜನರೆಲ್ಲರೂ ಸುಖಿಗಳಾಗಿದ್ದು ಈಗ ಹೀಗಾಗಲಿಕ್ಕೆ ಅನಾದಿಕಾಲದ ಬಸವಣ್ಣನ ಮೂರ್ತಿಯ ನಾಶವೇ ಕಾರಣವೆಂದೂ ಮತ್ತು ಪುನಃ ಮಾಡಿಸಿದ ಬಸವಣ್ಣನ ಸ್ಥಾಪನೆಯು ಸರಿಯಾಗಿ ಆಗಿಲ್ಲವೆಂದೂ ಭಾವಿಸಿ ಒಂದು ದಿವಸ ಅಲ್ಲಿಯ ಪ್ರಮುಖರು ಸ್ನಾನಮಾಡಿ, ಮಡಿಬಟ್ಟೆಗಳನ್ನು ಧರಿಸಿ, ಶ್ರೀ ಸೋಮೇಶ್ವರ ದೇವರನ್ನು ಅನನ್ಯ ಭಕ್ತಿಯಿಂದ ಪೂಜಿಸಿ ಪುಷ್ಪಗಳನ್ನು ಧರಿಸಿ, "ಶ್ರೀ ಸೋಮೇಶ್ವರ ದೇವರ ಲಿಂಗದ ಮೇಲಿನ ಹೂವನ್ನು ಕೊಟ್ಟರೆ ಬಸವಣ್ಣನ ಪ್ರಾಣಪ್ರತಿಷ್ಠೆಯನ್ನು ಹಾವೇರಿ ಶ್ರೀಶಿವ ಬಸವ ಮಹಾಸ್ವಾಮಿಗಳವರಿಂದ ಮಾಡಿಸುತ್ತೇವೆ" ಎಂದು ಸಂಕಲ್ಪಮಾಡಿಕೊಂಡು ಅನೇಕ ಹೂವುಗಳನ್ನು ಬೇರೆ ಬೇರೆ ಸ್ವಾಮಿಗಳವರ ಹೆಸರಿನಿಂದ ಶ್ರೀ ಸೋಮೇಶ್ವರ ದೇವರ ಮೇಲೆ ಅನೇಕ ಸ್ಥಾನಗಳಲ್ಲಿ ಧರಿಸಿದ್ದರು. ಕೊನೆಗೆ ಶ್ರೀ ಸೋಮೇಶ್ವರ ದೇವರು ಲಿಂಗದ ಮೇಲಿನ ಹೂವನ್ನೇ ಕೊಟ್ಟದ್ದರಿಂದ ಅದರ ಸಂಕೇತದಂತೆ ಹಾವೇರಿ ಶ್ರೀ ಶಿವಬಸವ ಮಹಾಸ್ವಾಮಿಗಳವರ ಪರುಷ ಹಸ್ತದಿಂದಲೇ ಬಸವಣ್ಣನ ಪ್ರತಿಷ್ಠಾಪನೆ ಮೊದಲಾದ ಕೆಲಸ ಮಾಡಿಸಬೇಕೆಂದು ಸಂಕಲ್ಪಿಸಿಕೊಂಡರು.

CC-0. Jangamwadi Math Collection. Digitized by eGangotri

ಹಾವೇರಿ ಶ್ರೀ ಶಿವಬಸವ ಯೋಗಿಗಳನ್ನು ತಮ್ಮ ಗ್ರಾಮಕ್ಕೆ ಕರೆಯಿಸಬೇಕೆಂದು ನಿರ್ಧರಿಸಲಾಯಿತು. ಆ ಪ್ರಕಾರ ಅಲ್ಲಿಯ ಪ್ರಮುಖರು ಶ್ರೀ ಶಿವಬಸವ ಮಹಾಸ್ವಾಮಿಗಳವರ ಸನ್ನಿಧಿಯ ಮುಕ್ಕಾಮಿಗೆ ಹೋಗಿ ಶ್ರೀಗಳವರ ಪಾದಕಮಲಂಗಳಿಗೆ ದೀರ್ಘದಂಡ ನಮಸ್ಕಾರಮಾಡಿ ತಮ್ಮ ಗ್ರಾಮಕ್ಕೆ ದಯಮಾಡಿಸಿ ಶ್ರೀ ಬಸವಣ್ಣನ ಪ್ರತಿಷ್ಠಾಪನೆಯನ್ನು ಮಾಡಿಸಿ ಅವರಿಗೊದಗಿದ ಕಷ್ಟಗಳನ್ನೆಲ್ಲ ಪರಿಹರಿಸಬೇಕು,ಅವರೆಲ್ಲರನ್ನೂ ಆಶೀರ್ವದಿಸಿ ಉದ್ಧರಿಸಬೇಕೆಂದು ಪ್ರಾರ್ಥಿಸಿಕೊಂಡರು; ಆ ಮೇರೆಗೆ ಶ್ರೀ ಶಿವಬಸವ ಮಹಾಸ್ವಾಮಿಗಳವರು ಶ್ರೀ ಶಾಲಿವಾಹನ ಶಕ ೧೮೬೬ ನೇ ತಾರಣ ನಾಮ ಸಂವತ್ಸರ ಕಾರ್ತಿಕ ಮಾಸದಲ್ಲಿ ಅಂದರೆ ಸನ್ ೧೯೪೪ನೇ ಇಸ್ವಿ ಅಕ್ಟೋಬರ ತಿಂಗಳಲ್ಲಿ ಕಾವಲವಾಡ ಗ್ರಾಮಕ್ಕೆ ದಯಮಾಡಿಸಿದರು; ಆ ಬಸವಣ್ಣನ ಮೂರ್ತಿಯನ್ನು ತಮ್ಮ ಸನ್ನಿಧಿಯಲ್ಲಿಯೇ ಆಗಮಿಸಿದ್ದ ಶ್ರೀ. ಷ. ಬ್ರ. ಶಾಂತವೀರ ಪಟ್ಟಾಧ್ಯಕ್ಷರು ಹಿರೇಮಠ, ಸಿಂದಗಿ ಇವರಿಂದ ವೇದೋಕ್ತವಾಗಿ ಪುನಃ ಸ್ಥಾಪನೆ ಮಾಡಿಸಿದರು. ತಾವು ಬಸವಣ್ಣನ ಮೂರ್ತಿಗೆ ಪ್ರಾಣಪ್ರತಿಷ್ಠಾಪನೆ ಮಾಡಿದರು. ಆ ಕಾಲಕ್ಕೆ ಕಾವಲವಾಡ ಗ್ರಾಮದಲ್ಲಿ ಒಂದು ದೊಡ್ಡ ಜಾತ್ರೆಯೇ ನೆರವೇರಿದಂತಾಯಿತು. ಕಾವಲವಾಡ ಹಾಗೂ ಅದರ ಸುತ್ತುಮುತ್ತಲಿನ ಗ್ರಾಮಗಳಲ್ಲಿದ್ದ ಸ್ತ್ರೀ-ಪುರುಷರೆಲ್ಲರೂ ಅಲ್ಲಿಗೆ ಬಂದು ತಮ್ಮನ್ನು ಉದ್ಧರಿಸಲು ಬಂದ ಶ್ರೀ ಶಿವಯೋಗಿಗಳ ಪಾದಕಮಲಂಗಳ ದರ್ಶನ ಮಾಡಿಕೊಂಡು ಫಲ-ಪುಷ್ಪಗಳನ್ನು ಪಾದಕ್ಕೆ ಅರ್ಪಿಸಿ ಮಹಾಸ್ವಾಮಿಗಳವರ ಆಶೀರ್ವಾದ ಪಡೆದುಕೊಂಡು ಧನ್ಯರಾದೆವೆಂದು ಸಂತೋಷದಿಂದ ತಮ್ಮ ತಮ್ಮ ನಿವಾಸಗಳಿಗೆ ತೆರಳಿದರು. ಆಮೇಲೆ ಮಹಾಸ್ವಾಮಿಗಳವರು ಅಲ್ಲಿಯ ಭಕ್ತರ ಬೇಡಿಕೆಯಂತೆ ಎರಡು ದಿವಸ ಅಲ್ಲಿ ಉಳಿದು ತಮ್ಮ ಶಿವಪೂಜಾದಿ ಕಾರ್ಯಗಳನ್ನು ತೀರಿಸಿಕೊಂಡು ಅಲ್ಲಿಯ ಭಕ್ತಾದಿಗಳನ್ನೆಲ್ಲ ಕರೆಯಿಸಿ, "ನಿಮ್ಮ ಕಂಟಕಗಳೆಲ್ಲ ದೂರಾದವು. ಶ್ರೀ ಸೋಮೇಶ್ವರ ದೇವರು ನಿಮ್ಮನ್ನು ಕಾಪಾಡುವನು. ನೀವು ಧರ್ಮದಿಂದ ನಡೆಯಿರಿ" ಎಂದು ತಮ್ಮ ಪ್ರಸಾದವಾಣಿಯಿಂದ ಅಲ್ಲಿ ನೆರೆದ ಭಕ್ತಾದಿಗಳೆಲ್ಲರನ್ನು ಸಂತೈಸಿದರು; ಭಕ್ತಿಯನ್ನು ಕೈಕೊಂಡು ಮರುಪ್ರಯಾಣ ಬೆಳಿಸಿದರು. ಮಹಾಸ್ವಾಮಿಗಳವರ ಪ್ರಸಾದವಾಣಿಯಂತೆ ಕಾವಲವಾಡ ಗ್ರಾಮದ ಜಮೀನುಗಳು ಒಳ್ಳೇ ಫಲಪ್ರದವಾಗಿ, ಸರಿಯಾಗಿ ಬೆಳೆಕೊಡುತ್ತವಲ್ಲದೆ ಅಲ್ಲಿಯ ಜನರೆಲ್ಲರೂ ಇಂದಿಗೂ ಸುಖ-ಸಂಪತ್ತುಗಳಿಂದ ನಲಿದಾಡುತ್ತಾರೆ. ಇದೆಲ್ಲಕ್ಕೂ ಶ್ರೀ ಶಿವಬಸವ ಯೋಗಿಗಳವರ ಆಶೀರ್ವಾದವೇ ಕಾರಣವೆಂದೂ ಶ್ರೀಗಳವರ ಪಾದಧೂಳಿಯಿಂದ ಆ ಗ್ರಾಮದಲ್ಲಿದ್ದ ಪೀಡೆಯೆಲ್ಲವೂ ಹೋಗಿ ಸುಖ-ಸಂಪತ್ತು ಲಭಿಸಿತಲ್ಲದೆ ಅಲ್ಲಿಯ ಜನರೆಲ್ಲರೂ ಪವಿತ್ರರಾದೆವೆಂದು ಮಹಾಸ್ವಾಮಿಗಳವರನ್ನು ಈಗಲೂ ಹಾಡಿ ಹರಸುತ್ತಾರೆ.

ಕಲಘಟಗಿ ತಾಲೂಕಿನಲ್ಲಿ ನಾನು ಸಹಕಾರಿ ಸಂಘಗಳ ಸುಪರವಾಯಿಜರನೆಂದು ಕೆಲಸ ಮಾಡುತ್ತಿದ್ದಾಗ ಮೊದಲು ಕಲಘಟಗಿಯಲ್ಲಿ ಲೋಕರೆಯವರ ಮನೆ

CC-0. Jangamwadi Math Collection. Digitized by eGangotri

ಯಲ್ಲಿ ಭಾಡಿಗೆಯಿಂದ ಇರುತ್ತಿದ್ದೆನು. ಮಹಾಸ್ವಾಮಿಗಳವರು ಕಾವಲವಾಡದಿಂದ ಮರುಪ್ರಯಾಣ ಬೆಳೆಸುವಾಗ ನನ್ನ ಮನೆಯಲ್ಲಿ ಒಂದು ಪೂಜೆ ಮುಗಿಸಿಕೊಂಡು ನಮ್ಮೆರಿಗೆ ಪಾದೋದಕ ಪ್ರಸಾದ ಕೊಟ್ಟು, ಆಶೀರ್ವದಿಸಬೇಕೆಂದು ಕಾವಲವಾಡ ಮುಕ್ಕಾಮಿನಲ್ಲಿಯೇ ನಾನು ಮಹಾಸ್ವಾಮಿಗಳವರನ್ನು ಪ್ರಾರ್ಥಿಸಿಕೊಂಡೆನು. ಅದರಂತೆ ಮಹಾಸ್ವಾಮಿಗಳವರು ದಿನಾಂಕ ೨೮-೧೦-೪೪ ರಂದು ಸಂಜೆಯ ೫ ಘಂಟೆಗೆ ಸುಮಾರಕ್ಕೆ ಕಲಘಟಗಿಗೆ ಆಗಮಿಸಿದರು. ಆಗ ನಾನಿರುತ್ತಿದ್ದ ಮನೆಯು ಮಹಾಸ್ವಾಮಿಗಳವರ ಪಕ್ಕಾ ಮಡಿ ಹಾಗೂ ಪೂಜಾದಿ ಕಾರ್ಯಗಳಿಗೆ ಸರಿಯಿಲ್ಲ ವೆಂದೇನೋ ಮಹಾಸ್ವಾಮಿಗಳವರು ಆ ದಿವಸ ರಾತ್ರಿ ಸ್ನಾನವನ್ನೇ ಮಾಡದೆ ಮರು ದಿವಸ ಬೆಳಗ್ಗೆ ಸ್ನಾನಮಾಡುತ್ತೇವೆಂದು ಅಪ್ಪಣೆಮಾಡಿ ಪವಡಿಸಿ ಬಿಟ್ಟರು. ನಾನು ಇರುತ್ತಿದ್ದ ಮನೆಯ ಎದುರಿಗೆ ಸರ್ಪದ ಮನೆಯೆಂದು ಹೆಸರುವಾಸಿಯಾದ (ಅಂದರೆ ಅಲ್ಲಿ ನಾಗಸರ್ಪವು ಕಾಯಂ ವಾಸವಾಗಿತ್ತೆಂದು ಅನೇಕ ಜನರು ಹೇಳುತ್ತಾರೆ.) ತೇಗವಾರದ ಈರಯ್ಯನವರ ದೊಡ್ಡ ಮನೆಯೊಂದು ಖಾಲಿ ಇದ್ದಿತು. ಅದನ್ನು ಇಡಿಯ ರಾತ್ರಿ ಪೂರ್ಣ ಗೋಡೆ, ನೆಲ ಸಹಿತ ಸಾರಿಸಿ ದಿನಾಂಕ ೨೯-೧೦-೪೪ರ ಬೆಳಗಿನ ಪೂಜಾಕ್ಕೆ ಸಿದ್ಧಮಾಡಿಸಿಕೊಟ್ಟೆನು. ಆ ಪ್ರಕಾರ ಮಹಾಸ್ವಾಮಿಗಳವರು ಬೆಳಗ್ಗೆ ಸ್ನಾನಮಾಡಿ ಶಿವಪೂಜೆ ನೇರವೇರಿಸಿಕೊಂಡು ನಮ್ಮವರೆಲ್ಲರಿಗೆ ಪಾದೋ ದಕ ಪ್ರಸಾದ ಕೊಟ್ಟು ಹುಬ್ಬಳ್ಳಿಗೆ ಹೊರಡಲು ಸಿದ್ಧರಾದರು. ಆ ಸರ್ಪದ ಮನೆಯು ವಿಶಾಲವಾದದ್ದೂ ಮತ್ತು ಶೋಭೆಯುಳ್ಳದ್ದೂ ಇದ್ದು ಅಲ್ಲಿ ವಾಸವಾಗಿ ರಲು ಕೇವಲ ಸರ್ಪದ ಭಯವೊಂದೇ ಕಾರಣವೆಂದೂ ಈ ಬಗ್ಗೆ ಹೇಗೆ ಮಾಡ ಬೇಕೆಂದು ಮಹಾಸ್ವಾಮಿಗಳವರನ್ನು ಪ್ರಾರ್ಥಿಸಲಾಗಿ ಅವರು " ನಿನಗೆ ಸರ್ಪವೇನು ಮಾಡುವದಪ್ಪ! ಸರ್ಪವು ಶಿವನ ಆಭರಣವು. ಶಿವಭಕ್ತರನ್ನು ಅದು ಕಾಪಾಡು ವದು. ನೀನು ಯಾವ ಆಲೋಚನೆಯನ್ನೂ ಮಾಡದೆ ಈ ಮನೆಗೆ ಬಂದು ಬಿಡು." ಎಂದು ಪ್ರಸಾದವಾಣಿಯಿಂದ ಅಪ್ಪಣೆ ಕೊಡಿಸಲಾಗಿ ನಾನು ಕೂಡಲೇ ಆ ಮನೆಗೆ ನನ್ನ ಸಾಮಾನುಗಳನ್ನೆಲ್ಲ ಸ್ಥಳಾಂತರಿಸಿ ಅಲ್ಲಿಯೇ ೪-೫ ವರ್ಷಗಳ ವರೆಗೆ ಇದ್ದೆನು. ನನಗೆ ಅಲ್ಲಿ ಯಾವ ಭಯವೂ ಆಗಲಿಲ್ಲ. ಅಲ್ಲಿ ವಾಸವಾಗಿರುತ್ತದೆಂದು ಹೇಳಲಾದ ಸರ್ಪದ ದರ್ಶನ ಸಹ ನನಗಾಗಲಿ, ನನ್ನ ಮನೆಯ ಜನರಿಗಾಗಲಿ ಯಾರಿಗೂ ಆಗ ಲಿಲ್ಲ. ಮಹಾಸ್ವಾಮಿಗಳವರು ಕಲಘಟಗಿಯಿಂದ ಹುಬ್ಬಳ್ಳಿಗೆ ಪ್ರಯಾಣ ಬೆಳೆಸುವ ಪೂರ್ವದಲ್ಲಿ ನನ್ನ ಉತ್ತರೋತ್ತರ ಕಲ್ಯಾಣವಾಗಲೆಂದೂ, ಹೆಚ್ಚೆಚ್ಚಿನ ಅಧಿಕಾರ ಸ್ಥಾನಕ್ಕೆ ಏರಲೆಂದೂ ಅವರ ಪ್ರಸಾದವಾಣಿಯಿಂದ ಆಶೀರ್ವದಿಸಿದಂತೆ ನನ್ನ ಸರ್ವತೋಮುಖ ಕಲ್ಯಾಣವಾಗಿರುವದಲ್ಲದೆ, ಹೆಚ್ಚಿನ ಅಧಿಕಾರಸ್ಥಾನಕ್ಕೂ ಬಂದಿರು ತ್ತೇನೆ. ಇದಕ್ಕೆಲ್ಲಕ್ಕೂ ಮಹಾಸ್ವಾಮಿಗಳವರ ಆಶೀರ್ವಾದವೇ ಕಾರಣವು.

CC-0. Jangamwadi Math Collection. Digitized by eGangotri

# ಶ್ರೀಗಳವರ ಪಾವನ ಜೀವನ

ಶ್ರೀ. ಎನ್. ಎಫ್. ಪಾಟೀಲ, ಬಾಚಿನಗುಡ್ಡ.

"ತನುವೆಂಬ ಮಂದಿರದೊಳಗೆ ಹೃದಯುವೆಂಬ ಮಡಿಕೆಯಲ್ಲಿ
ಕಾಮಧೇನುವೆಂಬ ಗೋವಿನ ಮಡಿಯೆಂಬ ಕೆಚ್ಚಲಿಂದ
ಗುರುಬೋಧೆಯೆಂಬ ಹಾಲನೆ ಹಿಂಡಿ; ತಾಮಸ, ರಾಜಸ, ಸಾತ್ವಿಕಗಳೆಂಬ
ಮೂರು ಒಲೆ ಗುಂಡುಗಳ ಹೂಡಿ, ದುರ್ಗುಣಗಳೆಂಬ ಕಟ್ಟಿಗೆ
ದುರ್ನೀತಿಯೆಂಬ ಕುಳ್ಳು ಮತ್ತು ಮಾಯೆಯೆಂಬ ಹುಲ್ಲನಿಟ್ಟು
ಮಮಕಾರವೆಂಬ ಎಣ್ಣೆಯನುಗ್ಗಿ ಮಣ್ಣೆಂಬ ಮದ್ದುಳ್ಳ ಹೊನ್ನೆಂಬ
ಕಡ್ಡಿಯ ಕೊರೆದು ಹಚ್ಚಿ, ವಿವೇಕವೆಂಬ ಉರಿಯಿಂದ ಕಾಸಲು
ಅಹಂಕಾರವೆಂಬ ಉಕ್ಕು ಬರಲಾಗಿ, ಸಮತೆಯೆಂಬ ಜಲದಿಂ ಮರ್ದನವ ಮಾಡಿ
ಶಾಂತಿಯೆಂಬ ಗಾಳಿಯಿಂದಾರಿಸಿ, ಅನುಗ್ರಹವೆಂಬ ಹೆಪ್ಪನೆ ಹಾಕಿ
ಮನವೆಂಬ ಕೆನೆಮೊಸರನೇ ತಯಾರಿಸಿ, ನೀತಿಯೆಂಬ ಸ್ತಂಭಕ್ಕೂ ಮತ್ತು
ಭಕ್ತಿಯೆಂಬ ಕಡೆಗೋಲಿಗೂ ಮನೋನಿಗ್ರಹವೆಂಬ ಹಗ್ಗವನೆ ಸುತ್ತಿ,
ನಡೆನುಡಿಗಳೆಂಬೆರಡು ಕೈಗಳಿಂ ಸುವಿಚಾರವೆಂಬ ಲಿಂಗಾನುಸಂಧಾನಭಾವದಲಿ
ಕಡೆದು, ಭವದ ಮೋಹವೆಂಬ ಕೆನೆಯ ಪರಿಯ ಹರಿದು,
ಅಂತರಂಗ ಬಹಿರಂಗ ಶುದ್ಧಿಯೆಂಬ ಬೆಣ್ಣೆಯ ತೆಗೆದು,
ಶುದ್ಧ ಭಾವನೆಯೆಂಬ ನಿರ್ಮಲ ಅಗ್ಗವಣಿಯಿಂ ತೊಳೆದು,
ಕಾಯಕವೆಂಬ ಭಾಂಡದಲಿಟ್ಟು, ಜ್ಞಾನವೆಂಬ ಅಗ್ನಿಯಿಂ ಕರಗಿಸಿ,
ಘೃತವೆಂಬ ಅಮೃತವನೇ ಪಡೆದು, ವಿರತಿಯೆಂಬ ದಾಸೋಹಿಯಾಗಿ
ಲಿಂಗಮುಖ ಜಂಗಮವೆಂಬ ಪರಮ ನಿರಂಜನ ಮೂರ್ತಿಗರ್ಪಿಸಿ,
ಅಂಗ ಸತಿ ಲಿಂಗ ಪತಿಯೆಂಬ ಶಿವಾನುಭವ ತತ್ವದಿಂದಾಚರಿಸಿ,
ಶಿವಯೋಗಿಯೆಂಬ ಮಹಾನುಭಾವಿಯಾಗಿ ಲಿಂಗಾಂಗ ಸಮರಸದ ಸುಖವೆಂಬ
ಸತ್ಯನಿತ್ಯಾನಂದದಲಿ ರಮಿಸಿ, ಆತ್ಮಜ್ಯೋತಿಯನು ಪರಂಜ್ಯೋತಿಯಲಿ
ಬೆರಸಿದ ಹಾವೇರಿ ಹುಕ್ಕೇರಿ ಮಠಾಧೀಶ್ವರರಾದ ಪರಮಗುರು
ಶ್ರೀ ಶಿವಬಸವ ಶಿವಯೋಗಿಗಳು ಶಿವನೇ ತಾವಾದ ಪರಿಯ
ಪರಮ ಶಿವಯೋಗಿಗಳೇ ಬಲ್ಲರೈ ಬಾಚಿನಗಿರಿ ಶಂಕರಲಿಂಗದೇವಾ"

ಜನವರಿ ಕೊಳ್ಳವು ಅನುಷ್ಠಾನದ ತಾಣ

ಶಿವಯೋಗಮಂದಿರದ ಪಶ್ಚಿಮ ದಿಕ್ಕಿನಲ್ಲಿರುವ ಪರ್ವತದಲ್ಲಿ "ಜನವರಿ" ಎಂಬುದೊಂದು ಕೊಳ್ಳವದೆ. ಅದು ಗೋವು ಮೊದಲಾದ ಜಾನವರಗಳು ಮೆಯ್ಯು

CC-0. Jangamwadi Math Collection. Digitized by eGangotri

ನೀರನೀಂಟುವ ಸ್ಥಾನ. ಅದಕ್ಕೆ ಜಾನವಾರ ಕೊಳ್ಳವೆಂದು ಕರೆಯದೆ "ಜನವರಿ" ಕೊಳ್ಳವೆಂದು ಕರೆಯುವ ರೂಢಿಯಿದೆ. ಗೋವುನಕಿಯ ಕ್ಷೇತ್ರದಲ್ಲಿ ಕೊಟ್ಟೂರ ಬಸವೇಶ್ವರರು ಅನುಷ್ಠಾನ ಮಾಡಿದ ಸ್ಥಾನವನ್ನು ಇಲಕಲ್ಲ ಶ್ರೀ ವಿಜಯ ಮಹಾಂತ ಶಿವಯೋಗಿಗಳು ಶಿವಯೋಗಮಂದಿರದ ಕ್ಷೇತ್ರವನ್ನಾಗಿ ಆರಿಸಲು, ಹಾನಗಲ್ಲ ಕುಮಾರ ಶಿವಯೋಗಿಗಳು ಅಲ್ಲಿ ಶಿವಯೋಗಮಂದಿರವನ್ನು ಸ್ಥಾಪಿಸಿದರು. ಹಾವೇರಿಯ ಶಿವಯೋಗಿಗಳು ಗೋವುಗಳು ನೀರು ಜಲವನ್ನೀಂಟುವ ಸ್ಥಾನ ವನ್ನು ತಮ್ಮ ಅನುಷ್ಠಾನದ ತಾಣವನ್ನಾಗಿ ಮಾಡಿದ್ದಾರೆ. ಕೊಟ್ಟೂರೇಶನ ಅನುಷ್ಠಾನದ ಸ್ಥಾನದಲ್ಲಿ ಶಿವಶರಣ ಘಟ್ಟಿವಾಳಪ್ಪನವರ ಕಾಲಜ್ಞಾನದಂತೆ ಹಾನ ಗಲ್ಲ ಶಿವಯೋಗಿಗಳು ಶಿವಯೋಗಮಂದಿರದ ಸ್ಥಾಪನೆ ಮಾಡಿ ಅಲ್ಲಿಯೇ ಆ ಕಾಲಜ್ಞಾನದಂತೆ ತಮ್ಮ ಪುಣ್ಯ ಜೀವನದ ಯಾತ್ರೆಯನ್ನು ಮುಗಿಸಿ ಮುಕ್ತ ರಾದರು. ಆದರೆ ಹಾವೇರಿ ಶಿವಯೋಗಿಗಳ ಅನುಷ್ಠಾನದ ತಾಣದಲ್ಲಿ ಯಾವ ಪುಣ್ಯಾಶ್ರಮದ ಸ್ಥಾಪನೆಯಾಗುವದೋ ತಿಳಿದು ಬಂದಿರುವದಿಲ್ಲ. ಶಿವಯೋಗಿ ಗಳ ಸಂಕಲ್ಪವು ಶಿವನಿಗೇ ಗೊತ್ತು. ಇದು ನಿರ್ಜನ ಮತ್ತು ಶಾಂತ ಸ್ಥಾನ ವಾಗಿರುವದರಿಂದ ಅವರು ಅನುಷ್ಠಾನ ಮಾಡಿದ್ದಾರೆ. ಈಗ ಇದು ಉದಾಸೀನ ವಾದ ಸ್ಥಾನವಾಗದೆ ಈಗಿನ ಹಾನಗಲ್ಲ ಶ್ರೀ ಸದಾಶಿವ ಕುಮಾರ ಮಹಾಸ್ವಾಮಿ ಗಳು ವಟುಗಳನ್ನು ಮತ್ತು ಸಾಧಕರನ್ನೊಡಗೂಡಿಕೊಂಡು ವರ್ಷಕ್ಕೊಂದಾವರ್ತಿ ಅಲ್ಲಿಗೆ ದಯಮಾಡಿಸಿ ಲಿಂಗಾರ್ಚನೆ ಮತ್ತು ಲಿಂಗಾರ್ಪಿತ ಮಾಡುವ ರೂಢಿ ಯಿರುವದರಿಂದ ಪಾವನವಾದ ಕ್ಷೇತ್ರಸ್ಥಾನವಾಗಿದೆ. ವಿರಾಟ್ಪುರದ ಈ ಮಹಾ ಸ್ವಾಮಿಗಳು ಹಾವೇರಿ ಶ್ರೀಗಳವರ ಅನುಷ್ಠಾನದ ಸವಿ ನೆನಹಿಗಾಗಿ ಈ ಪದ್ಧತಿ ಯನ್ನು ಏರ್ಪಾಡು ಮಾಡಿದ್ದಾರೆ. ಗುರು, ಪರಮ ಗುರುಗಳಾಗುವ ಸಾಧಕರ ಮನೋಭೂಮಿಯಲ್ಲಿ ಅನುಷ್ಠಾನದ ಭಾವನೆಯ ಸೂಚನೆಯ ಬೀಜವನ್ನು ಬಿತ್ತಿ ಬೆಳೆಸುತ್ತಿರುವದು ಹಾವೇರಿ ಶ್ರೀಗಳವರಲ್ಲಿದ್ದ ಇವರ ಪ್ರೀತಿಯ ದ್ಯೋತಕವಾ ಗಿದೆ, ಪ್ರತೀಕವಾಗಿದೆ.

ಹಾವೇರಿ ಶಿವಯೋಗಿಗಳು ಅನುಷ್ಠಾನಮಾಡಿದ ಅನೇಕ ಸ್ಥಾನಗಳಲ್ಲಿ ಶಾಖಾ ಮಂದಿರಗಳು ಸ್ಥಾಪಿಸಲ್ಪಟ್ಟಿವೆ. ಈ ಪ್ರದೇಶವು ಶಿವಯೋಗಮಂದಿರದ ಪಕ್ಕದ ಲ್ಲಿಯೇ ಇದೆ. ಆ ಮಹಾಶಿವಯೋಗಿಗಳ ಮಹಿಮೆಯಿಂದ ಅನುಷ್ಠಾನಾಶ್ರಮದ ಪಾವನ ಸ್ಥಾನವಾಗುವದೆಂಬುದರಲ್ಲಿ ಸಂದೇಹವಿಲ್ಲ.

## ಭೃತ್ಯಾಚಾರದ ಮಾರ್ಗದರ್ಶನ

ಹಾವೇರಿ ಶಿವಯೋಗಿಗಳವರು ಧಾರ್ಮಿಕ ಮತ್ತು ಸಾಮಾಜಿಕ ಸೇವೆಯು ಪಂಚಾಚಾರಗಳಲ್ಲೊಂದಾದ ಭೃತ್ಯಾಚಾರವೆಂದು ಭಾವಿಸಿದವರಾಗಿದ್ದರು. ಕಿಂಕ ರತ್ವದಿಂದ ಶಂಕರತ್ವವುಂಟಾಗುವದೆಂದು ಭಕ್ತರಿಗೆ ಬೋಧಿಸುತ್ತಿದ್ದರು. ನಾಕ

CC-0. Jangamwadi Math Collection. Digitized by eGangotri

ರನು ಸಂಬಳ ಪಡೆಯುವ ಹಂಬಲದ ಸಲುವಾಗಿ ಚಾಕರಿಯನ್ನು ಮಾಡುವನು. ನೌಕರನು ಜೀವನದ ಸಲುವಾಗಿ ಚಾಕರಿಯನ್ನು ಮಾಡಿದರೆ, ಭೃತ್ಯಾಚಾರಿಯು ಕಾಯಕ–ದಾಸೋಹಗಳ ಸಲವಾಗಿ ಸೇವೆ ಮಾಡುವನೆಂದು ತಿಳಿಹೇಳುತ್ತಿದ್ದರು. ಭಗವಾನ್ ಬಸವೇಶ್ವರನು ಭೃತ್ಯಾಚಾರದಿಂದಲೇ ಭಕ್ತಿ ಭಾಂಡಾರಿಯಾಗಿ ಭೃತ್ಯಾಚಾರ್ಯನೆಂದೆನಿಸಿಕೊಂಡು ವೀರಶೈವ ಮತವನ್ನು ನೆಲೆಗೊಳಿಸಿದನೆಂದು ಮೇಲಿಂದ ಮೇಲೆ ಹೇಳುತ್ತಿದ್ದರು. ಸ್ವಾಮಿ-ಭೃತ್ಯ ಸಂಬಂಧವೇ ಭಕ್ತಿಯೆಂದೂ ಮತ್ತು ಶಿವಭಕ್ತರಗಿಂತ ಹಿರಿಯರಿಲ್ಲವೆಂದೂ ಬಸವ ಮಹಾನುಭಾವನು ಮಾಡಿದ ಭಕ್ತಿಯ ತತ್ವದ ವರ್ಮವನ್ನು ಭಕ್ತ ವರ್ಗಕ್ಕೆ ನೆನಪು ಮಾಡಿ ಕೊಡುತ್ತಿದ್ದರು. ಶಂಕರತ್ವನ್ನು ಪಡೆಯುವದಕ್ಕೆ ಕಿಂಕರತ್ವವು ಹೆದ್ದಾರಿಯಾಗಿದೆಯೆಂದು ಪದೇ ಪದೇ ಉಪದೇಶ ಮಾಡುತ್ತಿದ್ದರು.

ಒಮ್ಮೆ ಶ್ರೀಮದ್ವೀರಶೈವ ಶಿವಯೋಗಮಂದಿರದ ಯಾತ್ರಾ ಮಹೋತ್ಸವದ ಸಮಯದಲ್ಲಿ ರಥೋತ್ಸವದ ಕಾಲಕ್ಕೆ ಕಳಸದ ವಿಷಯವಾಗಿ ನೆಲವಿಗೆಯ ಭಕ್ತರು ನ್ಯಾಯ ತೆಗೆದದ್ದರಿಂದ ರಥೋತ್ಸವದ ಕಾರ್ಯಕ್ಕೆ ತಡೆಯುಂಟಾದಾಗ ಅವರನ್ನು ತಮ್ಮಲ್ಲಿಗೆ ಬರಮಾಡಿಕೊಳ್ಳದೆ ತಾವೇ ಕಾಲ್ನಡಿಗೆಯಿಂದ ನೆಲವಿಗೆಗೆ ದಯಮಾಡಿಸಿದರು. ನೆಲವಿಗೆಯ ಭಕ್ತರು ಶಿವಯೋಗಿಗಳು ಆ ರೀತಿಯಾಗಿ ದಯಮಾಡಿಸಿದ್ದನ್ನು ನೋಡಿ ಭಯಭೀತರಾಗಿ "ಮಹಾಸ್ವಾಮಿಗಳೇ! ತಾವು ಅಪ್ಪಣೆ ಮಾಡಿದ್ದರೆ ಎಲ್ಲರೂ ಅಲ್ಲಿಗೆ ಬರುತ್ತಿದ್ದೆವು. ಕಳಸದ ವಿಷಯವಾಗಿ ನಾವು ಕಾಲ ವಿಲಂಬ ಮಾಡಿದ ತಪ್ಪನ್ನು ಕ್ಷಮಿಸಿ ಕಾಪಾಡಬೇಕು" ಎಂದು ಪ್ರಾರ್ಥಿಸಲು "ಶಿವಯೋಗಿಗಳು ಅಪ್ಪಾ! ಶಿವಯೋಗ ಮಂದಿರದ ರಥೋತ್ಸವದ ಕಾರ್ಯವು ಶಿವನ ಕಾರ್ಯವು. ಈ ರಥೋತ್ಸವದ ಸಮಾರಂಭವನ್ನು ಸರಿಯಾಗಿ ಸಾಗಿಸದಿದ್ದರೆ ಧರ್ಮದ್ರೋಹವಾಗುವದು. ಶಿವಧರ್ಮವ ಕೆಡಿಸಿದವನು ಅಧರ್ಮಕ್ಕೆ ಳಿದವನೆಂದು ಬಸವ ಮಹಾನುಭಾವರು ಎಚ್ಚರಪಡಿಸಿದ್ದಾರೆ. ಶಿವಯೋಗಮಂದಿರದಲ್ಲಿ ಧರ್ಮದ್ರೋಹವಾಗಬಾರದೆಂದೂ ಮತ್ತು ನೀವು ಶಿವಧರ್ಮಕ್ಕೆ ಭಂಗತಂದು ಅಧರ್ಮಿಗಳಾಗಬಾರದೆಂದೂ ತಿಳಿದು ಆ ಪರಶಿವನ ಭೃತ್ಯನಾಗಿ ನಿಮ್ಮಲ್ಲಿಗೆ ಧರ್ಮಸೇವೆ ಮಾಡಲು ಬರಲೇ ಬೇಕಾಯಿತು. ನಾವು ಬೇರೆಯವರನ್ನು ಕಳಿಸಿ ಕರೆಯಿಸಿದ್ದರೆ ಬಹಳ ವೇಳೆಯು ವ್ಯರ್ಥವಾಗಿ ವ್ಯಯವಾದೀತೆಂದು ಭೃತ್ಯಾಚಾರವನ್ನಾಚರಿಸುವ ಭಾಗ ಬಿತ್ತು. ಭೃತ್ಯಾಚಾರವನ್ನು ವಹಿಸಿದ್ದರಿಂದಲೇ ನಿಮ್ಮ ನ್ಯಾಯವು ಶೀಘ್ರವಾಗಿ ಮುಗಿಯುವದು." ಹೀಗೆಂದು ಉದ್ಗಾರ ತೆಗೆಯಲು ಭಕ್ತರು ತಮ್ಮ ತಮ್ಮೊಳಗೆ ಕೂಡಲೆ ವಿಚಾರ ವಿನಿಮಯ ಮಾಡಿ "ಮಹಾಸ್ವಾಮಿಗಳೇ? ಶಿವರೂಪಿಗಳಾದ ತಾವು ದಯವಿಟ್ಟು ಇಲ್ಲಿಗೆ ದಯಮಾಡಿಸಿದ್ದೇ ಕ್ಷಮೆಯೆಂದರಿದು ನಮ್ಮ ನ್ಯಾಯವನ್ನು ಮುಕ್ತಾಯಗೊಳಿಸಿದೆವು. ನಾವೀಗ ಏನೂ

CC-0. Jangamwadi Math Collection. Digitized by eGangotri

ತಡಮಾಡದೆ ಕಳಸವನ್ನು ಸಂಭ್ರಮದಿಂದ ತೆಗೆದುಕೊಂಡು ಸನ್ನಿಧಿಯೊಡನೆ ಸಾಗುವೆವೆಂದು ಹೊರಟು ರಥೋತ್ಸವದ ಕಾರ್ಯವನ್ನು ಎಂದಿನಂತೆ ಸಾಗು ಮಾಡಿದರು. ಆಗ ಶ್ರೀಗಳವರು "ಅಪ್ಪಾ, ವೀರಶೈವ ಧರ್ಮಮೂರ್ತಿಗೆ ಅಷ್ಟಾವರಣಗಳು ಅಂಗವಾಗಿವೆ. ಪಂಚಾಚಾರಗಳು ಪ್ರಾಣವಾಗಿವೆ. ಇಂಥ ಆಚಾರವಿಲ್ಲದ ವ್ಯಕ್ತಿಯು ಜೀವನ್ಮೃತನೆ. ಅದುಕಾರಣ, ಪ್ರಾಣದಂತಿರುವ ಈ ಆಚಾರಗಳನ್ನು ಭಂಗಪಡಿಸಲಾಗದು. ಇವು ಲಿಂಗಾಂಗ ಸಾಮರಸ್ಯದ ಸಾಧನ ಗಳಾಗಿರುವವು. ಷಡುಸ್ಥಲಗಳು ಸೋಪಾನಗಳಾಗಿರುವವು. ಅಷ್ಟಾವರಣ, ಆಚಾರ ಮತ್ತು ಷಟ್ಸ್ಥಲಗಳನ್ನು ತಿಳಿಯದೆ ಶಿವಾನುಭಾವಿಯಾಗಲಾರನು. ಶಿವಾನು ಭಾವಿಯಾಗದಿದ್ದರೆ ಶಿವನಾಗಲಾರನು. ನೀವು ತಪ್ಪಿಗೆ ಒಪ್ಪಿಕೊಂಡು ನಮಗೆ ಕ್ಷಮೆ ಬೇಡಿಕೊಂಡದ್ದೇ ನೀವು ಮಾಡಿದ ಪಾಪಕ್ಕೆ ಪಶ್ಚಾತ್ತಾಪವಾಗಿ ಪ್ರಾಯ ಶ್ಚಿತ್ತ ಹೊಂದಿದ್ದರ ಭಾವವು. ತಪ್ಪು ಭಕ್ತನದು. ಕ್ಷಮೆಯು ಶಿವನದು. ನೀವು ಕೂಡಲೆ ಶಿವನ ಕಾರ್ಯಕ್ಕೆ ಅನುಕೂಲ ಮಾಡಿದ್ದರಿಂದ ಶಿವನು ನಿಮಗೆ ಕ್ಷಮೆ ಮಾಡಿದನೆಂದು ತಿಳಿಯಿರಿ. ಕ್ಷಮೆಯು ನಿಮ್ಮ ಭಕ್ತಿಯ ಫಲವಾಗಿದೆ. ಶಿವನ ಕಾರ್ಯಗಳು ಭೃತ್ಯಾಚಾರದಿಂದ ಶೀಘ್ರವಾಗಿ ಮುಕ್ತಾಯವಾಗುವವೆಂಬುದರ ಮಹತ್ವವು ಈಗ ನಿಮಗೆ ಪ್ರತ್ಯಕ್ಷವಾಗಿ ತಿಳಿದಂತಾಯಿತು." ಎಂದು ಅಪ್ಪಣೆ ಮಾಡಿ ಶ್ರೀಗಳವರು ನೆಲವಿಗೆಯ ಭಕ್ತರನ್ನು ಆಶೀರ್ವದಿಸಿ ಕಳಿಸಿದರು.

## ನ್ಯಾಯನಿರ್ಣಯ

ಗದಗಿನಲ್ಲಿ ಶ್ರೀ ಜಗದ್ಗುರು ತೋಂಟದಾರ್ಯರ ಮತ್ತು ಭಕ್ತರ ನಡುವೆ ಉಚಿತಪ್ರಸಾದನಿಲಯದ ವಿಷಯವಾಗಿ ನ್ಯಾಯವು ಉದ್ಭವಿಸಿತ್ತು. ಆಗ ನಮ್ಮ ಹಾವೇರಿ ಶ್ರೀಗಳವರು ಗದಗಿಗೆ ದಯಮಾಡಿಸಿದ್ದರು. ಆ ಪುರದ ಭಕ್ತರು ಈ ಉಚಿತಪ್ರಸಾದನಿಲಯದ ನ್ಯಾಯವನ್ನು ಇವರಿಗೆ ಅರಿಕೆ ಮಾಡಿಕೊಂಡರು. ಆಗ ಶ್ರೀಗಳವರು ಪ್ರಮುಖ ಭಕ್ತರನ್ನೊಡಗೂಡಿಕೊಂಡು ಜಗದ್ಗುರುಗಳೆಡೆಗೆ ದಯ ಮಾಡಿಸಿ, ಉಭಯ ಪಕ್ಷಗಳ ವಾದವಿವಾದವನ್ನು ವಿಚಾರಿಸಿ, ಶ್ರೀತೋಂಟದಾರ್ಯ ವೀರಶೈವ ಉಚಿತ ಪ್ರಸಾದನಿಲಯವೆಂದು ನಾಮಾಂಕಿತ ಮಾಡಿದರು. ಜಗ ದ್ಗುರುಗಳು ಪ್ರತಿ ವರ್ಷ ಎಷ್ಟು ಧಾನ್ಯ ಮತ್ತು ಧನವನ್ನು ಆಶೀರ್ವದಿಸಬೇಕೆಂಬು ದನ್ನು ನಿರ್ಧರಿಸಿ, ಉಳಿದ ವೆಚ್ಚವನ್ನು ಭಕ್ತರು ವಹಿಸಬೇಕೆಂದು ಮತ್ತು ಈ ಪ್ರಸಾದನಿಲಯವು ಮೊದಲಿದ್ದಲ್ಲಿಯೇ ಜಗದ್ಗುರುಗಳ ಮಠದಲ್ಲಿಯೇ ನಡೆಯ ಬೇಕೆಂದು, ಇದಲ್ಲದೆ ಈ ಪ್ರಸಾದನಿಲಯದ ವ್ಯವಸ್ಥೆ ಮಾಡಲಿಕ್ಕೆ ಸಮಿತಿಯೊಂ ದನ್ನು ನೇಮಿಸಿ ನ್ಯಾಯ ನಿರ್ಣಯ ಮಾಡಿಧರು. ಈ ನಿರ್ಣಯವೇ ಈಗಲೂ ಅವ್ಯಾಹತವಾಗಿ ನಡೆದಿರುವದು. ವಿರತರು ನ್ಯಾಯನಿಷ್ಠುರರು ಮತ್ತು ನಿಸ್ಪೃ ಹತೆಯಿಂದ ನ್ಯಾಯವನೀಯುವವರೆಂದು ಸಮಾಜಕ್ಕೆ ಸಿದ್ಧ ಮಾಡಿ ತೋರಿಸಿದರು.

CC-0. Jangamwadi Math Collection. Digitized by eGangotri

## ಲಿಂಗಜ್ಞಾನಿ ತ್ರಿಕಾಲಜ್ಞಾನಿ

ಸೊನ್ನಲಾಪುರದ ಶ್ರೀ ವೀರೇಶ ಶಿವಶರಣರು ಲಿಂಗೈಕ್ಯರಾಗುವ ಸಮಯಕ್ಕೆ ಹಾವೇರಿ ಶ್ರೀಗಳವರು ಶಿವಾರ್ಚನೆಗೆ ಕುಳಿತುಕೊಂಡಿದ್ದರು. ಲಿಂಗಾನುಸಂಧಾನದಲ್ಲಿದ್ದಾಗ ಶಿವಶರಣರು ಐಕ್ಯವಾದರು. ಅದನ್ನು ಶ್ರೀಗಳವರು ತಮ್ಮ ಲಿಂಗಜ್ಞಾನದ ಬಲದಿಂದರಿತುಕೊಂಡು, ಲಿಂಗಾರ್ಚನೆ ಮುಗಿಸಿ ಹೊರಗೆ ದಯಮಾಡಿಸಿ ಉತ್ತರ ದಿಕ್ಕಿನಲ್ಲಿ ಓರ್ವ ಮಹಾ ವ್ಯಕ್ತಿಯು ಶಿವೈಕ್ಯವಾದನು; ಅಲ್ಪಾವಧಿಯಲ್ಲಿಯೇ ಆ ವ್ಯಕ್ತಿಯ ಐಕ್ಯದ ವಾರ್ತೆಯು ಬರುವದೆಂದು ಸೇವಕರಿಗೆ ತಿಳಿಸಿದರು. ಸ್ವಲ್ಪ ವೇಳೆಯಲ್ಲಿಯೇ ವೀರೇಶ ಶಿವಶರಣರು ಲಿಂಗೈಕ್ಯರಾದ ಸುದ್ದಿಯು ತಂತಿಯಿಂದ ತಿಳಿದು ಬಂದಿತು. ಇವರು ಲಿಂಗಯ್ಯನೊಡನೆ ಮಾತನಾಡಿ ಇಂಥ ಅನೇಕ ಘಟನೆಗಳನ್ನು ಹೇಳಿದ್ದುಂಟು. ಸೊನ್ನಲಾಪುರದ ಸಿದ್ಧರಾಮಯೋಗಿಗಳು ಶಿವನ ದರ್ಶನ ಸಂಭಾಷಣೆಗಳ ಸಲುವಾಗಿ ಶಿವಲೋಕಕ್ಕೆ ಹೋದರೆ ನಮ್ಮ ಹಾವೇರಿಯ ಶಿವಯೋಗಿಗಳು ಕರದಲ್ಲಿ ಶಿವರೂಪವಾಗಿರುವ ಇಷ್ಟಲಿಂಗದೊಡನೆ ಸಂಭಾಷಣೆ ಮಾಡುತ್ತಿದ್ದರೆಂದು ವಿಶ್ವಸನೀಯವಾಗಿ ತಿಳಿದು ಬಂದಿದೆ. ಈ ವಿಷಯದ ಸತ್ಯತೆಯ ಬಗ್ಗೆ ನಮ್ಮ ಒಬ್ಬ ಮಿತ್ರರು ತಮ್ಮ ಸ್ವಾನುಭಾವವನ್ನು ಹೇಳಿದ್ದಾರೆ. ಲಿಂಗವು-ಪರವಸ್ತು ತಾನಾಗಿ ಸಾಕ್ಷಾತ್ಕಾರವಾಗುತ್ತಿರುವ ಶಿವಯೋಗಿಗಳಿಗೆ ಇಂಥ ವಿಷಯಗಳು ತಿಳಿಯದೆ ಹೋಗುವದೆಂತು? ಮನದೊಳಗೆ ಶಿವನು ಮನೆಮಾಡಿಕೊಂಡಿರುವದಲ್ಲದೆ ಶಿವನೇ ತಾನಾದ ಶಿವಯೋಗಿಗಳಿಗೆ ಇಂಥ ಆಗುಹೋಗುಗಳು ತಿಳಿಯದೇ ಇರುವದೆಂತು? ಇಲ್ಲವಾದರೆ ಜ್ಞಾನವಿಲ್ಲದ ವೈರಾಗ್ಯವಾದೀತು; ತನ್ನ ತಾನರಿಯದ ವಿರತಿಯಾದೀತು; ಪರಬ್ರಹ್ಮನಾದ ಪರಶಿವನ ಇರವ ಮತ್ತು ನಿಲವನರಿಯದ ಆತ್ಮಜ್ಞಾನದಂತೆ ಅಜ್ಞಾನವಾದೀತು. ಆತಜ್ಯೋತಿಯು ಪರಂಜ್ಯೋತಿಯಲ್ಲಿ ಸಮರಸವಾಗದಂತಾದೀತು. ಆದ್ದರಿಂದಲೇ ವೀರಶೈವ ಧರ್ಮದಲ್ಲಿ ಭಕ್ತಿ, ಕ್ರಿಯಾ, ಜ್ಞಾನ, ವೈರಾಗ್ಯ ಮತ್ತು ಲಿಂಗಾಂಗ ಸಾಮರಸ್ಯವೆಂದು ಕ್ರಮವಾಗಿ ತತ್ವಾಚಾರಗಳನ್ನು ಹೇಳಿದ್ದಾರೆ. ಮೊದಲು ವಿವರಿಸಿದ ನಾಲ್ಕು ತತ್ವಗಳ ಮರ್ಮವನ್ನರಿದಾಚರಿಸಿದನುಭಾವಿಗಳೇ ಲಿಂಗಾಂಗ ಸಾಮರಸ್ಯವನ್ನು ಸಾಧಿಸಲಧಿಕಾರಿಗಳಾಗುವರು; ಕೊನೆಗೆ ಲಿಂಗಾಂಗ ಸಮರಸವನ್ನು ಸಹಜವಾಗಿ ಸಾಧಿಸುವರು. ಭವದ ಆಶೆಯಾಮಿಷ, ಮೋಹ ಮಾಯಾದಿಗಳನ್ನು ಜಯಿಸಿ ದಹಿಸಿದವರು ಶಿವಮೋಹಿಗಳು, ಶಿವಯೋಗಿಗಳು. ಇಂಥ ವಿರತರೇ ಅಮರರು. ಇಂಥವರಲ್ಲಿ ನಮ್ಮ ಹಾವೇರಿ ಶಿವಬಸವಶಿವಯೋಗಿಗಳೊಬ್ಬರು.

ಮಲಾಪಹಾರಿಣಿ ನದಿಯು ಶಿವಯೋಗಮಂದಿರದಿಂದ ಒಂದು ಫರ್ಲಾಂಗ ಅಂತರದಲ್ಲಿ ಪ್ರವಹಿಸುತ್ತಿದೆ. ಮಾನವರ ಮಲವೆಂಬ ಪಾಪವನ್ನು ಹರಣಮಾಡುವಳಾದ್ದರಿಂದ ಈ ನದಿಗೆ ಮಲಾಪಹಾರಿಣಿಯೆಂದು ನಾಮವನ್ನಿಡಲಾಗಿದೆ. ಈ

CC-0. Jangamwadi Math Collection. Digitized by eGangotri

ನದಿಯೊಳಗೆ ಒಂದು ಧಭೆ ದಭೆಯಿದೆ. ಅದಕ್ಕೆ ಅಕ್ಕಪಕ್ಕದ ಊರವರು 'ದಿಡಗು' ಎಂದು ಕರೆಯುವ ರೂಢಿಯದೆ. ಇಲ್ಲಿ ಪುರಾತನ ಶಿವಲಿಂಗವಿದೆ. ಆ ಲಿಂಗದ ಮುಂಭಾಗದಲ್ಲಿಯೇ ಅತಿ ಪವಿತ್ರವಾದದ್ದೊಂದು ಯಕ್ಷಿಣಿ ತೀರ್ಥವಿದೆ; ಈ ತೀರ್ಥ ದಲ್ಲಿ ಯಕ್ಷಿಣಿ ಮೊದಲಾದ ದೇವತೆಗಳೂ, ನಾಗರ್ಕಳೂ, ದಾನವ ಮಾನವಾದಿ ಗಳೂ ಮಿಂದು ನಿರ್ಮಲ ಮನಸ್ಸುಳ್ಳವರಾಗಿ ಶ್ರೀ ಮಹಾಕೂಟೇಶ್ವರನ ದರ್ಶನ ತೆಗೆದುಕೊಂಡು ಪುನೀತರಾಗುತ್ತಿರುವರು; ಈ ರೀತಿಯಾಗಿ ಪರಮೇಶ್ವರನು ಪಾರ್ವತಿದೇವಿಗೆ ನಿರೂಪಿಸಿದ್ದಾನೆಂದು 'ಮಹಾಕೂಟ ಮಹಾತ್ಮೆ'ಯಲ್ಲಿ ವರ್ಣನೆ ಯಿದೆ. ಇದು ಕೇವಲ ದಭೆದಭೆಯಾಗದೆ ಪವಿತ್ರವಾದ ತೀರ್ಥವೂ ಮತ್ತು ದೇವತೆಗಳ ವಾಸಸ್ಥಾನವಾಗಿರುವದರಿಂದ ಸುಕ್ಷೇತ್ರವೂ ಆಗಿರುವದು. ಈ ದಿಡಗು ಮಂಗಳೂರಿನಿಂದ ಸುಮಾರು ಎರಡು ಫರ್ಲಾಂಗ ಅಂತರದ ಮೇಲಿರುವದು. ಈ ಹಳ್ಳಿಯು ದಿನೇ ದಿನೇ ಕ್ಷೀಣವಾಗುತ್ತ ಪೂರ್ಣ ನಾಶವಾಗುವ ಹೀನ ದಶೆಯಲ್ಲಿತ್ತು. ಬಹುತರವಾಗಿ ಈ ಊರವರು ಗುಳೇಕಟ್ಟಿಕೊಂಡು ತಮ್ಮ ಬಂಧು ಬಾಂಧವರ ಊರುಗಳಿಗೆ ಹೋಗಿದ್ದರು. ವಿಶೇಷವಾಗಿ ಜಮೀನುಗಳಿದ್ದ ಜನರು ಅನಿವಾರ್ಯ ವಾಗಿ ಉಳಿದುಕೊಂಡಿದ್ದರು. ಈ ಊರು ಶಿವಯೋಗಮಂದಿರದಿಂದ ನಾಲ್ಕು ಫರ್ಲಾಂಗ ಅಂತರದಲ್ಲಿ ನದಿಯಾಚೆಗೆ ಇದೆ. ಈ ದುರ್ಘಟನೆಯು ಹಾವೇರಿ ಶ್ರೀಗಳವರಿಗೆ ತಿಳಿದು ಬರಲು ಸದಯಾಂತಃಕರಣದಿಂದ ಅವರು ಮನ ಕರಗಿ ದವರಾಗಿ, ತಮ್ಮ ಇಷ್ಟಲಿಂಗಯ್ಯನೊಡನೆ ವಿಚಾರ ಮಾಡಲಾಗಿ, ಆ ಊರವರು ಈ ದಿಡಗು ಕ್ಷೇತ್ರವನ್ನು ಸಾಮಾನ್ಯವಾಗಿ ತಿಳಿದು ಉದಾಸೀನ ಮಾಡಿದ್ದರಿಂದ ಈ ಊರಿಗೆ ಇಂಥ ದುರ್ಘಟನೆಯು ಪ್ರಾಪ್ತವಾಗಿರುವದೆಂದು ತ್ರಿಕಾಲಜ್ಞಾನಿಗ ಳಾದ ಇವರಿಗೆ ತಿಳಿದು ಬಂದಿತು. "ಎನ್ನ ಕರದೊಳಗಿರ್ದು ಎನ್ನೊಳೇತಕೆ ನುಡಿಯೆ.... ಎನ್ನೊಡನೆ ನುಡಿಯದಿರೆ ನಿನ್ನ ನಾ ಭವಭವದಿ ಬೆನ್ನುಬಿಡುವೆನೆ ? ಷಡಕ್ಷರಿ ಲಿಂಗವೇ" ಹೀಗೆಂದು ಮುಪ್ಪಿನ ಷಡಕ್ಷರಿ ಶಿವಯೋಗಿಗಳೆಂದರೆ, ಕರ ದಿಷ್ಟಲಿಂಗವ ನುಡಿಸಿ ನುಡಿದರು ನಮ್ಮ ಹಾವೇರಿಯ ಶಿವಬಸವ ಶಿವಯೋಗಿ ವರ್ಯರು. ಆಗ ಅವರು ಕೂಡಲೆ ಆ ಊರಲ್ಲಿದ್ದವರನ್ನು ಬರಮಾಡಿಕೊಂಡು ಅವರಿಗೆ "ಅಪ್ಪಗಳಿರಾ! ನಿಮ್ಮ ಊರು ಹಾಳಾಗಹತ್ತಿರುವ ಕಾರಣವು ನಿಮಗೆ ತಿಳಿ ದಿರಲಿಕ್ಕಿಲ್ಲ. ಆ ಕಾರಣವನ್ನು ನಾವೀಗ ನಿಮಗೆ ತಿಳಿಸಲೇ ಬೇಕಾಗಿದೆ. ನಾವು ಅಪ್ಪಣೆ ಮಾಡಿದಂತೆ ನೀವು ವರ್ತಿಸಿದರೆ ಸತ್ಯವಾಗಿ ಸುಖಿಗಳಾಗಿ ಬಾಳುವಿರಿ. ನಿಮ್ಮೂರಲ್ಲೊಂದು ಈಶ್ವರಲಿಂಗವದೆ. ನೀವು ದಿಡಗೆಂದು ಕರೆಯುವ ದಭೆದಭೆಯು ನಿಮ್ಮೂರ ಸೀಮೆಯಲ್ಲಿದೆ. ಅಲ್ಲಿಂದ ಅತಿ ಸಮೀಪದಲ್ಲಿಯೇ ಪುರಾತನ ಸ್ವಯಂಭು ವಾದದ್ದೊಂದು ಬಸವಣ್ಣನಿದೆ. ನೀವು ವರ್ಷಕ್ಕೊಮ್ಮೆ ಆ ಈಶ್ವರ ಲಿಂಗಕ್ಕೆ ರುದ್ರಾಭಿಷೇಕವ ಮಾಡಿಸಿ, ದಿಡಗಿನಲ್ಲಿ ಶ್ರಾವಣಮಾಸದಂತ್ಯದಲ್ಲಿ ಗುರುವಿರಕ್ತ ರಿಗೆ, ಗಣರಿಗೆ ತೃಪ್ತಿಪಡಿಸುವದಲ್ಲದೆ ಆ ಸ್ವಯಂಭುವಾದ ಬಸವಣ್ಣನನ್ನು ಭಕ್ತಿ

CC-0. Jangamwadi Math Collection. Digitized by eGangotri

ಯಿಂದರ್ಚಿಸಿ, ನೈವೇದ್ಯವನರ್ಪಿಸಿ, ಅಲ್ಲಿ ಆಗಮಿಸಿದ ಸರ್ವ ಜನರಿಗೆ ಪ್ರಸಾದವನ್ನು ಕೊಟ್ಟರೆ ನಿಮ್ಮೂರು ಉದ್ಧಾರವಾಗಿ ನೀವು ಸುಖಿಜೀವಿಗಳಾಗಿ ಬಾಳುವಿರಿ" ಎಂದು ಅಪ್ಪಣೆ ಮಾಡಿದರು. ಆಗಮಿಸಿದವರೆಲ್ಲರೂ ಆನಂದಭರಿತರಾಗಿ "ತಮ್ಮ ಪಾದ ದಪ್ಪಣೆಯಂತೆ ನಡೆದುಕೊಳ್ಳುವೆವು" ಎಂದು ಸಾಷ್ಟಾಂಗವೆರಗಿ ಮರಳಿ ಊರಿಗೆ ತೆರಳಿದರು. ಈಗಲೂ ಸಹ ಅವರು ಅದರಂತೆ ವರ್ತಿಸುತ್ತಿರುವದರಿಂದ ಆ ಊರ ಹೀನ ದಶೆಯು ಅಸ್ತವಾಗಿ ಸುಖದ ಉದಯವಾಗಿದೆ.

ಹಾವೇರಿ ಶಿವಯೋಗಿಗಳವರು ತ್ರಿಕಾಲಜ್ಞಾನಿಗಳಾದ್ದರಿಂದ ಹಿಂದಿನದನ್ನು ತಿಳಿದು ಇಂದಿನದನ್ನರಿತು ಮುಂದಿನದನ್ನು ಇಂದೇ ಹೇಳುತ್ತಿದ್ದರು. ಇವರು ಯಾವಾಗಲೂ ಭಕ್ತಿ, ಕ್ರಿಯೆ, ಜ್ಞಾನ, ವೈರಾಗ್ಯ ಮತ್ತು ಶಿವಯೋಗಗಳ ವಿಷಯಗಳನ್ನು ಹೆಚ್ಚಾಗಿ ಮೆಚ್ಚುತ್ತಿದ್ದರು. ಇವುಗಳ ಆಚರಣೆ ಅನುಭವಗಳನ್ನು ಭಕ್ತರಿಗೆ ಮತ್ತು ಸಾಧಕರಿಗೆ ಬೋಧಿಸುತ್ತಿದ್ದರು. ಇವರು ನಿಗ್ರಹಾನುಗ್ರಹ ಶಕ್ತಿಯುಳ್ಳವರಾಗಿದ್ದರೂ ಶಾಂತಿಪ್ರಿಯರು. ನಿಜವಾದ ವಿರತರು. ದಯಾಭರಿತರು. ಧರ್ಮರಕ್ಷಕರು. ಸಮಾಜಸುಧಾರಕರು. ನ್ಯಾಯನಿಷ್ಠುರರು. ತಪೋನಿಧಿಗಳು. ಶಿವಾನುಭಾವಿಗಳು. ತ್ರಿಕಾಲ ಜ್ಞಾನಿಗಳು.

(ತ್ರಿವಿಧಿ)

ಲಿಂಗಯ್ಯನೊಡನೆ ಸಂಭಾಷಣೆ ಮಾಡಿದ ತ್ಯಾಗಿ |
ಜಂಗಮ ಜೀವಿ ಹಾವೇರಿಯ ಶಿವಯೋಗಿ |
ತುಂಗ ಶಿವಬಸವ ಶರಣಾಗು ||

CC-0. Jangamwadi Math Collection. Digitized by eGangotri

# ಕೊಪ್ಪದಲ್ಲಿ ನಡೆದ ಶ್ರೀಗಳವರ ಲೀಲೆಗಳು

## ಶ್ರೀ. ಮುದಿಲಿಂಗಯ್ಯ ತೋಟಯ್ಯ ಹಿರೇಮಠ, ಮುಜರೇಕೊಪ್ಪ.

ಶಿವಯೋಗಿ ಮೆಟ್ಟಿದ ಧರೆ ಅವಿಮುಕ್ತ ಕ್ಷೇತ್ರವೆಂದು ಎಲ್ಲ ಅನುಭಾವಿಗಳೂ ಹೇಳಿದ್ದಾರೆ :

"ನಿಷ್ಠೆಯುಳ್ಳ ಭಕ್ತ ನಟ್ಟಡವಿಯಲ್ಲಿದ್ದರೇನು ?
ಅದು ಪಟ್ಟಣವೆನಿಸುವುದು.
ನಿಷ್ಠೆಯಿಲ್ಲದ ಭಕ್ತ ಪಟ್ಟಣದಲ್ಲಿದ್ದರೂ
ನಟ್ಟಡವಿ ಕಾಣಾ ರಾಮನಾಥ ! "*

ಎಂಬ ಮಹಾತ್ಮಾ ದೇವರದಾಸಿಮಯ್ಯನವರ ವಚನದಂತೆ ಶರಣರ, ಸತ್ಪುರುಷರ ವಾಸ ಸ್ಥಾನವನ್ನು ಸಾಮಾನ್ಯವೆಂದು ತಿಳಿಯಬಾರದು. ಮಹಾತ್ಮರಲ್ಲಿರುವ ತಪೋಬಲದಿಂದ ಕಾಡುನೆಲವೂ ಸುಕ್ಷೇತ್ರವಾಗುವದು. ಪರಮಪೂಜ್ಯ ಹಾವೇರಿ ಶ್ರೀಗಳವರು ತಮ್ಮ ತಪಃಸಾಮರ್ಥ್ಯದಿಂದ ಮುಜರೇಕೊಪ್ಪದ (ನಿಡಗುಂದಿ, ತಾ.ರೋಣ)ದ ಹಳ್ಳದ ದಡದ ನಿರ್ಜನ ತಾಣವು ಪುಣ್ಯಕ್ಷೇತ್ರವಾಗಿ ಬೆಳೆಯುತ್ತಿದೆ. ಶಿವಯೋಗಿಗಳು ಏಕಾಂತ ಮತ್ತು ನಿಸರ್ಗರಮ್ಯ ನಿರ್ಜನ ಸ್ಥಾನಗಳನ್ನು ಕಂಡರೆ ಬಿಡುವದಿಲ್ಲ; ಅಲ್ಲಿಯೇ ನಿಜಾನಂದದಲ್ಲಿ ಶಿವಯೋಗದಲ್ಲಿ ಲೀಲಾಮಯವಾಗಿ ಇದ್ದು ಬಿಡುತ್ತಾರೆ.

'ಏಕಾಂತೇ ಮಠಿಕಾಮಧ್ಯೇ ಸ್ಥಾಪಯೇತ್ ಶಿವಯೋಗಿನಂ' ಎಂಬ ತತ್ತ್ವವನ್ನು ವೀರಶೈವ ಶಿವಯೋಗಿಗಳು ಪಾಲಿಸಿಕೊಂಡು ಬಂದಿದ್ದಾರೆ.

ಶಿವಯೋಗಿಯ ಲಿಂಗಪೂಜೆಯ ಪ್ರಭಾವದಿಂದ ಅನೇಕ ಅಘಟಿತ ಘಟನೆಗಳು ಲೋಕಹಿತಕ್ಕಾಗಿ ನಡೆಯುತ್ತವೆ. ಪೂಜ್ಯ ಹಾವೇರಿ ಶ್ರೀಗಳವರು ನಿಡಗುಂದಿ-ಕೊಪ್ಪದಲ್ಲಿ ಅನುಷ್ಠಾನಕ್ಕೆ ಕುಳಿತಾಗ, ನಂತರವೂ ಅನೇಕ ಮಹಿಮೆಗಳು ಪ್ರತ್ಯಕ್ಷ ನಿದರ್ಶನಕ್ಕೆ ಬಂದಿವೆ.

ಲಿಂಗೈಕ್ಯ ಪೂಜ್ಯ ಹಾವೇರಿ ಶ್ರೀ ಶಿವಬಸವ ಮಹಾಸ್ವಾಮಿಗಳವರು ಶಿವಯೋಗ ಮಂದಿರದಿಂದ ಲಿಂ. ಪೂಜ್ಯ ಹಾನಗಲ್ಲ ಶ್ರೀಗಳವರೊಡನೆ ದೇಶಮಧ್ಯದಲ್ಲಿ ಭಕ್ತರ ಉದ್ಧಾರಕ್ಕೆ ಮತ್ತು ವೀರಶೈವ ಸಮಾಜಕ್ಕೆ ಆಚಾರ-ವಿಚಾರಗಳನ್ನು ಬೋಧಿಸಿ ಭಿಕ್ಷಾಟನ ಮಾಡುತ್ತ ಸಂಚರಿಸಿ ರೋಣ ತಾಲೂಕಿನ ನಿಡಗುಂದಿ ಗ್ರಾಮಕ್ಕೆ ದಯಮಾಡಿಸಿ

---

* ದೇವರದಾಸಿಮಯ್ಯನ ವಚನಗಳು; ಮಾಹೇಶ್ವರ ಸ್ಥಲ, ವಚನ–೮೮; ಸಂಪಾದಕರು: ಫ. ಗು. ಹಳಕಟ್ಟಿ, ಶಿವಾನುಭವ ಗ್ರಂಥಮಾಲೆ– ೧೫;

CC-0. Jangamwadi Math Collection. Digitized by eGangotri

ದರು. ಆ ಊರಿಗೆ ಕೊಪ್ಪ ಎಂಬುವ ಒಂದು ಮುಜರೇಹಳ್ಳಿ ಇದೆ. ಶ್ರೀಗಳವರು ಅಲ್ಲಿಯ ಭಕ್ತರನ್ನು ಕರೆಯಿಸಿ, " ನಿಮ್ಮ ಗ್ರಾಮ ಸಣ್ಣದು. ನಮ್ಮ ಸರ್ಕೀಟಿಗೆ ಅನಾನುಕೂಲವಾಗುತ್ತದೆ. ಇಲ್ಲಿಗೆ ಬಂದು ನಿಮ್ಮ ಕಾಣಿಕೆಯನ್ನು ಸಲ್ಲಿಸಿರಿ. " ಎಂದು ಅಪ್ಪಣೆ ಮಾಡಿದರು. ಆ ಪ್ರಕಾರ ಭಕ್ತರೆಲ್ಲರೂ ಕಾಣಿಕೆಯನ್ನು ಅರ್ಪಿಸಿದರು. ನಿಡಗುಂದಿ ಗ್ರಾಮದ ಕೆಲವು ಅಜ್ಞಜನರು " ಹಾವೇರಿ ಸ್ವಾಮಿಗಳು ಅಂತರಿಕ್ಷ ಶಿವಪೂಜೆ ಮಾಡುತ್ತಾರೆ. ಹಾಗೆ - ಹೀಗೆ " ಎಂದು ಮಾತನಾಡುತ್ತ ಅವರ ಶಿವಪೂಜೆಯನ್ನು ನೋಡಬೇಕೆಂದು ಕೆಲವು ಹೆಣ್ಣುಮಕ್ಕಳೂ, ಗಂಡುಮಕ್ಕಳೂ ಪರದೆ ತೆಗೆದು ಹುಂಬುತನದಿಂದ ನೋಡಲು ನುಗ್ಗಿದರು. ಆಗ ಶ್ರೀಗಳವರ ಶಿವಾರ್ಚನೆಯಲ್ಲಿ ಬಹಳ ವಿಘ್ನವಾಯಿತು. ಅವರು ಬಹಳ ತಪ್ತರಾಗಿ ಅಷ್ಟಕ್ಕೆ ಶಿವಾರ್ಚನೆ ನಿಲ್ಲಿಸಿ ಹಾಗೆಯೇ ಎದ್ದು ಹಾನಗಲ್ಲ ಶ್ರೀಗಳವರ ಹತ್ತಿರ ಬಂದು, " ಸ್ವಾಮೀ, ತಮಗೆ ಶಿವನಿಂದ ಬೇಡಿ ತರುವ ಶಕ್ತಿ ಇಲ್ಲವೆ ? ಈ ಕುಟಿಲ ಭಕ್ತರನ್ನು ಕೇಳಲು ಹೊರಟಿರಾ? ಇನ್ನು ನಾನು ಭಿಕ್ಷಾಟನಕ್ಕೆ ಬರುವದಿಲ್ಲ. ತಾವೇ ಮಾಡಿರಿ. " ಎಂದು ಅಪ್ಪಣೆ ಕೊಡಿಸಿದರು. ಹಾನಗಲ್ಲ ಶ್ರೀಗಳವರು ಎಷ್ಟು ಸಮಾಧಾನ ಹೇಳಿದರೂ ಶ್ರೀಗಳವರ ತಾಪ ಕಡಿಮೆಯಾಗಲಿಲ್ಲ. ಆ ಕೂಡಲೇ ಕೊಪ್ಪಕ್ಕೆ ಬಂದು ಅಲ್ಲಿಯ ಭಕ್ತರನ್ನು ಶಿವಪೂಜೆಗೆ ಅನುಕೂಲ ಮಾಡಿಕೊಡಿರೆಂದು ಅಪ್ಪಣೆ ಕೊಡಿಸಿದರು. ಆಗ ಶ್ರೀ ತೋಟಯ್ಯನವರೇ ಮುಂತಾದ ಭಕ್ತರು ಬಹು ಭಕ್ತಿಯಿಂದ ಒಂದು ಗುರುಮಠವನ್ನು ಪೂಜ್ಯರ ಶಿವಯೋಗಕ್ಕೆ ಅನುಕೂಲಿಸಿ ಕೊಟ್ಟರು.

ಅಂದು ರಾತ್ರಿ ಹತ್ತು ಗಂಟೆಯಾಗಿರಬೇಕು. ನಿಡಗುಂದಿಯಿಂದ ಶ್ರೀಗಳವರು ಗಾಡಿಯಲ್ಲಿ ದಯಮಾಡಿಸುವಾಗ " ಈ ಊರು ಎಂದರೆ ನನ್ನ ಮೈ ಉರಿಯುತ್ತಿದೆ. ತಿಳಿಗೇಡಿಗಳು " ಎಂದು ಮುಂತಾಗಿ ಸಿಡಿನುಡಿದರು. ಆ ದಿನ ರಾತ್ರಿ ಊರ ಒಕ್ಕಲಿಗರು ನಾಲ್ಕು ಕೂರಗಿ ಹೊಲದಲ್ಲಿ ನಾಲ್ಕು ಎತ್ತುಗಳಿಂದ ಗೋದಿಯನ್ನು ಬಿತ್ತಿದ ಹುಮ್ಮಸಿನಲ್ಲಿ ಎತ್ತುಗಳನ್ನು ಮೆರೆಯಿಸಲು ಹಿಲಾಲು ಹಚ್ಚಿ ಸಂಭ್ರಮದಿಂದ ನಡೆದಿದ್ದರು. ಹಿಲಾಲಿನ ಉರಿಯು ಚಿಮಣಿ ಎಣ್ಣೆಯ ಡಬ್ಬಿಯೊಂದರಲ್ಲಿ ಬಿದ್ದು ಸ್ಫೋಟವಾಗಿ ಜನರು ಸಂಕಟಕ್ಕೆ ಗುರಿಯಾದರು. ಕೆಲವರು ಉರಿಯ ತಾಪವನ್ನು ತಾಳಲಾರದೆ ಕೆರೆಯಲ್ಲಿ ಬಿದ್ದರು. ಇಡಿಯ ಊರಿನಲ್ಲಿ ಭೀಕರ ಪರಿಸ್ಥಿತಿಯು ಉಂಟಾಯಿತು. ಅಂದಿನಿಂದ ಶ್ರೀಗಳವರು ನಿಡಗುಂದಿಗೆ ದಯಮಾಡಿಸಲಿಲ್ಲ; ಕೊಪ್ಪದಲ್ಲಿಯೇ ಅನುಷ್ಠಾನಕ್ಕೆ ಕುಳಿತರು. ಮರುಳ ಮಾನವರಿಗೆ ಒಳ್ಳೆಯ ಬುದ್ಧಿಯನ್ನು ಕೊಡುವಂತೆ ಶಿವನಲ್ಲಿ ಪ್ರಾರ್ಥಿಸಿದರು.

ಕೊಪ್ಪದಲ್ಲಿ ಅಂದಿನ ರಾತ್ರಿ ಗುರುಮಠದಲ್ಲಿ ಶ್ರೀಗಳವರು ಪೂಜೆ ಮುಗಿಸಿಕೊಂಡು ಮರುದಿವಸ ಬೆಳಗ್ಗೆ ಊರ ಹೊರಗೆ ಸಂಚಾರ ಹೊರಟರು. ಗ್ರಾಮದ ಪೂರ್ವಕ್ಕೆ ಒಂದು ಹಳ್ಳ. ಅದರ ತೀರದಲ್ಲಿ ಒಂದು ಸಂಪಾದ ಮಾವಿನ ತೋಪು. ಸೇದುವ ಭಾವಿ,

CC-0. Jangamwadi Math Collection. Digitized by eGangotri

ಬಿಲ್ವಪತ್ರೆಯ ಬನ. ಇದೆಲ್ಲವನ್ನು ನೋಡಿ ಶ್ರೀಗಳವರಿಗೆ ಬಹು ಆನಂದವಾಯಿತು. ಗ್ರಾಮದ ಭಕ್ತರಿಗೆ " ನಮ್ಮ ಪೂಜೆಗೆ ಇಲ್ಲಿಯೇ ಅನುಕೂಲ ಮಾಡಿಕೊಡಿರಿ. " ಎಂದು ಅಪ್ಪಣೆಯಾಯಿತು. ಭಕ್ತರೆಲ್ಲ ಬಹು ಸಂತೋಷದಿಂದ ಶಿವಯೋಗಿಗಳ ಪೂಜೆಗೆಂದು ಒಂದು ಕುಟೀರವನ್ನು ಆ ಪ್ರಶಾಂತ ಸ್ಥಾನದಲ್ಲಿ ನಿರ್ಮಿಸಿದರು. ಅಂದು ಮುಂಜಾನೆ ಶ್ರೀಗಳವರು ಪೂಜೆಯನ್ನು ಆನಂದದಿಂದ ತೀರಿಸಿಕೊಂಡು ಗ್ರಾಮದ ಬಗೆಗೆ ಭಕ್ತರನ್ನು ವಿಚಾರಿಸಿದರು. ಎರಡುನೂರ ಮನೆಗಳ ತೀರ ಚಿಕ್ಕದಾದ ಗ್ರಾಮವು. ಅಲ್ಲಿ ಕಾಟಕ ಜನರಿಲ್ಲ. ಎಲ್ಲರೂ ಹೆಚ್ಚಾಗಿ ಲಿಂಗಾಂಗಿಗಳೇ. ಅಣ್ಣಿಯವರು, ಬಾರಿಕೇರರು, ಬೇಡರು - ಇವರೆಲ್ಲರೂ ಇದ್ದರೂ, ಅವರನು ರಾಕ್ಷಸ ಆಹಾರವಲ್ಲ. ಶಾಕಾಹಾರಿಗಳು. ದುಷ್ಟ ಚಟದವರಲ್ಲ. ಸಾತ್ವಿಕರು ಎಂಬುದನ್ನು ಕೇಳಿ ಶ್ರೀಗಳವರಿಗ ಬಹು ಸಂತೋಷ ವಾಯಿತು. " ನಮ್ಮ ಪೂಜೆ ಇಲ್ಲಿ ದಿನದಿನಕ್ಕೂ ಹೆಚ್ಚಿನ ಆನಂದದಿಂದ ನಡೆದಿದೆ. ನಮ್ಮ ಪೂಜೆಗಾಗಿ ಇಲ್ಲಿ ಒಂದು ಮಠವನ್ನು ಕಟ್ಟುವಿರಾ ? " ಎಂದು ಊರ ಮುಖಂಡ ಭಕ್ತರನ್ನು ಶ್ರೀಗಳವರು ಕೇಳಿದರು. ಭಕ್ತರೆಲ್ಲ ಭಾಗ್ಯವೆಂದು ಬಗೆದು ಅಲ್ಲಿ ಮಠವನ್ನು ಕಟ್ಟಿದರು. ಶಿವಯೋಗಾಶ್ರಮದ ನಿರ್ಮಾಣವಾಯಿತು. ಆಶ್ರಮಕ್ಕೆ ಭಾವಿ, ಪತ್ರಿ ಬನ ವಿದ್ದ ಜಮೀನನ್ನು ಕೊಡದವನಿಗೆ ಇಂದಿಗೂ ಸಂತಾನವಿಲ್ಲ. ಆಗ ಉಳಿದ ಭಕ್ತರು ಮುಂದೆ ಬಂದು ಭೂದಾನಗಳನ್ನು ಅರ್ಪಿಸಿದರು. ಶ್ರೀ. ತೋಟಯ್ಯನವರು ಪತ್ರಿಬನದ ಹತ್ತಿ ರದ ತಮ್ಮ ಎರೆ ಜಮೀನನ್ನು ದಾನವಾಗಿ ಕೊಟ್ಟು ಅಲ್ಲಿಯೇ ಜೋಪಡಿ ಹಾಕಿದರು. ಊರ ಜನರು ಉತ್ಸಾಹದಿಂದ ಹಳ್ಳದ ದಂಡೆಯ ಕಾಡುಗಿಡಗಳನ್ನು ಕಡೆದು ಮಣ್ಣಿನ ಮಠವನ್ನು ನಿರ್ಮಿಸಿದರು. ಅದೇ ವರ್ಷ ಭಾವಿಯನ್ನು ತೆಗೆಯಿಸಿದರು. ಶ್ರೀಗಳವರು ಅಲ್ಲಿಯೇ ಒಂದು ಪಾಠಶಾಲೆಯನ್ನು ಮತ್ತು ಸಂಗೀತ ವಿದ್ಯಾಲಯವನ್ನು ಸ್ಥಾಪಿಸಿದರು. ಲಿಂ.ಶ್ರೀ. ಪಂಚಾಕ್ಷರ ಗವಾಯಿಗಳವರ ಸಂಗೀತ ಪಾಠಶಾಲೆ ಇಲ್ಲಿಯೆ ಬಸವಜಯಂತಿಯ ದಿನ ಸ್ಥಾಪಿತವಾದುದು. ಇಲ್ಲಿಯ ಈ ಕಾರ್ಯಗಳು ಶ್ರೀಗಳವರ ತಪಃಪ್ರಭಾವ ದಿಂದ ನಡೆದುದನ್ನು ಕೇಳಿ ಹಾನಗಲ್ಲ ಪೂಜ್ಯರಿಗೆ ಬಹು ಆನಂದವೆನಿಸಿತು. ಅವರು ಇಲ್ಲಿಗೆ ದಯಮಾಡಿಸಿದರು. ಶ್ರೀಗಳವರ ಅನುಷ್ಠಾನ ನಿರಂತರ ನಡೆಯುವಂತೆ ಯೋಚಿಸಿ ಆಶ್ರಮಕ್ಕೆ ಭೂಮಿಯನ್ನು ಮಾಡುವ ಯೋಜನೆ ಹಾಕಿದರು. ಹಾವೇರಿ ಶ್ರೀಗಳವರು ಆಶಾರಹಿತರು, ಪೂಜಾನಿಷ್ಠರು. ಅವರು ಭಕ್ತರನ್ನು ಅಷ್ಟು ಕೊಡಿರಿ, ಇಷ್ಟು ಕೊಡಿರಿ ಎಂದು ಎಂದೂ ಕೇಳಿದವರಲ್ಲ. ಆದರೂ ಭಕ್ತರು ಮನಃಪೂರ್ವಕ ವಾಗಿ ಈ ಆಶ್ರಮಕ್ಕೆ ಸಹಾಯ ಸಲ್ಲಿಸಲು ಮುಂದಾದರು. ಶ್ರೀ. ತೋಟಯ್ಯನವರ ಧರ್ಮಪತ್ನಿ ಶ್ರೀಮತಿ ಗಂಗಮ್ಮನವರ ಅಕ್ಕ ವೀರಮ್ಮನವರಿಗೆ ಸಂತಾನವಿರಲಿಲ್ಲ. ಅದು ತೋಟಯ್ಯನರಿಗೆ ಸಲ್ಲುವದಿತ್ತು. ಆ ಆಸ್ತಿಯ ಹನ್ನೆರಡು ಎಕರೆ ಉತ್ತಮ ಜಮೀನನ್ನು ದಂಪತಿಗಳು ಶ್ರೀಗಳವರಿಗೆ ಗೊತ್ತಾಗದಂತೆ ದಾನಪತ್ರ ಬರೆಯಿಸಿದರು. ಮುಂದೆ ಅವರೇ ಎಲ್ಲರ ಸಹಕಾರದಿಂದ ಎಪ್ಪತ್ತೆಂಟು ಎಕರೆ ಜಮೀನು, ಕಲ್ಲುತೇರು, ಭಾವಿ ಮೊದಲಾದವುಗಳನ್ನು ಮಾಡಿಸಿ ಆಶ್ರಮವು ಸ್ಥಿರವಾಗಿ ನಿಲ್ಲುವಂತೆ ಮಾಡಿದರು.

CC-0. Jangamwadi Math Collection. Digitized by eGangotri

ಈ ಕೊಪ್ಪದ ಶಿವಯೋಗಾಶ್ರಮದಲ್ಲಿ ಶ್ರೀಗಳವರು ಅನುಷ್ಠಾನ ನಡೆಯಿಸಿದಾಗ ಅನೇಕ ಲೀಲೆಗಳು ನಡೆದಿವೆ.

ಹಾಲಕೆರೆ ಗ್ರಾಮವು ಕೊಪ್ಪಕ್ಕೆ ಎರಡು ಮೈಲು ದೂರದಲ್ಲಿದೆ. ಅದು ಶ್ರೀ ತೋಟಯ್ಯನವರ ಕುಟುಂಬದ ಊರು. ಅಲ್ಲಿ ದೊಡ್ಡ ದೊಡ್ಡ ಜಮೀನುದಾರರೂ ಸ್ಥಿತಿವಂತರೂ ಇರುವ ಗ್ರಾಮ. ಇಲ್ಲಿ ಇನಾಮತಿಯವರ ಮನೆತನ ಈಗಲೂ ಬಹಳ ಘನತೆಯನ್ನು ಪಡೆದಿದೆ. ಈ ಮನೆತನದವರು ಶ್ರೀಗಳವರಲ್ಲಿ ಬಹು ಭಕ್ತಿಯಿಂದ ನಡೆದುಕೊಂಡರು. ಶ್ರೀಮಂತ ರಾವಸಾಹೇಬ ಇನಾಮತಿ ನಾಗಪ್ಪನವರು ಶ್ರೀಗಳವರ ಪೂಜೆಯನ್ನು ತಮ್ಮ ಮನೆಯಲ್ಲಿ ಮಾಡಿಸಿದರು. ಅವರು ಶ್ರೀಗಳವರ ಅಪ್ಪಣೆ ಪ್ರಕಾರ ಒಂಬತ್ತು ತಿಂಗಳು ಗೋದಿ, ಸಿಹಿ, ತುಪ್ಪದ ಆಹಾರವನ್ನು ಬಿಟ್ಟು ವ್ರತ ಮಾಡಿ ಒಂದು ಕಾರ್ಯವನ್ನು ಸಾಧಿಸಿದರು. ಆಗ ಶ್ರೀಗಳವರ ಅಪ್ಪಣೆಯಂತೆ ಸಂಭ್ರಮದ ಪೂಜೆಯೊಂದಿಗೆ ಗಣಸಂತೃಪ್ತಿಯನ್ನು ಮಾಡಿಸಿದರು. ರಾವಸಾಹೇಬರ ಬಂಧು ಬಾಂಧವರೆಲ್ಲ ಈ ಕಾರ್ಯದಲ್ಲಿ ಬಹು ಭಕ್ತಿಯಿಂದ ಸಹಕರಿಸಿದರು. ಶ್ರೀಗಳವರಿಗೆ ಇಪ್ಪತ್ತುನಾಲ್ಕು (೨೪) ಎಕರೆ ಎರೆ ಜಮೀನನ್ನು ಕೆರೆಯಿದ್ದ ನಂಬರನ್ನೇ ದಾನವಾಗಿ ಧಾರೆಯೆರೆದರು. ಆ ಕಾಲಕ್ಕೆ ಶಿವನೇ ವೇಷಾಂತರದಿಂದ ಬಂದು ಹೋದನೆಂದು ಜನರ ನಂಬುಗೆಯಿದೆ.

ಶ್ರೀಗಳವರು ಭಕ್ತರ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದರು. ಅವರಿಗೆ ಬೇಡಿದುದನ್ನು ಕರುಣಿಸುತ್ತಿದ್ದರು. ಕೊಪ್ಪದಲ್ಲಿ ಕರಿಯಪ್ಪ ಮಹಾದೇವಪ್ಪ ಎಂಬ ಭಕ್ತನಿಗೆ ಬಹು ದಿನಗಳಿಂದ ಮಕ್ಕಳಾಗಿರಲಿಲ್ಲ. ಶ್ರೀಗಳವರ ಆಶೀರ್ವಾದದಿಂದ ಒಬ್ಬನೇ ಪುತ್ರನು ಜನಿಸಿದನು. ಅವರು ಶ್ರೀಗಳವರಿಗೆ ಆರು (೬) ಎಕರೆ ಭೂಮಿಯ ದತ್ತಿಯನ್ನು ಅರ್ಪಿಸಿರುವರು.

ಕೊಪ್ಪದಲ್ಲಿ ಶರಣಪ್ಪ ರುದ್ರಪ್ಪ ಸರ್ವಿ ಎಂಬವರು ಇದ್ದರು. ಅವರು ನಾಲ್ಕು ಜನ ಅಣ್ಣ-ತಮ್ಮಂದಿರು. ಅಣ್ಣನು ತಮ್ಮಂದಿರಿಗೆ ಆಸ್ತಿ ಕೊಟ್ಟಿರಲಿಲ್ಲ. ಮನೆತನದಲ್ಲಿ ದಾಯಾದ ಮಾತ್ಸರ್ಯ ಬೆಳೆದು ತಮ್ಮಂದಿರಿಗೆ ಬಹಳ ತೊಂದರೆಯಾಗಿತ್ತು. ಜಮೀನುಗಳೆಲ್ಲ ಪಡ ಬಿದ್ದಿದ್ದವು. ಶ್ರೀಗಳವರು ಎಲ್ಲರಿಗೂ ತಿಳಿಹೇಳಿದರು. ಆ ಮನೆತನದ ವೈಷಮ್ಯವೆಲ್ಲ ಕಳೆದು, ಎಲ್ಲ ಎಡರು ತೊಡರುಗಳು ಬಯಲಾದವು. ಅಣ್ಣ-ತಮ್ಮಂದಿರೆಲ್ಲರೂ ಒಮ್ಮನದಿಂದ ಕೂಡಿದರು, ನೆಮ್ಮದಿಯ ಬಾಳುವೆಯನ್ನು ಸಾಗಿಸಹತ್ತಿದರು. ಅವರು ಶ್ರೀಗಳವರಿಗೆ ಹದಿನಾರು (೧೬) ಎಕರೆ ಉತ್ತಮ ಭೂಮಿಯನ್ನು ಅರ್ಪಿಸಿ ಧನ್ಯರಾಗಿರುವರು.

ನಿಡಗುಂದಿಯ ಕಾಳಮ್ಮ ಗೌಡಶಾನಿ ಬಹು ಭಕ್ತಿವಂತೆ. ಅವರ ಸೋದರಳಿಯನಿಗೆ ಬಹು ವರ್ಷಗಳಿಂದ ಮೂಲರೋಗವಿದ್ದಿತು. ಯಾವ ಔಷಧೋಪ

CC-0. Jangamwadi Math Collection. Digitized by eGangotri

ಚಾರಗಳಿಗೂ ಅದು ಗುಣವಾಗಿರಲಿಲ್ಲ. ಅದಕ್ಕೆ ಬಹಳ ಹಣವನ್ನು ಕಳೆದು ಕೊಂಡಿದ್ದರು. ಗೌಡಶಾನಿ ಶ್ರೀಗಳವರಲ್ಲಿ ಅರಿಕೆ ಮಾಡಿಕೊಳ್ಳಲು ಸಂಕೋಚ ಪಟ್ಟುಕೊಂಡಳು. ಶ್ರೀ ತೋಟಯ್ಯನವರಿಂದ ಶ್ರೀಗಳವರಿಗೆ ಈ ವಿಷಯ ವೇದ್ಯ ವಾಯಿತು. ಶ್ರೀಗಳವರು ಆ ರೋಗಿಯನ್ನು ಕೆಲವು ದಿನ ಮಠದಲ್ಲಿ ಇಟ್ಟುಕೊಂಡು ಉಪಚಾರ ಮಾಡಿಸಿದರು. ರೋಗಿಯು ಪೂರ್ಣ ಗುಣ ಹೊಂದಿದನು. ಅವ ನಿಗೆ ಸಂತಾನವಾಗಿ ಸುಖದಿಂದಿರುವನು. ಗೌಡಶಾನಿಯು ಕೊಪ್ಪದಲ್ಲಿ ಎರಡು ಎಕರೆ ಜಮೀನನ್ನು ಖರೀದಿ ಹಿಡಿದು ಶ್ರೀಗಳವರಿಗೆ ದಾನ ಕೊಡಿಸಿದಳು.

ನರೇಗಲ್ಲಲ್ಲಿ ಜೋಳದವರು ಆಗರ್ಭ ಶ್ರೀಮಂತರು. ಅವರ ಮನೆತನದಲ್ಲಿ ಯಜಮಾನ ದೊಡ್ಡಪ್ಪನವರ ಧರ್ಮಪತ್ನಿಗೆ ಗಾಳಿಯಾಗಿ ತಲೆ ಕೆಟ್ಟು ವಿಕಾರ ವಾಗಿದ್ದಿತು. ಎಲ್ಲಿ ತೋರಿಸಿದರೂ ಗುಣವಾಗಲಿಲ್ಲ. ತೋಟಯ್ಯನವರು ಮಿತ್ರ ನಾದ ಭಕ್ತನ ಆಗ್ರಹದಂತೆ ದೆವ್ವನ ಮನೆಯಲ್ಲಿಯೇ ಶ್ರೀಗಳವರ ಅನುಷ್ಠಾನಕ್ಕೆ ಏರ್ಪಡಿಸಿದರು. ದೊಡ್ಡಪ್ಪನವರ ಕುಟುಂಬದ ಕಷ್ಟ ಪರಿಹಾರವಾಯಿತು. ಭಕ್ತನ ಆನಂದಕ್ಕೇ ಪಾರವೇ ಇರಲಿಲ್ಲ. ಅವರು ಶ್ರೀಗಳವರಿಗೆ ಹನ್ನೆರಡು ಎಕರೆ ಭೂಮಿ ಯನ್ನು ಅರ್ಪಿಸಿ ಕೊನೆಯವರೆಗೂ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು.

ಒಂದು ದಿನ ತಮ್ಮ ಶಿಷ್ಯರಾದ ಒಬ್ಬ ಜಂಗಮರಿಗೆ ಸರಕಾರಿ ಕಾಯದೆ ಪೇಚಿ ನಲ್ಲಿ ಜಾಮೀನು ಇಲ್ಲದೆ ಖಟ್ಲೆಯಲ್ಲಿ ಗುಮಾನಿ ಹಾಕಿದರೆಂದು ಕೇಳಿ ಶ್ರೀಗಳ ವರು ರೋಣಕ್ಕೆ ರಾತ್ರಿಯಲ್ಲಿಯೇ ದಯಮಾಡಿಸಿದರು. ಮಳೆಗಾಲದಲ್ಲಿ ಕೊಪ್ಪ ದಿಂದ ಬಹು ಪ್ರಯಾಸ ಬಟ್ಟು ಬಂದು ಮಾಮಲೇದಾರರ ಮನೆಗೆ ಸ್ವತಃ ದಯಮಾಡಿಸಿ "ಬಡಜಂಗಮನನ್ನು ಜಾಮೀನಿನ ಮೇಲೆ ಬಿಡಿರಿ." ಎಂದು ಕೇಳಿ ದರು. ಮಾಮಲೇದಾರರು ಕಾಯದೆಯಿಂದ ಹಾಗೆ ಮಾಡಲು ಬರುವದಿಲ್ಲ. ಮೇಲಿನ ಅಧಿಕಾರಿಗಳಿಗೆ ಬರೆದು ನಾಲ್ಕಾರು ದಿನಗಳಲ್ಲಿ ಬಿಡಿಸುವ ವ್ಯವಸ್ಥೆ ಮಾಡುವೆನೆಂದು ಹೇಳಿದರು. ಶ್ರೀಗಳವರು ಏನೂ ಮರುಮಾತನಾಡದೆ ಗುಲ ಗಂಜಿ ಮಠಕ್ಕೆ ದಯಮಾಡಿಸಿ ಪೂಜೆಯಿಲ್ಲದೆ ಪವಡಿಸಿದರು. ಮರುದಿನ ಮಧ್ಯಾಹ್ನ ವಾದರೂ ಪೂಜೆಗೆ ದಯಮಾಡಿಸಲಿಲ್ಲ. ಇತ್ತ ಮಾಮಲೇದಾರ ಸಾಹೇಬರ ಕುಟುಂಬ ಹೊಟ್ಟೆಲಿದ್ದು ಜನನವಾಗದೆ ಬಹು ಪೇಚಾಡುತ್ತಿದ್ದರು. ಲೇಡಿ ಡಾಕ್ಟ ರರು ಬಂದು ಎಷ್ಟು ಉಪಚರಿಸಿದರೂ ನೋವು ನಿಲ್ಲಲಿಲ್ಲ. ಸಾಹೇಬರಿಗೆ ಗಾಬರಿ ಯಾಯಿತು. ಕೂಡಲೇ ಅವರು ಶ್ರೀಗಳವರ ಮಹಿಮೆಯನ್ನು ತಿಳಿದು ಮೊರೆ ಹೊಕ್ಕರು. ಶ್ರೀಗಳವರು ಅನುಕಂಪೆಯಿಂದ ಉತ್ತತ್ತಿ ಕಾಯಿಯೊಂದನ್ನು ಮಂತ್ರಿಸಿ ಕೊಟ್ಟರು; ಅದನ್ನು ತೆಯ್ದು ಕುಡಿಸಲು ಅಪ್ಪಣೆ ಮಾಡಿದರು. ಈ ಚಿಕಿತ್ಸೆ ಯಿಂದ ಸುರಕ್ಷಿತ ಹೆರಿಗೆಯಾಯಿತು. ಆಗ ಸಾಹೇಬರು ತುಂಬಾ ಆನಂದಿತ ರಾಗಿ ಬಂಧಿತರಾದ ಜಂಗಮರನ್ನು ಬಿಡುವಂತೆ ಆಜ್ಞೆ ಮಾಡಿದರು.

CC-0. Jangamwadi Math Collection. Digitized by eGangotri

ಒಮ್ಮೆ ಕೊಪ್ಪದ ಶಾಖಾಮಂದಿರದ ಭಾಗದಲ್ಲಿ ಸುತ್ತಲೂ ಮಳೆಯಿಲ್ಲದೆ ಬೆಳೆಗಳೆಲ್ಲ ಒಣಗಿ ಹೋಗಿದ್ದವು. ಜನರೆಲ್ಲ ಗುಳೇ ಹೊರಟಿದ್ದರು. ಆಗ ಶ್ರೀಗಳವರು ಈ ಸುದ್ದಿಯನ್ನು ಕೇಳಿ ಸವದತ್ತಿಯಿಂದ ದಯಮಾಡಿಸಿದರು. ರಾತ್ರಿ ಜನರು ಮಂದಿರಕ್ಕೆ ಭಜನೆಗೆಂದು ಬಂದಾಗ ತಮ್ಮ ಸಂಕಟವನ್ನು ಅರಿಕೆ ಮಾಡಿಕೊಂಡರು. ಆಗ ಶ್ರೀಗಳವರು ನಾಳೆ "ಮೃಷ್ಟಾನ್ನದಿಂದ ಗಣಸಂತೃಪ್ತಿಯನ್ನು ಮಾಡಿಸಿರಿ. ಮಳೆಯಾಗುವದು" ಎಂದು ಅಪ್ಪಣೆ ಮಾಡಿದರು. ಜನರಿಗೆ ಉಣ್ಣಲು ಕಾಳು ಇಲ್ಲದಿರುವಾಗ "ಹೋಳಿಗಿ ತುಪ್ಪ ಉಣ್ಣುವದೇ?" ಎಂದು ಭಕ್ತರು ಮನದಲ್ಲಿ ಮಿಡುಕಿದರು. "ನಾಳೆ ಪ್ರಸಾದವಾದ ಮೇಲೆ ತುಪ್ಪದ ಕೈಯನ್ನು ಮಹಾಪೂರದಲ್ಲಿಯೇ ತೊಳೆಯಬೇಕು." ಎಂದು ಮತ್ತೆ ಶ್ರೀಗಳವರು ಅಪ್ಪಣೆ ಮಾಡಿದರು. ಭಕ್ತರು ಪೂಜ್ಯರ ಮಾತನ್ನು ಮೀರದೆ ನಡೆದುಕೊಂಡರು. ಶ್ರೀಗಳವರ ಆನಂದದ ಪೂಜೆ ನಡೆಯಿತು. ಗಣತೃಪ್ತಿಯೂ ಆಯಿತು. ಶ್ರೀಗಳವರು ಸೇವಕನೊಬ್ಬನಿಗೆ ಹಳ್ಳದ ದಡದಲ್ಲಿ ಕಟ್ಟಿದ ಡಮಣಿ ಗಾಡಿಯನ್ನು ಮೇಲಕ್ಕೆ ತಂದು ಕಟ್ಟುವಂತೆ ಅಪ್ಪಣೆ ಮಾಡಿದ ತುಸು ಹೊತ್ತಿನಲ್ಲಿಯೇ ದಕ್ಷಿಣದ ಮೋಡ ಏರಿ, ಮಳೆ ಹೊಡೆದು ಹಳ್ಳದಲ್ಲಿ ಪ್ರವಾಹ ಉಕ್ಕಿ ಬಂದಿತು. ಆಗ ಶ್ರೀಗಳವರು ಭಕ್ತರಿಗೆ "ಭಕ್ತರ ಇಷ್ಟದಂತೆ ಶಿವನು ಎಲ್ಲವನ್ನು ದಯಪಾಲಿಸುತ್ತಾನೆ. ಮಳೆಯಾಗದಿದ್ದರೆ ಜಂಗಮದ ಪಾದಪೂಜೆ ಮಾಡಿ ಗಣತೃಪ್ತಿಯನ್ನು ಮಾಡಿರಿ. ನಿಮ್ಮಲ್ಲಿಯ ನೈಷ್ಠಿಕ ತ್ಯಾಗಮಯ ಭಕ್ತಿಗೆ ಶಿವನು ಮೆಚ್ಚುವನು" ಎಂದು ಉಪದೇಶಿಸಿದರು.

ಬಿಂದುವಿನೊಳಗೆ ನಾದ ಹೊಂದಿರ್ದ ಭೇದವನು  
ಹೊಂದಿಯೂ ಹೊಂದದಿರ್ದ ಭೇದವನು,  
ಲಿಂಗದೊಳಗೆ ಶರಣ ಸಂದಿರ್ದ ಭೇದವನು  
ಲೋಕದ ಸಂದೇಹಿಗಳೆತ್ತ ಬಲ್ಲರೈ ರಾಮನಾಥಾ! *

ಎಂದು ಮಹಾತ್ಮಾ ದೇವರದಾಸಿಮಯ್ಯವರು ಹೇಳಿರುವಂತೆ ಶಿವಸ್ವರೂಪಿಗಳಾದ ಮಹಾತ್ಮರ ಲೀಲೆಗಳಲ್ಲಿ ನಾವು ಸಂದೇಹವನ್ನು ತಾಳದೆ ಅವರಲ್ಲಿ ಅನನ್ಯಭಾವದಿಂದ ನಡೆದುಕೊಂಡರೆ ಕಲ್ಯಾಣವಾಗುವಲ್ಲಿ ಸಂಶಯವಿಲ್ಲ.

ಆಡಬಾರದ ಬಯಲು,  
ನೋಡಬಾರದ ಬಯಲು,  
ನುಡಿಯಬಾರದ ಬಯಲು,  
ಹಿಡಿಯಬಾರದ ಬಯಲು,  
ಈ ಒಡಲಿಲ್ಲದ ಬಯಲೊಳು  
ಅಡಗಿಪ್ಪ ಭೇದವ  
ಲೋಕದ ಜಡರೆತ್ತ ಬಲ್ಲರೈ ರಾಮನಾಥಾ!

*ದೇವರ ದಾಸಿಮಯ್ಯನ ವಚನಗಳು; ಫ. ಗು. ಹಳಕಟ್ಟಿ; ಶರಣಸ್ಥಲ, ವಚನ– ೧೩೨;

CC-0. Jangamwadi Math Collection. Digitized by eGangotri

# ಕೆಲವು ಸಂಸ್ಮರಣೆಗಳು

## " ಯು. ಪಿ. ಎಸ್. "

ಶ್ರಾವಣಮಾಸ. ಹತ್ತೊಂಬತ್ತು ನೂರ ಮೂವತ್ತೆರಡನೆಯ ಇಸವಿ. ಆಗಿನ್ನೂ ನಾನು ಏಳೆಂಟು ವರ್ಷಗಳ ವಟು. ಗುರುವರ್ಯ ಸಖರಾಯ ಪಟ್ಟಣದ ಪಟ್ಟಾಧ್ಯಕ್ಷ ಶ್ರೀ ಸದಾಶಿವ ಶಿವಚಾರ್ಯಸ್ವಾಮಿಗಳವರು ನನಗೆ ಬಿಳಿಯ ಕಿವಿಟೊಪ್ಪಿಗೆ ಕಪನಿಯ ಲಾಂಛನವನ್ನು ತೊಡಿಸಿ ಮಂದಿರದಲ್ಲಿ ಪ್ರವೇಶ ಮಾಡಿಸಿದ್ದರು. ಫಳೆಂಟು ದಿನವಿದ್ದು ಮಂದಿರದ ನಿಯಮಾಚಾರಗಳ ಬಗೆಗೆ ತಿಳಿಹೇಳಿ, ಏನೂ ಯೋಚನೆ ಮಾಡದೆ ಚೆನ್ನಾಗಿ ವಿದ್ಯೆ–ಬುದ್ಧಿಗಳನ್ನು ಕಲಿಯುವಂತೆ ಉಪದೇಶಿಸಿ ಗುರುಗಳು ಗಿರಿಯಾಪುರಕ್ಕೆ ದಯಮಾಡಿಸಿದರು. ಕನ್ನಡ ಶಾಲೆಯಲ್ಲಿ ಎರಡನೆಯ ವರ್ಗದಲ್ಲಿ ಪ್ರವೇಶ ಪಡೆದಿದ್ದೆ. ಮಂದಿರದ ವಾತಾವರಣವೆಲ್ಲ ತೀರ ಹೊಸದಾಗಿದ್ದರೂ ಅದಕ್ಕೆ ಸರಿಯಾಗಿ ಹೊಂದಿಕೊಂಡಿದ್ದೆ. ಬೆಳಗಿನ ಪ್ರಾರ್ಥನೆ, ಓದು, ಆಸನಗಳನ್ನು ಹಾಕುವದು, ಪಾಠಗಳು, ನದಿಯಲ್ಲಿ ಸ್ನಾನ, ಶಿವಪೂಜೆ, ಪಾದಪೂಜೆ ಅರ್ಪಿತ, ಮತ್ತೆ ಮಧ್ಯಾಹ್ನ ಪಾಠ, ಪುರಾಣ. ಭಜನೆ, ಆಟ ಎಲ್ಲವೂ ನಿಯಮಿತವಾಗಿ ನಡೆಯುತ್ತಿದ್ದವು (ಈಗಲೂ ನಡೆಯುತ್ತಿವೆ).

ಒಂದು ದಿನ ಕನ್ನಡಶಾಲೆಗೆ ಸ್ಥಾನಿಕ ವ್ಯವಸ್ಥಾಪಕರಾಗಿದ್ದ ಶ್ರೀ ಮಾಗಿ ಮಾಸ್ತರರು (ಶಿವಬಸಪ್ಪ ಆದಪ್ಪ ಮಾಗಿ, ಶಿರೂರು) ಬಂದು ನನ್ನ ಪರಿಚಯ ಕೇಳಿದರು– "ದೇವರು, ನಿಮ್ಮ ಊರು ಯಾವುದು ?" ನಾನು– "ಗೌರಾಪುರ." ಅವರು– "ನಿಮ್ಮ ತಂದೆಯ ಹೆಸರು ?" ನಾನು- "ಮಲ್ಲಯ್ಯ" ಎಂದು ಸಹಜನಾಗಿ ಉತ್ತರಿಸಿದೆ. ಆಗ ವಟುಗಳೆಲ್ಲ ನನ್ನನ್ನು ನೋಡಿ ಗೊಳ್ಳನೆ ನಕ್ಕರು. ನಾನು ಕಕ್ಕಾವಿಕ್ಕಿಯಾದೆ. ಮಾಗಿ ಮಾಸ್ತರರು– "ಒಳ್ಳೆಯದು'' ಎಂದು ಅಂದವರೆ ನನ್ನ ಸಹಪಾಠಿಗಳಾಗಿದ್ದ ಶ್ರೀ ಸೋಮಶೇಖರ ದೇವರನ್ನು (ಈಗ ರಾಯಚೂರ ಹಿರಿಯ ಮಠಾಧ್ಯಕ್ಷರು) ಕುರಿತು ''ದೇವರು, ನಿಮ್ಮ ಊರು, ತಂದೆ–ತಾಯಿಗಳ ಹೆಸರುಗಳನ್ನು ಹೇಳಿರಿ " ಎಂದು ಕೇಳಿದರು. ಶ್ರೀ ಸೋಮಶೇಖರ ದೇವರು "ಊರು, ಶಿವಯೋಗಮಂದಿರ. ತಂದೆ, ಶ್ರೀ ಕುಮಾರಸ್ವಾಮಿಗಳು. ತಾಯಿ, ಚಿಚ್ಛಕ್ತಿ." ಎಂದು ನಿರ್ಭಯರಾಗಿ ಹೇಳಿದರು. ನನಗೆ ಒಂದೂ ಅರ್ಥವಾಗಲಿಲ್ಲ. ಮಾಗಿ ಮಾಸ್ತರರು ''ಕೇಳಿದಿರಾ ದೇವರು ! ಇನ್ನು ಮೇಲೆ ಶಿವಯೋಗಮಂದಿರವೇ ನಿಮ್ಮ ಊರು. ಇಲ್ಲಿಯ ಮಠವೇ ನಿಮ್ಮ ಮನೆ. ಶ್ರೀ ಕುಮಾರಸ್ವಾಮಿಗಳೇ ನಿಮ್ಮ ತಂದೆ. ಚಿಚ್ಛಕ್ತಿಯೇ ನಿಮ್ಮ ತಾಯಿಯೆಂದು ತಿಳಿಯಿರಿ. ಯಾರು ಕೇಳಿದರೂ ಹಾಗೆ ಹೇಳಬೇಕು. ನಿಮ್ಮ ಮೊದಲಿನ ಊರು, ಮನೆ, ತಂದೆ–ತಾಯಿಗಳನ್ನು

CC-0. Jangamwadi Math Collection. Digitized by eGangotri

ಮರೆಯಿರಿ." ಎಂದು ಹೇಳಿ ತಂದೆ-ತಾಯಿಗಳ ಹೆಸರುಗಳನ್ನು ಎರಡು-ಮೂರು ಸಲ ಬಾಯಿಪಾಠ ಹೇಳಿಸಿ ಹೋದರು. ಆದರೆ ತಾಯಿಯ ಹೆಸರು ಬಹಳ ಗಡುಚಾಗಿತ್ತು. ಅದರ ಅರ್ಥವೂ ಅಷ್ಟೇ. ಆದರೂ ಅದನ್ನು ಸ್ಪಷ್ಟವಾಗಿ ಅನ್ನಲು ಕಲಿತೆನು.

ಪ್ರತಿನಿತ್ಯ ಸಾಯಂಕಾಲ ಆರುಗಂಟೆಗೆ ಆಟವಾಡಿದ ಮೇಲೆ ಪೂಜ್ಯ ಹಾನಗಲ್ಲ ಶ್ರೀಗಳವರ ಗದ್ದುಗೆಯ ಎದುರು ಕುಳಿತು ಭಜನೆ ಮಾಡುತ್ತಿದ್ದೆವು. ನಿತ್ಯವೂ ಎರಡು ಹೊತ್ತು ಅರ್ಪಿತವಾದ ಮೇಲೆ ಗದ್ದುಗೆಯ ದರ್ಶನ ಪಡೆಯುತ್ತಿದ್ದೆವು. ಮಂದಿರದಲ್ಲಿ ಶ್ರೀ ಕುಮಾರೇಶನು ನನಗೆ ತಂದೆಯಂತೆ ಭಾಸವಾದನು. ಆದರೆ ಚಿಚ್ಛಕ್ತಿ ತಾಯಿಯು ನನಗೆಲ್ಲಿಯೂ ಕಾಣಲಿಲ್ಲ. ಆಗಾಗ ಪೂರ್ವಾಶ್ರಮದ ತಾಯಿಯ ನೆನಪು ತಂದುಕೊಂಡು ಅಳುತ್ತಿದ್ದೆ. ನನ್ನ ಮರುಳುತನಕ್ಕೆ ನನ್ನ ಸಂಗಡಿಗರೆಲ್ಲ ಹಂಗಿಸುತ್ತಿದ್ದರು. ಆದರೂ ಏಕಾಂತದಲ್ಲಿ ಒಬ್ಬನೇ ಅಳುತ್ತ ಕುಳಿತು ಬಿಡುತ್ತಿದ್ದೆ. ನನ್ನ ಈ ಸ್ಥಿತಿಯನ್ನು ಕಂಡು ಆಗ ನಮ್ಮ ಕನ್ನಡ ಶಿಕ್ಷಕರಾಗಿದ್ದ ಶ್ರೀ ಬಸವಪ್ಪ ಚಿಕ್ಕಾಲಗುಂಡಿ ಅವರು ಮರುಕಗೊಂಡು ಬಹಳ ಸಂತಯಿಸುತ್ತಿದ್ದರು. ಮೇಲು ಮಠದ ನದಿಯ ದಡದ ನಾಲ್ಕನೆಯ ಮೆಟ್ಟಲಿನ ಮೇಲಿನ ಹುಣಸಿಮರದ ಕೆಳಗೆ ನೀರಿನ ಹಳೆಯ ಎಂಜನು ಇದ್ದಿತು. ಅದನ್ನು ತಿರುಗಿಸಿ, ಪೈಪಿನಲ್ಲಿ ನೀರು ತುಂಬಿ ಏನೇನೋ ಆಟವಾಡಿಸಿ ನನ್ನ ಚಿಂತೆಯನ್ನು ಕಳೆಯಲು ಪ್ರಯತ್ನಿಸುತ್ತಿದ್ದರು. ಆದರೂ ಹೆತ್ತಮ್ಮನ ನೆನಪು ನನ್ನ ಮನದಿಂದ ಪೂರ್ತಿಯಾಗಿ ಅಳಿಯಲಿಲ್ಲ. ಆಗಾಗ ತಾಯಿಗಾಗಿ ಹಂಬಲಿಸಿ ಒಬ್ಬನೇ ಅಳುತ್ತಿದ್ದೆ.

ಶ್ರಾವಣಮಾಸದ ಕಾರ್ಯಕ್ರಮಗಳು ಎಂದಿನಂತೆ ನಡೆಯುತ್ತಿದ್ದವು. ಮುಂಜಾನೆ ಆಸನಗಳನ್ನು ಹಾಕಿದ ಮೇಲೆ ಪ್ರವಚನ ನಡೆಯುವ ಪರಿಪಾಟ. ಒಂದು ದಿನ ಶ್ರೀಗಳವರೊಬ್ಬರು ಒಳ್ಳೆಯ ಪ್ರಸಾದವಾಣಿಯಿಂದ ಅನುಭವ ಹೇಳಲು ಬಂದಿದ್ದರು. ಆ ಪ್ರವಚನ ನನಗೆ ಅರ್ಥವಾಗುತ್ತಿರಲಿಲ್ಲ. ಆದರೆ ಅವರ ಮುಖ ಮುದ್ರೆಯಲ್ಲಿ ವಾಣಿಯಲ್ಲಿ ಏನೋ ಒಂದು ಅನಿರ್ವಚನೀಯ ಆಕರ್ಷಣೆ ಇದ್ದಿತು. ಶ್ರೀಗಳವರ ಹಸನ್ಮುಖವನ್ನು ನಾನು ಎವೆಯಿಕ್ಕದೆ ನೋಡುತ್ತಿದ್ದೆ. ಏಳು ಗಂಟೆಯಿಂದ ಪ್ರಾರಂಭವಾಗಿ ಎಂಟಕ್ಕೆ ಮುಗಿಯಬೇಕಾಗಿದ್ದ ಪ್ರವಚನವಿನ್ನೂ ಸಾಗಿತ್ತು. ಹತ್ತುಗಂಟೆಯಾಯಿತು. ಸೇವಕನು "ಬುದ್ಧಿ, ಪೂಜೆಗೆ ವೇಳೆಯಾಗಿದೆ." ಎಂದು ಹೊರಗೆ ನಿಂತವನು ಅರಿಕೆಮಾಡಿಕೊಂಡನು. ಶ್ರೀಗಳವರು "ಈ ಅನುಭವ ಪೂಜೆಯಲ್ಲವೇನಪ್ಪ! ಇಂದು ನಮಗೆ ಲಿಂಗಯ್ಯನ ಪೂಜೆಗಿಂತಲೂ ಹೆಚ್ಚಿನ ಆನಂದವಾಗಿದೆ." ಎಂದು ಸಾಧಕರನ್ನು ಕುರಿತು ಅಪ್ಪಣೆ ಮಾಡಿದರು. ಅನುಭವ ಮುಗಿದ ಮೇಲೆ ನಮ್ಮ ಶಿಕ್ಷಕರು "ಬುದ್ಧೀ, ಇವರು ತಾಯಿಯನ್ನು ನೆನೆನೆನೆದು ಅಳುತ್ತಾರೆ. ಎಷ್ಟು ಹೇಳಿದರೂ ಕೇಳುವದಿಲ್ಲ." ಎಂದು ನನ್ನನ್ನು ಮುಂದು

CC-0. Jangamwadi Math Collection. Digitized by eGangotri

ಮಾಡಿದರು. ಆಗ ಶ್ರೀಗಳವರು ನನ್ನನ್ನು ಹತ್ತಿರಕ್ಕೆ ಕರೆದು ಮಸ್ತಕವನ್ನು ನೇವರಿಸಿ "ಅಳಬೇಡವಪ್ಪ. ಇಲ್ಲಿ ನಿನಗೇನು ಕೊರತೆ ಹೇಳು. ನಾವಿಲ್ಲವೇ ? ಎಂದು ಸಂತಯಿಸಿದರು. ಇದುವರೆಗೂ 'ಚಿಚ್ಛಕ್ತಿ'ಯು ನನಗೊಂದು ಒಡೆಯ ಬಾರದ ಒಗಟಾಗಿದ್ದಿತು. ಶ್ರೀಗಳವರ ಆ ಸ್ನೇಹದುಂಬಿದ ನೇತ್ರಗಳಲ್ಲಿ, ಪ್ರಸಾದ ವಾಣಿಯಲ್ಲಿ ಮಾತೆಯ ಮಮತೆ ನನಗೆ ಸಾಕಾರವಾಗಿದ್ದಿತು. ಅಂದಿನಿಂದ ನಾನು ಹಾವೇರಿಯ ಶ್ರೀ ಶಿವಬಸವ ಶಿವಯೋಗಿಗಳನ್ನು 'ಚಿಚ್ಛಕ್ತಿ'ಯೆಂದು, ಕಾರುಣಿಕ ಮಾತೆಯೆಂದು ಭಾವಿಸಿದೆ. ಅಂದಿನಿಂದ ನನಗೆ ಹೆತ್ತು ಹಡೆದ ತಾಯಿಯ ನೆನ ಪಾಗಲಿಲ್ಲ ತಂದೆ ಶ್ರೀ ಕುಮಾರಸ್ವಾಮಿಗಳು. ತಾಯಿ ಶ್ರೀ ಹಾವೇರಿಯ ಅಜ್ಜನವರು. ಇನ್ನೇನು ಬೇಕು ಮಂದಿರದ ವಟುಗಳಿಗೆ ? ತಂದೆಯನ್ನು-ಹಾನಗಲ್ಲ ಪೂಜ್ಯರನ್ನು ಸಾಕ್ಷಾತ್ ಕಾಣುವ ಭಾಗ್ಯವನ್ನು ಪಡೆದಿರಲಿಲ್ಲ. ಆದರೆ ತಾಯಿಯನ್ನು-'ಚಿಚ್ಛಕ್ತಿ' ಯನ್ನು ಕಂಡ ಭಾಗ್ಯ ನನ್ನದಾಯಿತು.

× × ×

ನನ್ನನ್ನು ಗುರುಗಳು ಶಿವಯೋಗಮಂದಿರಕ್ಕೆ ಒಪ್ಪಿಸಿದ್ದರು. ಐದು ವರ್ಷ ಗಳ ವರೆಗೆ ಕನ್ನಡ ಐದನೆಯ ವರ್ಗದ ಅಭ್ಯಾಸವನ್ನು ಮುಗಿಸಿ ಸಂಸ್ಕೃತ ಬಾಲಪಾಠ ಗಳನ್ನು ಆರಂಭಿಸಿದ್ದೆ. ರಘುವಂಶವನ್ನು ಓದುತ್ತಿದ್ದೆ. ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಆನಂದಪುರದ ಮುರುಘಾಮಠಕ್ಕೆ ಸಂಸ್ಥೆಯವರ ಅನು ಮತಿ ಪಡೆದು ಗುರುಗಳು ನನ್ನನ್ನು ಒಪ್ಪಿಸಿದರು. ೧೯೩೭ ನೆಯ ಇಸ್ವಿಯಲ್ಲಿ ಆನಂದಪುರದ ಶ್ರೀ ಜಗದ್ಗುರು ಸಚ್ಚಿದಾನಂದ ಮಹಾಸ್ವಾಮಿಗಳವರು ನನ್ನನ್ನು ಪ್ರೌಢ ವ್ಯಾಸಂಗಕ್ಕಾಗಿ ಕಾಶಿಗೆ ಕಳಿಸಿದರು. ಕಾಶಿಯಲ್ಲಿ ಸಂಸ್ಕೃತ ಅಭ್ಯಾಸದೊಂ ದಿಗೆ ಇಂಗ್ಲೀಷನ್ನು ಕಲಿಯ ಹತ್ತಿದೆ. ಮ್ಯಾಟ್ರಿಕ್ ಪಾಸಾದ ಮೇಲೆ ಮುಂದೆ ಓದುವ ಲವಲವಿಕೆ. ಆದರೆ ಅನಂತಪುರದ ಗುರುಗಳು ಅನುಮತಿಸಲಿಲ್ಲ. ಕೆಲವು ಅನಾನುಕೂಲತೆಗಳಿಂದ ನನ್ನ ಮುಂದಿನ ಕಾಶಿಯ ವ್ಯಾಸಂಗವು ನಿಲ್ಲುವ ಪರಿ ಸ್ಥಿತಿ ಬಂದಿತು. ನನ್ನ ಮನಸ್ಸಿಗೆ ಸಮಾಧಾನವಿರಲಿಲ್ಲ. ಹುಬ್ಬಳ್ಳಿಯ ಜ. ಮೂರುಸಾವಿರಮಠದ ಸನ್ನಿಧಿಯವರಿಂದ ಸಹಾಯ ಪಡೆಯಬೇಕೆಂದು ಹುಬ್ಬ ಳ್ಳಿಗೆ ಬಂದೆ. ಶ್ರೀ ಸನ್ನಿಧಿಯವರಲ್ಲಿ ನನ್ನ ಸ್ಥಿತಿಯನ್ನು ಅರಿಕೆಮಾಡಿಕೊಳ್ಳಲು ಧೈರ್ಯ ಸಾಲದಾಯಿತು. ಅಲ್ಲಿಯ ಕಲಬುರ್ಗಿ ಮಠದಲ್ಲಿ ಹಾವೇರಿ ಅಜ್ಜನ ವರ ಮುಕ್ಕಾಮು ಇರುವದೆಂದು ತಿಳಿದು ದರ್ಶನಕ್ಕೆ ಹೋದೆ. ಅವರಲ್ಲಿ ನನ್ನ ಆರ್ಥಿಕ ತೊಂದರೆಯನ್ನು ತೋಡಿಕೊಳ್ಳಲಿಲ್ಲ. ಬಹಳ ಸಂಕೋಚಪಟ್ಟುಕೊಂ ಡಿದ್ದೆ. ಅವರು ನನ್ನನ್ನು ಪ್ರೀತಿಯಿಂದ ಕಂಡು ಹಾವೇರಿಗೆ ಬಸವಜಯಂತಿಯ ಉತ್ಸವಕ್ಕೆ ಕರೆದುಕೊಂಡು ದಯಮಾಡಿಸಿದರು. ಆ ವರ್ಷ ಬಸವಜಯಂತಿಯನ್ನು ಬಹು ವಿಜೃಂಭಣೆಯಿಂದ ಆಚರಿಸಿದ್ದರು. ಸಾಯಂಕಾಲ ತುಂಬಿದ ಸಭೆಯಲ್ಲಿ ಶ್ರೀಗಳವರು ನನಗೂ ಮಾತನಾಡಲು ಅಪ್ಪಣೆ ಮಾಡಿದರು. ನಾನೆಂದೂ ಆದು

CC-0. Jangamwadi Math Collection. Digitized by eGangotri

ವರೆಗೆ ಸಭೆಯಲ್ಲಿ ಮಾತನಾಡಿರಲಿಲ್ಲ. ಶ್ರೀಗಳವರು "ಇನ್ನು ಎಂದು ನೀನು ಭಾಷಣ ಮಾಡಲು ಕಲ್ಲಿಯುವದು?" ಎಂದು ಅಪ್ಪಣೆ ಕೊಡಿಸಿ ಉತ್ಸಾಹಿಸಿದರು. ಭಾಷಣ ಮಾಡಿದ ಮೇಲೆ "ಇನ್ನೂ ಚೆನ್ನಾಗಿ ಮಾತನಾಡಲು ಕಲಿಯಬೇಕು" ಎಂದು ಹರಸಿದರು.

ಅಂದಿನ ಉತ್ಸವದ ಗಲಾಟೆಯಲ್ಲಿ ಹುಬ್ಬಳ್ಳಿಯಿಂದ ನಾನು ತಂದ ಹೊಸ ಪಾದರಕ್ಷಗಳು ಕಾಣೆಯಾಗಿದ್ದವು. ಅದು ಹೇಗೋ ಶ್ರೀಗಳವರಿಗೆ ತಿಳಿಯಿತು. ಆ ಕೂಡಲೇ ಸೇವಕನನ್ನು ಕರೆಯಿಸಿ ಹೊಸ ಪಾದರಕ್ಷೆಗಳನ್ನು ಬೇಡನೆಂದರೂ ಕೊಡಿಸಿದರು. "ಬೆಳೆಯುವ ಹುಡುಗ. ಬರಿಗಾಲಿನಿಂದ ತಿರುಗಬಾರದು. ನೀನು ಮಂದಿರದ ಮಗನಪ್ಪ! ಚೆನ್ನಾಗಿ ಓದಬೇಕು. ಮಂದಿರದ ಸೇವೆಯನ್ನು ಮಾಡ ಬೇಕು." ಎಂದು ಆತ್ಮೀಯತೆಯಿಂದ ಅಪ್ಪಣೆ ಕೊಡಿಸಿದರು. ಶ್ರೀಗಳವರ ಮಾತೃ ನಿರ್ವಿಶೇಷ ವಾತ್ಸಲ್ಯವನ್ನು ಚಿಕ್ಕಂದಿನಲ್ಲಿಯೇ ತಾಯಿಯ ಪ್ರೇಮದಿಂದ ವಂಚಿತ ನಾದ ನಾನು ಅಂದು ಅನುಭವಿಸಿದೆ.

ಬೇಸಗೆಯ ರಜೆ ಮುಗಿಯುತ್ತ ಬಂದಿತ್ತು. ಕಾಶಿಗೆ ಹೋಗಿ ನನ್ನ ಮುಂದಿನ ಕಾಲೇಜಿನ ವ್ಯಾಸಂಗವನ್ನು ಮಾಡಲು ತವಕಪಡುತ್ತಿದ್ದೆ. ಅನಂತಪುರದ ಗುರು ಗಳು "ಇನ್ನು ಕಾಶಿಗೆ ಕಳಿಸುವದಿಲ್ಲ, ಮಠದಲ್ಲಿಯೆ ಸೇವೆ ಮಾಡಿಕೊಂಡು ಇರು" ಎಂದು ಕಟ್ಟುನಿಟ್ಟಾಗಿ ಅಪ್ಪಣೆ ಮಾಡಿದ್ದರು. ನಾನು ನಿರಾಶನಾಗಿದ್ದೆ. ನನ್ನ ಅಸಹಾಯ ಸ್ಥಿತಿಯನ್ನು ಹಾವೇರಿ ಶ್ರೀಗಳವರಲ್ಲಿ ಅರಿಕೆ ಮಾಡಿಕೊಂಡೆ. ಅದಕ್ಕೆ ಅವರು ಕ್ಷಣ ಹೊತ್ತು ಯೋಚಿಸಿ "ಅನಂತಪುರದವರಿಗೇನು ಕಡಿಮೆ ಯಾಗಿದೆ? ಕೊಡುತ್ತಾರೆ ಹೋಗು. ಚೆನ್ನಾಗಿ ಓದಿ ಬಾ. ಮಂದಿರದ ಸೇವೆ ಯನ್ನು ಮಾಡು." ಎಂದು ಅಪ್ಪಣೆ ಮಾಡಿದರು. ನನಗೆ ಆಗ ಇನ್ನೂ ತಿಳು ವಳಿಕೆ ಆಸ್ಥಿರಲಿಲ್ಲ. ಅನಂತಪುರದ ಗುರುಗಳು ಸಾಧ್ಯವೇ ಇಲ್ಲವೆಂದು ಹೇಳಿರು ವಾಗ ನಾನು ಅಲ್ಲಿಗೆ ಹೋಗುವದೆಂತು? ಎಂದು ಯೋಚನೆಯಲ್ಲಿದ್ದೆ. ಮರು ದಿನ ಅಜ್ಜನವರ ದರ್ಶನ ಪಡೆದು ಅನಂತಪುರಕ್ಕೆ ಹೋದೆ. ಗುರುಗಳು ಅರ್ಪಿತ ವಾದ ಮೇಲೆ ನನ್ನನ್ನು ಪ್ರೀತಿಯಿಂದ ಕಂಡು ನಾನು ಕೇಳುವದಕ್ಕಿಂತ ಮುಂಚೆಯೇ "ಕಾಶಿಗೆ ಹೋಗಿ ನಿನ್ನ ಅಭ್ಯಾಸ ಮುಂದುವರಿಸು. ಬಿ. ಎ. ಆಗುವವರೆಗೂ ನಿನಗೆ ಸಹಾಯ ನೀಡುವೆವು." ಎಂದು ಅಪ್ಪಣೆ ಮಾಡಿ ಅದರಂತೆ ಕೊನೆಯ ವರೆಗೂ ನನಗೆ ಆರ್ಥಿಕ ನೆರವು ನೀಡಿದರು. ಶ್ರೀಗಳವರ ದಿವ್ಯದೃಷ್ಟಿಗೆ ಇದ ಕ್ಕಿಂತಲೂ ಹೆಚ್ಚಿನ ನಿದರ್ಶನ ಬೇರೆ ಬೇಕೆ?

× × ×

ಮುಂದೆ ನನ್ನ ಶಿಕ್ಷಣ ಮುಗಿಸಿಕೊಂಡು ಅನಂತಪುರದ ಗುರುಗಳ ಅನು ಮತಿಯಂತೆ ಆರು ವರ್ಷಗಳವರೆಗೆ ಶಿವಯೋಗಮಂದಿರದಲ್ಲಿ ಶಿಕ್ಷಕನಾಗಿ, ಪತ್ರಿ

CC-0. Jangamwadi Math Collection. Digitized by eGangotri

ಕೆಯ ಸಂಪಾದಕನಾಗಿ ಸೇವೆ ಸಲ್ಲಿಸಿ, ಬಾಗಿಲುಕೋಟೆಯ ಬಸವೇಶ್ವರ ಕಾಲೇಜಿನಲ್ಲಿ ಪ್ರಾಧ್ಯಾಪಕನಾಗಿ ಬಂದೆ. ಇಲ್ಲಿಯ ಶ್ರೀ ಬಸವೇಶ್ವರ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ಪ್ರಿನ್ಸಿಪಾಲ ಡಾ. ಶಿ ಚಿ. ನಂದೀಮಠ ಅವರ ಮಾರ್ಗದರ್ಶನದಲ್ಲಿ ಬೃಹದ್‌ಯೋಜನೆಗಳೊಂದಿಗೆ ಅನೇಕ ಪ್ರೌಢ ಶಿಕ್ಷಣ ಶಾಖೆಗು ಪ್ರಾರಂಭವಾಗಿ ಯಶಸ್ವಿಯಾಗಿ ನಡೆದಿರುವದನ್ನು ಕಂಡು ಲಿಂ. ಶಾಬಾದಿ ಸೋಮಲಿಂಗಪ್ಪನವರು ಹೇಳುತ್ತಿದ್ದ ಮಾತು ನೆನಪಿಗೆ ಬರುತ್ತಿದೆ. ೧೯೪೪ ರಲ್ಲಿ ಬಸವೇಶ್ವರ ಕಾಲೇಜಿನ ಪ್ರಾರಂಭೋತ್ಸವವನ್ನು ಜರುಗಿಸುತ್ತ ಹಾವೇರಿ ಶ್ರೀಗಳವರು "ಈ ಕಾಲೇಜು ಮುಂದೆ ಅನೇಕ ಶಾಖೆಗಳನ್ನು ಹೊಂದಿ ವಿಶ್ವವಿದ್ಯಾಲಯವಾಗಲಿ"ಎಂದು ಆಶೀರ್ವದಿಸಿದ್ದರಂತೆ.

x x x

ಶ್ರೀಗಳವರು ವಿದ್ಯಾರ್ಥಿಗಳ ಬಗೆಗೆ ಮತ್ತು ಸಮಾಜದ ತರುಣ ಪದವೀಧರರ ಬಗೆಗೆ ಬಹಳ ಕಳಕಳಿಯುವರಾಗಿದ್ದರು. ಪ್ರೊ. ಎಸ್. ಎಸ್. ಭೂಸನೂರಮಠ ಅವರು ಕೊಲ್ಲಾಪುರದ ರಾಜಾರಾಮ ಕಾಲೇಜಿನಿಂದ ಪ್ರೊ. ಕೆ. ಜಿ. ಕುಂದಣಗಾರ ಅವರ ಶಿಷ್ಯರಾಗಿ ಕನ್ನಡ ಎಂ. ಎ. ಪದವೀಧರರಾಗಿದ್ದರು. ಅವರು ನಿಡಗುಂದಿಯುವರು. ಶ್ರೀಗಳವರು ಅವರಿಗೆ ಅನೇಕ ಮುಖವಾಗಿ ವಿದ್ಯಾಭ್ಯಾಸಕ್ಕೆ ಸಹಾಯ ನೀಡಿದ್ದರು. ಶ್ರೀ ಭೂಸನೂರಮಠ ಅವರಿಗೆ ಕಾಣಾಂತರದಿಂದ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಸ್ಥಾನ ದೊರೆಯಲಿಲ್ಲ. ಆಗ, ಅದನ್ನು ತಿಳಿದು ಶ್ರೀಗಳವರು ಬೆಳಗಾಂವಿಗೆ ದಯಮಾಡಿಸಿದರು. ತಾವೇ ಸ್ವತಃ ಪಾದಚಾರಿಗಳಾಗಿ ಲಿಂಗರಾಜ ಕಾಲೇಜಿನ ಆಫೀಸಿಗೆ ದಯಮಾಡಿಸಿದ್ದನ್ನು ಕಂಡು ಪ್ರಿನ್ಸಿಪಾಲ ಶಿ ಚಿ. ನಂದೀಮಠ ಸಾಹೇಬರಿಗೆ ಆಶ್ಚರ್ಯವಾಯಿತು. ಶ್ರೀಗಳವರ ಅಪ್ಪಣೆಯಂತೆ ಶ್ರೀ ಭೂಸನೂರಮಠರವರನ್ನು ಡಾ. ನಂದೀಮಠ ಸಾಹೇಬರು ಕನ್ನಡ ಪ್ರಾಧ್ಯಾಪಕರನ್ನಾಗಿ ನೇಮಿಸಿಕೊಂಡುದನ್ನು (ಸ್ವತಃ ಡಾ. ನಂದೀಮಠ ಸಾಹೇಬರಿಂದ) ತಿಳಿದು ಶ್ರೀಗಳವರ ಮಮತೆಯನ್ನೂ, ಘನತೆಯನ್ನೂ ನೆನೆದು ಮುಗ್ಧನಾದೆ.

CC-0. Jangamwadi Math Collection. Digitized by eGangotri

# ವೀರಶೈವರ ದೇವಾರಾಧನೆಯಲ್ಲಿ ವಿಜ್ಞಾನ

ಶ್ರೀ. ಜ. ಚ. ನಿ. ಸೂರ್ಯಸಿಂಹಾಸನಾಧೀಶರು, ಗೂಳೂರು.

ದೃಶ್ಯ ವಿಶ್ವದಲ್ಲಿ ದೇವರನ್ನಾರಾಧಿಸದಿರುವವರು ವಿರಳ. ಆರಾಧಿಸುವವರು ಬಹಳ. ಆರಾಧಿಸದಿರುವವರು ನಾಸ್ತಿಕರು. ಆರಾಧಿಸುವವರು ಆಸ್ತಿಕರು. ಆಸ್ತಿಕರಲ್ಲಿ ಆರ್ಯರು, ಆರ್ಯರೇತರರಾದ ದ್ರವಿಡರು ಎಂದು ಎರಡು ಬಗೆ. ಈ ಎರಡೂ ಬಗೆಯ ಜನರು ಇರುವರು, ಭಾರತ ಭೂಮಿಯಲ್ಲಿ! ಅಲ್ಲದೇ ಅದೇ ಆಸ್ತಿಕರಲ್ಲಿ ವೈದಿಕ ಮತೀಯರು, ವೈದಿಕ ತಾಂತ್ರಿಕ ಮತೀಯರು ಎಂದು ಎರಡು ಬಗೆಯಾಗಿರುವರು. ಸಂಪ್ರದಾಯ ಶರಣರು, ಸ್ವಾತಂತ್ರ್ಯಶೀಲರು-ಎಂದರೆ ಸ್ವತಂತ್ರ ವಿಚಾರಶೀಲರು ಎಂದು ವಿಂಗಡಿಸಬಹುದಾಗಿದೆ.

ಆರ್ಯರಲ್ಲಿ ಆ ಆರ್ಯ ವೇದಗಳಲ್ಲಿ ದೇವಾರಾಧನೆಯು ಪುರುಷ ಪರವಾಗಿ ಪುರುಷಾಕಾರವಾಗಿ ವಿಶೇಷವಾಗಿ ವಿಹಿತವಾಗಿದೆ. ಪುರಾತನ ಸಾಹಿತ್ಯವೆಂದು ಹೇಳುವ ವೇದಗಳಲ್ಲಿರುವ ಋಕ್ಕುಗಳು ಮಂತ್ರಗಳು ಪುರುಷ ದೇವನನ್ನೇ ಪ್ರತಿಪಾದಿಸುತ್ತವೆ :

" ಭರ್ಗೋ ದೇವಸ್ಯ ಧೀಮಹಿ "
' ತಸ್ಮೈ ದೇವಾಯ ನಮೋ ನಮಃ '
' ದೇವೋ ವರುಣಃ ಪ್ರಜಾಪತಿಃ '
' ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಪೈಃ '
' ಸಹಸ್ರಶೀರ್ಷಾಃ ಪುರುಷಃ '
" ಪುರುಷ ಏವೇದಂ ಸರ್ವಂ "

ಇತ್ಯಾದಿ ವೇದ ಮಂತ್ರಗಳು, ಬ್ರಹ್ಮಸೂತ್ರಗಳು, ಉಪನಿಷತ್ತುಗಳು, ಭಗವದ್ಗೀತೆ ಇವೆಲ್ಲವೂ ಸಾಮಾನ್ಯವಾಗಿ ಕೇವಲ ಪುರುಷನನ್ನೇ ದೇವನನ್ನಾಗಿ ನಿರೂಪಿಸಿವೆ. ಅಲ್ಲದೆ ಆರ್ಯಮತೀಯರ ಆರಾಧನೆಯಲ್ಲಿ ಆಚಾರದಲ್ಲಿ ಅವರ ಸಾಂಪ್ರದಾಯಿಕ ಸಿದ್ಧಾಂತದಲ್ಲಿ ಪುರುಷರೂಪ ದೇವಾರಾಧನೆಯೆ ದಿಬ್ಬಿತ್ತಾಗಿ ದೃಗ್ಗೋಚರವಾಗುತ್ತಿದೆ. ಅಲ್ಲದೆ ಜಗತ್ಕಾರಣನೂ ಜಗತ್ಪೂಜ್ಯನೂ ಪುರುಷನೊಬ್ಬನೇ ಎಂದು ಅವರು ಪ್ರತಿಪಾದಿಸುತ್ತಾರೆ. ಆರ್ಯರಲ್ಲಿ ಅಗ್ರಗಣ್ಯರಾದ ಅದ್ವೈತಿಗಳು ' ಸರ್ವಂ ಖಲ್ವಿದಂ ಬ್ರಹ್ಮ ' ಎಂದು ಘಂಟಾಘೋಷವಾಗಿ ಪುರುಷ ದೇವನನ್ನೇ ಉಗ್ಗಡಿಸುತ್ತಾರೆ. ಉಳಿದವರು ಸಹ ಅದನ್ನೇ ಅನುಸರಿಸಿದ್ದಾರೆ. ಹೆಸರುಗಳು ಬೇರೆ ಬೇರೆ ಆಗಿದ್ದರೂ ದೇವನು ಪುರುಷನೇ ಹೊರತು ಬೇರಲ್ಲ. ನಿದರ್ಶನಕ್ಕಾಗಿ ಮುಹಮ್ಮದೀ

CC-0. Jangamwadi Math Collection. Digitized by eGangotri

ಯರು 'ಅಲ್ಲಾ'ನನ್ನು, ಕ್ರೈಸ್ತರು ಕ್ರಿಸ್ತನನ್ನು, ಬೌದ್ಧರು ಬುದ್ಧನನ್ನು ದೇವನ ನ್ನಾಗಿ ಪೂಜಿಸುತ್ತಾರೆ; ತಂದೆಯೆಂದು ಕರೆಯುತ್ತಾರೆ.

ಇವರಿಗೆ ಇದುರಾಗಿ ಶಾಕ್ತೇಯರು ಪ್ರೈದೋರಿದರಾದರೂ ಇವರು ಕೂಡ ಏಕಾಂಗ ದೇವತಾರಾಧನೆಯಲ್ಲಿಯೇ ತಲ್ಲೀನರಾದರು. ಇವರು ಪೂರ್ತಿ ಪುರುಷನನ್ನು ಪರಿಹರಿಸಿ ಶಕ್ತಿಸಂಪೂಜೆಯನ್ನು ಮಾತ್ರ ಸ್ವೀಕರಿಸಿದರು. ಅಂತೆಯೇ ಇವರು ಕೇವಲ ಶಾಕ್ತೇಯರೆಂದೆನಿಸಿಕೊಂಡರು. ಮಾರಿ, ಲಕುಮಿ, ಸರಸ್ವತಿ, ಆರುಂಧತಿ, ದುರ್ಗಿ, ಕಾಳಿ, ಸಾವಿತ್ರಿ, ಗಾಯತ್ರಿ, ಗೌರಿ, ಮುಂತಾದ ಸ್ತ್ರೀ ದೇವತಾರಾಧನೆಯು ಬಲಿ ಯಿತು; ಬಳಕೆಗೆ ಬಂದಿತು. ಈ ಕ್ರಾಂತಿಯು ಆ ಪುರುಷ ದೇವಾರಾಧನೆಯ ಪ್ರತಿ ಭಟಿಸಿತಾದರೂ ಪೂರ್ತಿ ರೂಪವ ತಾಳದಾಯಿತು.

ದೇವಪುರಾಣಗಳಂತೆ ದೇವಿಪುರಾಣಗಳು ಹುಟ್ಟಿದವು. ದೇವಮಂದಿರಗಳಂತೆ ದೇವಿಮಂದಿರಗಳು ತಯಾರಾದವು. ದೇವಪುರುಷರು ಅವತರಿಸಿದಂತೆ ದೇವಿಯರು ಅವತರಿಸಿದರು. ಆದರೆ ದೇವ ದೇವಿಯರಲ್ಲಿ ಸಹಕಾರ ಸಮರಸ ಸಮನ್ವಯ ಭಾವ ಗಳು ಹುಟ್ಟಲಿಲ್ಲ. ಮೇಲು-ಕೀಳು ಎಂಬ ಮಾತುಗಳು ಮುಗಿಯಲಿಲ್ಲ. ಮಾತಿ ನಂತೆ ಕೃತಿಯಲ್ಲಿ ಭೇದ ಭಾವವನ್ನು ತಾರದೆ ತೀರಲಿಲ್ಲ.

ಪುರುಷರಿಗೆ ಪೂಜೆಯ ಹಕ್ಕು ಏರ್ಪಟ್ಟಿತು. ಪುರುಷರಿಗೆ ವೇದಪಠಣ ಮೀಸ ಲಾಯಿತು, ಪುರುಷರಿಗೆ ಮಾತ್ರ ಬ್ರಾಹ್ಮಣ್ಯವು ಬಳಸಿ ನಿಂತಿತು. ಸ್ತ್ರೀ ಪೂಜೆಗೆ ಅನರ್ಹಳು, ವೇದ ಶ್ರವಣಕ್ಕೆ ಬಾಹಿರಳು; ಬ್ರಾಹ್ಮಣ್ಯಕ್ಕೆ ದೂರಳು. ಹೀಗೆ ದೈವತ್ವ ಮಾನವತ್ವಗಳೆರಡರಲ್ಲಿ ಸ್ತ್ರೀ ಪುರುಷ ಸಾಮ್ಯವಾದ ಕೊಂಚವೂ ಕಾಣದಂತಾಯಿತು; ಹಗಲಿರುಳುಗಳಂತೆ ಜಲ ತೈಲಗಳಂತೆ ಭಿನ್ನ ಭಿನ್ನವಾಗಿ ನಿಂತವು.

ಈ ವಿಷಯದಲ್ಲಿ ಆಗಮಿಕ ಪ್ರಧಾನರಾದ ವೀರಶೈವರು ವಿಶೇಷ ಕ್ರಾಂತಿಯನ್ನು ಬೀರಿದರು. ಸ್ತ್ರೀ ಪುರುಷ ಅವೆರಡು ಶಕ್ತಿಗಳು ಅಗಲದಂತವುಗಳು, ಅವೆರಡೂ ಅನಿವಾರ್ಯಗಳು.* ಅವೆರಡೂ ಸರಿಸಮವಾದವುಗಳು ಎಂದು ಉದ್ಘೋಷಿಸಿದರು. ಬರಿ ಉದ್ಘೋಷಣೆ ಮಾತ್ರವಲ್ಲ; ಅರ್ಧನಾರೀಶ್ವರ ದೇವತೆಯನ್ನು ಸೃಷ್ಟಿಸಿದರು. ಶಕ್ತಿವಿಶಿಷ್ಟಾದ್ವೈತ ಮತ ಸಿದ್ಧಾಂತವನ್ನು ಸ್ಥಾಪಿಸಿದರು. 'ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಂ' ಎಂಬುದನ್ನು ಆದರಿಸಿದರು. ತಾವಾರಾಧಿ ಸುವ ಲಿಂಗಕ್ಕೆ ಶಕ್ತಿಪೀಠವನ್ನಾಗಿ, ಶಿವನನ್ನು ಬಾಣ(ಲಿಂಗ)ವನ್ನಾಗಿ ರಚಿಸಿದರು. ಶಿವ ಶಕ್ತಿ ಸಮನ್ವಯಗೊಳಿಸಿದರು. ತಾವಾರಾಧಿಸುವ ಆ ಲಿಂಗವನ್ನು ಬರಿ ತಂದೆ-

---

* 'ಆತ್ಮಶಕ್ತಿವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ'–ಸಿ. ಶಿಖಾಮಣಿ.
'ಸ್ವಶಕ್ತಿಪ್ರಚಯೋಽಸ್ಯ ವಿಶ್ವಂ'–ಶಿವಸೂತ್ರ,

CC-0. Jangamwadi Math Collection. Digitized by eGangotri

ಯೆಂದು ಕರೆಯಲಿಲ್ಲ; ತಾಯಿಯೆಂದೂ ಕರೆದರು. "ತಂದೆ ನೀನು, ತಾಯಿ ನೀನು" ಎಂಬ ಬಸವಣ್ಣನವರ ವಚನವನ್ನು ನೆನೆಯಬೇಕು.

"ವಿಮರ್ಶಾಖ್ಯಾ ಪರಾ ಶಕ್ತಿರ್ವಿಶ್ವವೈಚಿತ್ರ್ಯಕಾರಿಣೀ
ಯಸ್ಮಿನ್ ಪ್ರತಿಷ್ಠಿತಾ ಬ್ರಹ್ಮ ತದಿದಂ ವಿಶ್ವಭಾಜನಂ"

—ಸಿ. ಶಿಖಾಮಣಿ.

ಇಂಗಡಲೊಳಿಂಪು, ಬೆಳದಿಂಗಳೊಳು ತಂಪು, ಕುಸುಮಂಗಳೊಳು ಕಂಪು, ಇರುವಂತೆ ಶಿವನೊಳಗೆ ಶಕ್ತಿ ಅವಿನಾಭಾವದಿಂದ ಒಡವೆರೆದಿದೆಯೆಂದು ವೀರಶೈವ ಮತಾಚಾರ್ಯ ಶ್ರೀ ಜಗದ್ಗುರು ರೇಣುಕರು ಮತ್ತು ಶ್ರೀ ನಿಜಗುಣ ಶಿವಯೋಗಿಗಳು ಸಹ ಹೇಳಿದ್ದಾರೆ. ಅಲ್ಲದೆ ಶಿವಶರಣರೂ ಸಹ, ನೀರೊಳಗಿನ ಕಿಚ್ಚಿನಂತೆ, ಕಾರಮೇಘದೊಳಗಿನ ಮಿಂಚಿನಂತೆ, ಚಿನ್ನದೊಳಗಿನ ಬಣ್ಣದಂತೆ, ಕಣ್ಣೊಳಗಿನ ಕಾಂತಿಯಂತೆ, ಹಾಲಿನೊಳಗಿನ ತುಪ್ಪದಂತೆ, ಬಾಲೆಯೊಳಗಿನ ನೇಹದಂತೆ, ಶಿವಶಕ್ತಿ ಸಾಮರಸ್ಯವನ್ನು ಸಾರಿರುವರು. ಇದರಿಂದಾಗಿ ಈ ಮತಕ್ಕೆ, ಶಕ್ತಿ ವಿಶಿಷ್ಟಾದ್ವೈತಮತವೆಂಬ ಸಾರ್ಥಕವಾದ ಹೆಸರು ಬಂದಿದೆ. ಈ ಮತವು ಶಿವನಲ್ಲಿ ಶಕ್ತಿ ಸಾಮರಸ್ಯವನ್ನು ಪ್ರತಿಪಾದಿಸುವಂತೆ ಜೀವನಲ್ಲಿಯೂ ಜಗತ್ತಿನಲ್ಲಿಯೂ ಪ್ರತಿಪಾದಿಸುತ್ತದೆ. ವಿಶ್ವವ್ಯಾಪಿಯಾದ ಆ ಚಿಚ್ಛಕ್ತಿಯು ಪರಮಾಣುವಿನಿಂದ ಪರಶಿವನ ವರೆವಿಗೂ ವ್ಯಾಪಿಸಿರುವುದೆಂಬುದನ್ನು ವೀರಶೈವರು ಮೊತ್ತಮೊದಲು ಅರಿದು ಅಂಗೀಕರಿಸಿದರು; ಆಚರಣೆಯಲ್ಲಿ ತಂದರು. ಮೂಲಪ್ರಣವವಾದ ಓಂಕಾರದಿಂದ ಶಿವನಲ್ಲಿ ಹೇಗೆ ಶಕ್ತಿಯನ್ನು ಅವಿರಳವಾಗಿ ಕಾಣುವರೋ ಹಾಗೆ ಜೀವನಲ್ಲಿಯೂ ಶಕ್ತಿಯನ್ನು ಸರಿಸಮವಾಗಿ ಕಾಣುವ ಸಾಧನೆಯನ್ನು ಜೀವಾತ್ಮರುಗಳ ಹೆಸರುಗಳಿಂದಲೇ ಮೊದಲು ಮಾಡಿದರು. ಶಿವಪ್ಪ-ಶಿವಮ್ಮ; ಲಿಂಗಪ್ಪ-ಲಿಂಗಮ್ಮ; ಗುರಪ್ಪ-ಗುರಮ್ಮ; ಶಂಕರಪ್ಪ-ಶಂಕರಮ್ಮ; ಬಸವಪ್ಪ-ಬಸವಮ್ಮ ಇತ್ಯಾದಿ.

ಇತರರಲ್ಲಿ ದೇವ ದೇವಿಯರಲ್ಲಿ ಅಥವಾ ಶಿವ ಶಕ್ತಿಯರಲ್ಲಿ ಇದ್ದ ವಿಭಿನ್ನಜ್ಞಾನವನ್ನು ಒಪ್ಪದೆ ಒಂದೆಂದು ತೋರಿ ವಿಶೇಷಜ್ಞಾನವನ್ನು ದೇವಾರಾಧನೆಯಲ್ಲಿ ಬೀರಿದರು ವೀರಶೈವರು. ಹೆಣ್ಣು ಮಾಯೆಯೆಂಬುದನ್ನು ಅಲ್ಲಗಳೆದರು ವೀರಶೈವರು. ಅರ್ಚನ ಶ್ರವಣ ಕೀರ್ತನ ಮುಂತಾದವುಗಳಲ್ಲಿ ಸಾಮ್ಯವಾದವನ್ನು ಸ್ತ್ರೀಯರಿಗೆ ಸಂಪಾದಿಸಿಕೊಟ್ಟರು ವೀರಶೈವರು. ಸ್ತ್ರೀ ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನ ಸ್ವರೂಪವೆಂದರು ವೀರಶೈವರು.

ಎರಡನೆಯದಾಗಿ, ಉಪಾಸಕರಿಗೆ ದೇವಸ್ವಾತಂತ್ರ್ಯವನ್ನೂ ದೇವಾತ್ಮರೂಪವನ್ನು ತಂದುಕೊಟ್ಟರು ವೀರಶೈವರು. ಪುರಾತನ ಶೈವ ವೈಷ್ಣವ ಮತಗಳಲ್ಲಿ ದೇವೋಪಾಸನೆಯಲ್ಲಿ ಉಪಾಸಕರಿಗೆ ಸ್ವಾತಂತ್ರ್ಯವಿರಲಿಲ್ಲ, ಸ್ವಾತ್ಮೀಯತೆಯಿರಲಿಲ್ಲ. ಊರಿ

CC-0. Jangamwadi Math Collection. Digitized by eGangotri

ಗೊಂದು ದೇವಾಲಯವನ್ನು ನಿರ್ಮಿಸುತ್ತಿದ್ದರು.* ಅದರಲ್ಲಿ ಒಂದು ದೇವ ಅಥವಾ ದೇವಿ ಮೂರ್ತಿಯನ್ನು ಸ್ಥಾಪಿಸುತ್ತಿದ್ದರು. ಆ ದೇವ-ದೇವತೆಗಳು ಅರ್ಚಕರ ಸ್ವಾಧೀನ. ಆ ದೇವರಿಗೆ ಬರುವ ಪಡಿಪದಾರ್ಥಗಳು ಅರ್ಚಕರ ಸೊತ್ತು. ಭಕ್ತಿಯುಳ್ಳ ಭಕ್ತರು ಆ ದೇವರನ್ನು ಮುಟ್ಟುವಂತಿಲ್ಲ; ಪೂಜಿಸುವಂತಿಲ್ಲ; ಪರಿಣಮಿಸುವಂತಿಲ್ಲ. ಹೀಗಾಗಿ ಯಾರಿಗೂ ದೇವಪೂಜಾ ಸ್ವಾತಂತ್ರ್ಯವಿರಲಿಲ್ಲ; ಪೂಜಿಸುವ ಪುಣ್ಯಪ್ರಾಪ್ತಿಯಿರಲಿಲ್ಲ. ಮುಟ್ಟಿ ಪೂಜಿಸಲು ಸಾಧ್ಯವಿರುವವರೂ ಸಹ ಪೂಜಿಸದೆ ಪರರಿಂದ ಇಲ್ಲವೆ ಪುರೋಹಿತರಿಂದ ಪೂಜೆ ಮಾಡಿಸುತ್ತಿದ್ದರು. ಇದರಿಂದ ಬರುವ ಭಾಗ್ಯವೇನು, ಧನ್ಯತೆಯೇನು?

"ತಾನುಂಬ ಊಟವನು, ತಾ ಪಡೆದ ರತಿಸುಖವನು, ತಾ ಮಾಡಬೇಕಲ್ಲದೆ ಬೇರೆ ಮತ್ತೊಬ್ಬರ ಕೈಯಲಿ ಮಾಡಿಸಬಹುದೆ? ತಾ ಮಾಡುವ ಪೂಜೆಯನು ತಾ ಮಾಡಬೇಕಲ್ಲದೆ ಬೇರೆ ಮತ್ತೊಬ್ಬರ ಕೈಯಲಿ ಮಾಡಿಸಬಹುದೆ? ಕೆಮ್ಮನೇ ಉಪಚಾರಕ್ಕೆ ಮಾಡುವರಲ್ಲದೆ ನಿಮ್ಮನೆತ್ತಬಲ್ಲರು ಕೂಡಲಸಂಗಮದೇವ ?" ಎಂದು ಈ ದಿಶೆಯಲ್ಲಿಯೂ ವಿಶಿಷ್ಟ ಜ್ಞಾನವನ್ನು ಕ್ರಾಂತಿಯನ್ನು ಬೀರಿದರು ವೀರಶೈವರು. ಅಂದಿನಿಂದ ಊರಿಗೊಂದರಂತಿದ್ದ ದೇವಾಲಯಕ್ಕೆ ಬದಲು ಮನೆಗೊಂದು ವ್ಯಕ್ತಿಗೊಂದು ದೇವಾಲಯವಾಯಿತು. ಮನೆಗೊಂದು ದೇವರ ಮನೆಯೇರ್ಪಟ್ಟಿತು. ಮನೆಯ ದೇವರು ಜಗಲಿಯ ಮೇಲೆ ಪ್ರತಿಷ್ಠೆಗೊಂಡು ಮನೆಯವರಿಂದ ಪೂಜೆ ಆರಂಭವಾಯಿತು. ಬರಬರುತ್ತ ಅದು ಸಾಲದೆ ಅವರ ದೇಹಗಳೇ ದೇವಾಲಯಗಳಾದವು. ಅವರವರ ಆತ್ಮಗಳೇ ದೇವರಾದರು. ಬಹಿರಂಗ ಅಂತರಂಗಳೆರಡರಲ್ಲಿಯೂ ಲಿಂಗದೇವರ ಧಾರಣವಾಯಿತು. ಬೇಕೆಂದಾಗ, ಭಕ್ತಿ ಬಂದಾಗ ದೇವಪೂಜೆ ಘಟಿಸಲು ಅನುಕೂಲವೊದಗಿತು. ಅಂದಿನಿಂದ ದೇವೋಪಾಸನೆಯಲ್ಲಿ ಸ್ವಾಂತಂತ್ರ್ಯತೆ ಸ್ವಾಪ್ತಿಮೀಯತೆಗಳು ಸಂಪ್ರಾಪ್ತವಾದವು.

ಬಾಹ್ಯ ದೇವತಾರಾಧನೆಗಿಂತ ಆತ್ಮಾರಾಧನೆ ಅತ್ಯಂತ ಆದರಣೀಯವೂ ಅಭಿನಂದನೀಯವೂ ಆತ್ಯಂತಿಕವೂ ಅಭ್ಯುದಯಕಾರಣವೂ ಎಂಬ ವಿಶೇಷಜ್ಞಾನವುಂಟಾಯಿತು. ದೇಹದಲ್ಲಿ ಸ್ಥೂಲವಾದ ಇಷ್ಟಲಿಂಗವು ಆರಾಧಿತವಾದರೆ ಪ್ರಾಣದಲ್ಲಿ ಸೂಕ್ಷ್ಮವಾದ ಪ್ರಾಣಲಿಂಗವೂ ಭಾವದಲ್ಲಿ ಕಾರುಣ್ಯಾತ್ಮಕವಾದ ಭಾವಲಿಂಗವು ಆರಾಧನೆ ಪಡೆದು ಆತ್ಮವೇ ಪರಮಾತ್ಮವೆಂಬ ವಿಜ್ಞಾನವು ಅಂದರೆ ಅನುಭೂತಿಯು ಬೆಳೆದು ಬರಲು ಸಾಧನವಾಯಿತು. ಮತ್ತು ಸ್ಥೂಲ ಪೂಜೆಯೆ ಪೂಜೆಯಲ್ಲ; ಸದ್ಗುಣ, ಸದಾಚಾರ, ಸದ್ಭಾವ ಸಂಗ್ರಹ ರೂಪ, ಸೂಕ್ಷ್ಮ, ಕಾರಣ ಪೂಜೆಗಳೆಂಬ ವಿಚಾರ ವಿಶೇಷವು ಉದಯವಾಯಿತು. ಇದು ಸಹ ವೀರಶೈವವು ದೇವಾರಾಧನೆಯಲ್ಲಿ ತಂದ ವಿಜ್ಞಾನ.

---

* "ಧಿಗ್ ಗ್ರಾಮಮಶಿವಾಲಯಮ್" ಎಂಬ ಉಕ್ತಿಯು ಇದಕ್ಕೆ ಸಾಕ್ಷಿ ನುಡಿಯುತ್ತದೆ.

CC-0. Jangamwadi Math Collection. Digitized by eGangotri

' ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ '

ಎಂಬ ನುಡಿಯನ್ನು ನಡೆಯಲ್ಲಿ ತಂದ ವಿಜ್ಞಾನಿಗಳು ವೀರಶೈವರು. ತ್ರಿಕರಣಗಳಲ್ಲಿ ದೇವಭಾವ ತುಂಬಿ ತುಳುಕುವಂತೆ ಮಾಡಿದರು ವೀರಶೈವರು. ಇದರಿಂದ ಶಕ್ತಿ ವಿಶಿಷ್ಟ ಜೀವನು ಶಿವನಾಗಿ (ಮಂಗಳಾತ್ಮಕನಾಗಿ), ಪದಾರ್ಥ ರೂಪು ವಿಷಯಗಳು ಪ್ರಸಾದ ಗಳಾಗಿ, ತ್ಯಾಗ, ಭೋಗ, ಯೋಗಗಳುಂಟಾಗಿ ತನ್ಮಯನಾಗುವ ತತ್ತ್ವಕ್ಕಿಂತ ಬೇರೆ ಮಿಗಿಲು ತತ್ವವಿಲ್ಲ, ಬೇರೆ ಕೈವಲ್ಯವಿಲ್ಲ.

ಮೂರನೆಯದಾಗಿ, ವೀರಶೈವ ಷಟ್‌ಸ್ಥಲತತ್ತ್ವಪ್ರತಿಪಾ ದನೆಯ ಮತ್ತೊಂದು ಮಹಾ ವಿಜ್ಞಾನ; ಮೊದಲು ಸಾಧಕನು ಭಕ್ತನಾಗಿ, ಬಳಿಕ ಮಹೇಶನಾಗಿ, ಪ್ರಸಾದಿ ಯಾಗಿ, ಪ್ರಾಣಲಿಂಗಿಯಾಗಿ, ಶರಣನಾಗಿ ಆ ಮೇಲೆ ಐಕ್ಯನಾಗುವನು. ಈ ತತ್ತ್ವವು ಪ್ರಕೃತಿ ಸಹಜವೂ ಪಾರಮಾರ್ಥಿಕವೂ ಆಗಿದೆ. ಜನಜೀವನದಲ್ಲಿ ಹಾಸು ಹೊಕ್ಕಾಗಿದೆ. ಇದರಿಂದಾಗಿ ಇದು ವಿಶ್ವವಂದ್ಯವಾಗುವ ತತ್ತ್ವವಾಗಿದೆ. ಜೀವನವೇ ಷಟ್‌ಸ್ಥಲ ಮಯ. ಅದು ಪ್ರಾಕೃತಿಕವಾಗಿರಬಹುದು, ಇಲ್ಲವೆ ಪಾರಮಾರ್ಥಿಕವಾಗಿರಬಹುದು. ಯಾವುದರ ಪ್ರಾಪ್ತಿಗಾಗಿ ಯಾರೇ ಆರಂಭಿಸಲಿ ಅವರು ಆ ಷಟ್‌ಸ್ಥಲ ತತ್ತ್ವಕ್ಕೆ ಪ್ರವೇಶಿಸಲೇಬೇಕು. ಐಚ್ಛಿಕ ವಸ್ತುವಿನ ಅನುರಾಗಿಗಳಾಗಿ ಆದಿಯಲ್ಲಿ ಭಕ್ತರಾಗಿಯೇ ತೀರಬೇಕು. ಆ ಐಚ್ಛಿಕ ವಸ್ತುವಿನ ಪ್ರಾಪ್ತಿಯಾದ ಬಳಿಕ ಅದಕ್ಕೆ ಅಧಿಕಾರಿಗಳಾಗಿ ಮಾಹೇಶ್ವರರಾಗಿಯೇ ಮುಂದುವರಿಯಬೇಕು. ತನ್ನದನ್ನು ತಾನನುಭವಿಸಿ ಪ್ರಸನ್ನ ಹೃದಯರಾಗಿ ಪ್ರಸಾದಿಗಳಾಗಬೇಕು. ಅದರೊಳಗೆ ಪ್ರಾಣ(ಜ್ಞಾನ)ವನ್ನಿಟ್ಟುಕೊಂಡು ಅಥವಾ ಅದರಿಂದ ಪ್ರಾಣಶಕ್ತಿ ಪುಷ್ಟಿಗೊಂಡು ಪ್ರಾಣಲಿಂಗಿಯೆನಿಸುವನು. ಸರ್ವ ಕ್ರಿಯೆಗಳನ್ನಿಟ್ಟುಕೊಂಡು ಸರ್ವಾತ್ಮದಿಂದ ಶರಣು ಹೊಕ್ಕ ಕಾರಣ, ಶರಣನಾಗಿ ಕೊನೆಗೆ ಅದುವೇ ತಾನಾಗಿ ಹೋಗುವ ಕಾರಣ ಐಕ್ಯನೆನಿಸುವನು. ಈ ಆರು ಸ್ಥಲ ವಿಭಾಗಗಳು ವಿಜ್ಞಾನ ಪೂರ್ಣವಾಗಿವೆ; ವಿಶ್ವಮಾನ್ಯವಾಗಿವೆ.

ತ್ಯಾಗ, ಭೋಗ, ಯೋಗ ಸಮನ್ವಯ ವೀರಶೈವರ ನಾಲ್ಕನೆಯ ವಿಜ್ಞಾನ. ಇತರ ಮತ ವಿಜ್ಞಾನಿಗಳು ತ್ಯಾಗ-ಭೋಗಗಳಿಗೂ, ಭೋಗ-ಯೋಗಗಳಿಗೂ ಯಾವ ಸಂಬಂಧವಿಲ್ಲ ಮಾತ್ರವಲ್ಲ; ಅವುಗಳಿಗೆ ಪರಸ್ಪರ ವಿರೋಧ ಶಕ್ತಿಯಿದೆಯೆಂದು ವಿವರಿ ಸುತ್ತಾರೆ. ಅಸಂಬಂಧದಲ್ಲಿ ಸಂಬಂಧವನ್ನು ವಿರೋಧದಲ್ಲಿ ಅವಿರೋಧವನ್ನು ಉಂಟು ಮಾಡಿದ ವಿಜ್ಞಾನ ವೀರಶೈವರದು. ತ್ಯಾಗವಿಲ್ಲದೆ ಭೋಗವಿಲ್ಲ; ಭೋಗವಿಲ್ಲದೆ ಯೋಗವಿಲ್ಲೆಂಬುದು ವೀರಶೈವರ ವಿಶೇಷ ವಿಚಾರ ಪ್ರಣಾಳಿಕೆ ! ಇವರು ವಿಷಯೇಂದ್ರಿ ಗಳಲ್ಲಿ ವಿಷಯೇಂದ್ರಿಯ ಭಾವವನ್ನು, ಜಗಜ್ಜೀವರಲ್ಲಿ ಜಗಜ್ಜೀವ ಭಾವವನ್ನು ತ್ಯಾಗ ಮಾಡುತ್ತಾರೆ. ವಿಷಯೇಂದ್ರಿಯಗಳಲ್ಲಿ ಕ್ರಮವಾಗಿ ಪ್ರಸಾದ ಮತ್ತು ಲಿಂಗ ಭಾವ ವನ್ನು ಜಗಜ್ಜೀವರಲ್ಲಿ ಶಿವಭಾವವನ್ನು ತಾಳುತ್ತಾರೆ. ಲಿಂಗಭೋಗೋಪಭೋಗಿ ಗಳಾಗುತ್ತಾರೆ. ಸದಾಶಿವಯೋಗ ನಿರತರಾಗಿರುತ್ತಾರೆ.

CC-0. Jangamwadi Math Collection. Digitized by eGangotri

ಭೋಗ ಮೋಕ್ಷಗಳೆರಡನ್ನು ಪಡೆಯುವುದೇ ವೀರಶೈವರ ವೈಶಿಷ್ಟ್ಯ ! ಭೋಗ ಜೀವನಕ್ಕೆ ಅನಿವಾರ್ಯ ! ಆದರೆ ಆ ಭೋಗದೃಷ್ಟಿ ಬದಲಾಗಬೇಕು. ಪವಿತ್ರ ಭಾವ, ವಿಶಾಲ ಭಾವಗಳೊಡನೆ ಭೋಗಪರರಾಗಬೇಕು. ಅಂತಹ ಆ ಭೋಗ ಯೋಗಕ್ಕೆ (ಮೋಕ್ಷಕ್ಕೆ) ಮೂಲವೆಂದರು. ಅಂತೆಯೆ :

" ನ ವೀರಶೈವಸದೃಶಂ ಮತಮಸ್ತಿ ಜಗತ್ರಯೇ
ಸರ್ವಭೋಗಪ್ರದಂ ಪುಣ್ಯಂ ಶಿವಸಾಯುಜ್ಯದಾಯಕಂ "

ಎಂಬೀ ಪಾರಮೇಶ್ವರಾಗಮವು ಪರಮಾರ್ಥವನ್ನೇ ಪ್ರತಿಪಾದಿಸಿದೆ. ಈ ದಿಸೆಯಲ್ಲಿ ಈ ಆಗಮೋಕ್ತಿಗೆ ಅನುಭೂತಿಯ ಅಪಾರ ಬಣ್ಣವೇರಿದೆ.

ಓಂ ಶಾಂತಿಃ

CC-0. Jangamwadi Math Collection. Digitized by eGangotri

# ಮಧುರಾ ವಿಜಯ

ಡಾ. ಶಿ. ಚೆ. ನಂದೀಮಠ, ಎಂ.ಎ., ಪಿಎಚ್.ಡಿ.(ಲಂಡನ್)

## ಐತಿಹಾಸಿಕ ಹಿನ್ನೆಲೆ

ಭಾರತೀಯ ಪ್ರಾಚೀನ ಸಾಹಿತ್ಯದಲ್ಲಿ ವಿಪುಲವಾದ ವಿಷಯ ತುಂಬಿದೆ. ಭಾರತ ಸಾಹಿತ್ಯದಲ್ಲಿಲ್ಲದ್ದು ಜಗತ್ತಿನಲ್ಲಿಲ್ಲವೆಂದು ಮಹಾಭಾರತವನ್ನು ಸಂಬಂಧಿಸಿ ಪ್ರಾಚೀನ ಕವಿಗಳು ಹೇಳಿದ ಮಾತು ಬಹುತರ ಸತ್ಯವೆಂದು ಗ್ರಹಿಸಬಹುದು. ಆದರೆ ಭಾರತ ಸಾಹಿತ್ಯದಲ್ಲಿ ಇತಿಹಾಸಕ್ಕೆ ಸಂಬಂಧಿಸಿದ ಗ್ರಂಥಗಳ ಅಭಾವವಿದೆಯೆಂದೂ, ಗಣ್ಯವ್ಯಕ್ತಿಗಳ ಚರಿತ್ರೆಯನ್ನು ಇತಿಹಾಸದ ಒರೆಗಲ್ಲಿಗೆ ಸರಿಬರುವಂತೆ ಬರೆಯುವ ರೂಢಿ ಭಾರತೀಯರಲ್ಲಿ ಇದ್ದಿಲ್ಲವೆಂದೂ ಪಾಶ್ಚಾತ್ಯ ಪಂಡಿತರು ಹೇಳುವರು. ಪರಕೀಯರೂ, ಮುಸಲ್ಮಾನ ಗ್ರಂಥಕಾರರೂ ಬರೆದಿಟ್ಟ ಗ್ರಂಥಗಳ ಆಧಾರದ ಮೇಲೆ ಅವರು ಭಾರತದ ಇತಿಹಾಸವನ್ನು ಕಲ್ಪಿಸಿರುವರು. ಈಗ ಭಾರತೀಯರು ತಮ್ಮ ಹಿರಿಯರು ಬರೆದಿಟ್ಟ ಆಧಾರಗಳನ್ನು ಕೂಡಿಸಿ ಮಾತೃಭೂಮಿಯ ಇತಿಹಾಸವನ್ನು ಬರೆಯುವ ಕಾಲ ಪ್ರಾಪ್ತವಾಗಿದೆ. ಭಾರತೀಯ ಸಾಹಿತ್ಯದಲ್ಲಿ ದೊರೆಯುವ ಐತಿಹಾಸಿಕ ಸಂಗತಿಗಳನ್ನು ಸಂಗ್ರಹಿಸಿ ಭಾರತದ ಇತಿಹಾಸದಲ್ಲಿದ್ದ ಅನೇಕ ವಿಷಯಗಳನ್ನು ಮಾರ್ಪಡಿಸಬೇಕಾಗಿದೆ. ಅದಕ್ಕೆ ಸಹಾಯಕವಾಗಿ ಅನೇಕ ಗ್ರಂಥಗಳು ಈಗ ಉಪಲಬ್ಧವಾಗಿವೆ. ಅವುಗಳಲ್ಲಿ "ಮಧುರಾ ವಿಜಯ" ಅಥವಾ "ವೀರ ಕಂಪಣರಾಯ ಚರಿತೆ" ಎಂಬುದು ಒಂದು. ಅದನ್ನು ಬರೆದವಳು ಗಂಗಾದೇವಿ. ಕುಮಾರ ಕಂಪಣನ ರಾಜ್ಞಿ. ಅದು ಸಂಸ್ಕೃತ ಭಾಷೆಯಲ್ಲಿ ಕಾವ್ಯಮಯವಾಗಿ ರಚಿತವಾಗಿದೆ.

## ಮೂಲ ಪ್ರತಿ

"ಮಧುರಾ ವಿಜಯ"ವು ಅಪೂರ್ವ ಗ್ರಂಥ. ಅದರ ಒಂದೇ ಒಂದು ಪ್ರತಿ ಉಪಲಬ್ಧವಿದೆ. ಅದು ಅಕಸ್ಮಾತ್ತಾಗಿ ದೊರೆತುದು. ತಾಡವೋಲೆಗಳ ಮೇಲೆ ಗ್ರಂಥಾಕ್ಷರಗಳಲ್ಲಿ ಈ ಕಾವ್ಯವನ್ನು ಬರೆಯಲಾಗಿದೆ. ಓಲೆಗಳು ಬಹಳ ಜೀರ್ಣವಾಗಿವೆ. ತ್ರಿವೇಂಡ್ರಮ್‌ದ ಪುಸ್ತಕ ಭಾಂಡಾರದಲ್ಲಿರುವ ಕೈಬರಹದ ತಾಡವೋಲೆಯ ಸಂಸ್ಕೃತ ಗ್ರಂಥಗಳನ್ನು ಸಂಶೋಧಿಸುವಾಗ ಇದು ಅಲ್ಲಿಯ ಪಂಡಿತರಿಗೆ ದೊರೆಯಿತು. ಅವರು ಒಳ್ಳೇ ಜತನದಿಂದ ಅದರ ಪ್ರತಿಮಾಡಿಕೊಂಡು, ಈ ಗ್ರಂಥವನ್ನು ಉಳಿಸಿರುವರು. ಅದು ಕ್ರಿ. ಶ. ೧೯೧೬ ರಲ್ಲಿ ತ್ರಿವೇಂಡ್ರಮ್‌ನಲ್ಲಿ ಮುದ್ರಿತವಾಗಿ ಶ್ರೀ. ಟಿ. ಎ. ಗೋಪಿನಾಥರಾಯರ ಮುನ್ನುಡಿಯಿಂದ ಮೊದಲು ಪ್ರಕಟವಾಯಿತು.

CC-0. Jangamwadi Math Collection. Digitized by eGangotri

ಈ ಪ್ರತಿಯಲ್ಲಿ ಹಲವು ಶ್ಲೋಕಗಳು ಲುಪ್ತವಾಗಿವೆ. ಅದರ ೬, ೭, ೮ ಸರ್ಗಗಳ-ಲ್ಲಿದ್ದ ಪದ್ಯಗಳ ಸಂಖ್ಯೆ ಗೊತ್ತಾಗುವದಿಲ್ಲ. ಗ್ರಂಥದಲ್ಲಿ ಎಷ್ಟು ಸರ್ಗಗಳಿವೆ-ಯೆಂಬುದು ತಿಳಿಯುವದಿಲ್ಲ. ಕಡೆಯ ಸರ್ಗದಲ್ಲಿ ಕೇವಲ ೪೨ ಪದ್ಯಗಳು ಉಪ-ಲಬ್ಧವಿವೆ. ಅವುಗಳಲ್ಲಿ ೧೧ ಪದ್ಯಗಳು ಅಪೂರ್ಣವಾಗಿವೆ. ಒಟ್ಟು ೫೨೧ ಶ್ಲೋಕ-ಗಳು ಈಗ ದೊರೆಯುವವು. ಅವುಗಳಲ್ಲಿ ೫೮ ಶ್ಲೋಕಗಳು ಅಪೂರ್ಣವಾಗಿವೆ. ಮೂಲ ಹಸ್ತಪ್ರತಿಯಲ್ಲಿ ೧೧ ಓಲೆಗಳು ಸಂಪೂರ್ಣ ನಾಶವಾಗಿಹೋಗಿವೆ. ಆದುದ-ರಿಂದ ಮತ್ತೊಂದು ಕೈಬರಹದ ಪ್ರತಿ ಎಲ್ಲಿಯಾದರೂ ದೊರೆತರೆ ಕಳೆದ ಭಾಗವನ್ನು ಗುರುತಿಸಬಹುದೆಂಬ ಉದ್ದೇಶದಿಂದ ಬಹುಕಾಲ ದಾರಿಕಾಯಲಾಯಿತು. ಎಲ್ಲಿಯೂ ಅದರ ಪ್ರತಿ ಇದ್ದದ್ದು ಗೊತ್ತಾಗಲಿಲ್ಲ. ಆ ಮೇಲೆ ನಿರಾಶರಾಗಿ ಅಣ್ಣಮಲೈ ವಿಶ್ವ-ವಿದ್ಯಾಲಯದವರು ಪ್ರೊ. ಎಸ್. ತಿರುವೆಂಕಟಾಚಾರ್ಯರ ಸಂಪಾದಕತ್ವದಲ್ಲಿ ಈ ಅಪೂರ್ವ ಪ್ರತಿಯ ದ್ವಿತೀಯ ಮುದ್ರಣವನ್ನು ಕ್ರಿ.ಶ. ೧೯೫೭ ರಲ್ಲಿ ಪ್ರಸಿದ್ಧಿಸಿ-ದ್ದಾರೆ. ಇದರಲ್ಲಿ ಪ್ರತಿಶ್ಲೋಕದ ಆಂಗ್ಲ ಭಾಷಾಂತರವೂ, ಆ ಕಾಲದ ಇತಿಹಾಸದ ಮೇಲೆ ಬೆಳಕನ್ನು ಕೆಡಹುವ ಬಹು ಉಪಯುಕ್ತ ಮುನ್ನುಡಿಯೂ ಅಡಕವಾಗಿದೆ. ಅವು ಗ್ರಂಥದ ಮಹತ್ವವನ್ನು ಅರಿಯಲು ಹೆಚ್ಚು ಸಹಾಯಕವಾಗಿವೆ. ದೇವನಾಗರಿ ಲಿಪಿಯಲ್ಲಿ ಮೂಲವನ್ನು ಅಂದವಾಗಿ ಮತ್ತು ಶಕ್ಯವಿದ್ದಷ್ಟು ಶುದ್ಧವಾಗಿ ಮುದ್ರಿಸಿರುವರು.

## 'ಮಧುರಾ ವಿಜಯ'ದ ವಿಷಯ

ವಿಜಯನಗರದ ರಾಜ್ಯವು ಕ್ರಿ. ಶ. ೧೩೩೬ ರಲ್ಲಿ ಮೊಳಕೆಯೊಡೆದು ೧೩೪೬ ರಲ್ಲಿ ಮೂರ್ತಸ್ವರೂಪವನ್ನೂ, ಖ್ಯಾತಿಯನ್ನೂ ಹೊಂದಿ ಭದ್ರವಾದುದಾಗಿತ್ತು. ಮೊದಲನೆಯ ರಾಜನಾದ ಹರಿಹರನು ಒಳ್ಳೆ ಜಾಣಾಕ್ಷತನದಿಂದ ವಿಜಯನಗರ-ಕ್ಕೊದಗಿದ ಗಂಡಾಂತರಗಳನ್ನು ದೂರಮಾಡಿ ಸುಮಾರು ಏಳು ವರ್ಷಗಳವರೆಗೆ (ಕ್ರಿ. ಶ. ೧೩೩೬-೧೩೪೩) ರಾಜ್ಯವಾಳಿದನು. ಸಂಕಟದಿಂದ ಬಳಲುತ್ತಿದ್ದ ಆರ್ಯ ಧರ್ಮೀಯರಿಗೆ ಈ ರಾಜ್ಯಸ್ಥಾಪನೆಯಿಂದ ಆಶ್ರಯ ದೊರೆಯಿತು. ಹರಿಹರನ ತಮ್ಮನಾದ ಬುಕ್ಕರಾಜನು ಎರಡನೆಯ ಚಕ್ರವರ್ತಿಯಾಗಿ ಸಿಂಹಾಸನವನ್ನೇರಿದನು. ಅವನು ೨೮ ವರ್ಷ (ಕ್ರಿ.ಶ. ೧೩೪೩-೧೩೭೧ ರ ವರೆಗೆ) ಆಳಿದನು. ಅವನು ರಾಜ್ಯ-ವನ್ನು ನ್ಯಾಯವಾಗಿ ಪಾಲಿಸಿ ಎಲ್ಲ ಪ್ರಜೆಗಳ ಪ್ರೀತಿಯನ್ನು ಸಂಪಾದಿಸಿದನು. ಗಂಗಾದೇವಿಯು ಆತನ ಆಳ್ವಿಕೆಯನ್ನು ಒಳ್ಳೇ ಮಾರ್ಮಿಕವಾಗಿ ಬಣ್ಣಿಸಿದ್ದಾಳೆ.

ಈತನು ವಿಜಯನಗರದ ರಾಜ್ಯವನ್ನು ಇಂದ್ರನು ಅಮರಾವತಿಯನ್ನು ಆಳಿ-ದಂತೆ ಆಳಿದನು. ಇವನ ಮಗನೇ "ಮಧುರಾ ವಿಜಯ" ಕಾವ್ಯದ ನಾಯಕನೂ, ಗಂಗಾದೇವಿಯ ಪತಿಯೂ ಆದ ವೀರಕಂಪಣನು. ಮಧುರೆಯ ಸುಲ್ತಾನಶಾಹಿ-ಯನ್ನು ಇರಗೊಟ್ಟರೆ ಅದರಿಂದ ವಿಜಯನಗರದ ರಾಜ್ಯಕ್ಕೆ ಶಾಶ್ವತ ಗಂಡಾಂತರ-

CC-0. Jangamwadi Math Collection. Digitized by eGangotri

ವುಂಟಾಗುವದೆಂದು ಬಗೆದು ಬುಕ್ಕರಾಜನು ತನ್ನ ಹಿರಿಯ ಮಗನಾದ ವೀರಕಂಪಣ-ನಿಗೆ ಮಧುರೆಯ ಮೇಲೆ ದಂಡೆತ್ತಿ ಹೋಗಿ, ಆ ಸುಲ್ತಾನಶಾಹಿಯನ್ನು ಸಂಪೂರ್ಣ-ವಾಗಿ ನಾಶಮಾಡಲು ಆಜ್ಞೆ ಮಾಡುತ್ತಾನೆ. ವೀರಕಂಪಣನು ಸೈನ್ಯವನ್ನು ಸಂಗ್ರಹಿಸಿ, ದಕ್ಷಿಣದ ರಾಜರಾದ ಚೋಳ, ಚೇರ, ಪಾಂಡ್ಯರ ಬೆಂಬಲವನ್ನು ಪಡೆದು, ಮಧುರೆಯನ್ನು ಕೈವಶಮಾಡಿಕೊಳ್ಳುವ ಯೋಜನೆಯನ್ನು ಮಾಡುತ್ತಾನೆ. ಹಿಂದುಗಳಾದರೂ ವಿಜಯನಗರಕ್ಕೆ ಪ್ರತಿಕೂಲರಾಗಿ ಇದ್ದ ಕೆಲವು ರಾಜರನ್ನು ಸೋಲಿಸಿ ತನಗೆ ಅಧೀನರಾಗುವಂತೆ ಮಾಡುತ್ತಾನೆ. ಅಂತಹರಲ್ಲಿ ತೊಂಡೈ-ಮಂಡಲದ ಸಂಬವರಾಯರು ಮುಖ್ಯರು. ಅವರು ಪ್ರಬಲರಾಗಿ ವಿಜಯನಗರಕ್ಕೂ ಮಧುರೆಯ ಸುಲ್ತಾನ ರಾಜ್ಯಕ್ಕೂ ಮಧ್ಯದಲ್ಲಿದ್ದುದರಿಂದ ಅವರನ್ನು ತನ್ನ ವಶ-ಪಡಿಸಿಕೊಳ್ಳುವದು ಅಗತ್ಯವಾಗಿತ್ತು. ಆದಕ್ಕಾಗಿ ಅವರನ್ನು ಸೋಲಿಸಿ ತೊಂಡೈ-ಮಂಡಲವನ್ನು ಕೈವಶಮಾಡಿಕೊಂಡು ಕಂಚಿಯಲ್ಲಿ ವಿಜಯನಗರದ ರಾಜಪ್ರತಿನಿಧಿ-ಯಾಗಿ ನೆಲಸಿದನು ಆ ಮೇಲೆ ಮಧುರೆಯ ಸುಲ್ತಾನರನ್ನು ಸೋಲಿಸಿ, ದಕ್ಷಿಣ ಭಾರತವನ್ನು ಕಂಟಕರಹಿತವಾದುದನ್ನಾಗಿ ಮಾಡಿ, ವಿಜಯನಗರ ಸಾಮ್ರಾಜ್ಯ-ವನ್ನು ಬಲಪಡಿಸಿದನು. ಈತನ ರಾಜ್ಯದಾಡಳಿತೆಯು ಜನತೆಗೆ ಮಾನ್ಯವಾದು-ದಾಗಿತ್ತು. ಗಂಗಾದೇವಿಯು " ಮಧುರಾ ವಿಜಯ " ಅಥವಾ " ವೀರಕಂಪಣ-ರಾಯ ಚರಿತೆ "ಯಲ್ಲಿ ಕಂಪಣನ ವಿಜಯಯಾತ್ರೆಯನ್ನೂ, ರಾಜ್ಯದಾಡಳಿತೆ-ಯವ್ನೂ ಬಣ್ಣಿಸಿದ್ದಾಳೆ.

ಸರ್ಗ–೧: ಶ್ಲೋಕ ೧ ರಿಂದ ೧೬ ರ ವರೆಗೆ ಗಂಗಾದೇವಿಯು ಗುರುಹಿರಿಯರನ್ನು ಸ್ಮರಿಸುತ್ತಾಳೆ ಗಣಪತಿ, ಶಿವ, ಪಾರ್ವತಿ, ಸರಸ್ವತಿ ಇವರನ್ನು ಸ್ಮರಿಸಿ ತನ್ನ ಕುಲಗುರುವಾದ ಕ್ರಿಯಾಶಕ್ತಿಯನ್ನು ನಮಿಸುತ್ತಾಳೆ. ಕ್ರಿಯಾಶಕ್ತಿಯು ಸಂಗಮ ವಂಶದ ದೊರೆಗಳಿಗೆ ಕುಲಗುರುವು. ಹರಿಹರ, ಬುಕ್ಕ, ಮೊದಲನೆಯ ದೇವರಾಯ ಮೊದಲಾದವರಿಗೆ ಕ್ರಿಯಾಶಕ್ತಿ ಪಂಡಿತನು ಕೇವಲ ಅಧ್ಯಾತ್ಮಿಕ ಗುರು-ವಾಗಿರದೆ ರಾಜ್ಯದಾಡಳಿತೆಯಲ್ಲಿಯೂ ಅವರಿಗೆ ಉಪದೇಶಕನಾಗಿದ್ದನು. ಈತನು ಒಳ್ಳೇ ಪ್ರಸಿದ್ಧ ಶೈವಾಚಾರ್ಯನೂ, ಘನವಿದ್ವಾಂಸನೂ ಉಪನಿಷತ್ ಮತ್ತುಶೈವಾ-ಗಮ ಇವುಗಳಲ್ಲಿ ಅಸಾಧಾರಣ ಪ್ರಭುತ್ವ ಪಡೆದವನೂ ಆಗಿದ್ದನು. ಇವನ ಉಪ-ದೇಶದಿಂದಲೇ ಮಾಧವ ಮಂತ್ರಿಯು ಉಪನಿಷನ್ಮಾರ್ಗ ಪ್ರವರ್ತಕನೂ, ಶೈವ-ಧರ್ಮನಿಷ್ಠನೂ ಆಗಿದ್ದನೆಂದು ಶಿಲಾಶಾಸನಗಳಿಂದ ತಿಳಿಯುವದು. ಕ್ರಿಯಾಶಕ್ತಿ-ಪಂಡಿತನು ಮಾಧವ ಮಂತ್ರಿಗಾಗಿ ಎಲ್ಲ ಶೈವಾಗಮಗಳ ತಿರುಳನ್ನು ಸಂಗ್ರಹಿಸಿ ಶೈವಾಗಮಸಾರ ಸಂಗ್ರಹವನ್ನು ರಚಿಸಿದನು.[1] ಗಂಗಾದೇವಿಯು ಈತನನ್ನು,

ಅಸಾಧಾರಣ ಸಾರ್ವಜ್ಞ್ಯಂ ವಿಲಸತ್ ಸರ್ವಮಂಗಲಂ ।
ಕ್ರಿಯಾಶಕ್ತಿಗುರುಂ ವಂದೇ ತ್ರಿಲೋಚನಮಿವಾಪರಂ ॥ (ಸ. ೧: ಶ್ಲೋ.೪)

1. Epi. Carn. Vol VIII Sb. 375 dated 1347 A.D.

CC-0. Jangamwadi Math Collection. Digitized by eGangotri

ಎಂದು ಸ್ತುತಿಸಿರುವಳು. ರಾಜಗುರುವಾದ ಕ್ರಿಯಾಶಕ್ತಿಯು ಎರಡನೆಯ ತ್ರಿಲೋಚನನು. ಶಿವನಂತೆ ಈತನು ಅಸಾಧಾರಣ ಸರ್ವಜ್ಞನು. ಸರ್ವಮಂಗಲೆಯಿಂದ ಕೂಡಿದ ಶಿವನಂತೆ ಈತನು ಎಲ್ಲರಿಗೂ ಮಂಗಲವನ್ನುಂಟು ಮಾಡುವವನು. ಗಂಗಾದೇವಿಯ ದೃಷ್ಟಿಯಲ್ಲಿ ಕ್ರಿಯಾಶಕ್ತಿಯ ಸ್ಥಾನವು ಶಿವಪಾರ್ವತಿ ಸರಸ್ವತಿಯರ ಕೆಳಗೆ ಮತ್ತು ವ್ಯಾಸ, ವಾಲ್ಮೀಕಿ ಮಹರ್ಷಿಗಳಿಗೂ ಮೇಲೆ ಇರುವದು. ಆತನು ಸಾಕ್ಷಾತ್ ಶಿವನ ಅಪರಾವತಾರನು. ವಿಜಯನಗರದ ಸಂಗಮ ವಂಶದ ಅರಸರುಗಳ ಶಿಲಾಶಾಸನಗಳಲ್ಲಿ ಕ್ರಿಯಾಶಕ್ತಿ ಪಂಡಿತನು ಕುಲಗುರುವೆಂದೂ, ರಾಜಗುರುವೆಂದೂ ಉಲ್ಲೇಖವಿದೆ. ಸಂಗಮ ವಂಶದವರ ಕಾಲದಲ್ಲಿ ಆತನ ಪ್ರಭಾವ ವಿಪುಲವಾಗಿರುವಂತೆ ಬೇರೆ ಆಧಾರಗಳಿಂದ ಸ್ಪಷ್ಟವಾಗುವದು. ಕ್ರಿಯಾಶಕ್ತಿ ಪಂಡಿತನ ಪ್ರೋತ್ಸಾಹದಿಂದಲೇ ವಿದ್ಯಾರಣ್ಯನು ಶ್ರೌತಸೂತ್ರಗಳಿಗೆ ವ್ಯಾಖ್ಯಾನವನ್ನು ಬರೆದನೆಂದು ಪ್ರತೀತಿ. ವಿಜಯನಗರ ರಾಜ್ಯಸ್ಥಾಪನೆಗೆ ವಿದ್ಯಾರಣ್ಯನು ಮೂಲ ಪುರುಷನೆಂದು ಇರುವ ತಿಳುವಳಿಕೆಗೆ ಆಧಾರಗಳು ದೊರೆಯುವದಿಲ್ಲ. ಹದಿನಾಲ್ಕನೆಯ ಶತಮಾನದ ಕಡೆಯ ಭಾಗದಲ್ಲಿ ಅಂದರೆ ವಿಜಯನಗರ ರಾಜ್ಯಸ್ಥಾಪನೆಯಾಗಿ ಸುಮಾರು ೪೦ ವರುಷಗಳು ಗತಿಸಿದ ಮೇಲೆ ವಿದ್ಯಾರಣ್ಯಸ್ವಾಮಿಯ ಹೆಸರು ಕೇಳಬರುತ್ತದೆ. ರಾಜ್ಯದ ಪ್ರಾರಂಭದಿಂದಲೂ ಸಂಗಮ ವಂಶದ ಕುಲಗುರುವಾದ ಕ್ರಿಯಾಶಕ್ತಿಯ ಪ್ರಭಾವವೂ ಆತನ ಅತ್ಯುನ್ನತ ಸ್ಥಾನವೂ ಸ್ಪಷ್ಟವಾಗಿ ಶಿಲಾಶಾಸನಗಳಿಂದ ಸಿದ್ಧವಾಗುವದು. ಹದಿನಾಲ್ಕನೆಯ ಶತಮಾನದಲ್ಲಿ ಕ್ರಿಯಾಶಕ್ತಿ ಪಂಡಿತನ ವರ್ಚಸ್ಸು ವಿಪುಲವಾಗಿತ್ತು. ಆದುದರಿಂದಲೇ ಗಂಗಾದೇವಿ ಆತನನ್ನು ಮುಕ್ಕಣ್ಣನ ಅಪರಾವತಾರವೆಂದು ಸ್ತುತಿಸಿರುವಳು. ಬಹುತರವಾಗಿ ಆಕೆಗೆ ಕವಿತ್ವಶಕ್ತಿ ಪ್ರಾಪ್ತವಾದುದು ಕ್ರಿಯಾಶಕ್ತಿಪಂಡಿತನ ಅನುಗ್ರಹದಿಂದಲೇ ಎಂದು ಊಹಿಸಬಹುದು. ಆದುದರಿಂದಲೇ ಆಕೆಯು ಕ್ರಿಯಾಶಕ್ತಿಯನ್ನು ಪಾರ್ವತಿ ಪರಮೇಶ್ವರರ ತರುವಾಯ ನುತಿಸಿರುವಳು.

ಆಮೇಲೆ ಆದಿಕವಿ ವಾಲ್ಮೀಕಿಯನ್ನೂ ಕವಿ ಬ್ರಹ್ಮನಾದ ವ್ಯಾಸನನ್ನೂ, ಸ್ತುತಿಸಿರುವಳು.

ಚೇತಸೋ ಅಸ್ತು ಪ್ರಸಾದಾಯ ಸತಾಂ ಪ್ರಾಚೇತಸೋ ಮುನಿಃ ।
ಪೃಥಿವ್ಯಾಂ ಪದ್ಯನಿರ್ಮಾಣವಿದ್ಯಾಯಾಃ ಪ್ರಥಮಂ ಪದಂ ॥
ವೈಯಾಸಿಕೆ ಗಿರಾಂ ಗುಂಫೆ ಪುಂಡ್ರೇಕ್ಷಾವಿವ ಲಭ್ಯತೇ ।
ಸದ್ಯಃ ಸಹೃದಯಾಲ್ಹಾದೀ ಸಾರಃ ಪರ್ವಣಿ ಪರ್ವಣಿ॥ (ಸ. ೧: ಶ್ಲೋ. ೫.೬.)

ಎಂದು "ಪದ್ಯ ನಿರ್ಮಾಣ ವಿದ್ಯೆಯಲ್ಲಿ ಭೂಮಂಡಲದೊಳಗೆ ಮೊದಲನೆಯ ಹೆಜ್ಜೆಯನ್ನಿಟ್ಟ ವಾಲ್ಮೀಕಿ ಮಹರ್ಷಿಯು ಸಜ್ಜನರ ಮನಸ್ಸಿಗೆ ಆಲ್ಹಾದವನ್ನುಂಟು ಮಾಡಲಿ. ಕಬ್ಬಿನ ಪ್ರತಿಗಣಿಕೆಯಲ್ಲಿಯೂ ಮಧುರವಾದ ರಸವು ಇರುವಂತೆ

CC-0. Jangamwadi Math Collection. Digitized by eGangotri

ವ್ಯಾಸ ಮಹರ್ಷಿಯು ಪ್ರತಿಯೊಂದು ಶಬ್ದದಲ್ಲಿ ಮಾಧುರ್ಯವು ತುಂಬಿಕೊಂಡಿದೆ. ಅದು ಸಹೃದಯರಿಗೆ ಆಲ್ಹಾದವನ್ನುಂಟು ಮಾಡುವದು". ಆ ಮೇಲೆ ಕಾಲಿದಾಸನನ್ನು ಸ್ಮರಿಸುವಳು :

ದಾಸತಾಂ ಕಾಲಿದಾಸಸ್ಯ ಕವಯಃ ಕೇ ನ ಬಿಭ್ರತಿ ।
ಇದಾನೀಮ-ಪಿ ತಸ್ಯಾರ್ಥಾನುಪಜೀವಂತ್ಯಮೀ ಯತಃ ॥ (ಸ.೧.ಶ್ಲೋ.೭)

"ಕಾಲಿದಾಸನಿಂದ ಕವಿತಾಪ್ರೌಢಿಮೆಯನ್ನು ಪಡೆದು ಆತನ ದಾಸನಾಗಲು ಯಾವ ಕವಿ ಇಚ್ಛಿಸುವದಿಲ್ಲ"– ಎಂದು ಹೇಳಿ ತಾನು ಕಾಲಿದಾಸನಿಂದ ಕವಿತಾ ಪ್ರೌಢಿಮೆ-ಯನ್ನು ಪಡೆದುದಾಗಿ ತಿಳಿಸುವಳು. ಬಾಣ, ದಂಡಿ, ಭವಭೂತಿ ಇವರನ್ನು ಸ್ತುತಿಸಿ ತನಗೆ ಕವಿತ್ವಶಕ್ತಿಯನ್ನು ತಂದುಕೊಟ್ಟ ಆ ಕಾಲದ ಪಂಡಿತರನ್ನು ಸ್ಮರಿಸಿ ತನ್ನ ಕೃತಜ್ಞತೆಯನ್ನು ವ್ಯಕ್ತಮಾಡಿದ್ದಾಳೆ. ಅವರಲ್ಲಿ ತಿಕ್ಕಯ್ಯ, ಅಗಸ್ತ್ಯ, ಗಂಗಾಧರ, ವಿಶ್ವನಾಥ ಇವರು ಮುಖ್ಯರು. ಇವರೆಲ್ಲರೂ ಒಂದಿಲ್ಲೊಂದು ರೀತಿ-ಯಿಂದ ಆಂಧ್ರದೇಶಕ್ಕೆ ಸಂಬಂಧಿಸಿದವರು. ತಿಕ್ಕಯ್ಯನು ತಿಕ್ಕಣಾಮಾತ್ಯನಾಗಿರ-ಬಹುದೇ ಎಂದು ಸಂದೇಹ. ಅಗಸ್ತ್ಯನು ಗಂಗಾದೇವಿಯ ವಿದ್ಯಾಗುರುವಾಗಿರ-ಬೇಕು. ಆತನ ೭೪ ಗ್ರಂಥಗಳ ಉಲ್ಲೇಖ ಅರ್ಥಪೂರ್ಣವಾಗಿದೆ. ಆತನ ಗ್ರಂಥ ಗಳಲ್ಲಿ "ಪ್ರತಾಪರುದ್ರಯಶೋಭೂಷಣ" ಎಂಬುದು ಪ್ರಸಿದ್ಧ ಗ್ರಂಥವು. ಅದು ಕಾಕತೀಯ ಸಮ್ರಾಟನಾದ ಪ್ರತಾಪರುದ್ರನ ಕೀರ್ತಿಯನ್ನು ಪ್ರಸಾರ ಮಾಡುವದಕ್ಕಾಗಿ ಬರೆದ ಗ್ರಂಥ ಅಗಸ್ತ್ಯನಿಗೆ ವಿದ್ಯಾನಾಥನೆಂದು ಬಿರುದು ಇತ್ತು. ವಿದ್ಯಾನಾಥನು ಗಂಗಾದೇವಿಯ ವಿದ್ಯಾಗುರುವಾಗಿ, ಪ್ರಸಿದ್ಧ ಕವಿಯಾಗಿದ್ದನು. ಆಕೆಯ ಶೈಲಿ ವಿದ್ಯಾನಾಥನ ಶೈಲಿಯನ್ನು ಬಹುಮಟ್ಟಿಗೆ ಹೋಲುವದು. ಅಪರ-ವ್ಯಾಸನೆಂದು ಖ್ಯಾತಿಯನ್ನು ಪಡೆದ ಗಂಗಾಧರನು ಅಗಸ್ತ್ಯನ ಬಂಧುವು. ಅವನು ಅಗಸ್ತ್ಯನ ಅಣ್ಣನ ಅಥವಾ ತಮ್ಮನ ಮಗನಾಗಿರಬಹುದು. ಗಂಗಾಧರನು ಸಂಸ್ಕೃತದಲ್ಲಿ ಮೂರು ನಾಟಕಗಳನ್ನು ಬರೆದಿರುವನು. ಆತನ ಮಕ್ಕಳಲ್ಲೊಬ್ಬನಾದ ವಿಶ್ವನಾಥನು ಗಂಗಾದೇವಿಯ ಶಿಕ್ಷಕನಾಗಿರಲೂ ಬಹುದು. ಆದುದರಿಂದಲೇ:—

ಚಿರಂ ಸ ವಿಜಯೀ ಭೂಯಾತ್ ವಿಶ್ವನಾಥಃ ಕವೀಶ್ವರಃ ।
ಯಸ್ಯ ಪ್ರಸಾದಾತ್ ಸಾರ್ವಜ್ಞ್ಯಂ ಸಮಿಂಧೇ ಮಾದೃಶೇಷ್ವಪಿ ॥
(ಸ. ೧: ಶ್ಲೋ. ೧೬)

"ಕವೀಶ್ವರನಾದ ವಿಶ್ವನಾಥನು ಸದಾ ವಿಜಯಿಯಾಗಲಿ. ಅವನ ಪ್ರಸಾದದಿಂದ ನನ್ನಂತಹರೂ ಕೂಡ ಸರ್ವಜ್ಞರಾಗಿದ್ದಾರೆ" ಎಂದು ಹೊಗಳಿರುವಳು. ಈ ಕವಿಗಳು ಕಾಕತೀಯರ ರಾಜ್ಯ ಹೋದಮೇಲೆ ವಿಜಯನಗರದ ಹರಿಹರ ಬುಕ್ಕರಾಯರ

CC-0. Jangamwadi Math Collection. Digitized by eGangotri

ಆಶ್ರಯದಲ್ಲಿದ್ದಿರಬಹುದು. ಗಂಗಾದೇವಿ ತನ್ನ ತಾಯಿ ತಂದೆಗಳ ಹೆಸರನ್ನಾಗಲಿ, ತನ್ನ ತವರುಮನೆಯ ವಿಷಯವನ್ನಾಗಲೀ ಎಲ್ಲಿಯೂ ತನ್ನ ಗ್ರಂಥದಲ್ಲಿ ಉಲ್ಲೇಖಿಸಿ-ರುವದಿಲ್ಲ. ಇದು ಆಶ್ಚರ್ಯಕರವಾದ ಸಂಗತಿ. ಇದೊಂದು ಬಿಡಿಸಲಾಗದ ಒಗಟು. ಮೂರನೆಯ ಸರ್ಗದ ಹದಿನೆಂಟು ಹತ್ತೊಂಬತ್ತು ಶ್ಲೋಕಗಳಲ್ಲಿ ಬಹುತರ ತನ್ನ ಮದುವೆಯನ್ನೂ, ದಾಪಂತ್ಯ ಸುಖವನ್ನೂ ವರ್ಣಿಸಿದ್ದಾಳೆ. ದುರ್ದೈವದಿಂದ ಹದಿನೈದನೆಯ ಪದ್ಯ ಅರ್ಧಕ್ಕೂ ಹೆಚ್ಚು ನಾಶವಾಗಿದೆ. ಬಹುತರ ಇದರಲ್ಲಿ ತನಗೆ ಸಂಬಂಧಿಸಿದ ವಿಷಯ ಇದ್ದಿರಬಹುದು "ಇಂದ್ರನಿಗೆ ಶಚಿಯು ಹೇಗೆ, ವಿಷ್ಣುವಿಗೆ ಲಕ್ಷ್ಮಿಯು ಹೇಗೆ, ಶಿವನಿಗೆ ಪಾರ್ವತಿಯು ಹೇಗೆ........" "ರಾಜ ಕುಮಾರನು ಸುಂದರಿಯೂ ನಯನಾಭಿರಾಮಿಯೂ ಆದ ಅವಳೊಡನೆ ದೇವತೆಗಳಿಗೂ ಕೂಡ ದುರ್ಲಭವಾದ, ಪರಸ್ಪರ ಪ್ರೇಮವನ್ನು ವರ್ಧಿಸುವಂತಹ, ಸುಖ-ವನ್ನು ಅನುಭವಿಸಿದನು" ಎಂದು ಹೇಳಿರುವದು ತನಗೇ ಸಂಬಂಧಿಸಿದೆ ಎಂಬುವದನ್ನು ಅರಿಯುವದು ಕಠಿಣವಲ್ಲ. ಗಂಗಾದೇವಿ ಆ ಕಾಲದ ವಿದುಷಿಯರಲ್ಲಿ ಅಗ್ರಗಣ್ಯ-ಳಾಗಿದ್ದು ಕ್ರಿಯಾಶಕ್ತಿಪಂಡಿತ, ವಿದ್ಯಾನಾಥ, ವಿಶ್ವನಾಥರಂತಹ ಮೇಧಾವಿಗಳಿಂದ ವಿನೀತಳಾಗಿ ಕಂಪಣನ ಕೈಹಿಡಿದು ಅವನ ದಾಂಪತ್ಯ ಸುಖವನ್ನು ಹೆಚ್ಚಿಸಿ ಆತನ ರಾಜ್ಯದಾಡಳಿತೆಯಲ್ಲಿಯೂ ನೆರವಾಗುತ್ತಿದ್ದಳು. ಆತನು ಮಧುರೆಗೆ ದಂಡೆತ್ತಿ ಹೋದಾಗ ಅತನನ್ನು ಅನುಸರಿಸಿ ಸಮರಾಂಗಣವನ್ನು ಪ್ರತ್ಯಕ್ಷ ನೋಡಿ ಮಧುರಾ-ವಿಜಯವನ್ನು ಬರೆದಿರಬಹುದು.

ಸರ್ಗ ೧: ಶ್ಲೋಕ ೧೭ ರಿಂದ ೨೫ ರಲ್ಲಿ ಕಾವ್ಯಗಳ ಸಾಮಾನ್ಯ ಸ್ವರೂಪ, ಕಾವ್ಯವು ದೋಷರಹಿತವಾಗಿರಬೇಕು, ಅದರಲ್ಲಿ ಗುಣವಿರಬೇಕು. ಕುಕವಿಗಳೂ, ಗ್ರಂಥ ಚೋರರೂ ಹಲವರುಂಟು. ತಾರ್ಕಿಕರೂ, ಶಾಬ್ದಿಕರೂ, ಸಾವಿರಾರು ಜನರಿರಬಹುದು. ಕವಿಗಳು ಮಾತ್ರ ವಿರಳ :

ತಾರ್ಕಿಕಾ ಬಹವಃ ಸಂತಿ ಶಾಬ್ದಿಕಾಶ್ಚ ಸಹಸ್ರಶಃ ।
ವಿರಲಾಃ ಕವಯೋ ಲೋಕೇ ಸರಸಾಲಾಪಪೇಶಲಾಃ ॥ (ಸ.೧:ಶ್ಲೋ.೨೨)

"ಸತ್ಕವಿಯ ಕಾವ್ಯವು ಕೀರ್ತಿಯನ್ನು ಹಬ್ಬಿಸುವದು, ಧನವನ್ನು ತರುವದು; ದುಷ್ಕೃತವನ್ನು ನಾಶ ಮಾಡುವದು. ಆಲ್ಹಾದವನ್ನು ಹುಟ್ಟಿಸುವದು. ಕವಿಯ ಕೃತಿಯು ಮಾಡಲಾರದುದು ಏನುಂಟು ? ಸತ್ಕಾವ್ಯವನ್ನು ಕೇಳಲು ಸಹೃದಯರಿಗೆ ಪ್ರಾರ್ಥನೆ ಮಾಡಿಕೊಳ್ಳಲು ಕಾರಣವಿಲ್ಲ. ಜೇನುಹುಳಗಳನ್ನು ಮಕರಂದವನ್ನು ಸೇವಿಸುವದಕ್ಕಾಗಿ ಆಮಂತ್ರಿಸಬಹುದೇ ?"

ನ ಪ್ರಾರ್ಥನೀಯಃ ಸತ್ಕಾವ್ಯ-ಶ್ರುತ್ಯೈ ಸಹೃದಯೋಜನಃ ।
ಸ್ವಾದುಪುಷ್ಪರಸಾಸ್ವಾದೇ ಕಃ ಪ್ರೇರಯತಿ ಷಟ್ಪದಂ॥ (ಸ.೧:ಶ್ಲೋ.೨೪)

CC-0. Jangamwadi Math Collection. Digitized by eGangotri

ಆದುದರಿಂದ,

ತನ್ಮದೀಯಮಿದಂ ಕಾವ್ಯಂ ವಿಬುಧಾಃ ಶ್ರೋತುಮರ್ಹಥ ।
ಮಧುರಾವಿಜಯಂ ನಾಮ ಚರಿತಂ ಕಂಪಭೂಪತೇಃ॥(ಸ.೧:ಶ್ಲೋ.೨೫)

"ನನ್ನ ಈ ಕಾವ್ಯವನ್ನು ಬಲ್ಲವರು ಕೇಳತಕ್ಕದ್ದು. ಈ ಕಾವ್ಯದ ಹೆಸರು ಮಧುರಾ-ವಿಜಯವೆಂಬುದು. ಇದು ಕಂಪಭೂಪತಿಯ ಚರಿತೆಯು" ಎಂದು ಹೇಳಿಕೊಂಡಿ-ರುವಳು.

ಸರ್ಗ ೧: ಶ್ಲೋಕ ೨೬ ರಿಂದ ೪೨ ರ ವರೆಗೆ ಮೊದಲನೆಯ ಹರಿಹರನ ತಮ್ಮನಾದ ಬುಕ್ಕ ಭೂಪಾಲನ ಅಭ್ಯುದಯವನ್ನು ಬಣ್ಣಿಸಲಾಗಿದೆ.

ಆಸೀತ್ ಸಮಸ್ತಸಾಮಂತಮಸ್ತಕನ್ಯಸ್ತಶಾಸನಃ ।
ಬುಕ್ಕರಾಜೇತಿ ಖ್ಯಾತೋ ಹರಿಹರಾನುಜಃ ॥ (ಸ. ೧:ಶ್ಲೋ. ೨೬)

ಹರಿಹರನ ತಮ್ಮನಾದ ಬುಕ್ಕರಾಜನು ರಾಜನಾಗಿದ್ದನು. ಈತನ ಶಾಸನಗಳನ್ನು ಮಾಂಡಲಿಕ ರಾಜರು ತಪ್ಪದೇ ಪಾಲಿಸುತ್ತಿದ್ದರು:

ಯಃ ಶೇಷ ಇವ ನಾಗಾನಾಂ ನಗಾನಾಂ ಹಿಮವಾನಿವ ।
ದೈತ್ಯಾರಿರಿವ ದೇವಾನಾಂ ಪ್ರಥಮಃ ಪೃಥಿವೀಭುಜಾಂ ॥
ತಿಗ್ಮಾಂಶೋರಿವ ತೇಜಸ್ವೀ ಶೀತಾಂಶೋರಪಿ ಶೀತಲಃ ।
ಸಾಗರಾದಪಿ ಗಂಭೀರಃ ಸುಮೇರೋರಪಿ ಯಃ ಸ್ಥಿರಃ ॥
ವಿವೇಕಮೇವ ಸಚಿವಂ ಧನುರೇವ ವರೂಥಿನೀಂ ॥
ಬಾಹುಮೇವ ರಣೋತ್ಸಾಹೇ ಯಃ ಸಹಾಯಮಮನ್ಯತ ॥
(ಸ. ೧:ಶ್ಲೋ. ೨೭–೨೯)

"ನಾಗ (ಸರ್ಪ) ಗಳಲ್ಲಿ ಶೇಷನಂತೆ, ಪರ್ವತಗಳಲ್ಲಿ ಹಿಮವಂತನಂತೆ, ದೇವತೆ-ಗಳ ಮಧ್ಯದಲ್ಲಿ ದೇವೇಂದ್ರನಂತೆ ರಾಜರುಗಳಲ್ಲಿ ಮೊದಲನೆಯವನೂ, ಸೂರ್ಯ-ನಂತೆ ತೇಜಸ್ವಿಯೂ, ಚಂದ್ರನಂತೆ ಶೀತಲನೂ, ಸಾಗರಕ್ಕೂ ಮಿಗಿಲಾದ ಗಾಂಭೀರ್ಯವುಳ್ಳವನೂ, ಸುಮೇರು ಪರ್ವತದಂತೆ ಸ್ಥಿರವಾದವನೂ ಆದ ಈ ಬುಕ್ಕ ಮಹಾರಾಜನು ವಿವೇಕವನ್ನು ಮಂತ್ರಿಯನ್ನಾಗಿ, ಧನುಸ್ಸುವನ್ನು ಸೈನ್ಯ-ವನ್ನಾಗಿ, ರಣಾಂಗಣದಲ್ಲಿ ತನ್ನ ಬಾಹುವನ್ನೇ ಸಹಾಯವನ್ನಾಗಿ ತಿಳಿಯುತ್ತಿದ್ದನು." ಈ ಪದ್ಯಗಳ ಸಂಗಡ ರಘುವಂಶದಲ್ಲಿರುವ ರಘುವಿನ ವರ್ಣನೆಯನ್ನು ಹೋಲಿಸಿ ನೋಡಬಹುದು. ಬುಕ್ಕರಾಜನ ರಾಜಧಾನಿಯು ವಿಜಯನಗರವಾಗಿತ್ತು. ಅದು ವೈಭವದಿಂದಲೂ ಸಂಪತ್ತಿನಿಂದಲೂ ತುಂಬಿತ್ತು. ಗಂಗಾದೇವಿಯು ಮಾಡಿದ ವಿಜಯನಗರದ ವರ್ಣನೆಯನ್ನು ಪರದೇಶದ ಪ್ರವಾಸಿಗಳಾದ ಪೇಜ ಮತ್ತು

CC-0. Jangamwadi Math Collection. Digitized by eGangotri

ನ್ಯೂನಿಜ ಎಂಬವರು ವಿಜಯನಗರಕ್ಕೆ ಬಂದು ಪಟ್ಟಣವನ್ನು ನೋಡಿ, ಅಲ್ಲಿ ಕೆಲಕಾಲ ಇದ್ದು ಮಾಡಿದ ವಿಜಯನಗರದ ವರ್ಣನೆಗೆ ಹೋಲಿಸಿ ನೋಡ-ಬಹುದು. ಅವರು ಬರೆದ ವರ್ಣನೆಯನ್ನು ಸ್ಯೂವೆಲ್ಲರವರು "ಮರೆತುಹೋದ ಸಾಮ್ರಾಜ್ಯ" ವೆಂಬ ತಮ್ಮ ಪುಸ್ತಕದಲ್ಲಿ ಉದ್ಧರಿಸಿರುವರು. ಆದರಲ್ಲಿರುವ ಒಂದೆರಡು ವಿಷಯ :–

"The city of Bidnagar is such that the pupil of the eye has never seen a place like it and the ear of intelligence has never been informed that there existed anything to equal it in the world." *(R. Sewell – A Forgotten Empire p. 88, 1900)*

ಅಬದುರ್ ರಝಾಕನೆಂಬ ಪರ್ಶಿಯಾದೇಶದ ರಾಯಭಾರಿ ವಿಜಯನಗರಕ್ಕೆ ಕ್ರಿ. ಶ. ೧೪೪೦–೪೧ ರಲ್ಲಿ ಬಂದಿದ್ದನು. ಅವನು ನಗರವನ್ನು ನೋಡಿ ತೆಗೆದ ಉದ್ಗಾರ :

"The size of the city I do not write here, because it connot be seen from any one point, but I climbed a hill whence I could see a great part of it.... What I saw from thence seemed to me as large as Rome and very beautiful to the sight."

" ವಿಜಯನಗರವು ಸಮೃದ್ಧವಾದ ನಗರ. ಅಲ್ಲಿ ಮುತ್ತು, ಮಾಣಿಕ, ಹವಳ, ರತ್ನಗಳನ್ನು ಬಯಲಲ್ಲಿ ಇಟ್ಟು ವಣಿಕರು ಮಾರುತ್ತಾರೆ; ಪೇಟೆಯಲ್ಲಿ ದಾರಿಗಳು ಯಾವಾಗಲೂ ಕಿಕ್ಕಿರಿದು ತುಂಬಿರುವವು ಆಹಾರ ಧಾನ್ಯಗಳೂ ವಸ್ತುಗಳೂ ಅತಿ ಸುಲಭ ಬೆಲೆಗೆ ದೊರೆಯುವವು. ಒಂದು ಪಣಕ್ಕೆ ಅಂದರೆ ಈಗಿನ ೮–೯ ನಯೆಪೈಸೆಗಳಿಗೆ ನಗರದಲ್ಲಿ ಮೂರು ಕೋಳಿಗಳೂ, ನಗರದ ಹೊರಗೆ ನಾಲ್ಕು ಕೋಳಿಗಳೂ ಬರುತ್ತಿದ್ದವಂತೆ. ಹಾಲು, ಬೆಣ್ಣೆ, ಎಣ್ಣೆ, ಕಾಳುಕಡಿಗಳೂ ವಿಪುಲವಾಗಿ ಸುಲಭ ಬೆಲೆಗೆ ದೊರೆಯುತ್ತಿದ್ದವು ಎಮ್ಮೆ, ಆಕಳುಗಳು ವಿಪುಲವಾಗಿದ್ದವು. ದಾಳಿಂಬೆ, ದ್ರಾಕ್ಷೆ ಮೊದಲಾದ ಹಣ್ಣುಗಳು ಪೇಟೆಯಲ್ಲಿ ಮಾರಲ್ಪಡುತ್ತಿದ್ದವು. ಒಂದು ಪಣ (ಸು. ೮ ನಯೆಪೈಸೆ) ಕ್ಕೆ ೮ ದಾಳಿಂಬೆ ಹಣ್ಣುಗಳೂ, ಮೂರು ಗೊಂಚಲು ದ್ರಾಕ್ಷೆಗಳೂ ಬರುತ್ತಿದ್ದವು "[2] ಈ ವರ್ಣನೆಗಳನ್ನು ಗಂಗಾದೇವಿ ಮಾಡಿದ ವಿಜಯನಗರದ ವರ್ಣನೆಗೆ ಹೋಲಿಸಿ ನೋಡಬಹುದು.

2. R. Sawell : A Forgotten Empire P. 235

CC-0. Jangamwadi Math Collection. Digitized by eGangotri

ತಸ್ಯಾಸೀದ್ ವಿಜಯಾ ನಾಮ ವಿಜಯಾರ್ಜಿತ ಸಂಪದಃ ।
ರಾಜಧಾನೀ ಬುಧೈಃ ಶ್ಲಾಘ್ಯಾಶಕ್ರಸ್ಯೇವಾಮರಾವತೀ ॥(ಸ.೧:ಶ್ಲೋ ೪೩)

ಈ ಪದ್ಯದಿಂದ ಮುಂದಿನ ಪದ್ಯಗಳನ್ನು ಅಂದರೆ ಪದ್ಯ ೪೪ ರಿಂದ ೬೫ ರ ವರೆಗೆ ಬಂದಿರುವ ವಿಜಯನಗರದ ವರ್ಣನೆಯನ್ನು ನೋಡಿದರೆ, ಗಂಗಾದೇವಿಯ ವರ್ಣನೆ ಕವಿಕಲ್ಪಿತವೂ ಅತಿಶಯೋಕ್ತಿಯುಳ್ಳದೂ ಅಲ್ಲವೆಂದು ಮನವರಿಕೆ ಯಾಗುವದು. ವಿಜಯನಗರದ ಶಾಖಾ ನಗರವು ಈಗಿನ ಹಂಪೆ ಅಥವಾ ಪಂಪಾ ಎಂಬುದಾಗಿತ್ತು. ವಿರೂಪಾಕ್ಷನು ತನ್ನ ಮಿತ್ರನಾದ ಕುಬೇರನ ಅಲಕಾ ಪಟ್ಟಣ ವನ್ನೇ ಮರೆತು ಕುಬೇರನಂತೆಯೇ ಐಶ್ವರ್ಯವಂತನಾದ ಬುಕ್ಕರಾಜನ ಉಪರಾಜ-ಧಾನಿ ಹಂಪೆಯಲ್ಲಿಯೇ ವಾಸಮಾಡುತ್ತಿದ್ದನು.

ಯಚ್ಛಾಖಾನಗರೀಂ ಪಂಪಾಮನೇಕಧನದಾಶ್ರಿತಾಂ ।
ಅಧಿತಿಷ್ಠನ್ ವಿರೂಪಾಕ್ಷೋ ನ ಸ್ಮರತ್ಯಲಕಾಪುರೀಮ್॥(ಸ.೧:ಶ್ಲೋ೬೬)

ಆತನ ರಾಜಧಾನಿ ಅಮರಾಮತಿಗೆ ಸಮಾನವಾದುದು. ಆತನು ಇಂದ್ರನಿಗೆ ಸಮಾನವಾದವನು.

" ಮಿತ್ರಾಭ್ಯುದಯದಾಯಿನ್ಯಾ ಭೂತ್ಯಾ ನೀತ್ಯಾ ಪ್ರಭೂತಯಾ ।
ಮನುಮೇವ ಪುನರ್ಜಾತಂ ತಮಮನ್ಯಂತ ಮಾನವಾ ಃ ॥ "
(ಸ. ೧ : ಶ್ಲೋ. ೬೮)

" ಸರ್ವೋಽಪಿ ಪುರುಷಾರ್ಥೇಷು ಸ ಧರ್ಮಸಮ್ಮತಃ ಸತಾಂ ।
ಬಹ್ವೆಮಂಸ್ತ ಪುಮಾನಾದ್ಯಃ ಸತ್ವಂ ತ್ರಿಷುಗುಣೇಷ್ವಿವ ॥ "
(ಸ. ೧ : ಶ್ಲೋ. ೬೯)

ಆತನು ರಾಜ್ಯವಾಳುವಾಗ ಜನರು ಮನು ಪುನಃ ಹುಟ್ಟಿಬಂದಿರುವನೆಂದು ಆತನನ್ನು ತಿಳಿಯುತ್ತಿದ್ದರು ವಿಂಧ್ಯ ಪರ್ವತವನ್ನು ಹಿಡಿದು ಮಲಯ ಪರ್ವತ, ರೋಹಣಗಿರಿ ಮೊದಲಾದ ಪ್ರದೇಶವು ಆತನ ಅಧಿಪತ್ಯಕ್ಕೆ ಒಳಪಟ್ಟಿತ್ತು. ವೈರಿ ಭೂಪಾಲರು ಆತನ ಶೌರ್ಯವನ್ನು ಕೇಳಿ ಅಂಜಿ ನಡುಗುತ್ತಿದ್ದರು.

ದಾನಂ ಪಾಣೇಃ ಶ್ರುತೇಃ ಸೂಕ್ತಂ ಮೌಲೇಸ್ತ್ರಯಂಬಕ ಪಾದುಕಾಂ ।
ಭೂಷಾಮಮಂಸ್ತ ಯಃ ಶ್ರೀಮಾನ್ ಶ್ರೇಯೋಽವಾಪ್ತಿಸಮುತ್ಸುಕಃ ॥
(ಸ. ೧ : ಶ್ಲೋ. ೭೦)

"ದಾನಮಾಡುವುದು ಕೈಗೆ ಭೂಷಣ, ಉತ್ತಮ ಮಾತುಗಳನ್ನು ಕೇಳುವುದು ಕಿವಿಗೆ ಭೂಷಣ, ತ್ರಯಂಬಕನ ಪಾದುಕೆಗಳು ಸಿರಸ್ಸಿಗೆ ಭೂಷಣ ಎಂದು ಆತನು

CC-0. Jangamwadi Math Collection. Digitized by eGangotri

ತಿಳಿಯುತ್ತಿದ್ದನು. ಶ್ರೇಯಸ್ಸನ್ನು ಲೋಕಿಸಲು ಉತ್ಸುಕನಾಗಿದ್ದನು." ಕುಲಕ್ರಮ ಪ್ರಾಪ್ತವಾದ ಭೂಮಿಯನ್ನು ಕಾಪಾಡುವದರಲ್ಲಿ ಎಚ್ಚರುಳ್ಳವನಾಗಿ ವಿಪುಲವಾದ ಭೋಗಗಳನ್ನು ಅವುಗಳಿಗೆ ಅಂಟಿಕೊಳ್ಳದೇ ಅನುಭವಿಸುತ್ತಿದ್ದನು.

ಪದ್ಮೇಕ್ಷಣನಾದ ವಿಷ್ಣುವಿಗೆ ಪದ್ಮಾ, ಶಂಕರನಿಗೆ ಪಾರ್ವತಿ ಹೇಗೋ ಹಾಗೇ ಈ ಭೂಮಿಯ ಒಡೆಯನಾದ ಬುಕ್ಕರಾಜನಿಗೆ ದೇವಾಯಿ ಎಂಬ ದೇವಿ ಇದ್ದಳು. ಆತನಿಗೆ ಬಹು ಜನರು ಪತ್ನಿಯರಿದ್ದರೂ ಆತನು ಈಕೆಯನ್ನೇ ಹೆಚ್ಚಾಗಿ ಮನ್ನಿಸುತ್ತಿದ್ದನು. ರಾತ್ರಿಗೆ ಒಡೆಯನಾದ ಚಂದ್ರನು ನಕ್ಷತ್ರಗಳೊಳಗೆ ರೋಹಿಣಿಯನ್ನು ಮೆಚ್ಚುವಂತೆ ಈತನು ದೇವಾಯಿಯನ್ನು ಮೆಚ್ಚಿದ್ದನು ಈ ಸರ್ಗದ ಅಂತ್ಯದಲ್ಲಿ ಬುಕ್ಕರಾಜನ ವರ್ಣನೆಯ ಪದ್ಯವು ಹೀಗಿದೆ:-

ಕರ್ಣಾಟಲೋಕನಯನೋತ್ಸವಪೂರ್ಣಚಂದ್ರಃ ।
ಸಾಕಂ ತಯಾ ಹೃದಯಸಮ್ಮತಯಾ ನರೇಂದ್ರಃ ॥
ಕಾಲೋಚಿತಾನ್ಯನುಭವನ್ ಕ್ರಮಶಃ ಸುಖಾನಿ ।
ವೀರಶ್ಚಿರಾಯ ವಿಜಯಾಪುರುಮಧ್ಯವಾತ್ಸೀತ್ ॥ (ಸ.೧ : ಶ್ಲೋ. ೭೫)

ಎರಡನೆಯ ಸರ್ಗದಲ್ಲಿ ರಾಣಿ ದೇವಾಯಿಯ ದೋಹದ ವರ್ಣನೆಯಿದೆ :

ತಾಮಂಬುಗರ್ಭಾಮಿವ ಮೇಘಮಾಲಾಂ ।
ವೇಲಾಮಿವಾಭ್ಯಂತರಲೀನಚಂದ್ರಾಂ ॥
ಅಂತಸ್ಥ ರತ್ನಾಮಿವ ಶುಕ್ತಿರೇಖಾ । •
ಮಾಪನ್ನಸತ್ತ್ವಾಂ ಪ್ರಭುರಭ್ಯನಂದತ್ ॥ (ಸ ೨ : ಶ್ಲೋ. ೧೨)

ಆವನು ಆಕೆಗೆ ಪುಂಸವನ ಕ್ರಿಯೆಯನ್ನು ಪುರೋಹಿತರಿಂದ ಮಾಡಿಸುವನು. ರಾಜಕುಮಾರನ ಜನ್ಮ ಮತ್ತು ನಾಮಕರಣ. ಕಂಪಣನೆಂದು ಹೆಸರಿಡಲು ಕಾರಣ:

ಆಕಂಪಯಿಷ್ಯತ್ಯಯಮೇಕವೀರಃ ।
ಸಂಗ್ರಾಮರಂಗೇ ಸಕಲಾನರಾತೀನ್ ॥
ಇತ್ಯೇವ ನಿಶ್ಚಿತ್ಯಸ ದೀರ್ಘದರ್ಶೀ ।
ನಾಮ್ನಾ ಸುತಂ ಕಂಪನ ಇತ್ಯಕಾರ್ಷೀತ್ ॥ (ಸ. ೨ : ಶ್ಲೋ ೩೪)

ರಣರಂಗದಲ್ಲಿ ವೈರಿಗಳನ್ನೆಲ್ಲ ಭೀತಿಯಿಂದ ನಡುಗಿಸುವನಾದುದರಿಂದ ಬುಕ್ಕಭೂಪಾಲನು ಅವನಿಗೆ ಕಂಪಣನೆಂದು ಹೆಸರಿಟ್ಟನು. ಕಂಪಣನು ಕ್ರಮವಾಗಿ ಬೆಳೆದು ತಾಯಿ-ತಂದೆಗಳಿಗೆ ಅಪಾರ ಆನಂದವನ್ನುಂಟು ಮಾಡಿದನು. ಬುಕ್ಕಭೂಪಾಲನಿಗೆ ಇನ್ನಿಬ್ಬರು ಮಕ್ಕಳಾದರು.

CC-0. Jangamwadi Math Collection. Digitized by eGangotri

ಪಶುಪತಿರಿವ ನೇತ್ರೈಃ ಸೋಮಸೂರ್ಯಾಗ್ನಿರೂಪೈ।
ರ್ನಯ ಇವ ನಿರಪಾಯೈಃ ಪ್ರಭಾವೋತ್ಸಾಹಮಂತ್ರೈಃ।
ಭವ ಇವ ಪುರುಷಾರ್ಥೈರ್ಧರ್ಮಕಾಮಾರ್ಥಸಂಜ್ಞೈ।
ಸ್ತ್ರಿಭಿರಪಿ ನರಪಾಲೈಸ್ತೈಸ್ತನೂಜೈರಭಾಸೀತ್ ॥ (ಸ.೨ : ಶ್ಲೋ. ೪೨)

ಮೂರನೆಯ ಸರ್ಗದಲ್ಲಿ ಶ್ಲೋಕ ೧ ರಿಂದ ೨೦ರ ವರೆಗೆ ಕಂಪಣನು ಚಿಕ್ಕವನಿದ್ದಾಗ ಆತನಿಗೆ ದೊರೆತ ಶಿಕ್ಷಣ, ಆತನ ಶರೀರ ಸೌಂದರ್ಯ ಮತ್ತು ಸದ್ಗುಣ ಇವುಗಳ ವರ್ಣನೆಯಿದೆ. ಚೌಲಕರ್ಮವಾದ ನಂತರ ಕಂಪಣ ರಾಜಕುಮಾರನು ಎಲ್ಲ ವಿದ್ಯೆಗಳಲ್ಲಿ ನಿಪುಣನಾದನು. ಗುರುಗಳಿಂದ ದೊರೆತ ಶಿಕ್ಷಣವು ಆತನಿಗೆ ಅಷ್ಟು ಅಗತ್ಯವಾದುದಲ್ಲ. ಯಾಕೆಂದರೆ, ಆತನು ಸ್ವಾಭಾವಿಕವಾಗಿ ಮೇಧಾವಿಯಾಗಿದ್ದನು. ಸೈನಿಕ ವಿದ್ಯೆಯಲ್ಲಿ ಆತನ ತಂದೆಯೇ ಆತನಿಗೆ ಗುರುವಾಗಿದ್ದನು. ಬಿಲ್ಲು, ಬಾಣ, ಖಡ್ಗ ಮೊದಲಾದ ಆಯುಧಗಳನ್ನು ಉಪಯೋಗಿಸುವದರಲ್ಲಿ ಆತನು ನಿಪುಣ ನಾಗಿದ್ದನು. ಅವನು ಸತ್ಯವಂತನೂ, ಬಲಶಾಲಿಯೂ ಆಗಿದ್ದು ಬಿಲ್ಲು ವಿದ್ಯೆಯಲ್ಲಿ ಆತನಿಗೆ ಸಮಾನರಾದವರು ಯಾರೂ ಇದ್ದಿಲ್ಲ. ಉತ್ತಮ ಅಶ್ವಾರೋಹಿಯೂ, ಖಡ್ಗವಿದ್ಯೆಯಲ್ಲಿ ನಿಷ್ಣಾತನೂ ಆಗಿ, ಯುದ್ಧವಿದ್ಯೆಯಲ್ಲಿ ಬಲ್ಲಿದನಾಗಿದ್ದನು. ಕಂಪಣನ ಶರೀರಸೌಂದರ್ಯವನ್ನು ಕವಿಯು ಪ್ರತಿಭಾಯುಕ್ತವಾಗಿ ಬಣ್ಣಿಸಿದ್ದಾಳೆ. ಸಂಸ್ಕೃತ ಸಾಹಿತ್ಯದಲ್ಲಿ ಹೆಂಗಸರ ಶರೀರ ಸೌಂದರ್ಯದ ವರ್ಣನೆ ವಿಪರೀತವಾಗಿದೆ. ಅದನ್ನು ಗಂಡಸರೇ ಮಾಡಿರುವರು. ಆದರೆ ಹೆಂಗಸರಿಂದ ಮಾಡಲ್ಪಟ್ಟ ಗಂಡಸರ ಶರೀರ ವರ್ಣನೆ ದೊರೆಯುವದು ಅಪರೂಪ. ಗಂಗಾಂಬಿಕೆ ಬಣ್ಣಿಸಿದ ಕಂಪಣನ ಶರೀರ ಸೌಂದರ್ಯದ ಬಣತಿ ಈ ಗ್ರಂಥದ ವೈಶಿಷ್ಟ್ಯ. ಈ ಪದ್ಯಗಳಲ್ಲಿ ಆಕೆ ತನ್ನ ಕಲ್ಪನಾಶಕ್ತಿಯನ್ನು ಪ್ರದರ್ಶಿಸಿದ್ದಾಳೆ. ಉದಾಹರಣೆಗಾಗಿ ಒಂದೆರಡು ಪದ್ಯಗಳನ್ನು ಕೊಡಬಹುದು :

ಸ ರೂಪಗರ್ವೇಣ ನಿರಾಸ್ಥದಂಘ್ರಿಣಾ।
ಸ್ಮರಸ್ಯ ನೂನಂ ಜಯವೈಜಯಂತಿಕಾಂ ॥
ನ ಚೇತ್ ಕಥಂ ತಸ್ಯ ತಲೇsತಿಕೋಮಲೇ।
ಸುಲೇಖಮಾಲಕ್ಷ್ಯತ ಮೀನಲಾಂಛನಂ ॥ (ಸ.೩ : ಶ್ಲೋ.೭)

ಆತನ ಕೋಮಲವಾದ ಅಂಗೈಯಲ್ಲಿ ಮೀನ ಲಾಂಛನವಿತ್ತು. ಅಲ್ಲಿ ಆ ಚಿಹ್ನೆ ಏಕೆ ಬರಬೇಕು ? ರಾಜಪುತ್ರನ ಅಂಗಾಲುಗಳ ಸೌಂದರ್ಯಕ್ಕೆ ಸೋತ ಮನ್ಮಥನು ತನ್ನ ಮೀನಕೇತನವನ್ನು ರಾಜಪುತ್ರನಿಗೆ ಅರ್ಪಿಸಿರಬೇಕು.

ವಿಹಾಯ ಮಧ್ಯಂ ಯದಿ ಲಕ್ಷ್ಮರೇಖಯಾ।
ಬಹಿಃ ಪ್ರಸಾರ್ಯೇತ ಸುಧಾಂಶುಮಂಡಲಂ ॥

CC-0. Jangamwadi Math Collection. Digitized by eGangotri

ದರೋದಿತಸ್ಮಶ್ರುಧೃತಶ್ರೀಯಸ್ತದಾ ।
ತದಾನನೇಂದೋರುಪಮಾನತಾಂ ವ್ರಜೇತ್ ॥ (ಸ ೩ : ಶ್ಲೋ ೧೨)

“ಚಂದ್ರಮಂಡಲದಲ್ಲಿರುವ ಕಪ್ಪು ಕಲೆಯನ್ನು ದಂಡೆಗೆ ಸರಿಸಿದರೆ ಅದು ರಾಜ-ಕುಮಾರನ ಮುಖವನ್ನೂ, ಕೆಳಗೆ ಸರಿದ ಕಪ್ಪುಕಲೆಯು ಆತನ ಸ್ಮಶ್ರುಗಳನ್ನೂ ಹೋಲುವವು.” ರಾಜಕುಮಾರನಿಗೆ ಯೌವನವು ಪ್ರಾಪ್ತವಾಗಲು ಆತನ ತಂದೆ ಮಹಾರಾಜ ಬುಕ್ಕನು ಯೋಗ್ಯ ರಾಜಪುತ್ರಿಯರನ್ನು ತಂದು ಮದುವೆ ಮಾಡಿದನು. ರಾಜಕುಮಾರನಾದ ಕಂಪಣನು ದೇವತೆಗಳು ಅಸೂಯೆಪಡುವಂತಹ ವೈವಾಹಿಕ ಸುಖವನ್ನು ಅನುಭವಿಸುತ್ತಿದ್ದನು. ಒಂದು ದಿವಸ ಮಹಾರಾಜನು ಕಂಪಣನನ್ನು ಕರೆದು ವೈರಿಗಳನ್ನು ಸದೆಬಡಿದು ರಾಜ್ಯವನ್ನು ಭದ್ರಪಡಿಸಿ ಕೀರ್ತಿ ಪಡೆಯ-ಬೇಕೆಂದು ಉಪದೇಶಮಾಡಿದನು. ಬಾಣನು ಶುಕನಾಶ ಮಂತ್ರಿಯ ಮುಖದಿಂದ ಚಂದ್ರಾಪೀಡನಿಗೆ ಉಪದೇಶ ಮಾಡಿಸಿದಂತೆ ಗಂಗಾದೇವಿ ಬುಕ್ಕರಾಜನ ಮುಖ-ದಿಂದ ಕಂಪಣನಿಗೆ ಉಪದೇಶ ಮಾಡಿಸಿರುವಳು. ವಿಜಯನಗರದ ಮೇರೆಗೆ ಹೊಂದಿಕೊಂಡಿರುವ ತೊಂಡೈಮಂಡಲದ ಸಂಭವರಾಯನನ್ನು ಸೋಲಿಸಿ ಅವನ ರಾಜ್ಯವನ್ನು ಕೈವಶಮಾಡಿಕೊಂಡು ಮಧುರೆಯ ಸುಲ್ತಾನನನ್ನು ಸದೆಬಡಿಯ-ಬೇಕೆಂದು ಹೇಳಿದನು. ಇಲ್ಲಿಗೆ ಮೂರನೆಯ ಸರ್ಗ ಮುಗಿಯಿತು.

ನಾಲ್ಕನೆಯ ಸರ್ಗದಲ್ಲಿ ತಂದೆಯ ಆಜ್ಞೆಯ ಪ್ರಕಾರ ವೀರಕಂಪಣನು ಸೈನ್ಯ-ವನ್ನು ಅಣಿಮಾಡಿಕೊಂಡು ದಂಡಯಾತ್ರೆಗಾಗಿ ಹೊರಡುವನು. ಅವನ ದಂಡಯಾತ್ರೆಯ ವರ್ಣನೆಯು ೪೬ ಶ್ಲೋಕಗಳಲ್ಲಿ ಬಂದಿದೆ. ಐದು ದಿವಸ ಪ್ರವಾಸ ಮಾಡಿ ಕರ್ಣಾಟಕ ಪ್ರದೇಶವನ್ನು ದಾಟಿ ಮುಳಬಾಗಿಲ ( ಕಂಟಕಾನನ-ಪುರ) ವನ್ನು ತಲುಪುವನು. ಅಲ್ಲಿ ಕೆಲಕಾಲ ನಿಂತು ವೈರಿಯ ಬಲಾಬಲವನ್ನು ನಿರೀಕ್ಷಿಸುವನು. ಅಲ್ಲಿಂದ ವಿರಿಂಚಿಪುರಕ್ಕೆ ಹೋಗಿ ವೈರಿ ಸಂಭವರಾಯನ ಬಲವನ್ನೂ ತಾಕುವನು. ನಿಕರದ ಯುದ್ಧವಾಗುವದು. ವೈರಿ ಬಲವು ಸೋತು ಪಲಾಯನ ಮಾಡುವದು. ಸಂಭವರಾಯನು ಪದ್ರೈವೀಡು ಕೋಟೆಯಲ್ಲಿ ಆಶ್ರಯ ಪಡೆಯುವನು. ಕಂಪಣನ ಸೈನ್ಯವು ಕೋಟೆಯನ್ನು ಮುತ್ತಿ ಅದನ್ನು ವಶಪಡಿಸಿಕೊಳ್ಳುವದು. ಸಂಭವರಾಯನು ಕೋಟೆಯ ಹೊರಗೆ ಬಂದು ದ್ವಂದ್ವ ಯುದ್ಧಕ್ಕೆ ಸನ್ನದ್ಧನಾಗುವನು. ಕಂಪಣನಿಗೂ ಅವನಿಗೂ ದ್ವಂದ್ವಯುದ್ಧವಾಗಿ ಕಂಪಣನು ಜಯಶಾಲಿಯಾಗುವನು. ಸಂಭವರಾಯನು ಯುದ್ಧದಲ್ಲಿ ಮಡಿಯು-ವನು. ಕಂಪಣನು ದ್ರವಿಡರಾಜ್ಯವನ್ನು ಕೈವಶಮಾಡಿಕೊಂಡು ಕಾಂಚೀಪುರವನ್ನು ತನ್ನ ರಾಜಧಾನಿಯನ್ನಾಗಿ ಮಾಡಿ ಅಲ್ಲಿಂದ ತೊಂಡೈಮಂಡಲವನ್ನು ನ್ಯಾಯದಿಂದ ಆಳಿ ಜನರಿಗೆ ಸುಖಶಾಂತಿಯನ್ನು ಒದಗಿಸಿಕೊಡುವನು.

CC-0. Jangamwadi Math Collection. Digitized by eGangotri

ಇತ್ಥಂ ಸಂಗರಮೂರ್ಧ್ನಿ ಚಂಪನೃಪತಿಂ ನೀತ್ವಾ ಕಥಾಶೇಷತಾಂ ।
ಶ್ರೀಮಾನ್ ಕಂಪನೃಪೇಶ್ವರೋ ಜನಯಿತುಃ ಸಂಪ್ರಾಪ್ತವಾಂಛಾಸನಂ ।
ಕಾಂಚೀನ್ಯಸ್ತ ಜಯಪ್ರಶಸ್ತಿರವಿಥಸ್ಸಂಕೀರ್ಣವರ್ಣಾಶ್ರಮಂ ।
ನೀತ್ವಾ ನಿತ್ಯನಿರತ್ಯಯರ್ದ್ಧೀರಶಿಷತ್ ತುಂಡೀರಭೂಮಂಡಲಂ ॥

(ಸ ೪ : ಶ್ಲೋ. ೮೩)

ಐದನೆಯ ಸರ್ಗದಲ್ಲಿ ಕಂಪಣನ ವಿಲಾಸವೈಭವದ ವರ್ಣನೆಯನ್ನು ಗಂಗಾದೇವಿ ೭೩ ಪದ್ಯಗಳಲ್ಲಿ ಬಲು ಸುಂದರವಾಗಿ ವರ್ಣಿಸಿರುವಳು. ಆರನೆಯ ಸರ್ಗದ ೬೯ ಪದ್ಯಗಳಲ್ಲಿ ರಾಜಕುಮಾರನ ಜಲಕ್ರೀಡೆಯ ವರ್ಣನೆಯಿದೆ. ಏಳನೆಯ ಸರ್ಗದ ೫೦ ಪದ್ಯಗಳಲ್ಲಿ ಗಂಗಾದೇವಿ ಹಗಲುರಾತ್ರಿಗಳ ವರ್ಣನೆಯನ್ನು ಮಾಡಿರುವಳು. ಎಂಟನೆಯ ಸರ್ಗದಲ್ಲಿ ಮುಸಲ್ಮಾನರ ಹಾವಳಿಯಿಂದ ಉಂಟಾದ ತಮಿಳು ನಾಡಿನ ವರ್ಣನೆಯಿದೆ.

ಐದು, ಆರು, ಏಳನೆಯ ಸರ್ಗಗಳಲ್ಲಿ ಕಂಪಣನು ತೊಂಡೈಮಂಡಲವನ್ನು ಆಳುವಾಗ ಯಾವ ತೊಂದರೆಯೂ ಉಂಟಾಗಲಿಲ್ಲವೆಂದೂ, ಮಧುರೆಯ ಮೇಲೆ ದಂಡೆತ್ತಿ ಹೋಗಲು ಅವಕಾಶವೂ, ಅಲ್ಲಿಯ ಜನರ ಸಹಾಯವೂ ಬೇಕಾಗಿತ್ತೆಂದು ತೋರಿಸುವದಕ್ಕಾಗಿಯೂ ಗಂಗಾದೇವಿಯು ಕಂಪಣನನ್ನು ಮರಕತ (ಕಂಚಿ) ನಗರದಲ್ಲಿ ಬೀಡು ಬಿಡಿಸಿರುವಳು. ಅಲ್ಲಿ ಕಂಪಣನು ಕೆಲವು ಕಾಲ ಇದ್ದನು. ಈ ಅವಧಿಯನ್ನು ಕಲ್ಪಿಸಿ ಗಂಗಾದೇವಿಯು ತನ್ನ ಕವಿತ್ವಶಕ್ತಿಯನ್ನು ಪ್ರದರ್ಶಿಸುವದಕ್ಕಾಗಿ ಋತುವರ್ಣನೆ, ಹಗಲು ರಾತ್ರಿಗಳ ವರ್ಣನೆ ಇತ್ಯಾದಿ ವಿಷಯಗಳನ್ನು ತನ್ನ ಕಾವ್ಯದಲ್ಲಿ ತಂದಿರುವಳು. ಇದರಿಂದ ಗಂಗಾದೇವಿ ತಾನು ಕವಿಯಿತ್ರಿಯೆಂದು ಕರೆಸಿಕೊಳ್ಳಲು ಹೆಚ್ಚಾಗಿ ಗಮನಕೊಟ್ಟಂತೆ ಸ್ಪಷ್ಟವಾಗುವದು. ಏಳನೆಯ ಸರ್ಗದ ೩೮ ಶ್ಲೋಕಗಳಲ್ಲಿ ಹಗಲು ರಾತ್ರಿಗಳನ್ನು ಒಳ್ಳೆ ಮಾರ್ಮಿಕವಾಗಿ, ರಸಭರಿತವಾಗಿ ಬಣ್ಣಿಸಿರುವಳು. ಉದಾಹರಣೆಗಾಗಿ ಒಂದೆರಡು ಪದ್ಯಗಳನ್ನು ಇಲ್ಲಿ ಉದ್ಧರಿಸಲಾಗಿದೆ :

ಅಪಸರ್ಪಣಸಂಭ್ರಮಚ್ಯುತಂ ದಿನಲಕ್ಷ್ಮ್ಯಾನ್ಯಸ್ತಪರ್ಣಯಕುಂಡಲಂ
ರವಿಮಂಡಲಮಾಶಶಂಕಿರೇ ವರುಣಾಂತಃಪುರವಾಮಲೋಚನಾಃ ॥

(ಸ. ೭ : ಶ್ಲೋ. ೩)

"ಸೂರ್ಯನು ಸಮುದ್ರದಲ್ಲಿ ಮುಳುಗಿದನು. ಆತನ ಬಿಂಬವನ್ನು ಕಂಡು ವರುಣನ ಅಂತಃಪುರದ ಸುಂದರಿಯರು ದಿನವೆಂಬ ಹೆಂಗಸು ಅವಸರದಿಂದ ಹೋಗುವಾಗ ಆಕೆಯ ಬಂಗಾರದ ಕುಂಡಲವು ಕಳಚಿ ನೀರಿನಲ್ಲಿ ಬಿದ್ದಿರಬಹುದೆಂದು ಶಂಕಿಸಿದರು."

CC-0. Jangamwadi Math Collection. Digitized by eGangotri

ಉಡುಪುಷ್ಪಕರಂಬಿತಂ ತಮಃ ಕಚಭಾರಂ ದಧತೀ ನಿಶೀಥಿನೀ ।
ಅಚಿರಾದಿಯಮಸ್ಯಪಾಲಯತ್ ಕುಮುದಸ್ಮೇರಮುಖೀ ನಿಶಾಕರಂ ॥
(ಸ. ೭ : ಶ್ಲೋಕ. ೩೩)

"ನಿಶಾನಾರಿಯು ಕತ್ತಲೆಯೆಂಬ ತನ್ನ ತಲೆಗೂದಲುಗಳೊಳಗೆ, ನಕ್ಷತ್ರಗಳೆಂಬ ಪುಷ್ಪಗಳನ್ನು ಧರಿಸಿ ಮಂದಸ್ಮಿತೆಯಾಗಿ ಮುಖದಲ್ಲಿ ಕುಮುದಕಳೆಯನ್ನು ಹೊಂದಿ ಪ್ರಿಯಕರನಾದ ಚಂದ್ರನ ದಾರಿ ಕಾಯುತ್ತಿದ್ದಳು."

ವೀರ ಕಂಪಣನು ತನ್ನ ಸಂಧ್ಯಾಮಂಗಲ ಕಾರ್ಯವನ್ನು ಮುಗಿಸಿ ತನ್ನ ರಾಣಿಯಾದ ಗಂಗಾದೇವಿಯನ್ನು ಪ್ರಸಾಧಸೌಧತಲದ ಮೇಲೆ ಕರೆದು :

ಕಮಲಾಕ್ಷಿ ! ಕಟಾಕ್ಷ್ಯತಾಮಯಂ ಸಮಯೋ ವರ್ಣನಯಾ ರಸಾರ್ದ್ರಯಾ ।
ಜನಏಷ ವಚಸ್ತವಾಮೃತಂ ಶ್ರವಸಾ ಪಾಯಯಿತುಂ ಕುತೂಹಲೀ ॥
( ಸ.೭:ಶ್ಲೋ. ೪೦ )

"ಕಮಲಾಕ್ಷಿ, ಈ ಸಮಯವನ್ನು ನಿರೀಕ್ಷಿಸಿ ರಸವತ್ತಾದ ವರ್ಣನೆಯನ್ನು ಮಾಡು. ನಾನು ನಿನ್ನ ವಚನಾಮೃತವನ್ನು ಕಿವಿಯಿಂದ ಕೇಳಲು ಕುತೂಹಲನಾಗಿರುವೆನು." ಎಂದು ಅಂದನು ಪ್ರಿಯಕರನ ಈ ಮಾತುಗಳನ್ನು ಕೇಳಿ ಗಂಗಾದೇವಿಯು ಲಜ್ಜೆಯಿಂದ ತಲೆಬಾಗಿ ಸಾವಕಾಶವಾಗಿ ಆ ಸಮಯವನ್ನು ಬಣ್ಣಿಸುವಳು. ಈ ವರ್ಣನೆಯ ಪದ್ಯಗಳು ೩೨ ರಿಂದ ೫೧ ರ ವರೆಗೆ ಉಪಲಬ್ಧವಿವೆ. ಉಳಿದವು ನಾಶವಾಗಿವೆ. ಈ ಪದ್ಯಗಳಲ್ಲಿ ಗಂಗಾದೇವಿ ತನ್ನ ವರ್ಣನಾಚಾತುರ್ಯವನ್ನು ತೋರಿಸಿರುವಳು :

ಸ್ಪದಮಾನಸುಗಂಧಿಮಾರುತಃ ಪ್ರಸರತ್ಕೋಮಲಚಂದ್ರಿಕೋದಯಃ ।
ನೃಪಚಂದ್ರ ! ನಿರೀಕ್ಷ್ಯತಾಮಯಂ ಸಮಯಃ ಪೋಷಿತಪುಷ್ಪಸಾಯಕಃ ॥
(ಸ ೭ : ಶ್ಲೋ ೪೩)

"ನೃಪಚಂದ್ರಾ, ಈ ಸಮಯವು ಎಷ್ಟು ಆಲ್ಹಾದಕರವಾಗಿರುವದೆಂಬುದನ್ನು ನೋಡು ! ಇದು ಕುಸುಮ ಬಾಣನಿಗೆ ಸಹಾಯಕವಾಗಿದೆ. ಮಂದಮಾರುತನು ಗಂಧವನ್ನು ಹೊತ್ತುಕೊಂಡು ಸಾವಕಾಶ ಸುಳಿಯುತ್ತಿರುವನು. ಕೋಮಲವಾದ ಬೆಳದಿಂಗಳು ಸುತ್ತಲೂ ವ್ಯಾಪಿಸಿರುವದು"

ಪರಿರಭ್ಯ ದೃಢಂ ಚಿರಾಗತಃ ಪ್ರಥಮಾಶಾಸುದೃಶಾ ನಿಶಾಪತಿಃ
ಶ್ಲಥಯತ್ಯಯಮಂಶುಭಿರ್ನಖೈಸ್ತಿಮಿರಶ್ರೇಣಿಮಯೀಂ ಪ್ರವೇಣಿಕಾಂ ॥
(ಸ. ೭ : ಶ್ಲೋ. ೪೫)

CC-0. Jangamwadi Math Collection. Digitized by eGangotri

"ತಡವಾಗಿ ಬಂದ ನಿಶಾನಾಥನು ಪೂರ್ವದಿಗಂಗನೆಯನ್ನು ಗಾಢವಾಗಿ ಆಲಂಗಿಸಿ ಆಕೆಯ ಕತ್ತಲೆಯೆಂಬ ವೇಣಿಯನ್ನೇ ತನ್ನ ಕಿರಣಗಳೆಂಬ ಬೆರಳುಗಳಿಂದ ಬಿಚ್ಚಿ (ಆಕೆಯ ಕೂದಲುಗಳೆಂಬ) ಕತ್ತಲೆಯನ್ನು ಸುತ್ತಲೂ ಪಸರಿಸುವನು."

ಪ್ರಥಮಾಚಲಮೌಲಿಮುಚ್ಚೈರಧಿರುಹ್ಯಾಂಬರ ಪಾತ್ರಸಂಭೃತಂ ।
ಅಯಮಂಶುಮೃಣಾಲಿಕಾಮುಖೈಸ್ತಿಮಿರಂ ಚೂಷಯತೀವ ಚಂದ್ರಮಾಃ ॥
(ಸ.೭ : ಶ್ಲೋ. ೪೪)

"ಪೂರ್ವಾದ್ರಿಶಿಖರವನ್ನೇರಿ ಚಂದ್ರನು ಆಕಾಶವೆಂಬ ಬಟ್ಟಲದಲ್ಲಿರುವ ಕತ್ತಲೆಯನ್ನು ತನ್ನ ಕಿರಣಗಳೆಂಬ ಮೃಣಾಲದೇಂಟಿನಿಂದ ಕುಡಿಯುತ್ತಿರುವಂತೆ ಇದೆ."

ಅಲಿನೀಲಮಯಸ್ತಮೋಮಯಂ ಪ್ರವಿಲಾಪ್ಯೋದಯರಾಗವಹ್ನಿನಾ ।
ಕಲಯತ್ಯಯಮೋಷಧೀಶ್ವರಃ ಕಲಧೌತಂ ಶುಚಿ ಕೌಮುದೀಮಿಷಾತ್ ॥
(ಸ.೭ : ಶ್ಲೋ.೪೫)

"ವನೌಷಧಿಗಳಿಗೆ ಒಡೆಯನಾದ ಚಂದ್ರನೆಂಬ ರಸಸಿದ್ಧನು ಭ್ರಮರಗಳ ವೈಬಣ್ಣನಷ್ಟು ನೀಲವರ್ಣದ ಕತ್ತಲೆಯೆಂಬ ಕಬ್ಬಿಣವನ್ನು ಕುಲುಮೆಯಲ್ಲಿಟ್ಟು ಉದಯ ರಾಗವೆಂಬ ಬೆಂಕಿಯಿಂದ ಕಾಸಿ, ಬೆಳದಿಂಗಳ ರೂಪದಿಂದ ಶುದ್ಧ ಬೆಳ್ಳಿ ಅಥವಾ ಬಂಗಾರ(ಕಲಧೌತ)ವನ್ನಾಗಿ ಮಾಡುತ್ತಿರುವನು."

ಶಶಿಮಂಡಲಶಂಖಪೇಟಿಕಾದವಕೃಷ್ಯ ಕ್ಷಪಯಾ ಸಮರ್ಪಿತಂ
ಕುಮುದಚ್ಛವಿಕೌಮುದೀಮಯಂ ದಧತೀ ಕ್ಷೌಮಮಭಾದ್ದಿಗಂಗನಾ ॥
(ಸ.೭: ಶ್ಲೋ.೪೬)

"ಪೂರ್ವದಿಗಂಗನೆಯು ಪತಿಯಾದ ರಾತ್ರಿಯಿಂದ ಸಮರ್ಪಿತವಾದ ಚಂದ್ರಮಂಡಲವೆಂಬ ಶಂಖದಂತೆ ಶುಭ್ರವಾದ ಪೆಟ್ಟಿಗೆಯಿಂದ ಹೊರತೆಗೆದು ಕುಮುದಗಳ ಕಾಂತಿಯನ್ನು ಹೊಂದಿದ ಬೆಳದಿಂಗಳೆಂಬ (ಬಿಳೀ) ರೇಶಿಮೆಯ ವಸ್ತ್ರವನ್ನು ಧರಿಸುವಳು."

ಹರಿತಂ ಪರಿರಭ್ಯ ವಾಸವೀಂ ಹರಿಣಾಂಕಃ ಕರಪಾತಲೀಲಯಾ ।
ಸ್ಪೃಶತಿ ಪ್ರಣಯಾತ್ ಕುಮುದ್ವತೀಂ ಬತ ! ವಿಶ್ವಾಸಪದಂ ನ ಕಾಮಿನಃ॥
(ಸ.೭ : ಶ್ಲೋ.೪೭)

"ಚಂದ್ರನು ಪೂರ್ವದಿಗಂಗನೆಯನ್ನು ಆಲಿಂಗಿಸಿದಾಗಲೂ ಕಿರಣಗಳೆಂಬ ತನ್ನ ಕೈಗಳಿಂದ ಕುಮುದ್ವತಿ (ರಾತ್ರಿಕಮಲ) ಯನ್ನು ಪ್ರೇಮದಿಂದ ತಟ್ಟುತ್ತಿರುವನು. ಎಲಾ ! ಕಾಮಿಗಳನ್ನು ನಂಬಲಾಗದು."

CC-0. Jangamwadi Math Collection. Digitized by eGangotri

"ಮುಹುರಾಮೃಶದೇವ ಪದ್ಮಿನೀಮಪಿ ರಾಗೀ ಕ್ಷಣದಾಕರಃ ಕರೈಃ ।
ಯದಮುಂ ಪ್ರತಿ ನೇಯಮುನ್ಮುಖೀ ಪ್ರಭವತ್ಯತ್ರ ಪತಿವ್ರತಾಗುಣಃ ॥
(ಸ.೭ : ಶ್ಲೋ. ೪೮)

"ಪ್ರೇಮಪ್ರಭಾವಕ್ಕೊಳಗಾದ ಚಂದ್ರನು ತನ್ನ ಕಿರಣಗಳೆಂಬ ಕೈಗಳಿಂದ ಆಗಾಗ ಪದ್ಮಿನಿಯನ್ನು ಸ್ಪರ್ಶಿಸುವನು. ಆಕೆ ಆತನನ್ನು ಕಣ್ಣೆತ್ತಿ ನೋಡುವುದಿಲ್ಲ. ಗುಣವತಿಯರು ತಮ್ಮ ಪತಿವ್ರತಾಧರ್ಮವನ್ನು ಪಾಲಿಸುವರು."

ಅನುದರ್ಶಮನುಪ್ರವೇಶತಸ್ತಪನಾಚ್ಛಕ್ತಿಮವಾಪ ತಾಪಿನೀಂ ।
ನಿಯತಂ ಹಿಮದೀಧಿತಿರ್ಯತಃ ಕ್ಷಮತೇ ತಾಪಯಿತುಂ ವಿಯೋಗಿನಃ ॥
(ಸ.೭ : ಶ್ಲೋ.೪೯)

"ಚಂದ್ರನು ಅಮಾವಾಸ್ಯೆಯದಿನ ಸೂರ್ಯನನ್ನು ಪ್ರವೇಶಿಸಿ ಆತನ ತಾಪವನ್ನು ತನ್ನಲ್ಲಿ ಅಡಗಿಸಿಟ್ಟುಕೊಂಡಿರುವನು. ಆದುದರಿಂದಲೇ ವಿರಹಿಗಳನ್ನು ಅತಿಶಯವಾಗಿ ತಪಿಸುತ್ತಿರುವನು.

ಅಲಿವಿಭ್ರಮಮಂತರೇತಿ ಯನ್ನ ವಿಧೋಸ್ತನ್ಮೃಗಲಕ್ಷ್ಮ ಕಿಂತ್ವಯಂ ।
ಪುರಜಿದ್ರಥಚಕ್ರತಾರ್ಜಿತೋ ಬಹಲಃ ಕಜ್ಜಲಲೇಪಕಾಲಿಮಾ ॥
(ಸ.೭ : ಶ್ಲೋ. ೫೦)

"ಚಂದ್ರನ ಮಧ್ಯದಲ್ಲಿರುವ ಅತಿ ಕಪ್ಪಾದ ಕಲೆಯು ಕೆಲವರು ತರ್ಕಿಸುವಂತೆ ಮೃಗಚಿಹ್ನವಲ್ಲ. ತ್ರಿಪುರದಹನ ಕಾಲದಲ್ಲಿ ಶಿವನು ಸೂರ್ಯ-ಚಂದ್ರರನ್ನು ತನ್ನ ರಥದ ಗಾಲಿಗಳನ್ನಾಗಿ ಮಾಡಿಕೊಂಡಿದ್ದನು. ಆಗ ರಥದ ಅಚ್ಚಿಗೆ ಹಚ್ಚಿದ ಕಪ್ಪು (ಹೆರಿ) ಚಂದ್ರನ ಮಧ್ಯದಲ್ಲಿ ಈಗಲೂ ಉಳಿದುಕೊಂಡಿದೆ"

ಎಂಟನೆಯ ಸರ್ಗದ ಬಹುಭಾಗವು ನಾಶವಾಗಿದೆ ಕೇಲವೇ ಪದ್ಯಗಳು ಉಪಲಬ್ದವಿವೆ. ಒಂದು ದಿನ ರಾತ್ರಿ ಕಂಪಣನ ಮುಂದೆ ಓರ್ವ ದಿವ್ಯಸ್ತ್ರೀ ಪ್ರತ್ಯಕ್ಷಳಾಗಿ ಮಧುರೆಯಲ್ಲಿ ಯವನರಿಂದಾಗುವ ಅತ್ಯಾಚಾರವನ್ನು ಬಣ್ಣಿಸುವಳು. ಈ ವರ್ಣನೆ, ಉಪಲಬ್ಧವಿದ್ದ ೧೪ ಪದ್ಯಗಳಲ್ಲಿ ಒಳ್ಳೆ ಮರ್ಮವೇಧಕವಾಗಿ ಬರೆಯಲ್ಪಟ್ಟಿದೆ.

"ತಮಿಳ ನಾಡಿನಲ್ಲಿ ಅತಿ ಪವಿತ್ರವಾದ ಸ್ಥಳಗಳಲ್ಲಿ ಪೊನ್ನಾಂಬಲ (ಚಿದಂಬರ) ವೆಂಬುದೊಂದು. ಅದಕ್ಕೆ ಮೊದಲು ವ್ಯಾಘ್ರಪುರಿ ಎಂದು ಹೆಸರು. ಅಲ್ಲಿ ವ್ಯಾಘ್ರಪಾದನೆಂಬ ಭಕ್ತನನ್ನು ಸಂತೋಷಪಡಿಸುವದಕ್ಕಾಗಿ ಶಿವನು ತಾಂಡವನೃತ್ಯವನ್ನು ಮಾಡಿ ನಟರಾಜನಾಗಿ ಅಲ್ಲಿ ನೆಲೆಸಿರುವನು. ಶಿವಭಕ್ತರಾದ ರಾಜರೂ,

CC-0. Jangamwadi Math Collection. Digitized by eGangotri

ವರ್ತಕರೂ, ಚಿನ್ನದ ತಗಡನ್ನು ನಟರಾಜನ ಗುಡಿಗೆ ಹೊದ್ದಿಸಿರುವದರಿಂದ ಆ ಊರಿಗೆ ಪೊನ್ನಾಂಬಲವೆಂದೂ ಹೆಸರಾಯಿತು. ಯವನರ ಭೀತಿಗಾಗಿ ಜನರು ಊರುಬಿಟ್ಟು ಓಡಿಹೋಗಿರುವದರಿಂದ ವ್ಯಾಘ್ರಗಳು ಅಲ್ಲಿಯ ಮನೆಗಳಲ್ಲಿ ಸೇರಿ ಕೊಂಡಿರುವವು ಆದುದರಿಂದ ಆ ಊರಿಗೆ ವ್ಯಾಘ್ರಪುರಿ ಎಂಬ ಹೆಸರು ಸಾರ್ಥಕ-ವಾಯಿತು. ವೈಷ್ಣವರ ಅತಿ ಪವಿತ್ರಸ್ಥಳವಾದ ಶ್ರೀರಂಗವಲ್ಲಿಯ ರಂಗನಾಥ ಸ್ವಾಮಿಯ ಗುಡಿಗೋಪುರಗಳನ್ನು ಯವನರು ಕೆಡವಿದರು. ರಂಗನಾಥ ಸ್ವಾಮಿಯ ಭಕ್ತರು ಸ್ವಾಮಿಯ ಮೂರ್ತಿಯನ್ನು ಬೇರೆಡೆಗೆ ಸಾಗಿಸಿ ಯವನರ ಕೋಪಕ್ಕೆ ತುತ್ತಾದರು. ಇದನ್ನು ಗಂಗಾದೇವಿಯು ಒಳ್ಳೆ ಮಾರ್ಮಿಕವಾಗಿ ಬಣ್ಣಿ-ಸಿರುವಳು. ಶೇಷಶಾಯಿಯಾದ ವಿಷ್ಣುವಿನ ನಿದ್ರಾಭಂಗವಾಗಬಾರದೆಂದು ಆದಿ-ಶೇಷನು ಹೆಡೆಗೊಟ್ಟು ದೇವಾಲಯವನ್ನು ನಾಶಮಾಡುವಾಗ ಬೀಳುವ ಇಟ್ಟಿಗೆ-ಗಳನ್ನು ತನ್ನ ಹೆಡೆಗಳ ಮೇಲೆ ಕೆಡವಿಕೊಂಡು ದೇವನ ನಿದ್ರಾಭಂಗವಾಗದಂತೆ ನೋಡಿಕೊಂಡನು. ದೇವಾಲಯಗಳ ಬಾಗಿಲುಗಳು ಮುಚ್ಚಿದವು. ಕದಗಳಿಗೆ ಹುಳಹತ್ತಲು ಆರಂಭಿಸಿದವು. ಮಾಳಿಗೆಯ ಮೇಲೆ ಕಸ ಬೆಳೆಯಿತು. ಒಂದು ಕಾಲದಲ್ಲಿ ಮೃದಂಗಗಳ ನಾದದಿಂದ ಆಲ್ಹಾದವನ್ನುಂಟುಮಾಡುವ ದೇವಾಲಯಗಳು ಈಗ ನರಿಗಳ ಕೂಗುಗಳಿಂದ ಭೀಕರವಾಗಿವೆ. ಅಣೆಕಟ್ಟುಗಳಿಗೂ, ಒಡ್ಡುಗಳಿಗೂ ಬಗ್ಗದ ಕಾವೇರಿಯು ತನ್ನ ಪ್ರಾಚೀನ ಪ್ರಶಸ್ತವಾದ ಮಾರ್ಗವನ್ನು ತ್ಯಜಿಸಿ ಯವನರ ಅನುಕರಣದಿಂದ ಸ್ವಚ್ಛಂದಚಾರಿಣಿಯಾಗಿ ಹರಿಯುತ್ತಿರುವಳು. ಒಂದು ಕಾಲದಲ್ಲಿ ಹೋಮಧೂಮದಿಂದಲೂ, ವೇದಘೋಷಗಳಿಂದಲೂ ಕಿವಿಗೆ ಇಂಪ-ನ್ನುಂಟುಮಾಡುವ ಬ್ರಾಹ್ಮಣರ ಬೀದಿಗಳು ಈಗ ಮಾಂಸವನ್ನು ಕರಿಯುವ ದುರ್ಗಂಧದಿಂದ, ಕುಡಿದು ಮತ್ತರಾದ ತುರುಕರ ಕರ್ಣಕಠೋರ ಗರ್ಜನೆಯಿಂದ ಅಸಹ್ಯವಾಗಿರುವವು. ಮಧುರೆಯ ಸುತ್ತಲಿರುವ ಆಲ್ಹಾದಕರವಾದ ತೋಟದಲ್ಲಿಯ ತೆಂಗಿನ ಮರಗಳನ್ನು ಕಡಿದು ಅಲ್ಲಿ ಶೂಲಗಳನ್ನು ನೆಟ್ಟಿರುವರು. ಅಲ್ಲಿ ಶೂಲಕ್ಕೇರಿಸಿದ ಜನರ ರುಂಡಗಳು ಜೋತಾಡುತ್ತಿರುವವು. ಇದನ್ನು ನೋಡಿ ನನ್ನ ಹೃದಯವು ಒಡೆದುಹೋಗಿದೆ. ಮೊದಲು ಸುಂದರಿಯರ ಕಾಲುಗಳಲ್ಲಿಯ ಮಣಿನೂಪುರಗಳ ಮಂಜುಲಧ್ವನಿಯಿಂದ ರಮ್ಯವಾದ ರಾಜಮಾರ್ಗಗಳು ಈಗ ಬ್ರಾಹ್ಮಣರನ್ನು ಕಬ್ಬಿಣ ಸರಪಳಿಗಳಿಂದ ಬಿಗಿದು ಎಳೆತರುವಾಗ ಉಂಟಾದ ಝಣತ್ಕಾರದಿಂದ ತುಂಬಿರುವದು. ಮೊದಲಿನ ಉಪವನಗಳಲ್ಲಿ ಈಗ ಗೂಗೆಗಳು ಒದರುತ್ತಿರುವವು. ಅವುಗಳ ಘೂತ್ಕಾರದಿಂದ ನನಗೆ ಅಷ್ಟು ವ್ಯಥೆ ಯಾಗುವದಿಲ್ಲ. ಆದರೆ ತುರುಕರು ಸಾಕಿದ ಗಿಳಿಗಳು ಅವರ ಭಾಷೆಯನ್ನು ಕಲಿತು ಮಾತನಾಡುವದನ್ನು ಕೇಳಿ ನನಗೆ ಬಹಳ ವ್ಯಥೆಯಾಗುವದು. ಸುಂದರಿ-ಯರು ಶ್ರೀಗಂಧವನ್ನು ಪೂಸಿಕೊಂಡು ತಾಮ್ರಪರ್ಣಿ ನದಿಯಲ್ಲಿ ಸ್ನಾನಮಾಡಿ

CC-0. Jangamwadi Math Collection. Digitized by eGangotri

ಅದರ ನೀರನ್ನು ಬೆಳ್ಳಗೆ ಮಾಡುತ್ತಿದ್ದರು. ಆದರೆ ಈಗ ತುರುಕರು ಗೋವುಗಳನ್ನು ವಧಿಸಿ ಅವುಗಳ ರಕ್ತದಿಂದ ಅದೇ ನದಿಯ ನೀರನ್ನು ಕೆಂಪಾಗಿ ಮಾಡಿರುವರು.

ಭೂಮಿಯಲ್ಲಿ ಈಗ ಬೆಳೆ ಬರುವದಿಲ್ಲ. ಇಂದ್ರನು ಮಳೆ ಕರೆಯುವದಿಲ್ಲ. ಯವನರಿಂದ ಜೀವವನ್ನುಳಿಸಿಕೊಂಡ ಹಲಕೆಲವರನ್ನು ಯಮನು ಕೊಂಡೊಯ್ಯು-ವನು. ದ್ರವಿಡರ ಕಣ್ಣೀರಿನಿಂದೊಡಗೂಡಿದ ಮುಖವನ್ನು ನೋಡಿ ನನ್ನ ಹೃದಯವು ತಲ್ಲಣಿಸುವದು. ಅವರ ತುಟಿಗಳು ಒಣಗಿರುವವು. ಅವರ ತಲೆ-ಗೂದಲು ಚಲ್ಲಾಪಿಲ್ಲಿಯಾಗಿರುವದು. ಇಂಥಹ ಅನಾಹುತ ಪರಮಾವಧಿ ಸೀಮೆಯನ್ನು ಮುಟ್ಟಿದೆ. ಅದಕ್ಕೆ ಕಾರಣನಾದ ಕಲಿಗೆ ಅಭಿನಂದನೆಗಳು. ವೇದವಿದ್ಯೆ ಅಸ್ತಂಗತವಾಯಿತು. ಕಲೆಯು ಮುಳುಗಿತು. ಧರ್ಮವು ಮೌನವನ್ನು ಧರಿಸಿತು. ಕುಲೀನತೆಯು ಕಾಣವಂತಾಯಿತು. ಶೀಲವು ನಾಶವಾಯಿತು. "ಈ ಪ್ರಕಾರ ಯವನರ ವಶದಲ್ಲಿರುವ ದ್ರಾವಿಡರ ಪರಿಸ್ಥಿತಿಯನ್ನು ವಿವರಿಸಿ, ಆ ದಿವ್ಯಸ್ತ್ರೀ ತನ್ನ ಮಂತ್ರಶಕ್ತಿಯಿಂದ ಒಂದು ಖಡ್ಗವನ್ನು ಹೊರಗೆ ತೆಗೆದು ವೀರ ಕಂಪಣನಿಗೆ ತೋರಿಸಿದಳು. ಖಡ್ಗವು ಪರೆಯಿಂದ ಹೊರಗೆ ಬಂದ ನಾಗರ ಮರಿಯಂತೆ ಹೊಳೆಯುತ್ತಿತ್ತು. ಪ್ರಲಯಕಾಲದ ಭದ್ರಕಾಳಿ ಧರಿಸಿದ ಕಪ್ಪಾದ ಅಗರುವಿನಂತೆ ಮಿಂಚುತ್ತಿತ್ತು. ದೀಪಗಳ ಪ್ರಕಾಶ ಆ ಖಡ್ಗದ ಮೇಲೆ ಮೂಡಿತ್ತು. ಮಿಂಚಿನಿಂದೊಡಗೂಡಿದ ನವಮೇಘದಂತೆ ಅದು ತೋರುತ್ತಿತ್ತು. ಈ ಖಡ್ಗವನ್ನು ವೀರಕಂಪಣನ ಮುಂದಿಟ್ಟು ಹೇಳಿದಳು "ರಾಜನೇ, ಪೂರ್ವದಲ್ಲಿ ಈ ಖಡ್ಗವನ್ನು ದೇವತೆಗಳ ಅಸ್ತ್ರಗಳನ್ನೆಲ್ಲ ಎರಕ ಹೊಯ್ದು ವಿಶ್ವಕರ್ಮನು ಈ ಖಡ್ಗವನ್ನು ನಿರ್ಮಿಸಿದನು. ಅಸುರರ ಸಂಹಾರಕ್ಕಾಗಿ ಇದನ್ನು ಶಿವನಿಗೆ ಕೊಟ್ಟನು. ಪರಮೇಶ್ವರನು ಪಾಂಡ್ಯರಾಜನ ಉಗ್ರತಪಸ್ಸಿಗೆ ಮೆಚ್ಚಿ ಇದನ್ನು ಆತನಿಗೆ ಕರುಣಿಸಿದನು. ಈ ಖಡ್ಗದ ಸಹಾಯದಿಂದ ಪಾಂಡ್ಯವಂಶದ ರಾಜರು ಬಹುಕಾಲ ಪ್ರತಿಸ್ಪರ್ಧಿಗಳನ್ನು ನಾಶಮಾಡಿ ರಾಜ್ಯವಾಳಿದರು. ಪಾಂಡರು ಈಗ ನಿರ್ವೀರ್ಯ-ರಾಗಿರುವದರಿಂದ ಅಗಸ್ತ್ಯ ಮಹರ್ಷಿಯು ಇದನ್ನು ನಿನ್ನೆಡೆಗೆ ಕಳಿಸಿರುವನು. ನೀನು ಸ್ವಭಾವತಃ ಧೈರ್ಯಶಾಲಿಯೂ, ಎಂತಹ ಗಂಡಾಂತರಗಳನ್ನೂ ಎದುರಿ-ಸುವವನೂ ಆಗಿರುವದರಿಂದ ಯುದ್ಧದಲ್ಲಿ ನಿನಗೆ ಇದು ಬಹಳ ಉಪಯುಕ್ತ-ವಾಗುವದು. ಬೇಗೆ ಅರಣ್ಯದೊಳಗಿನ ವನವನ್ನು ಸುಡುವದು. ಅದಕ್ಕೆ ಗಾಳಿಯ ಸಹಾಯವಾದರೆ ಅದರ ಭೀಕರತೆಯನ್ನು ಅಳೆಯಲು ಯಾರು ಸಮರ್ಥರು? ಈ ಅದ್ಭುತವಾದ ಶಸ್ತ್ರದ ಸಹಾಯವಿದ್ದ ನಿನಗೆ ಸಮರಾಂಗಣದಲ್ಲಿ ವೈರಿಯ ಅಸ್ತ್ರ-ಗಳಾಗಲೀ, ಶಸ್ತ್ರಗಳಾಗಲೀ ನಿನ್ನನ್ನು ನೋಯಿಸಲಾರವು. ಯಮನಿಗೂ ಕೂಡ ನಿನ್ನನ್ನು ಸೋಲಿಸಲು ಸಾಧ್ಯವಿಲ್ಲ. ಆದುದರಿಂದ ಈ ಖಡ್ಗದ ಸಹಾಯದಿಂದ ನೀನು ಯವನರನ್ನು ಎದುರಿಸಿ ಅವರನ್ನು ಸಂಹರಿಸಿ ಗಂಡಾಂತರದಲ್ಲಿರುವ

CC-0. Jangamwadi Math Collection. Digitized by eGangotri

ಧರ್ಮವನ್ನು ರಕ್ಷಿಸು. ವಿಜಯಸ್ತಂಭಗಳನ್ನು ರಾಮೇಶ್ವರ ಮೊದಲಾದ ಸ್ಥಳಗಳಲ್ಲಿ ನೆಟ್ಟು ತುರುಕರನ್ನು ದಕ್ಷಿಣದಿಂದ ಹೊರದೂಡು. ಕಾವೇರಿಯು ಮೊದಲಿನಂತೆ ತನ್ನ ಪಾತ್ರದಲ್ಲಿ ಹರಿಯಲಿ. ನೀನು ಈ ಭಾಗದ ಅಧಿಪತಿಯಾಗಿ ರಾಜ್ಯವಾಳು" ಎಂದು ಆಶೀರ್ವದಿಸಿ ಆ ಖಡ್ಗವನ್ನು ಕೊಟ್ಟಳು. ವೀರ ಕಂಪಣನು ಆ ಖಡ್ಗದ ಸಹಾಯದಿಂದ ಯವನರ ಕೂಡ ಹೋರಾಡಿ ಘನಘೋರವಾದ ಸಂಗ್ರಾಮದಲ್ಲಿ ಜಯಿಸಿ ಯವನಾಧಿಪತಿಯನ್ನು ದ್ವಂದ್ವಯುದ್ಧದಲ್ಲಿ ಕೊಂದು ಜಯಶಾಲಿಯಾದನು.

## ಐತಿಹಾಸಿಕ ಸಂಗತಿಗಳು

ದಕ್ಷಿಣ ಭಾರತದ ಮಧ್ಯಕಾಲದ ಅಂದರೆ ಕ್ರಿ. ಶ. ೧೪ ನೇ ಶತಮಾನದ ಇತಿಹಾಸದ ಮೇಲೆ ಬೆಳಕನ್ನು ಬೀರುವ ಗ್ರಂಥಗಳಲ್ಲಿ 'ಮಧುರಾವಿಜಯ' ಒಂದು. ಇದರ ಸರಣಿ ಇತಿಹಾಸಕ್ಕಿಂತ ಕಾವ್ಯದ ಕಡೆಗೆ ಹೆಚ್ಚಾಗಿ ಒಲಿದಿದೆ ಎಂಬುದು ಸ್ಪಷ್ಟವಿದೆ. ಆದರೂ ಐತಿಹಾಸಿಕ ಸಂಗತಿಗಳು ಇದರಲ್ಲಿ ಅಡಕವಾಗಿವೆ. ಈ ಸಂಗತಿಗಳನ್ನು ಮುಸಲ್ಮಾನ ಇತಿಹಾಸಕಾರರು ತಮ್ಮ ಪಕ್ಷವನ್ನು ಸಮರ್ಥಿಸಿ ವಿವರಿಸಿರುವರು. ಅವರ ದೃಷ್ಟಿಯಲ್ಲಿ ಕಾಫರರಾದ ಹಿಂದುಗಳು ಪಶುತುಲ್ಯರು. ಮುಸಲ್ಮಾನ ಧರ್ಮ ಸ್ವೀಕರಿಸದಿದ್ದರೆ ದೇವರ ಈ ಜಗತ್ತಿನಲ್ಲಿ ಅವರಿಗೆ ಸ್ಥಾನವಿಲ್ಲ. ಅವರನ್ನು ಹಿಂಸಿಸುವದು ಅಥವಾ ಪೂರ್ಣವಾಗಿ ಕೊಂದು ಹಾಕುವುದು ಪಾಪವಲ್ಲ. ದೇವರು ಅದರಿಂದ ಸಂತುಷ್ಟನಾಗುವನು. ಈ ಕಾರ್ಯವನ್ನು ಮಾಡುವವರು ಮುಸಲ್ಮಾನರ ದೃಷ್ಟಿಯಲ್ಲಿ "ಗಾಝಿ" ಧರ್ಮರಕ್ಷಕರು. ಆದುದರಿಂದ "ಮೌಲ್ವಿ" ಗಳ ಪ್ರೋತ್ಸಾಹದಿಂದ ಆ ಕಾಲದ ಮುಸಲ್ಮಾನ ರಾಜರೂ, ಸತ್ತಾಧಿಕಾರಿಗಳೂ ಮುಸಲ್ಮಾನೇತರರನ್ನು ವಿಪರೀತವಾಗಿ ಹಿಂಸಿಸುತ್ತಿದ್ದರು. ಮುಸಲ್ಮಾನ ಇತಿಹಾಸಕಾರರು ಈ ರಾಜರ ಮತ್ತು ಸತ್ತಾಧಿಕಾರಿಗಳ ಕೃತಿಗಳನ್ನು ಮಾನವೀ ದೃಷ್ಟಿಯಿಂದ ಎಂತಹ ಹೀನವಿದ್ದರೂ ಸಮರ್ಥಿಸಿರುವರು. ಪಾಶ್ಚಾತ್ಯ ಪಂಡಿತರು ಈ ಮುಸಲ್ಮಾನ ಇತಿಹಾಸಕಾರರ ಗ್ರಂಥಗಳನ್ನು ಮುಂದಿಟ್ಟುಕೊಂಡು ಭಾರತದ ಇತಿಹಾಸವನ್ನು ರಚಿಸಿರುವರು. ಇವರು ಬರೆದ ಭಾರತದ ಇತಿಹಾಸ ಒಂದು ಪಕ್ಷದವರ ಹೇಳಿಕೆಯಾಗಿದೆ. ಗಂಗಾದೇವಿಯ "ಮಧುರಾ ವಿಜಯವು" ಕಾವ್ಯವಾದರೂ ಐತಿಹಾಸಿಕ ವಿಷಯಗಳನ್ನೊಳಗೊಂಡಿರುವದರಿಂದ ಆ ಕಾಲದ ಜನತೆಯ ಆಶೆ ಆಕಾಂಕ್ಷೆಗಳನ್ನು ತಿಳಿಯಲೂ, ತುಳಿಯಲ್ಪಟ್ಟ ಜನಾಂಗದ ಪರಿಸ್ಥಿತಿಯನ್ನು ಅಳೆಯಲೂ ಸಹಾಯಕವಾಗಿದೆ. ಇದು ವಿಜಯನಗರ ರಾಜ್ಯಾರಂಭ ಕಾಲದ ಸಂಗತಿಗಳನ್ನು ಬೆಳಕಿಗೆ ತಂದಿದೆ. ವಿಜಯನಗರದ ಎರಡನೆಯ ರಾಜ, ಬುಕ್ಕ ಮಹಾರಾಜನು ತನ್ನ ಅಣ್ಣನಾದ ಹರಿಹರನ ನಂತರ ಸಿಂಹಾಸನವನ್ನೇರಿ ಕಿ. ಶ ೧೩೪೩ ರಿಂದ ೧೩೭೧ ರ ವರೆಗೆ ಇಪ್ಪತ್ತೆಂಟು ವರ್ಷ ರಾಜ್ಯಭಾರ ನಡಿಸಿದನು. ಈತನ ಕಾಲದಲ್ಲಿ ವಿಜಯ

CC-0. Jangamwadi Math Collection. Digitized by eGangotri

ನಗರದ ರಾಜ್ಯದ ಮೇರೆ ವಿಸ್ತರಿಸಿತು. ವಿಜಯನಗರದ ರಾಜ್ಯಸ್ಥಾಪಕರ ಧ್ಯೇಯಗಳಲ್ಲಿ ಧರ್ಮರಕ್ಷಣೆಯು ಮುಖ್ಯವಾದುದಾಗಿತ್ತು. ಅವರ ಶಿಲಾಶಾಸನಗಲ್ಲಿ ಈ ಧ್ಯೇಯ ಸ್ಪಷ್ಟವಾಗಿ ಉಲ್ಲಿಖಿತವಾಗಿದೆ.

ಹಿಂದುಗಳ ಅಂತಃಕಲಹದ ಪರಿಣಾಮವಾಗಿ ದಕ್ಷಿಣ ಭಾರತದ ಬಲಾಢ್ಯ ರಾಜ್ಯಗಳು ಒಂದರ ಹಿಂದೊಂದು ಲಯವಾಗಹತ್ತಿದವು. ಮೊದಲು ದೇವಗಿರಿಯ ಯಾದವರ ರಾಜ್ಯಕ್ಕೆ ಗಂಡಾಂತರ ಕ್ರಿ. ಶ. ೧೨೯೩ ರಲ್ಲಿ ಪ್ರಾಪ್ತವಾಗಿ ೧೩೧೮ ರಲ್ಲಿ ಪೂರ್ಣ ಯವನರ ಸ್ವಾಧೀನವಾಯಿತು. ಅದಾದನಂತರ ಓರಂಗಲ್ಲ ಕಾಕತೀಯರ ರಾಜ್ಯ ಕ್ರಿ ಶ. ೧೩೦೯ ರಿಂದ ೧೩೨೩ ರ ವರೆಗೆ ಹೋರಾಡಿ ಲಯವಾಯಿತು ತರುವಾಯ ದ್ವಾರಸಮುದ್ರದ ಹೊಯ್ಸಳ ರಾಜ್ಯ ಕಿ. ಶ. ೧೩೧೦ ರಲ್ಲಿ ಯವನರ ಮೊದಲ ದಾಳಿಯ ಕಾಟುಫಲವನ್ನು ಅನುಭವಿಸಿ ೧೩೨೩ ರಲ್ಲಿ ಮಾಯವಾಯಿತು. ಇವೆಲ್ಲವು ಹಿಂದುಗಳ ಅವಿವೇಕತನದ ಪರಿಣಾಮವಾಗಿ ಮುಸಲ್ಮಾನರ ಮಹತ್ವಾಕಾಂಕ್ಷೆಗೆ ತುತ್ತಾದವು.

ಯಾದವರು, ಹೊಯ್ಸಳರು, ಚೋಳರು, ಪಾಂಡ್ಯರು ಪರಸ್ಪರರನ್ನು ದ್ವೇಷಿಸುತ್ತಿದ್ದರು. ಕಾಕತೀಯ ರಾಜ್ಯವನ್ನು ಮುರಿಯಲೂ ಹೊಯ್ಸಳರ ರಾಜ್ಯದ ಮೇಲೆ ದಂಡೆತ್ತಿ ಹೋಗಲೂ ಮಲಿಕಕಾಫರನಿಗೆ ದೇವಗಿರಿಯ ಯಾದವರು ಬಹಳ ಸಹಾಯ ಮಾಡಿದರು. ಅವನ ಸಹಾಯಕ್ಕಾಗಿ ತಮ್ಮ ಸೈನ್ಯದ ಕೆಲಭಾಗವನ್ನು ಕೊಟ್ಟ ಒಬ್ಬ ಅಧಿಕಾರಿಯನ್ನು ಅವನಿಗೆ ದಾರಿ ತೋರಿಸಲು ನೇಮಿಸಿದರು. ಮಲಿಕಕಾಫರನ ದಕ್ಷಿಣದ ದಂಡಯಾತ್ರೆಗೆ ದೇವಗಿರಿಯ ಯಾದವರೇ ಬಹುಮಟ್ಟಿಗೆ ಕಾರಣರೆಂಬುದನ್ನು ಇತಿಹಾಸ ಸಾರುವದು. ಚಹ್ವಾಣ ವಂಶದ ಪೃಥ್ವೀರಾಜ ಜಯಚಂದರ ಜಗಳವು ಘೋರಿ ಮಹಮ್ಮದನನ್ನು ಭಾರತಕ್ಕೆ ಬರಮಾಡಿಕೊಂಡು ಉತ್ತರ ಹಿಂದುಸ್ತಾನವನ್ನು ಮುಸಲ್ಮಾನರ ಸ್ವಾಧೀನ ಮಾಡಿತು. ಅದರಂತೆ ದಕ್ಷಿಣ ದಕ್ಷಿಣದ ಬಲಾಢ್ಯ ರಾಷ್ಟ್ರಗಳು ತಮ್ಮ ತಮ್ಮೊಳಗಿನ ಜಗಳದಿಂದ ಮಲಿಕ ಕಾಫರನನ್ನು ಬರಮಾಡಿಕೊಂಡು ತಾವೂ ನಾಶವಾಗಿ ದೇಶವನ್ನು ಯವನರ ಸ್ವಾಧೀನ ಮಾಡಿದವು. ಅಲ್ಲಲ್ಲಿ ಯವನ ಅಧಿಕಾರಿಗಳು ಸೈನ್ಯದ ಠಾಣೆಗಳನ್ನು ಏರ್ಪಡಿಸಿ ತಮ್ಮ ಸತ್ತೆಯನ್ನು ಜನರ ಮೇಲೆ ಹೇರಹತ್ತಿದರು. ಯವನ ಸೇನಾಪತಿ ಮಲಿಕಕಾಫರನು ಕನ್ಯಾಕುಮಾರಿ ಭೂಶಿರದ ವರೆಗೆ ದಾಳೀಮಾಡಿ ದಕ್ಷಿಣದ ಪ್ರಖ್ಯಾತ ಪಟ್ಟಣಗಳನ್ನು ಸುಲಿದು ಹೇರಳ ದ್ರವ್ಯವನ್ನು ದಿಲ್ಲಿಗೆ ಸಾಗಿಸಿದನು. ಹಿಂದುಗಳ ದೇವಾಲಯಗಳನ್ನು ನಾಶಮಾಡಿ ಅಲ್ಲಿಯ ರತ್ನಖಚಿತವಾದ ಸುವರ್ಣದ ಮೂರ್ತಿಗಳು ಬೆಲೆಯುಳ್ಳ ವಸ್ತುಗಳು ಮೊದಲಾದವುಗಳನ್ನು ಅಪಹರಿಸಿದನು. ಅವುಗಳ ಲೆಕ್ಕಮಾಡುವದು ಅಸಾಧ್ಯ. "ಮರೆತುಹೋದ ಸಾಮ್ರಾಜ್ಯ" ವೆಂಬ

CC-0. Jangamwadi Math Collection. Digitized by eGangotri

ಪುಸ್ತಕವನ್ನು ಬರೆದ ರೋಬರ್ಟ್ ಸ್ಯುವೆಲ್ಲರು ೩೧೨ ಆನೆಗಳು, ೨೦ ಸಾವಿರ ಕುದುರೆಗಳು, ೯೬ ಮಣ ಬಂಗಾರ, ಇವಲ್ಲದೆ ಮುತ್ತುರತ್ನ ವಜ್ರ ವೈಡೂರ್ಯ ಮೊದಲಾದ ಅಮೌಲ್ಯ ಹರಳುಕಲ್ಲುಗಳಿಂದ ತುಂಬಿದ ಲೆಕ್ಕವಿಲ್ಲದಷ್ಟು ಪೆಟ್ಟಿಗೆಗಳನ್ನು ಮಲಿಕಕಾಫರನು ತನ್ನ ದೊರೆಗೆ ಕಾಣಿಕೆಯಾಗಿ ಕೊಟ್ಟನೆಂದು ಮುಸಲ್ಮಾನ ಇತಿಹಾಸಕಾರನಾದ ಫೆರಿಸ್ತಾನು ಬರೆಯುತ್ತಾನೆಂದು ಹೇಳುತ್ತಾರೆ. (R. Sewell: A Forgotton Empire, Appendix B)

ಜಯಶಾಲಿಗಳಾದ ಮುಸಲ್ಮಾನರು ಜನರ ವಿತ್ತ, ಜೀವಿತ, ಧರ್ಮಸಂಸ್ಕೃತಿ ಸಾಹಿತ್ಯಕಲೆ ಮೊದಲಾದವುಗಳನ್ನೆಲ್ಲ ಹಾಳುಮಾಡಿ ತಮ್ಮ ಧರ್ಮದ ಮತ್ತು ದೇವರ ಹೆಸರಿನಿಂದ ಅಮಾನುಷ ಕೃತಿಗಳನ್ನೆಸಗಿದರು. ಮುಸಲ್ಮಾನರು ಭಾರತ-ವನ್ನು ಪ್ರವೇಶಿಸುವದಕ್ಕಿಂತ ಮೊಲು ಹಿಂದುಗಳು ತಮ್ಮತಮ್ಮೊಳಗೆ ಹೊಡೆದಾಡು-ತ್ತಿದ್ದರು. ವೈರಿಗಳ ರಾಜ್ಯವನ್ನು ಹಾಳುಮಾಡುತ್ತಿದ್ದರು. ಆದರೆ ಎಂತಹ ವಿರೋಧವಿದ್ದರೂ ದೇವಬ್ರಾಹ್ಮಣರ ಜೀವವಿತ್ತಗಳಿಗೆ ಕೈ ಹಚ್ಚುತ್ತಿದ್ದಿಲ್ಲ. ಜಯಶಾಲಿಯಾದ ರಾಜನು ಸೋತ ರಾಜನ ರಾಜ್ಯದಲ್ಲಿರುವ ದೇವಾಲಯ ಮತ್ತು ಬ್ರಾಹ್ಮಣರನ್ನು ತನ್ನ ರಾಜ್ಯದ ದೇವಾಲಯ ಮತ್ತು ಬ್ರಾಹ್ಮಣರನ್ನು ಮನ್ನಿಸುವಂತೆ ಮನ್ನಿಸುತ್ತಿದ್ದನು. ಆದುದರಿಂದ ಎಷ್ಟೋ ಸಾವಿರ ವರ್ಷಗಳಿಂದ ಬೆಳೆಯುತ್ತ ಬಂದ ದೇವಾಲಯುಗಳ ಸಂಪತ್ತಿನ ಕಡೆಗೆ ಮುಸಲ್ಮಾನ ದಾಳಿಗಾರರ ದೃಷ್ಟಿ ಹರಿಯಿತು. ಮೂರ್ತಿಭೇದಕರಾದ ಅವರು ದೇವಾಲಯುಗಳನ್ನು ನೆಲಸಮಮಾಡಿ ಅಲ್ಲಿಯ ಬೆಳ್ಳಿ ಬಂಗಾರ ವಜ್ರ-ವೈಡೂರ್ಯ ಮುತ್ತು-ರತ್ನ ಮೊದಲಾದ ಅಪಾರ ಸಂಪತ್ತನ್ನು ಅಪಹರಿಸಿದರು. ಅರ್ಚಕರನ್ನೂ ವಿದಾಂಸರನ್ನೂ ಕಡಿದುಹಾಕಿದರು. ಪ್ರಾಚೀನ ಕಾಲದಲ್ಲಿ ಭಾರತೀಯರ ಧರ್ಮನೀತಿ, ವಿದ್ಯೆ, ಸಂಸ್ಕೃತಿ ಇವೆಲ್ಲವು ಅವರ ದೇವಾಲಯುಗಳ ಆಶ್ರಯದಲ್ಲಿ ಬೆಳೆಯುತ್ತಿದ್ದವು. ದೇವಾಲಯುಗಳ ನಾಶದಿಂದ ಇವೆಲ್ಲವುಗಳಿಗೆ ಧಕ್ಕೆ ತಗುಲಿತು. ಮದೋನ್ಮತ್ತರಾದ ಮುಸಲ್ಮಾನ ಸೈನಿಕರೂ ಅವರ ನಾಯಕರೂ ತಮ್ಮ ಧರ್ಮದ ಮತ್ತು ದೇವರ ಹೆಸರನ್ನು ಮುಂದೆಮಾಡಿ ಸ್ವೇಚ್ಛಾಚಾರಿಗಳಾಗಿ ಸಾವಿರಾರು ವರ್ಷಗಳಿಂದ ಬೆಳೆದು ಬಂದ ಮಾನವ ಸಂಸ್ಕೃತಿ-ಯನ್ನು ಹದಗೆಡಿಸಿದರು. ಮುಸಲ್ಮಾನ ಇತಿಹಾಸಕಾರರಲ್ಲಿ ಕೆಲವರು ತಮ್ಮ ಧರ್ಮದ ನಾಯಕರ ಈ ಕೃತಿಗಳನ್ನು ಅಲ್ಲಗಳೆದಿರುವರು. ಇಬ್ನಬತೂತನೆಂಬ ಇತಿಹಾಸಕಾರನು ಮಧುರೆಯಲ್ಲಿ ಮುಸಲ್ಮಾನರು ನಡೆಸಿದ ಅತ್ಯಾಚಾರವನ್ನು ಕಣ್ಣಾರೆ ಕಂಡು ಬರೆದ ವಿಷಯ ಗಂಗಾದೇವಿಯು ಹೇಳಿದ ಮಾತುಗಳನ್ನು ಬಲಪಡಿಸುವದು.

ಯುವನರು ಸ್ಥಾಪಿಸಿದ ಸ್ಥಾಪಿಸಿದ ಸೈನಿಕ ಠಾಣ್ಯಗಳಲ್ಲಿ ಮಧುರೆ ಒಂದು. ಅದು ಅತಿ ಪ್ರಾಚೀನ ರಾಜಮನೆತನವಾದ ಪಾಂಡ್ಯರ ರಾಜಧಾಯೂ ದ್ರಾವಿಡ

CC-0. Jangamwadi Math Collection. Digitized by eGangotri

ಸಂಸ್ಕೃತಿಯ ನೆಲೆವಿಡೂ ಅಪಾರ ಸಂಪತ್ತಿನ ಆಗರವೂ ಆಗಿತ್ತು. ಮಾರವರ್ಮ ಕುಲಶೇಖರ ಪಾಂಡ್ಯನ ಮಕ್ಕಳಾದ ಸುಂದರ ಪಾಂಡ್ಯ, ಮತ್ತು ವೀರಪಾಂಡ್ಯ ಇವರಿಬ್ಬರು ಸಿಂಹಾಸನಕ್ಕಾಗಿ ಹೊಡೆದಾಡುತ್ತಿದ್ದರು. ಈ ಗೃಹಕಲಹದಲ್ಲಿ ಪಾಂಡ್ಯ ರಾಜರ ಬಲವು ಕುಗ್ಗಿತು. ಈ ಸಮಯವನ್ನು ಸಾಧಿಸಿ, ಪಾಂಡ್ಯರ ಗೃಹಕಲದಲ್ಲಿ ಪ್ರವೇಶಿಸಿ ಒಂದು ಪಕ್ಷದವರಿಗೆ ಸಹಾಯ ಮಾಡುವ ನೆವವನ್ನು ಮುಂದೆಮಾಡಿ ಮಲಿಕಕಾಫರನು ಯವನ ಸೈನ್ಯದೊಡನೆ ಕ್ರಿ. ಶ. ೧೩೧೧ ಮಾರ್ಚ ತಿಂಗಳ ೧೪ ನೆಯ ತಾರೀಖಿಗೆ ಪಾಂಡ್ಯರಾಜರ ಗಡಿಯನ್ನು ತಲುಪಿದನು. ವೀರಪಾಂಡ್ಯನು ಅವನನ್ನು ಎದುರಿಸಿದನು. ಆದರೆ ಮುಸಲ್ಮಾನ ಸೈನ್ಯವನ್ನು ತಡೆಗಟ್ಟುವದು ಅವನಿಂದ ಆಗಲಿಲ್ಲ. ಕೊನೆಗೆ ವೀರಪಾಂಡ್ಯನು ಯುದ್ಧದಲ್ಲಿ ಸೋತುಹೋದನು. ಮಲಿಕಕಾಫರನು ತನ್ನ ಸೈನ್ಯವನ್ನು ಊರುಗಳನ್ನು ಕೊಳ್ಳೆಹೊಡೆಯಲು ಉಪ-ಯೋಗಿಸಿಕೊಂಡನು. ಕಣ್ಣನೂರ, ಕಂಚಿ ಮೊದಲಾದ ಪ್ರಸಿದ್ಧ ಸ್ಥಳಗಳಲ್ಲಿರುವ ದೇವಾಲಯಗಳನ್ನು ಸುಲಿದು ದೇಶದಲ್ಲಿ ಹಾಹಾಕಾರ ಶಬ್ದವನ್ನುಂಟುಮಾಡಿದನು. ಪಾಂಡ್ಯವಂಶದ ವಿಕ್ರಮ ಪಾಂಡ್ಯನೆಂಬವನು ಜನರನ್ನು ಹುರಿದುಂಬಿಸಿ ಸೈನ್ಯವನ್ನು ಸಂಘಟಿಸಿ, ಮಲಿಕಕಾಫರನನ್ನು ಮೆತ್ತಗೆ ಮಾಡಿದನು ಸುಲಿದ ಅಪಾರವಾದ ಸಂಪತ್ತನ್ನು ಉಳಿಸಿಕೊಳ್ಳಬೇಕೆಂಬ ಉದ್ದೇಶದಿಂದ ಹೇರಳವಾದ ಸಂಪತ್ತನ್ನು ದಿಲ್ಲಿಗೆ ಮಲಿಕಕಾಫರನು ಸಾಗಿಸಿದನು. ಈ ದಾಳಿಯಿಂದ ಪ್ರಾರಂಭವಾದ ಗಂಡಾಂತರವು ಕ್ರಮೇಣ ಬೆಳೆಯುತ್ತ ಹೋಗಿ ಘಿಯಾಸಉದ್ದೀನ ತಘಲಕನ ಕಾಲದಲ್ಲಿ ದಕ್ಷಿಣ ದೇಶವನ್ನು ಮುಸಲ್ಮಾನರು ಗೆದ್ದು ಪುನಃ ಮಧುರೆಯಲ್ಲಿ ತಮ್ಮ ಸತ್ತೆಯನ್ನು ನೆಲೆಗೊಳಿಸಿದರು. ದಿಲ್ಲಿಯ ಪ್ರತಿನಿಧಿಯಾಗಿ ಓರ್ವ ಮುಸಲ್ಮಾನ ಸರದಾರನು ಕ್ರಿ ವ. ೧೩೨೩ ರಿಂದ ಮಧುರೆಯ ಪ್ರದೇಶವನ್ನು ಆಳಲು ಪ್ರಾರಂಭಿಸಿದನು ಸುಮಾರು ಹತ್ತು ವರುಷಗಳ ನಂತರ ಅಂದರೆ ಕ್ರಿ. ವ. ೧೩೩೫ ರಲ್ಲಿ ಜಲಾಲುದ್ದೀನ ಅಸಂಶಹಾ ಎಂಬವನು ಸ್ವತಂತ್ರನಾಗಿ ದಿಲ್ಲಿಯ ಆಧಿಪತ್ಯವನ್ನು ಹರಿದೊಗೆದು ಆಳಹತ್ತಿದನು. ಅವನ ತರುವಾಯ ಬಂದವರು ಸುಮಾರು ಕ್ರಿ. ವ. ೧೩೭೮ ರ ವರೆಗೆ ಅಲ್ಲಿ ರಾಜ್ಯಭಾರ ಮಾಡಿದರು. ಮಧುರೆ ಮುಸಲ್ಮಾನರ ವಶದಲ್ಲಿ ಸುಮಾರು ೪೮ ವರುಷ ಇತ್ತು. ಈ ಅವಧಿಯಲ್ಲಿ ಹಿಂದುಗಳು ಅನುಭವಿಸಿದ ಕಷ್ಟ ವಿಪರೀತವಾದುದು. ಧರ್ಮಾಂಧನಾದ ಘಿಯಾಸಉದ್ದೀನ ಧಮಘನಿ ಎಂಬವನು ಹಿಂದುಗಳನ್ನು ಪಶುಗಳಂತೆ ಹಿಂಸಿಸಿದನು. ಆತನ ಈ ಚಿತ್ರಹಿಂಸೆಯನ್ನು ಮುಸಲ್ಮಾನ ಇತಿಹಾಸಕಾರರಾದ ಇಬ್ನ ಬತೂತಾ, ಫರಿಸ್ತಾ, ಬಾರ್ನಿ ಮೊದಲಾದವರು ಮನೋವೇದಕವಾಗಿ ವರ್ಣಿಸಿದ್ದಾರೆ. ಗಂಗಾದೇವಿಯು 'ಮಧುರಾ ವಿಜಯ' ದಲ್ಲಿ ಹಿಂದುಗಳಿಗಾದ ಕಷ್ಟವನ್ನು ಪರಿಣಾಮಕಾರವಾಗಿ ಚಿತ್ರಿಸಿದ್ದಾಳೆ. ಆಕೆಯು ಹಿಂದೂ ಜನರ ಕಷ್ಟಗಳನ್ನು ಸ್ವತಃ ಕಂಡು, ವರ್ಣಿಸಿದ ರೀತಿ ಇಬ್ನಬತೂತನ ಹೇಳಿಕೆಯಿಂದ ಮತ್ತಷ್ಟು ದೃಢವಾಗುವದು.

CC-0. Jangamwadi Math Collection. Digitized by eGangotri

ಘಿಯಾಸುದ್ದೀನ ದಮಘಸಿ ಕ್ರಿ. ಶ. ೧೩೪೧ ರಿಂದ ೧೩೪೩ ರ ವರೆಗೆ ಮಧುರೆಯ ಸುಲ್ತಾನನಾಗಿದ್ದನು. ಅವನು ಹಿಂದುಗಳನ್ನು ಅವರ ಹೆಂಡಿರು-ಮಕ್ಕಳು ಸಹಿತ ಸೆರೆಹಿಡಿದು ಒಂದು ದೊಡ್ಡಿಯಲ್ಲಿ, ಕಟುಕರು ಕಡಿಯಲು ತಂದ ದನಕರುಗಳನ್ನು ಹಾಕುವಂತೆ ಹಾಕಿ ಸುತ್ತಲೂ ಬೇಲಿ ಹೆಚ್ಚಿ, ಸೈನಿಕರ ಕಾವಲವಿಟ್ಟು ಅವರೊಳಗಿಂದ ಒಬ್ಬೊಬ್ಬರನ್ನು ಹೊರಗೆ ಒಯ್ದು ಶೂಲಕ್ಕೇರಿಸುತ್ತಿದ್ದನು. ಅವರ ಹೆಂಡಿರು-ಮಕ್ಕಳುಗಳನ್ನು ಕಡಿಸುತ್ತಿದ್ದನು. ತಾಯಿಯ ಎದೆಯ ಮೇಲೆ ಕೂಸನ್ನು ಇಟ್ಟು, ಅದನ್ನು ಅಲ್ಲಿಯೇ ಕಡಿದು, ನಂತರ ತಾಯಿಯನ್ನು ಕಡಿಸುತ್ತಿದ್ದನು. ಹೆಂಗಸರ ಶಿರಚ್ಛೇದ ಮಾಡಿಸಿ ಅವರ ತಲೆಗೂದಲುಗಳಿಂದ ಅವರ ಶಿರವು ಶೂಲಕ್ಕೆ ಜೋತಾಡುವಂತೆ ಕಟ್ಟುತ್ತಿದ್ದರು. ಹಿಂದುಗಳ ಬೇಟೆಯಾಡುತ್ತಿದ್ದರು. ಒಂದು ದಿವಸ ಸುಲ್ತಾನನ ಹತ್ತಿರ ಕಾಝಿ ಮತ್ತು ಅತಿಥಿಯಾದ ಇಬ್ನಬತೂತ ಕುಳಿತಿದ್ದರು. ಆಗ ಸುಲ್ತಾನನ ಸೈನಿಕರು ಒಬ್ಬ ಹಿಂದುವನ್ನೂ ಆತನ ಹೆಂಡತಿಯನ್ನೂ ಏಳು ವರ್ಷದ ಅವರ ಮಗುವನ್ನೂ ಹಿಡಿದು ತಂದರು. ಸುಲ್ತಾನನು ಸೈನಿಕರಿಗೆ ಆಜ್ಞೆ ಮಾಡಿದನು. ಕೂಡಲೇ ಅವರು ಆ ಮೂವರ ಶಿರಚ್ಛೇದ ಮಾಡಿದರು. ಅತಿಥಿಗೆ ಅದನ್ನು ನೋಡುವದಾಗಲಿಲ್ಲ ಮತ್ತೊಂದು ಸಮಯದಲ್ಲಿ ಘಿಯಾಸುದ್ದೀನನ ಮುಂದೆ ಒಬ್ಬ ಹಿಂದೂವನ್ನು ಹಿಡಿತಂದು ನಿಲ್ಲಿಸಿದರು. ಸುಲ್ತಾನನು ಸನ್ನೆ ಮಾಡಿದನು. ಸೈನಿಕರು ಖಡ್ಗವನ್ನು ಹಿಡಿದರು, ಅತಿಥಿಯಾದ ಇಬ್ನತೂತನು ಎದ್ದು ಹೊರಟನು. ಸುಲ್ತಾನನು ಎಲ್ಲಿಗೆ ಹೋಗುವಿ ಎಂದು ಕೇಳಿದನು. ಅತಿಥಿಯು ಅಂಜಿ ಮಧ್ಯಾಹ್ನದ ಪ್ರಾರ್ಥನೆಗಾಗಿ ಹೋಗುವೆನೆಂದು ಹೇಳಿದನು. ಸುಲ್ತಾನನು ಆತನ ಇಂಗಿತವನ್ನು ತಿಳಿದುಕೊಂಡು ಕಾಫರನ ಕೈಕಾಲುಗಳನ್ನು ಕಡಿಯಲು ಆಜ್ಞೆಮಾಡಿದನು. ಬಡಪ್ರಾಣಿ ರಕ್ತದಲ್ಲಿ ಹೊರಳಾಡಹತ್ತಿತು. ಸುಲ್ತಾನನ ಕೃತಿ ಇಬ್ನಬತೂತನ ಮನಸ್ಸಿಗೆ ಬರಲಿಲ್ಲ. ಇಂತಹ ಹೀನಕೃತಿಯನ್ನು ಯಾವ ರಾಜನೂ ಮಾಡಲಾರನೆಂದು ಇಬ್ನಬತೂತನು ಬರೆದಿರುವನು.

ಹಿಂದುಗಳ ದೇವಾಲಯಗಳ ಮತ್ತು ಅಲ್ಲಿಯ ಮೂರ್ತಿಗಳ ಸ್ಥಿತಿಯಾದರೂ ಬಹಳ ಭಯಾನಕವಾದುದಾಗಿತ್ತು. ತರಿಖ-ಇ ಅಲೈ ಗ್ರಂಥಕರ್ತೃವಾದ ಅಮೀರ ಖುಸ್ರು ಎಂಬವನು ಮಲಿಕಕಾಫರನು ನಾಶಮಾಡಿದ ಒಂದು ಶಿವದೇವಾಲಯದ ವರ್ಣನೆ ಕೊಟ್ಟಿರುವರು. "ಬ್ರಹ್ಮಸ್ತ್ಪುರಿಯಲ್ಲಿ ಒಂದು ಅತಿದೊಡ್ಡ ದೇವಾಲಯ-ವಿತ್ತು. ದೇವಾಲಯದ ಸುತ್ತಲೂ ಗಜಶಾಲೆಗಳೂ, ಅಶ್ವಶಾಲೆಗಳೂ ಇದ್ದವು. ದೇವಾಲಯದಲ್ಲಿ ಚಿನ್ನದ ಮೂರ್ತಿಯಿತ್ತು. ದೇವಾಲಯದ ಛತ್ತು ಮುತ್ತು ರತ್ನ ಖಚಿತವಾಗಿತ್ತು. ಬಂಗಾರದಿಂದ ಮಾಡಿದ ಪರಿವಾರದೇವತೆಗಳೂ ಕೂಡ ಬೆಲೆಯುಳ್ಳ ಆಭರಣಗಳಿಂದಲೂ ವಜ್ರವೈಡೂರ್ಯರತ್ನ ಖಚಿತವಾಗಿದ್ದವು. ಈ ಗುಡಿಯನ್ನು ಸುಲಿಯಲು ಮಲಿಕಕಾಫರನು ಸದ್ದಿಲ್ಲದೆ ರಾತ್ರಿ ದಾರಿನಡೆದು

CC-0. Jangamwadi Math Collection. Digitized by eGangotri

ಬೆಳಗಾಗುವದರೊಳಗೆ ಗುಡಿಯನ್ನು ಮುತ್ತಿ ಇನ್ನೂರೈವತ್ತು ಆನೆಗಳನ್ನೂ, ಅನೇಕ ಕುದುರೆಗಳನ್ನೂ ಕೈವಶಮಾಡಿಕೊಂಡು ದೇವಾಲಯವನ್ನು ನೆಲಸಮ ಮಾಡಲು ನಿಶ್ಚೈಸಿದನು. ದೇವಾಲಯ ರಕ್ಷಕರ ಮತ್ತು ಅರ್ಚಕರ ದಿಂಡಗಳು ಮುಂಡದಿಂದ ಬೇರೆಯಾಗಿ ನೆಲಕ್ಕೆ ಬಿದ್ದವು ಅಧಿದೇವತೆಯಾದ ಲಿಂಗಮಹಾದೇವನನ್ನು ಕುದುರೆಯ ಕಾಲುಗಳಿಂದ ತುಳಿಸಿ ಕಿತ್ತೊಗೆದರು. ಗುಡಿಯನ್ನು ತಳಸೋಸಿ, ಹೆಡ್ಡಿ, ನಾಶ-ಮಾಡಿದರು." ಪ್ರಸಿದ್ಧ ಇತಿಹಾಸಕಾರರಾದ ಡಾ. ಎಸ್. ಕೆ. ಕೃಷ್ಣಸ್ವಾಮಿ ಅಯ್ಯಂಗಾರ ಅವರು ಅಮೀರ ಖುಸ್ರು ಹೇಳುವ ಬ್ರಹ್ಮಸ್ತಪುರಿಯು ಚಿದಂಬರವೆಂದು ನಿರ್ಣಯಿಸಿರುವರು. ಶ್ರೀರಂಗದ ರಂಗನಾಥಸ್ವಾಮಿಯ ದೇವಾಲಯದ ಸ್ಥಿತಿ-ಯಾದರೂ ಇಷ್ಟೇ ಶೋಚನೀಯವಾಗಿದೆ. ಮುಸಲ್ಮಾನರು ಶ್ರೀರಂಗವನ್ನು ಮುತ್ತಿ ದೇವಾಲಯಗಳನ್ನು ನೆಲಸಮಮಾಡಿ ಹಿಂದುಗಳನ್ನು ಸಂಹರಿಸಿ, ವಿಜಯಿಗಳಾದೆ-ವೆಂದು ಹಿಗ್ಗಿದರು. ಅಲ್ಲಿ ಅವರು ಮಾಡಿದ ಹಾಹಾಕಾರ ವರ್ಣಿಸಲಸಾಧ್ಯ. ಎಷ್ಟೋ ವಿದ್ವಾಂಸರು ತಾವು ಬರೆದ ಗ್ರಂಥಗಳನ್ನು ಕಾವೇರಿಯ ಉಸುಕಿನಲ್ಲಿ ಹುಗಿದು ಓಡಿಹೋದರು. ವೇದಾಂತದೇಶಿಕರು ಹೆಣಗಳ ರಾಶಿಯಲ್ಲಿ ಅವಿತು-ಕೊಂಡರು. ರಂಗನಾಥಸ್ವಾಮಿಯ ವಿಗ್ರಹವು ಯವನರ ಕೈಕೆ ಸಿಗಬಾರದೆಂದು ವೇದಾಂತದೇಶಿಕರು ಪಿಳ್ಳೈಲೋಕಾಚಾರ್ಯ ಮೊದಲಾದ ವೈಷ್ಣವ ಭಕ್ತರು ಅದನ್ನು ಅಲ್ಲಿಂದ ಸಾಗಿಸಿದರು. ದಾರಿಯಲ್ಲಿ ದೇವರ ಬೆಲೆಯುಳ್ಳ ರತ್ನದ ಒಡವೆಗಳನ್ನು ಕಳ್ಳರು ಅಪಹರಿಸಿದರು. ಪಿಳ್ಳೈಲೋಕಾಚಾರ್ಯರು ಈ ಅನಾಹುತವನ್ನು ಕಂಡು ಪ್ರಾಣಬಿಟ್ಟರು. ದೇವನ ವಿಗ್ರಹವನ್ನು ಮೊದಲು ಸುಂದರಾಚಲಂ ಅಂದರೆ ಅಳಿಗರ್‌ಮಲೈಗೂ ಆಮೇಲೆ ಕೇರಳಕ್ಕೂ ನಂತರ ಮೈಸೂರ ದೇಶದ ತಿರುನಾರಾ-ಯಣಪುರ ಅಥವಾ ಮೇಲ್ಕೋಟೆಗೂ ಕಡೆಗೆ ತಿರುಪತಿಗೂ ಒಯ್ಯಲಾಯಿತೆಂದು ವೈಷ್ಣವರ ಸಾಹಿತ್ಯದಿಂದ ತಿಳಿಯುವದು.' ಶ್ರೀರಂಗದ ರಕ್ಷಣೆಗಾಗಿ ರಂಗನಾಥ ಸ್ವಾಮಿಯನ್ನುಳಿಸುವದಕ್ಕಾಗಿ ಬಹುಜನ ಭಕ್ತರು ಪ್ರಾಣಕ್ಕೀಡಾದರು. ಅದನ್ನೇ ಗಂಗಾದೇವಿ ಮಾರ್ಮಿಕವಾಗಿ "ಶೇಷನು ಯೋಗನಿದ್ರೆಯಲ್ಲಿರುವ ರಂಗನಾಥನಿಗೆ ನಿದ್ರಾಭಂಗವಾಗಬಾರದೆಂದು ತನ್ನ ಹೆಡೆಯನ್ನು ಕೊಟ್ಟು ಸ್ವಾಮಿಯ ಮೇಲೆ ಬೀಳಬಹುದಾದ ಇಟ್ಟಿಗೆಗಳನ್ನು ತನ್ನ ಮೇಲೆ ಕೆಡವಿಕೊಂಡು ದೇವರ ಮೇಲೆ ಬಂದ ಗಂಡಾಂತರವನ್ನು ದೂರ ಮಾಡಿದನು" ಎಂದು ಹೇಳಿದುದು ಐತಿಹಾಸಿಕ ದೃಷ್ಟಿಯಿಂದ ಅಕ್ಷರಶಃ ನಿಜವಿದೆ.

ತಮಿಳು ನಾಡಿನ ಅನೇಕ ಶಿಲಾಶಾಸನಗಳಲ್ಲಿ ಮುಸಲ್ಮಾನರ ಅತ್ಯಾಚಾರದ ವರ್ಣನೆ ವಿಪುಲವಾಗಿ ಬಂದಿದೆ. ದಕ್ಷಿಣದ ಪ್ರಸಿದ್ಧ ಮತ್ತು ಹಿಂದುಗಳಿಗೆ ಪವಿತ್ರ-ವಾದ ಬಹುತರ ಎಲ್ಲ ದೇವಾಲಯಗಳು ನಾಶ ಮಾಡಲ್ಪಟ್ಟವು ಇಲ್ಲವೇ ಭ್ರಷ್ಟ ಮಾಡಲ್ಪಟ್ಟವು. ವಿಜಯನಗರ ರಾಜ್ಯವು ಬೆಳೆದು ಬಲಶಾಲಿಯಾದಾಗ ಇಂತಹ

CC-0. Jangamwadi Math Collection. Digitized by eGangotri

ದೇವಾಲಯುಗಳ ಜೀರ್ಣೋದ್ಧಾರವೂ, ಶುದ್ಧೀಕರಣವೂ ರೂಢಿಯಲ್ಲಿ ಬಂದವು. ಈ ಶುದ್ಧೀಕರಣವನ್ನು ಶಾಸ್ತ್ರಗಳ ಆಧಾರದಿಂದ ಸಿದ್ಧಮಾಡಲು ನಿಗಮಜ್ಞಾನದೇವನೆಂಬ ಪಂಡಿತನು 'ಜೀರ್ಣೋದ್ಧಾರದಶಕ' ವೆಂಬ ಗ್ರಂಥವನ್ನು ಬರೆದಿರುವನು. ಮೇಲಿನ ಸಂಗತಿಗಳಿಂದ ಗಂಗಾದೇವಿಯು ಮಾಡಿದ ಮುಸಲ್ಮಾನರ ಹಾವಳಿಯ ವರ್ಣನೆಯು ಅತಿಶಯೋಕ್ತಿಯಲ್ಲವೆಂದೂ ಮಹಮ್ಮದೀಯರ ಹೀನಕೃತ್ಯಗಳಿಂದ, ಅತ್ಯಾಚಾರಗಳಿಂದ, ಮದಾಂಧತೆಯಿಂದ ದಕ್ಷಿಣ ಭಾರತವು ಜರ್ಝರಿತವಾಗಿತ್ತೆಂಬುದೂ ಸ್ಪಷ್ಟವಾಗುವದು. ಹಿಂದುಗಳಿಗೆ ಇಂತಹ ಕಷ್ಟಮಯವಾದ ಕಾಲದಲ್ಲಿ ವಿಜಯನಗರದ ರಾಜ್ಯವು ಸ್ಥಾಪಿತವಾಯಿತು. ಹಿಂದುಗಳ ಕಷ್ಟವನ್ನು ನಿವಾರಿಸುವದೂ, ದೇಶದಲ್ಲಿ ಹಬ್ಬಿದ ಅರಾಜಕತೆಯನ್ನು ನೀಗುವದೂ, ವಿಜಯನಗರದ ರಾಜ್ಯಸ್ಥಾಪಕರ ಧ್ಯೇಯಗಳಲ್ಲಿ ಮುಖ್ಯವಾಗಿದ್ದವು. ನೂತನರಾಜ್ಯವಾದ ವಿಜಯನಗರದ ಮತ್ತು ಹಿಂದುಗಳ ಸುರಕ್ಷತೆಯು ಮಧುರೆಯಲ್ಲಿ ನೆಲಸಿದ ಮಹಮ್ಮದೀಯರ ಸತ್ತೆಯನ್ನು ಸದೆಬಡಿಯದೆ ಸಾಧ್ಯವಿಲ್ಲವೆಂದೂ ಬುಕ್ಕ ಮಹಾರಾಜನು ವೀರ ಕಂಪಣನನ್ನು ಅದಕ್ಕಾಗಿ ನೇಮಿಸಿದನು. ಕಂಪಣನಿಗೆ ಈ ಯುದ್ಧದಲ್ಲಿ ಸಂಗಡಿಗರಾಗಿ ಹೋರಾಡಿದವರಲ್ಲಿ ದಂಡನಾಯಕ ಗೋಪಣ, ಸಾಳುವ ಮಂಗು, ಸೋಮಪ್ಪ ದಂಣಾಯಕ, ಅವನ ಮಗ ಗಂಡರಗೂಳಿ ಮಾರಯ್ಯನಾಯಕ ಮೊದಲಾದವರು ಪ್ರಮುಖರು.

## ಗೋಪಣಾರ್ಯ

ಇವನು ವೀರಕಂಪಣನ ದಂಡನಾಯಕನು. ಜಾತಿಯಿಂದ ಈತನು ಬ್ರಾಹ್ಮಣನು. ಶ್ರೀರಂಗದ ರಕ್ಷಣೆಗಾಗಿ ಈತನನ್ನು ನೇಮಿಸಲಾಗಿತ್ತು. ಈತನು ಕಂಪಣನಿಗೆ ಮಧುರೆಯ ಯುದ್ಧದಲ್ಲಿ ಯಾವ ರೀತಿಯಿಂದ ಸಹಾಯ ಮಾಡಿದನೆಂಬುದು ಹೆಚ್ಚಾಗಿ ಗೊತ್ತಾಗುವದಿಲ್ಲ. ಆದರೂ ಮುಸಲ್ಮಾನರಿಂದ ನಾಶ ಮಾಡಲ್ಪಟ್ಟ ದೇವಾಲಯುಗಳ ಜೀರ್ಣೋದ್ಧಾರಕ್ಕಾಗಿ ಈತನನನ್ನು ನೇಮಿಸಿದುದು ತಿಳಿಯುವದು. ಶ್ರೀರಂಗದ ರಂಗನಾಥ ಸ್ವಾಮಿಯ ಮತ್ತು ಲಕ್ಷ್ಮೀಭೂದೇವಿಯರ ವಿಗ್ರಹಗಳನ್ನು ತಿರುಪತಿಯಿಂದ ತಂದು ಜಿಂಜಿಯಲ್ಲಿ ಗವಿಯ ಗುಡಿಯಲ್ಲಿ ಇಟ್ಟು ಪೂಜೆ ಮಾಡುತ್ತಿದ್ದನು. ಆಮೇಲೆ ಅವುಗಳನ್ನು ಶ್ರೀರಂಗಕ್ಕೆ ಒಯ್ದು ದೇವಾಲಯದಲ್ಲಿ ಸ್ಥಾಪಿಸಿದನು. ಮಧುರೆಯ ಸುಲ್ತಾನಶಾಹಿಯನ್ನು ನಾಶಮಾಡಿದ ನಂತರ ಕಂಪಣನು ಸೇನಾಪತಿಗಳಲ್ಲೊಬ್ಬನಾದ ಗೋಪಣಾರ್ಯನು ಶ್ರೀರಂಗದ ದೇವಾಲಯುಗಳ ಜೀರ್ಣೋದ್ಧಾರ ಮಾಡಿಸಿ ರಂಗನಾಥಸ್ವಾಮಿಯನ್ನು ಪುನಃ ಪ್ರತಿಷ್ಠಿಸಿ ದೇವಾಲಯಕ್ಕೆ ದತ್ತಿಯನ್ನು ಬಿಟ್ಟನು. ವೇದಾಂತ ದೇಶಿಕರು ಗೋಪಣಾರ್ಯನನ್ನು ಕುರಿತು ಪದ್ಯಗಳನ್ನು ಕಟ್ಟಿ ಅವನನ್ನು ಶ್ರೀರಂಗದ ಗುಡಿಯಲ್ಲಿ ಕೆತ್ತಿಸಿದರು. ಈ ವಿಷಯವನ್ನು ವಿವರಿಸುವ ಶಿಲಾಶಾಸನಗಳೂ, ಗ್ರಂಥಗಳೂ ದೊರೆಯುವವು.

CC-0. Jangamwadi Math Collection. Digitized by eGangotri

## ಸಾಳುವ ಮಂಗು

ಈತನು ಕಂಪಣನು ಮಧುರೆಯ ದಂಡಯಾತ್ರೆಯನ್ನು ಕೈಕೊಳ್ಳುವದಕ್ಕಿಂತ ಮೊದಲು ಸಾವಣ್ಣನ ಸೇನಾಧಿಕಾರಿಯಾಗಿದ್ದನು. ತೊಂಡೈಮಂಡಲದ ಸಂಭವ-ರಾಯನನ್ನು ಸೋಲಿಸಿ ವಿಜಯನಗರದ ಆಧಿಪತ್ಯವನ್ನು ಒಪ್ಪಿಕೊಳ್ಳುವಂತೆ ಮಾಡಿದನು. ಕಂಪಣನ ದಂಡನಾಯಕರಲ್ಲಿ ಈತನು ಮೊದಲನೆಯವನು. ಇವನ ಬಗೆಗೆ 'ಸಾಳುವಾಭ್ಯುದಯ' ಎಂಬ ಗ್ರಂಥಗಳಲ್ಲಿ ಹೆಚ್ಚು ವಿಷಯ ದೊರಕುವದು. ಈತನು ವಿಜಯನಗರವನ್ನು ಆಳಿದ ಸಾಳ್ವಮನೆತನದ ಮೂಲಪುರುಷನು. ಈತನ ತಂದೆಯ ಹೆಸರು ಗುಂಡ. ಕೆಲವು ಗ್ರಂಥಗಳಲ್ಲಿ ಸಾಳುವ ಮಂಗು ಮಧುರೆಯ ಸುಲ್ತಾನನ್ನು ಯುದ್ಧದಲ್ಲಿ ಕೊಂದನೆಂದು ಬರೆದಿದೆ. ಈತನು ತಾಮ್ರಪರ್ಣಿಯ ತೀರದ ಮೇಲೆ ಒಂದು ಜಯಸ್ತಂಭನ ಸ್ಥಾಪಿಸಿರುವನು. ಮುಸಲ್ಮಾನರ ಮೇಲಿನ ತನ್ನ ದಂಡಯಾತ್ರೆಯ ಗುರುತಿಗಾಗಿ ಮಧುರೆಯ ಪತನದ ನಂತರ ಈತನು ಶ್ರೀರಂಗಕ್ಕೆ ಬಂದು ಕಾವೇರಿ ನದಿಯಲ್ಲಿ ಸ್ನಾನಮಾಡಿ ೧೬ ದಾನಗಳನ್ನೂ, ೧ ಸಾವಿರ ಶಾಲಿಗ್ರಾಮಗಳನ್ನೂ ಕೊಟ್ಟನು. ರಂಗನಾಥ ದೇವರಿಗೆ ೮ ಊರು-ಗಳನ್ನೂ, ೬೦ ಸಾವಿರ ಬಂಗಾರದ ನಾಣ್ಯ (ಮಾಡ) ಗಳನ್ನೂ ಅರ್ಪಿಸಿದನು. ತಿರುಪತಿಯ ವೆಂಕಟೇಶ್ವರನ ದೇವಾಲಯದ ಮೇಲೆ ಬಂಗಾರದ ಕಳಸವನ್ನಿಟ್ಟನು. ಈತನಿಗೆ ಗೂರ್ಜರಿಯತ್ತವಿಸಾಟ, ಸಾಳುವೇಂದ್ರ, ಕಟಾರಿಸಾಳುವ, ಮಹಾರಾಜ, ಗಂಡರಗೂಳಿ, ದಕ್ಷಿಣಸುರತ್ರಾಣ, ತ್ರಿಭುವನರಾಯ ಸ್ಥಾಪನಾಚಾರ್ಯ, ಶ್ರೀರಂಗಸ್ಥಾಪನಾಚಾರ್ಯ ಮೊದಲಾದ ಬಿರುದುಗಳಿದ್ದವು.

## ಸೋಮಪ್ಪ ದಂಡನಾಯಕ

ಸೋಮಪ್ಪ ದಂಡನಾಯಕನು ಮಧುರೆಯ ವಿಜಯದಲ್ಲಿ ಬಹು ದೊಡ್ಡ ಭಾಗವನ್ನು ವಹಿಸಿರುವನು. ಈತನು ಕಂಪಣನ ಮಂತ್ರಿಯಾಗಿ ಮುಳಬಾಗಿಲ ಪ್ರಾಂತವನ್ನು ಆಳುತ್ತಿದ್ದನು. ಅಲ್ಲಿಯ ಜನರಿಗೆಲ್ಲ ಬೇಕಾಗಿದ್ದನು. ಕೋಲಾರದ ಒಂದು ಶಾಸನದಲ್ಲಿ ಈತನನ್ನು ವಿಶೇಷವಾಗಿ ಬಣ್ಣಿಸಲಾಗಿದೆ.

ಆತನು ತನ್ನ ಇಷ್ಟದೇವತೆಯಾದ ಶ್ರೀ ಸೋಮನಾಥನ ದೇವಾಲಯವನ್ನು ಕಟ್ಟಿಸಿ ಒತ್ತಿಯನ್ನು ಬಿಟ್ಟನು. ಈತನು ಶೈವನು. ಸೋಮವಾರ ವ್ರತವನ್ನು ಪಾಲಿಸುತ್ತಿದ್ದನು. ಈತನ ಗುಡಿಗೆ ರಾಜನು ಒಂದು ಊರನ್ನು ಹಾಕಿಕೊಟ್ಟಿರುವನು. ಸೋಮಪ್ಪನು ಸಂಸ್ಕೃತ ಪಂಡಿತನು.

## ಗಂಡರಗೂಳಿ ಮಾರಯ್ಯನಾಯಕ

ಈತನು ಸೋಮಪ್ಪನಾಯಕನ ಮಗ; ಕಂಪಣನ ದಂಡನಾಯಕರಲ್ಲಿ ಒಬ್ಬ.

CC-0. Jangamwadi Math Collection. Digitized by eGangotri

ಮಧುರೆಯ ದಂಡಯಾತ್ರೆಯಲ್ಲಿ ಈತನು ಬಹಳ ಮಹತ್ವದ ಪಾತ್ರ ವಹಿಸಿರುವನು. ರಾಜಗಂಭೀರ ನಗರವನ್ನೂ, ಕೋಟೆಯನ್ನೂ ಕೈವಶ ಮಾಡಿಕೊಂಡು ಚಂಪಕರಾಯನನ್ನು ಸೋಲಿಸಿರುವನು. ಒಂದು ಗೋಪುರವನ್ನು ಕಟ್ಟಿಸಿ ಗಂಡರಗೂಳಿ ಮಾರಯ್ಯನಾಯಕನ ತಿರುಗೋಪುರವೆಂದು ಹೆಸರಿಟ್ಟಿರುವನು.

## ಸಾಂಭವರಾಯರು

ಕಂಪಣನು ಸೋಲಿಸಿದ ಚಂಪಕರಾಯರು ಕಾಂಚೀ ಪುರವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ತೊಂಡೈಮಂಡಲವೆಂಬ ರಾಜ್ಯವನ್ನು ಆಳುತ್ತಿದ್ದರು. ತೊಂಡೈಮಂಡಲವು ಈಗಿನ ಉತ್ತರ ಅರ್ಕಾಟ ಮತ್ತು ಚಿಂಗಲಪೆಟೆಯನ್ನು ಒಳಗೊಂಡಿತ್ತು. ಅವರು ಚೋಳರ ಮಾಂಡಲಿಕರಾಗಿ ಪ್ರಸಿದ್ಧರಾಗಿದ್ದರು. ಚೋಳರ ರಾಜ್ಯವು ಕುಸಿದ ಮೇಲೆ ಸ್ವತಂತ್ರರಾಗಿ ರಾಜ್ಯಭಾರ ಮಾಡಹತ್ತಿದರು. ಕುಲಶೇಖರ ಸಂಭವರಾಯನು ಮೊದಲನೆಯ ಸಂಭವರಾಯನು. ಈತನು ಸುಮಾರು ಕ್ರಿ. ಶ. ೧೩೦೪ ರಲ್ಲಿ ರಾಜ್ಯವಾಳುತ್ತಿದ್ದನು. ಈತನ ಮಗ ವೀರಚಂಪ ಅಥವಾ ರಾಜನಾರಾಯಣ. ಮಲ್ಲಿನಾಥನು ರಾಜನಾದನು. ಇವನು ಮಲಿಕಕಾಫರನ ದಾಳಿಗಳನ್ನು ಪ್ರತ್ಯಕ್ಷ ಕಂಡವನು. ಅವನ್ನು ತಡೆಯಲು ಏನು ಪ್ರಯತ್ನಮಾಡಿದನೆಂಬುದು ಎಲ್ಲಿಯೂ ದೊರೆಯುವದಿಲ್ಲ. ಈತನು ದೇವಭಕ್ತನಾಗಿದ್ದಂತೆ ತೋರುವದು. ಕಾಂಚಿಯ ಏಕಾಂಬರನಾಥನಿಗೆ ಸುವರ್ಣ ಕಿರೀಟವನ್ನೂ, ಒಂದು ಸುಂದರವಾದ ರಥವನ್ನೂ ಮಾಡಿಸಿಕೊಟ್ಟನೆಂದೂ, ಕಾಂಚೀಪುರದಲ್ಲಿ ತುಲಾಭಾರ ಮಂಟಪವನ್ನು ಕಟ್ಟಿಸಿದನೆಂದೂ ಶಾಸನಗಳಿಂದ ತಿಳಿಯುವದು. ಅವನ ತರುವಾಯ ವೆನ್ರುಮಣ್‌ಕೊಂಡ ಸಂಭವರಾಯನು ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿ ಮುಸಲ್ಮಾನರ ಹಾವಳಿಯಿಂದ ದೇಶವು ಸಂಪೂರ್ಣವಾಗಿ ನಾಶವಾಗಿತ್ತು. ಈತನು ಸುಮಾರು ೧೩೨೨ ರಿಂದ ೧೩೩೮ ರ ವರೆಗೆ ರಾಜ್ಯವನ್ನಾಳಿದನೆಂದು ತೋರುವದು. ದೇಶದಲ್ಲಿ ವ್ಯವಸ್ಥೆಯನ್ನುಂಟು ಮಾಡಲು ಬಹಳ ಶ್ರಮಿಸಿದನು. ಇವನ ತರುವಾಯ ಇವನ ಮಗ ರಾಜನಾರಾಯಣ ಸಂಭವರಾಯನು ದೊರೆಯಾದನು. ಈತನ ಕಾಲದಲ್ಲಿ ರಾಜ್ಯವು ವೈಭವಪೂರ್ಣವಾಗಿತ್ತು. ಈತನು ಮಧುರೆಯ ಸುಲ್ತಾನನ ಸಂಗಡ ವಿರೋಧ ಕಟ್ಟಿಕೊಂಡಿದ್ದಿಲ್ಲ. ಈತನು ಪ್ರಜೆಗಳಿಗೆ ಬೇಕಾಗಿದ್ದನು. ದಾನಧರ್ಮಗನ್ನು ಮಾಡುತ್ತಿದ್ದನು. ದೇವಸ್ಥಾನಗಳು ಸರಿಯಾಗಿ ನಡೆಯುವಂತೆ ಅವುಗಳ ಆಡಳಿತೆಯನ್ನು ವ್ಯವಸ್ಥೆಗೊಳಿಸಿದನು. ತನ್ನ ರಾಜ್ಯದಲ್ಲಿರುವ ನೇಕಾರರಿಗೆ ಸಹಾಯಮಾಡಿ ಅವರು ತಮ್ಮ ತಮ್ಮ ಊರುಗಳಲ್ಲಿ ಬಂದು ನೆಲೆಸುವಂತೆ ಪ್ರೋತ್ಸಾಹಿಸಿದನು. ವ್ಯಾಪಾರ ಉದ್ದಿಮೆಗಳಿಗೆ ಆಶ್ರಯಕೊಟ್ಟನು. ಹೆಚ್ಚಾಗಿ ಜನರ ಮೇಲೆ ತೆರಿಗೆಗಳನ್ನು ಹೇರುತ್ತಿದ್ದಿಲ್ಲ.

CC-0. Jangamwadi Math Collection. Digitized by eGangotri

ಈತನು ಸುಮಾರು ೧೩೪೯ ರ ವರೆಗೆ ರಾಜ್ಯವಾಳಿದನು. ಈತನ ಬಿರುದುಗಳಲ್ಲಿ ಪೊನ್ನಿನ ಪೆರುಮಾಳ್, ಪೊನ್ನಿಂತಂಬಿರಲ್ ಎಂಬುವು ಮುಖ್ಯವಾದವು. ಈತನ ತರುವಾಯ ಇವನ ಮಗನಾದ ಎರಡನೆಯ ವೆನ್ರುಮನ್‌ಕೊಂಡನ್ ಎಂಬವನು ರಾಜನಾದನು. ಇವನನ್ನು ವೀರಕಂಪಣರಾಯನು ಸೋಲಿಸಿ ತೊಂಡೈಮಂಡಲ-ವನ್ನು ಕೈವಶ ಮಾಡಿಕೊಂಡನು. ವಿಜಯನಗರದವರು ತಮ್ಮ ರಾಜ್ಯದ ರಕ್ಷಣೆ-ಗಾಗಿ ಈ ಪ್ರದೇಶವನ್ನು ಕೈವಶ ಮಾಡಿಕೊಂಡರು. ರಾಜ್ಯವನ್ನು ವಿಸ್ತರಿಸಿದರು.

ವಿಜಯ ನಗರದ ಕಾಲದಲ್ಲಿ ಸಂಸ್ಕೃತಕ್ಕೆ ಪ್ರೋತ್ಸಾಹ ದೊರೆತು ಬಹುಜನರು ಸಂಸ್ಕೃತವನ್ನು ಕಲಿತರು. ಅರಮನೆಯ ಹೆಣ್ಣು ಮಕ್ಕಳು ಕೂಡ ಸಂಸ್ಕೃತವನ್ನು ಕಲಿತು ಸಂಸ್ಕೃತದಲ್ಲಿ ಕಾವ್ಯಗಳನ್ನು ರಚಿಸುವ ಸಾಮರ್ಥ್ಯ ಪಡೆದರು. ಗಂಗಾ-ದೇವಿಯ ಕೃತಿ ಸಂಸ್ಕೃತ ಭಾಷೆಯ ಮೇಲಿನ ಆಕೆಯ ಪ್ರಭುತ್ವವನ್ನು ತಿಳಿಸುವದು. ವಿಜಯನಗರ ರಾಜರ ಕಾಲದಲ್ಲಿ ತಿರುಮಲಾಂಬಾ ಎಂಬ ಇನ್ನೊರ್ವ ಕವಯಿತ್ರಿ ನರಸಿಂಗ ಮನೆತನದ ಅಚ್ಯುತರಾಯನ ವರ್ಣನೆಯುಳ್ಳ 'ವರದಾಂಬಿಕಾಪರಿಣಯ' ವೆಂಬ ಕಾವ್ಯವನ್ನು ಬರೆದು ಹಲಕೆಲವು ಐತಿಹಾಸಿಕ ಸಂಗತಿಗಳನ್ನು ಬೆಳಕಿಗೆ ತಂದಿರುವಳು. ರಾಜನಾಥದಿಂಡಿಮನೆಂಬ ಕವಿಯು ಕೃಷ್ಣದೇವರಾಯನ ತರುವಾಯ ಪಟ್ಟಕ್ಕೆ ಬಂದ ಅಚ್ಯುತರಾಯ (ಕ್ರಿ. ಶ. ೧೫೩೦-೧೫೪೨) ನ ಚರಿತ್ರೆ-ಯಾದ "ಅಚ್ಯುತ ರಾಯಾಭ್ಯುದಯ" ವೆಂಬ ಐತಿಹಾಸಿಕ ಕಾವ್ಯವನ್ನು ಬರೆದಿರು-ವನು. ಕನ್ನಡ ಸಾಹಿತ್ಯದಲ್ಲಿಯೂ ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದ ವಿಷಯಗಳನ್ನೊಳಗೊಂಡ ಅನೇಕ ಗ್ರಂಥಗಳುಂಟು. ಹೆಚ್ಚಾಗಿ ಸಂಶೋಧನೆ ಮಾಡಿದರೆ ಇಂತಹ ಗ್ರಂಥಗಳು ದೊರೆತು ನಮ್ಮ ನಾಡಿನ ಇತಿಹಾಸ ರಚನೆಗೆ ಹೆಚ್ಚು ಸಹಾಯವಾಗಬಹುದೆಂದು ನಿರೀಕ್ಷೆ.

CC-0. Jangamwadi Math Collection. Digitized by eGangotri

# ವೀರಶೈವದ ಉಗಮು

ಶ್ರೀ. ಟಿ. ಎನ್. ಮಲ್ಲಪ್ಪ, ಬಿ. ಎ., ಎಲ್ ಎಲ್. ಬಿ.
ರಿ. ಹೈಕೋರ್ಟ ಜಡ್ಜ್, ಬೆಂಗಳೂರು

## ವೀರಶೈವ ಉಗಮು ವಿಚಾರದಲ್ಲಿನ ತೊಡಕು

ವೀರಶೈವ ಉಗಮುವು ಯಾವಾಗ ಆಯಿತೆಂಬ ವಿಚಾರವು ಬಹು ತೊಡಕಿನ ವಿಷಯುವಾಗಿದೆ. ಪ್ರೊಫೆಸರ ಸಾಖರೆಯುವರು ಹೇಳಿದಂತೆ ಈ ಮುತವು ಬಸವೇಶ್ವರ ನಿಂದ ಸಂಸ್ಥಾಪಿಸಲ್ಪಟ್ಟಿತೆ ? ಶ್ರೀಯುತ ಕಾಶೀನಾಥ ಶಾಸ್ತ್ರಿಗಳು ಹೇಳಿದಂತೆ ರೇಣು ಕಾದಿ ಆಚಾರ್ಯರಿಂದ ಪ್ರಚುರವಾಯಿತೆ? ಅಥವಾ 'ಸಿದ್ಧಾಂತ ಶಿಖಾಮಣಿಯ' 'ಮಣಿಮುಕುರ'ದ ಮಾತಿನಲ್ಲಿ "ಪೂರ್ವದೊಳ್ ಪರಶಿವಂ ಪಾರ್ವತಿಗೆ ಪುತ್ರ ಷಣ್ಮು ಖಂಗೆ, ಪೇಳಿದಂ ಪಳೆಯ ಷಟ್‌ಸ್ಥಲಸಿದ್ಧಾಂತಮಂ" ಎಂದೆನ್ನಬೇಕೆ ? ಈ ಹೇಳಿಕೆ ಗಳೆಲ್ಲ ನಿರಾಧಾರವಾದುವೆಂದು ಹೇಳಲಾಗುವದಿಲ್ಲ. ಆದರೆ ವೀರಶೈವವೆಂದರೇ ನೆಂಬುದನ್ನು ಸ್ಪಷ್ಟ ಮಾಡದ ಹೊರತು ಈ ವಿಷಯುವನ್ನು ನಿರ್ಧರಿಸಲಾಗುವದಿಲ್ಲ. ಪ್ರೊ. ಸಾಖರೆಯುವರು ಹೇಳುವಂತೆ ವೀರಶೈವವು ಹಿಂದೂ ಮುತವೆ, ಅಲ್ಲವೆ ? ವೇದ ಗಳನ್ನು ಈ ಮುತವು ಒಪ್ಪುವದೆ ? ವರ್ಣಾಶ್ರಮು ಧರ್ಮಗಳನ್ನು ಪಾಲಿಸುವ ವೀರ ಶೈವ ಬ್ರಾಹ್ಮಣ್ಯವೊಂದುಂಟೆ ? ಶಿಖಾಯಜ್ಞೋಪವೀತಗಳು ಕೆಲವರು ಹೇಳುವಂತೆ ಈ ಮುತದವರಿಗೂ ಮಾನ್ಯವೆ ? ಶಂಕರಾದ್ವೈತಕ್ಕೂ ಶಿವಾದ್ವೈತಕ್ಕೂ ಭೇದವಿಲ್ಲವೆ ? ಈ ಪ್ರಶ್ನೆಗಳಿಗೆ ಕೊಡುವ ಉತ್ತರದ ಮೇಲೆ ವೀರಶೈವದ ಉಗಮುವು ಯಾವಾಗ ಆಯಿತೆಂದು ಹೇಳಲು ಸುಲಭವಾಗುವುದು. ಏಕೆಂದರೆ ಒಂದು ದೃಷ್ಟಿಯಿಂದ ವೀರಶೈವವು ಹೊಸದರಲ್ಲಿ ಹೊಸದೆನ್ನಬಹುದು; ಅಂತೆಯೇ ಮುತ್ತೊಂದು ದೃಷ್ಟಿ ಯಿಂದ, ಅದು ಸನಾತನವಾದುದರಲ್ಲಿ ಸನಾತನವಾದುದೂ ಹೌದು.

## ವಿಚಾರಾರ್ಹವಾದ ವಿಷಯುಗಳಾವುವು ?

ಹನ್ನೆರಡನೆಯ ಶತಮಾನದ ಹಿಂದೆ "ವೀರಶೈವ" ಎಂಬ ಪದವೇ ಕಂಡು ಬರುವದಿಲ್ಲವೆಂದಮಾತ್ರಕ್ಕೆ ಹಾಗೂ ಲಿಂಗಧಾರಣೆಯ ವಿಷಯುದಲ್ಲಿಯೂ ಹಾಗೆಯೇ ಹೇಳಬಹುದೆಂದ ಮಾತ್ರಕ್ಕೆ ಈ ಮುತವು ಸನಾತನವಾದುದಲ್ಲವೆಂದಾಗುವುದಿಲ್ಲ. ಶ್ರೀ ಶಂಕರ, ಶ್ರೀ ರಾಮುನುಜ, ಶ್ರೀ ಆನಂದತೀರ್ಥರೆಂಬ ತ್ರಿಮುತದ ಆಚಾರ್ಯರು ತಮ್ಮ ಮುತಗಳನ್ನು ಹೊಸದಾಗಿ ಸ್ಥಾಪಿಸಿದೆವೆನ್ನುವದಿಲ್ಲ. ಹಿಂದೆ ಇದ್ದ ಆಚಾರ್ಯರ ಸಿದ್ಧಾಂತಗಳನ್ನೆ ತಾವು ಅನುಸರಿಸಿರುವುದಾಗಿ ಹೇಳುತ್ತಾರೆ. ಉದಾ ಹರಣೆಗಾಗಿ ಶ್ರೀ ಭಾಷ್ಯದಲ್ಲಿ ಶ್ರೀ ರಾಮಾನುಜರು :

CC-0. Jangamwadi Math Collection. Digitized by eGangotri

"ಭಗವದ್ಬೋಧಾಯನಕೃತಾಂ ವಿಸ್ತೀರ್ಣಾಂ ಬ್ರಹ್ಮಸೂತ್ರವೃತ್ತಿಂ
ಪೂರ್ವಾಚಾರ್ಯಾಃ ಸಂಕ್ಷಿಪುಃ; ತನ್ಮತಾನುಸಾರೇಣ
ಸೂತ್ರಾಕ್ಷರಾಣಿ ವ್ಯಾಖ್ಯಾಸ್ಯಂತೇ"

ಎಂದರೆ, ಬೋಧಾಯನರಿಂದ ವಿಸ್ತೀರ್ಣವಾಗಿ ರಚಿಸಲ್ಪಟ್ಟ ಬ್ರಹ್ಮಸೂತ್ರ ವೃತ್ತಿಯನ್ನು ಪೂರ್ವಾಚಾರ್ಯರು ಸಂಕ್ಷೇಪಿಸಿ ಬರೆದಿರುವದಾಗಿಯೂ ಅದನ್ನು ಅನುಸರಿಸಿ ತಾವು ಶ್ರೀ ಭಾಷ್ಯವನ್ನು ಬರೆದಿರುವುದಾಗಿಯೂ ಹೇಳಿದ್ದಾರೆ. ಆದುದರಿಂದ ತ್ರಿಮತಾಚಾರ್ಯರು ಹೊಸದಾಗಿ ಮತಸ್ಥಾಪನೆಯನ್ನು ಮಾಡುತ್ತಿಲ್ಲವೆಂದಾಯಿತು. ಸ್ಮಾರ್ತ, ಮಾಧ್ವ, ಶ್ರೀ ವೈಷ್ಣವ ಮೊದಲಾದ ಪದಗಳು ಆಯಾ ಆಚಾರ್ಯರಿಗೆ ಮೊದಲು ಯಾವಾಗಲಾದರೂ ಬಳಕೆಯಲ್ಲಿದ್ದವೆ ಮತ್ತು ಅವರು ಧರಿಸುವ ಪುಂಡ್ರಗಳು ಬಳಕೆಯಲ್ಲಿದ್ದವೆ ಎಂಬ ಪ್ರಶ್ನೆಗಳನ್ನೂ, ಆಯಾ ಮತಗಳು ಹಿಂದೆ ಇದ್ದುವೆಂಬುದನ್ನು ನಿರ್ಧರಿಸಲು ಯಾರೂ ವಿಚಾರ ಮಾಡುವದಿಲ್ಲ. ಈ ಪ್ರಶ್ನೆಗಳು ವಿಚಾರಾರ್ಹವಾದುವೂ ಅಲ್ಲ. ಆಯಾ ಮತದ ಮೂಲ ತತ್ತ್ವಗಳು ಹಿಂದೆ ಪ್ರತಿಪಾದಿತವಾಗಿದ್ದವೆ ಇಲ್ಲವೆ ಎಂಬುದೇ ವಿಚಾರಾರ್ಹವಾದುದು. ಹಾಗೆಯೇ ವಿಶಿಷ್ಟಾದ್ವೈತ, ವೀರಶೈವ ಮೊದಲಾದ ಪದಗಳು ಮೊದಲು ಬಳಕೆಯಲ್ಲಿರಲಿಲ್ಲವಾದರೂ ಆ ಸಿದ್ಧಾಂತಗಳ ಮೂಲತತ್ವಗಳು ಹಿಂದೆ ಪ್ರತಿಪಾದಿತವಾಗಿದ್ದವೆ ಎಂಬುದು, ಈ ತತ್ವಗಳು ಎಷ್ಟರಮಟ್ಟಿಗೆ ಪ್ರಚಾರದಲ್ಲಿದ್ದವು ಎಂಬುದೂ ಮುಖ್ಯ ವಿಷಯ.

"ಬ್ರಹ್ಮೇತಿ ವ್ಯಪದೇಶಸ್ಯ ವಿಷಯಂ ಯಂ ಯಂ ಪ್ರಚಕ್ಷತೇ
ವೇದಾಂತಿನೋ ಜಗನ್ಮೂಲಂ ತಂ ನಮಾಮಿ ಪರಂ ಶಿವಂ"

ವೀರಶೈವದ ಮುಖ್ಯ ಸಿದ್ಧಾಂತವೇನು ?

ಎಂದು 'ಸಿದ್ಧಾಂತಶಿಖಾಮಣಿ'ಯಲ್ಲಿ ಹೇಳಿರುವಂತೆ, ಯಾವುದನ್ನು ವೇದಾಂತಿಗಳು ಜಗತ್ಕಾರಣವಾದ ಪರಬ್ರಹ್ಮವೆನ್ನುವರೋ, ಅದನ್ನೇ ವೀರಶೈವರು ಪರಶಿವಬ್ರಹ್ಮವೆನ್ನುವರು. ದ್ವೈತಿಗಳು ವಿಶಿಷ್ಟಾದ್ವೈತಿಗಳು ನಾರಾಯಣನನ್ನು ಪರಬ್ರಹ್ಮವೆನ್ನುವರು. ಇವರು ಪರಬ್ರಹ್ಮವೆನ್ನುವ ನಾರಾಯಣನು ತ್ರಿಮೂರ್ತಿಗಳಲ್ಲೊಬ್ಬನು ಮತ್ತು ಸಗುಣನು. ವೀರಶೈವರು ಪರಬ್ರಹ್ಮವೆನ್ನುವ ಪರಶಿವನು ತ್ರಿಮೂರ್ತಿಗಳಿಗಿಂತಲೂ ಅತೀತನಾದವನು ಮತ್ತು ನಿರ್ಗುಣನು. ವಿಶಿಷ್ಟಾದ್ವೈತವೆಂಬ ಪದದಲ್ಲಿ ಅದ್ವೈತವೆಂಬ ಪದವು ಸೇರಿರುವುದರಿಂದ ವಿಶಿಷ್ಟಾದ್ವೈತಿಗಳು ಅದ್ವೈತಿಗಳೆಂದು ಭ್ರಾಂತಿ ಬರಬಹುದು. ಆದರೆ ಮಾಧ್ವರಷ್ಟೇ ವಿಶಿಷ್ಟಾದ್ವೈತಿಗಳು ಪೂರ್ಣ

CC-0. Jangamwadi Math Collection. Digitized by eGangotri

ದ್ವೈತಿಗಳು, 'ವೇದಾಂತದೀಪ'ದಲ್ಲಿ ಶ್ರೀರಾಮಾನುಜರು ತಮ್ಮ ಸಿದ್ಧಾಂತವನ್ನು ಸಂಕ್ಷಿಪ್ತವಾಗಿ ಹೀಗೆ ಹೇಳಿರುವರು :

"ಅಚಿದ್ವಸ್ತುನಸ್ಸ್ವರೂಪತಸ್ಸ್ವಭಾವತಶ್ಚಾತ್ಯಂತ
ವಿಲಕ್ಷಣಸ್ತದಾತ್ಮಭೂತಶ್ಚೇತನಃ ಪ್ರತ್ಯಗಾತ್ಮಾ ತಸ್ಮಾತ್
ಚಿದಚಿದ್ವ್ಯಾಪಕತಯಾ, ಧಾರಕತಯಾ, ನಿಯಂತೃತಯಾ,
ಶೇಷಿತಯಾ ಚಾತ್ಯಂತ ವಿಲಕ್ಷಣಃ ಪರಮಾತ್ಮಾ"

ಅಚಿದ್ವಸ್ತುಗಳು ಚೇತನಗಳಿಗಿಂತಲೂ ಭಿನ್ನವಾದುವೆಂತಲೂ, ಚಿದಚಿತ್ತುಗಳಿಗಿಂತಲೂ ಪರಮಾತ್ಮನು ಭಿನ್ನವೆಂತಲೂ ಶ್ರೀರಾಮಾನುಜರ ಸಿದ್ಧಾಂತ. ಮಾಧ್ವ ಸಿದ್ಧಾಂತವಾದರೂ ಇದೇ. ಮಾಧ್ವರು 'ತತ್ತ್ವಮಸಿ' ಮೊದಲಾದ ಅದ್ವೈತಪರ ವಾಕ್ಯಗಳಿಗೆ ಹೇಗಾದರೂ ಪದಗಳ ಅರ್ಥವನ್ನು ಹಿಗ್ಗಿಸಿ ದ್ವೈತಪರ ಅರ್ಥ ಮಾಡುವರು. ಆದರೆ ರಾಮಾನುಜೀಯರು ಚಿದಚಿದ್ವಸ್ತುಗಳು ಪರಮಾತ್ಮನ ದೇಹವಾಗಿವೆಯೆಂದು ಹೇಳಿ 'ತತ್ವಮಸಿ' ಮೊದಲಾದ ವಾಕ್ಯಗಳಿಗೆ ಅರ್ಥವನ್ನು ಹೇಳುವರು. ಮಾಧ್ವರೂ ರಾಮಾನುಜೀಯರೂ ಪರಮಾರ್ಥತಃ ಭೇದವನ್ನು ಹೇಳುವುದರಲ್ಲಿ ಒಂದಾಗಿರುವಂತೆ ಶಂಕರಾದ್ವೈತಿಗಳೂ ಶಿವಾದ್ವೈತಿಗಳಾದ ವೀರಶೈವರೂ ಶಿವಜೀವರಿಗೆ ಮೋಕ್ಷದಲ್ಲಿ ಅದ್ವೈತವನ್ನೇ ಹೇಳುವರು. ಆದರೂ ದ್ವೈತಿಗಳಲ್ಲಿ ಮಾಧ್ವರಿಗೂ ವಿಶಿಷ್ಟಾದ್ವೈತಿಗಳಿಗೂ ವ್ಯತ್ಯಾಸವಿರುವಂತೆ, ಅದ್ವೈತಿಗಳಾದ ಶಂಕರಾದ್ವೈತಿಗಳಿಗೂ ಶಿವಾದ್ವೈಗಳಿಗೂ ವ್ಯತ್ಯಾಸವಿದೆ. ಈ ವ್ಯತ್ಯಾಸವು ಎರಡೂ ಮತದವರು ಉಪಯೋಗಿಸುವ ಪಾರಿಭಾಷಿಕ ಪದಗಳಲ್ಲೇ ಕಂಡುಬರುವದು. ಮೋಕ್ಷವೆಂಬ ಪದವು ಶಂಕರಾದ್ವೈತಿಗಳಲ್ಲಿ ಬಳಕೆಯಲ್ಲಿರುವದು.

"ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ"

ಎಂಬುದು ಶಾಂಕರಸಿದ್ಧಾಂತದ ತಿರುಳು. ಜಗತ್ತು ಮಿಥ್ಯ, ಬ್ರಹ್ಮವೊಂದೇ ಸತ್ಯ, ಜೀವನವು ಬ್ರಹ್ಮವೇ ಹೊರತು ಬೇರೆಯಲ್ಲ. ಜೀವನು ತಾನು ಬೇರೆ ಎಂದು ತಿಳಿದಿರುವುದು ಹಗ್ಗವನ್ನು ಹಾವೆಂದು ನಸುಗತ್ತಲೆಯಲ್ಲಿ ತಿಳಿಯುವಂತೆ ಭ್ರಾಂತಿಯಿಂದ ಬಿಡುಗಡೆ ಹೊಂದಿದರೆ ನೋಡಿದುದು ಹಗ್ಗವೇ ಎಂದು ತಿಳಿಯುವಂತೆ, ಜೀವನು ಅಜ್ಞಾನದಿಂದ ಬಿಡುಗಡೆಯಾದರೆ ತಾನು ಬ್ರಹ್ಮವೇ ಹೊರತು ಬೇರೆಯಲ್ಲವೆಂದು ತಿಳಿಯುವನು. ಆದುದರಿಂದ, ಬಿಡುಗಡೆಯೆಂಬ ಅರ್ಥವುಳ್ಳ ಮೋಕ್ಷಪದವು ಈ ಸಿದ್ಧಾಂತಕ್ಕೆ ಸರಿಹೊಂದುವುದು.

CC-0. Jangamwadi Math Collection. Digitized by eGangotri

## ಮೋಕ್ಷ ಮತ್ತು ಲಿಂಗಾಂಗ ಸಾಮರಸ್ಯ ಪದಗಳಲ್ಲಿ ತೋರುವ ವ್ಯತ್ಯಾಸವೆ ಶಂಕರಾದ್ವೈತಕ್ಕೂ ಶಿವಾದ್ವೈತಕ್ಕೂ ಇರುವ ವ್ಯತ್ಯಾಸ

ವೀರಶೈವರು ರೂಢಿಯಲ್ಲಿರುವ ಮೋಕ್ಷಪದವನ್ನು ಸಾಮಾನ್ಯವಾಗಿ ಬಳಸಿದರೂ ಈ ವಿಷಯವನ್ನು ತಿಳಿಸುವ ಅವರ ಪಾರಿಭಾಷಿಕ ಪದವು 'ಲಿಂಗಾಂಗ ಸಾಮರಸ್ಯ' ವೆಂಬುದು ಪರಮಾತ್ಮ-ಜೀವಾತ್ಮ ಮತ್ತು ಶಿವ-ಜೀವ ಎಂಬ ಪದಗಳು ರೂಢಿಯಲ್ಲಿದ್ದರೂ ಅವುಗಳಿಗೆ ಬದಲಾಗಿ ವೀರಶೈವರೂ ಲಿಂಗ, ಅಂಗ ಮತ್ತು ಸಾಮರಸ್ಯ ಎಂಬ ಪದಗಳನ್ನು ಬಳಸಿದರೇಕೆಂಬುದು ಅನೇಕರಿಗೆ ಆಶ್ಚರ್ಯವನ್ನುಂಟು ಮಾಡಬಹುದು. ಆದರೆ ಉದ್ದೇಶಪೂರ್ವಕವಾಗಿಯೇ ಈ ಪದಗಳನ್ನು ವೀರಶೈವರು ರೂಪಿಸಿಕೊಂಡಿದ್ದಾರೆ. 'ಅನುಭವಸೂತ್ರ'ದಲ್ಲಿ ಹೇಳಿದಂತೆ—

"ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ
ತದೇತಲ್ಲಿಂಗಮಿತ್ಯುಕ್ತಂ ಲಿಂಗತತ್ವಪರಾಯಣೈಃ
ಅಮಿಶಿ ಬ್ರಹ್ಮಸನ್ಮಾತ್ರಂ ಗಚ್ಛತೀತಿ ಗಮುಚ್ಯತೇ
ರೂಪ್ಯತ್ಯಂಗಮಿತಿ ಪ್ರಾಜ್ಞೈರಂಗತತ್ವವಿಶಾರದೈಃ

ಎಲ್ಲವನ್ನು ತನ್ನೊಳಗೆ ಲೀನಮಾಡಿಕೊಳ್ಳುವುದು ಲಿಂಗ. ಹಾಗೆ ಲೀನಮಾಡಿಸಿ ಕೊಳ್ಳಲು ಗಮನಿಸುವುದು ಅಂಗ. ಈ ದೃಷ್ಟಿಯಿಂದ ರೂಪಿಸಿಕೊಂಡ ಪಾರಿಭಾಷಿಕ ಪದಗಳು ಇವು. 'ರೂಪ್ಯತಿ' ಎಂದು ಅನುಭವಸೂತ್ರದಲ್ಲಿ ಹೇಳಿರುವುದರಲ್ಲಿ ಉದ್ದೇಶಪೂರ್ವಕವಾಗಿ ಈ ಪದವನ್ನು ರೂಪಿಸಿಕೊಂಡರೆಂಬುದು ಸ್ಪಷ್ಟ. ವೀರಶೈವ ಸಿದ್ಧಾಂತದಂತೆ ಜೀವನು ಪರಬ್ರಹ್ಮದ ಅಂಶ. "ಅಂಶೋ ನಾನಾವ್ಯಪದೇಶಾತ್" ಎಂಬ ಬ್ರಹ್ಮಸೂತ್ರದ ಸೂತ್ರವೂ "ಮಮೈವಾಂಶೋ ಜೀವಲೋಕೇ ಜೀವ ಭೂತಸ್ಸನಾತನಃ" ಎಂಬ ಗೀತೆಯ ಆಧಾರವೂ ಈ ನಿಲುವನ್ನು ಸಮರ್ಥಿಸುತ್ತವೆ. ವೀರಶೈವ ಸಿದ್ಧಾಂತದಂತೆ ಅಂಶವು ಅಂಶಿಯಲ್ಲಿ ಬೆರೆಯುವುದು ಅಂದಮೇಲೆ ಇಲ್ಲಿ "ಮೋಕ್ಷ" (ಬಿಡುಗಡೆ) ಎಂಬ ಪದವು ಹೇಗೆ ಸಾರ್ಥಕವಾದೀತು ? ಸಾಗರದ ಜಲ ದಲ್ಲಿ ನದಿಯ ನೀರು ಸೇರುವುದರಲ್ಲಿ ಒಂದೇ ರಸವಾದ ಎರಡೂ ಸೇರಿ ಸಮರಸ ವಾಗುವದು. ಇದೇ ಲಿಂಗಾಂಗಸಾಮರಸ್ಯದ ಅರ್ಥ.

ಶ್ರೀಶಂಕರಾಚಾರ್ಯರು ಜೀವನು ಪರಬ್ರಹ್ಮವೇ ಎಂದು ಹೇಳಿರುವರೇ ಹೊರತು ಎಲ್ಲಿಯೂ ಅವರು ಜೀವನು ಪರಬ್ರಹ್ಮನ ಅಂಶವೆಂದಿಲ್ಲ. ನಿರವಯವನಾದ ಪರಬ್ರಹ್ಮನಲ್ಲಿ ಅಂಶ ಅಂಶಿಯೆಂದು ವಿಭಾಗಿಸುವುದು ಸರಿಯಲ್ಲವೆನ್ನುವುದು ಅವರ ಮತ. ಆದರೆ ಭಗವದ್ಗೀತೆಯಲ್ಲಿಯೂ ಬ್ರಹ್ಮಸೂತ್ರದಲ್ಲಿಯೂ ಜೀವ-ಜಗತ್ತುಗಳು ಪರಬ್ರಹ್ಮದ ಅಂಶವೆಂದೇ ಹೇಳಿದೆ. ಈ ಆಧಾರಗಳನ್ನೊಪ್ಪುವ ಶ್ರೀ ಶಂಕರಾ

CC-0. Jangamwadi Math Collection. Digitized by eGangotri

ಚಾರ್ಯರು ಹೇಗಾದರೂ ತಮ್ಮ ಸಿದ್ಧಾಂತಕ್ಕೆ ವಿರೋಧವಿಲ್ಲದಂತೆ ಇವುಗಳಿಗೆ ಅರ್ಥ ಮಾಡಬೇಕಾಯಿತು. "ಅಂಶ ಇವ" ಎಂದರೆ (ಅಂಶವಲ್ಲ) ಅಂಶವೋ ಎನ್ನುವಂತೆ ಕಲ್ಪಿಸಿಕೊಳ್ಳಬೇಕೆಂಬುದು ಈ ಆಧಾರಗಳ ಅಭಿಪ್ರಾಯವೆಂದು ಹೇಳಿ ಆಚಾರ್ಯರು ಪಾರಾಗಬೇಕಾಯಿತು. ವೀರಶೈವ ಸಿದ್ಧಾಂತದಂತೆ ಅಂಶ ಅಂಶಿ ಎಂಬುದು ಕಲ್ಪನೆಯು ಮಾತಲ್ಲ. ಸ್ಥಲವೆಂದು ವೀರಶೈವರಿಂದ ಕರೆಯಲ್ಪಡುವ ಪರಬ್ರಹ್ಮವು ಲಿಂಗ ಮತ್ತು ಅಂಗ ಎಂದು ವಿಭಾಗವಾಯಿತೆಂದು 'ಅನುಭವ ಸೂತ್ರ'ದಲ್ಲಿ ಸ್ಪಷ್ಟವಾಗಿ ಹೇಳಿದೆ—

ಸ್ವಶಕ್ತಿಕ್ಷೋಭ ಮಾತ್ರೇಣ ಸ್ಥಲಂ ತದ್ವಿವಿಧಂ ಭವೇತ್ ।
ಏಕಂ ಲಿಂಗಸ್ಥಲಂ ಪ್ರೋಕ್ತಮನ್ಯಮಂಗಲಸ್ಥಲಂ ಸ್ಮೃತಂ ॥

ಹೀಗೆ ಹೇಳಿರುವುದು ಸಿದ್ಧಾಂತ ಶಿಖಾಮಣಿಯಲ್ಲಿ "ತದಂಶೋ ಜೀವನಾಮಕಃ" ಎಂದು ಹೇಳಿರುವುದಕ್ಕೆ ಅನುಸಾರವಾಗಿದೆ. "ಯಥಾ ಸುದೀಪ್ತಾತ್ ಪಾವಕಾದ್ವಿಸ್ಫುಲಿಂಗಾಃ" ಎಂಬ ಮುಂಡಕ ಶ್ರುತಿಯಂತೆ ಪ್ರಜ್ವಲಿಸುವ ಕೆಂಡದಿಂದ ಹೊರಹೊಮ್ಮಿದ ಕಿಡಿಗಳು ಜೀವ ಜಗತ್ತುಗಳು. ತೇಜಃಪುಂಜವಾದ ಸೂರ್ಯನ ಅಂಶವೇ ಆದ ಕಿರಣಗಳು ನೀರಿನಲ್ಲಿ ಮಾರ್ಪೊಳೆದು ಸಣ್ಣ ಸೂರ್ಯನ ಹಾಗೆ ಮಿರಗುವಂತೆ ಪರಶಿವನ ಅಂಶವು ದೇಹದಲ್ಲಿ ಜೀವನಾಗಿ ಬೆಳಗುವುದು: ಸಮುದ್ರದ ನೀರಿನ ಅಂಶವು ತೆರೆನೊರೆಗಳಲ್ಲಿ ಇರುವಂತೆ, ಭಂಗಾರದ ಅಂಶವು ಭಂಗಾರದ ಆಭರಣದಲ್ಲಿರುವಂತೆ, ಮಣ್ಣಿನ ಅಂಶವು ಮಡಕಿಯಲ್ಲಿರುವಂತೆ, ಗಾಳಿಯ ಅಂಶವು ಸುಳಿಗಾಳಿಯಲ್ಲಿರುವಂತೆ, ಪರಮಾತ್ಮನ ಅಂಶವು ಜೀವನಲ್ಲಿರುವುದೆಂಬುದು ವೀರಶೈವ ಸಿದ್ಧಾಂತ. ಇವೆಲ್ಲವುಗಳಲ್ಲಿಯೂ ಅಂಶವೂ ಅಂಶಿಯೂ ಏಕರಸವಾದುದರಿಂದ, ಅಂಶವು ಅಳಿದು ಅಂಶದಲ್ಲಿ ಸೇರಿದರೆ ಆಗುವುದು ಸಮರಸ; ಅಂಶಿಯಾದ ಲಿಂಗ ಸೇರಿದರೆ ಆಗುವುದು ಲಿಂಗಾಂಗ ಸಾಮರಸ್ಯ. ಇದುವೆ, ವೀರಶೈವ ಸಿದ್ಧಾಂತ.

'ಸಿದ್ಧಾಂತಶಿಖಾಮಣಿ'ಯಲ್ಲಿ ಹೇಳಿದಂತೆ :

"ಜಲೇ ಜಲಮಿವ ನ್ಯಸ್ತಂ ವಹ್ನೌ ವಹ್ನಿರಿವಾರ್ಪಿತಃ
ಪರಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೆ"

ಅಖಂಡೇಶ್ವರನ ವಚನದಲ್ಲಿ ಹೀಗೆಯೇ ಹೇಳಿದೆ—

"ಬಯಲು ಬಯಲು ಬೆರೆದಲ್ಲಿ ಮೇರೆಯುಂಟೆ ಅಯ್ಯಾ ?
ಕ್ಷೀರ ಕ್ಷೀರ ಕೂಡಿದಲ್ಲಿ ರೂಹಿಸಿ ಹಿಡಿಯಲುಂಟೆ ಅಯ್ಯಾ ?
ನಿಮ್ಮೊಳೊಡವೆರೆದ ಲಿಂಗೈಕ್ಯನ ಕುರುಹ ಮರಳಿ
ಕೋರಲುಂಟೆ ಅಯ್ಯಾ, ಅಖಂಡೇಶ್ವರಾ !"

CC-0. Jangamwadi Math Collection. Digitized by eGangotri

ಜಲದಲ್ಲಿ ಜಲ, ವಹ್ನಿಯಲ್ಲಿ ವಹ್ನಿ, ಬಯಲಲ್ಲಿ ಬಯಲು, ಕ್ಷೀರದಲ್ಲಿ ಕ್ಷೀರ ಬೆರೆದರೆ ಸಮರಸವಾಗುವದು. ಲಿಂಗದಲ್ಲಿ ಅದರ ಅಂಶವೇ ಆದ ಅಂಗವು ಸೇರಲು ಸಮರಸವಾಗಿ ಲಿಂಗಾಂಗಸಾಮರಸ್ಯವಾಗುವುದು. ಹೀಗಾಗುವುದಕ್ಕೆ ಐಕ್ಯವೆಂಬ ಪದವೂ ಸಹ ಸೂಕ್ತವೇ; ಲಿಂಗದಲ್ಲಿ ಅಂಗವು ಬೆರೆದಾಗ ಐಕ್ಯವಾಗುವುದು; ಇಲ್ಲಿ ಮೋಕ್ಷವೆಂಬ ಪದವು ಸಾರ್ಥಕವಲ್ಲ. ಏಕೆಂದರೆ, ಇಲ್ಲಿ ಯಾವುದು ಯಾವುದ ರಿಂದಲೂ ಬಿಡುಗಡೆ ಹೊಂದಿಲ್ಲವಷ್ಟೆ.

ಮಥಿತಾರ್ಥವೇನೆಂದರೆ– ಶಾಂಕರಸಿದ್ಧಾಂತದಂತೆ ಜೀವನು ಪರಬ್ರಹ್ಮದ ಅಂಶವಲ್ಲ. "ಜೀವೋ ಬ್ರಹ್ಮೈವ ನಾಪರಃ" ಎಂದರೆ ಜೀವನು ಬ್ರಹ್ಮವೇ ಬೇರೆಯಲ್ಲ. ಆದರೆ 'ಸಿದ್ಧಾಂತ ಶಿಖಾಮಣಿ' ಯಲ್ಲಿ ಹೇಳಿದಂತೆ "ಏಕ ಏವ ಶಿವಃ ಸಾಕ್ಷಾತ್........ತಂದಶೋ ಜೀವನಾಮಕಃ" ಶಾಂಕರಾದ್ವೈತಿಗಳು 'ಸಿದ್ಧಾಂತ ಶಿಖಾಮಣಿ'ಯಲ್ಲಿ ಜೀವನು ಶಿವನು ಅಂಶವೆಂದು ಹೇಳುವುದು ತಮ್ಮ ಸಿದ್ಧಾಂತಕ್ಕೆ ಸರಿಹೊಂದುವುದು ಎಂದು ಒಪ್ಪುವದಿಲ್ಲ. ಆದುದರಿಂದ 'ಸಿದ್ಧಾಂತ ಶಿಖಾಮಣಿ' ಯಲ್ಲಿ ಹೇಳಿರುವುದು ಶಾಂಕರಾದ್ವೈತವೆಂದು ಹೇಳಲಾಗುವದಿಲ್ಲ. ಸಾರಾಂಶವೇ ನೆಂದರೆ, ಮೋಕ್ಷದಲ್ಲಿಯೂ ಪರಬ್ರಹ್ಮ ಮತ್ತು ಜೀವರುಗಳು ಬೇರೆಬೇರೆಯಾಗಿರುವ ದರೆಂದು ಹೇಳುವ ಮಾಧ್ವರಾಮಾನುಜೀಯವರಿಗೆ ವ್ಯತ್ಯಾಸವಿರುವಂತೆ, ಅವುಗಳಿಗೆ ಅದ್ವೈತವನ್ನು ಹೇಳುವ ಶಾಂಕರಸಿದ್ಧಾಂತಕ್ಕೂ ವೀರಶೈವಾದ್ವೈತಕ್ಕೂ ವ್ಯತ್ಯಾಸವಿದೆ.

## ಶ್ರೀಶಂಕರಾಚಾರ್ಯ ಹೃದಯಸ್ಥಳಾಗಿರುವಳು ಶಿವಾದ್ವೈತದ 'ಭಕ್ತಿಪ್ರಿಯಾ' ಎಂದೆನಿಸಿದ ಶಿವೆಯು

ಆದರೂ ವೀರಶೈವರ ಶಿವಾದ್ವೈತಕ್ಕೂ ಶ್ರೀಶಂಕರಾಚಾರ್ಯರ ಅದ್ವೈತಕ್ಕೂ ಅಂತರ ಕಡಿಮೆ. ಅವು ಎರಡೂ ಅದ್ವೈತವೇ. ತರ್ಕದ ಭರದಲ್ಲಿ ಅವರು ಏನೇ ಹೇಳಿರಲಿ "ಸರ್ವಭೂತೇಷು ಮಾತೃರೂಪೇಣ ಸಂಸ್ಥಿತಾಂ" ಎಂದು ದೇವಿಮಹಾತ್ಮ್ಯೆಯಲ್ಲಿ ಹೊಗಳಲ್ಪಟ್ಟ ದೇವಿಯೇ ಶ್ರೀಶಂಕರಾಚಾರ್ಯರ ಹೃದಯ ದಲ್ಲಿ ನೆಲಸಿರುವಳು. 'ಶ್ರೀಚಕ್ರರಾಜನಿಲಯಾ' 'ಚಕ್ರರಾಜನಿಕೇತನಾ' ಎಂದು ಲಲಿತಾಸಹಸ್ರನಾಮದಲ್ಲಿ ಹೊಗಳಲ್ಪಟ್ಟ ದೇವಿಯ ಶ್ರೀಚಕ್ರವನ್ನು ಅವರ ಮಠಗಳಲ್ಲಿ ಸ್ಥಾಪಿಸಿ ಪೂಜಿಸುವರು. ಭಾಷ್ಯಾದಿಗಳಲ್ಲಿ ಅದ್ವೈತಸಿದ್ಧಾಂತವನ್ನು ಸಾಧಿಸುವ ತರ್ಕಜಾಲದಲ್ಲಿ ಸಿಲುಕಿದ ಶ್ರೀಶಂಕರರ ಮಸ್ತಿಷ್ಕದಲ್ಲಿ ಉದ್ಭವಿಸಿದ 'ಮಹಾದ್ಭುತಾನಿರ್ವಚನೀಯರೂಪಾ' ಎನಿಸಿದ ಸದಸತ್ತಲ್ಲದ ಮಾಯೆಯು ಅನಿರ್ವಚನೀಯವಾಗಿಯೇ ಉಳಿಯುವಳು ಆದರೆ ಅದೇ ಶ್ರೀಶಂಕರರೇ ಆನಂದ ಲಹರಿಯನ್ನು ಬರೆಯುವಾಗ ಅವರ ಹೃದಯದಲ್ಲಿ 'ಸತ್' ಆದ ಶಕ್ತಿಯೇ ಉದ್ಭವಿಸಿ ಈ ರೀತಿ ಸ್ತೋತ್ರ ಮಾಡಿಸಿಕೊಂಡಿರುವಳು :

CC-0. Jangamwadi Math Collection. Digitized by eGangotri

"ಶಿವಃ ಶಕ್ತ್ಯಾ ಯುಕ್ತೋ ಯದಿ ಭವತಿ ಶಕ್ತಃ ಪ್ರಭವಿತುಂ
ನಚೇದೇವಂ ದೇವೋ ನ ಖಲು ಕುಶಲಃ ಸ್ಪಂದಿತುಮಪಿ
ಅತಸ್ತ್ವಾಮಾರಾಧ್ಯಾಂ ಹರಿಹರವಿರಿಂಚ್ಯಾದಿಭಿರಪಿ
ಪ್ರಣಂತುಂ ಸ್ತೋತುಂ ವಾ ಕಥಮಕೃತಪುಣ್ಯಃ ಪ್ರಭವತಿ"

'ಆನಂದಲಹರಿ'ಯ ಮೊದಲನೆಯ ಶ್ಲೋಕವಿದನ್ನು ಹೀಗೆ ಕನ್ನಡಿಸಬಹುದು :

ಕಂದ :

ಶಕ್ತಿವಿಶಿಷ್ಟಂ ಪ್ರಭವಿಸೆ
ಶಕ್ತಿರಹಿತನಾ ಶಿವನೆ ಚಲಿಸಲುಮಶಕ್ತಂ ||
ಶಕ್ತರೆ ? ನಮಿಸಲ್ ಸ್ತುತಿಸಲ್
ಶಕ್ತಿಯನಜ ಹರಿಹರನತೆಯನಕೃತಪುಣ್ಯರ್

ತ್ರಿಗುಣಜನಿರತರಾದ ತ್ರಿಮೂರ್ತಿಗಳಿಂದ ವಂದಿತಳಾದ "ಸುಗುಣೈರ್ನಿಗೂಢಾಂ" ಎನಿಸಿದ ಶಕ್ತಿಯಿಂದ ವಿಶಿಷ್ಟನಾದರೇನೇ ತ್ರಿಮೂರ್ತಿಗಳಿಗೂ ಅತೀತನಾದ ಪತಿ ಪರಶಿವನು ಸೃಷ್ಟ್ಯಾದಿ ಕಾರ್ಯಗಳನ್ನು ಮಾಡಲು ಶಕ್ತನಾಗುವನು ಎಂದು ಭಾವ. ಇದೇ ಶಕ್ತಿವಿಶಿಷ್ಟಾದ್ವೈತವೆಂದು ಕರೆಯಲ್ಪಡುತ್ತಿರುವ ವೀರಶೈವರ ಶಿವಾದ್ವೈತ ಸಿದ್ಧಾಂತ. "ದಂಡವಿಶಿಷ್ಟಪುರುಷ", "ವಿಶಿಷ್ಟಾದ್ವೈತ" ಮೊದಲಾದ ಪದಗಳಲ್ಲಿ ದ್ವೈತಭಾವನೆಯು ಬರುವಂತೆ "ಶಕ್ತಿವಿಶಿಷ್ಟಾದ್ವೈತ"ವೆಂಬ ಪದದಲ್ಲಿಯೂ ದ್ವೈತಭಾವನೆಯು ಬರುವುದರಿಂದ ಈ ಪದವು ಶಾಸ್ತ್ರೀಯವಾದುದಲ್ಲವಾಗಿ ಶಿವಾದ್ವೈತಮಂಜರಿ, ಶ್ರೀಕರಭಾಷ್ಯ, ಸಿದ್ಧಾಂತಶಿಖಾಮಣಿ ಮೊದಲಾದ ಆಧಾರ ಗ್ರಂಥಗಳಲ್ಲಿ ಅದ್ವೈತವನ್ನೇ ಪ್ರತಿಪಾದಿಸುವ ಈ ಮತವನ್ನು "ಶಕ್ತಿವಿಶಿಷ್ಟಾದ್ವೈತ ಮತ" ವೆಂದು ಹೆಸರಿಟ್ಟು ಕರೆದಿಲ್ಲ. ಆದರೂ ವೀರಶೈವರ ಶಿವಾದ್ವೈತ ಸಿದ್ಧಾಂತದಲ್ಲಿ ಪರಶಿವಾಭಿನ್ನವಾದ ಶಕ್ತಿಯ ವಿಕಾಸದಿಂದಲೇ ಸೃಷ್ಟ್ಯಾದಿಕಾರ್ಯಗಳಿಗೆ ಪ್ರವೃತಿಯುಂಟಾಗುವುದರಿಂದಲೂ, ಭಕ್ತಿರೂಪವಾದ ಶಕ್ತಿಯಿಂದಲೇ ಮುಕ್ತಿಯಾಗುವುದರಿಂದಲೂ ಈ ಮತಕ್ಕೆ ಶಕ್ತಿಯ ಪ್ರಾಮುಖ್ಯತೆಯನ್ನು ತೋರಿಸುವ "ಶಕ್ತಿವಿಶಿಷ್ಟಾದ್ವೈತ" ಎಂಬ ಪದವು ರೂಢಿಯಲ್ಲಿರುವುದು. ಆಗಮಾಧಾರದಂತೆ :

"ಅನಾದಿನಿಧನಾಚ್ಛಾಂತಾಚ್ಛಿವಾತ್ ಪರಮಕಾರಣಾತ್
ಇಚ್ಛಾ ಶಕ್ತಿರ್ವಿನಿಷ್ಕ್ರಾಂತಾ ತತೋ ಜ್ಞಾನಂ ತತಃ ಕ್ರಿಯಾ
ತತ್ರೋತ್ಪನ್ನಾನಿ ಭೂತಾನಿ ಭವನಾನಿ ಚತುರ್ದಶ"

ಆದ್ಯಂತರಹಿತನೂ ಶಾಂತನೂ ಪರಮ ಕಾರಣನೂ ಆದ ಪರಶಿವನಿಂದ ಇಚ್ಛಾ-ಜ್ಞಾನ-ಕ್ರಿಯಾಶಕ್ತಿಗಳು ಆವಿರ್ಭವಿಸಿ ಶಕ್ತಿವಿಶಿಷ್ಟಾದ್ವೈತ ಶಿವವಾಯಿತೆಂದರೆ,

CC-0. Jangamwadi Math Collection. Digitized by eGangotri

ದ್ವೈತಸೃಷ್ಟಿಗೆ ಪೀಠಿಕೆಯಾಗುವುದು. ಹೀಗೆ ನೆನಹುದೋರಿ ಶಕ್ತಿಯ ಆವಿರ್ಭಾವವಾಗದ ಮೊದಲು ಇರುವುದು ನಿವಾತಜ್ಯೋತಿಯಂತೆ, ಪ್ರಶಾಂತಸಮುದ್ರದಂತೆ ನಿಶ್ಚಲವೂ ನಿಷ್ಕ್ರಿಯವೂ ಆದ ಪರಶಿವನೇ. ಆದುದರಿಂದ ಶಿವಾದ್ವೈತವೆಂಬ ಪದವೇ ಈ ಮತದ ಸರಿಯಾದ ಹೆಸರು. ಅಲ್ಲದೆ ಇಂಗಡಲೊಳಿಂಪು ಬೆಳದಿಂಗಳೊಳು ತಂಪು ಕುಸುಮಂಗಳೊಳು ಕಂಪು ಬೆರೆದಂತೆ ಶಿವನಲ್ಲಿ ಶಕ್ತಿಯು ಬೆರೆದಿರುವುದರಿಂದ ಈ ಎರಡನೆಯ ಮೆಟ್ಟಲನ್ನು ಸೂಚಿಸಲು ಸಹ ದ್ವೈತ ಭಾವನೆಯನ್ನು ಕೊಡುವ ಶಕ್ತಿವಿಶಿಷ್ಟಾದ್ವೈತ ಪದವು ಅಷ್ಟು ಸರಿಯಾದುದಲ್ಲ. 'ದಂಡಿ' ಎಂಬಂತೆ ಒಂದರಲ್ಲಿ ಇನ್ನೊಂದು ವಿಶಿಷ್ಟವಾಗಿ ಒಂದೇ ಎಂಬಂತೆ ಹೇಳುವಾಗ ವಿಶಿಷ್ಟಪದಪ್ರಯೋಗವು ಸರಿ.

## ಶಿವಾದ್ವೈತವೆ ವೀರಶೈವದ ಪರಮಗುರಿ. ಎರಡನೆಯ ಮೆಟ್ಟಲು 'ಶಕ್ತಿವಿಶಿಷ್ಟಾದ್ವೈತ'ದ ಶಿವನು

ವೀರಶೈವರ ಅಂತಿಮ ಗುರಿಯು 'ವೀರಶೈವ ತತ್ವಪ್ರಕಾಶಿಕ'ಯಲ್ಲಿ ಹೇಳಿದಂತೆ :

> "ತೋರಿಕೆಗಳೇನೂ ತೋರದಂದು ಏಕಮೇವಾದ್ವಿತೀಯಂ ಬ್ರಹ್ಮ
> ವೆಂಬ ಶ್ರುತ್ಯರ್ಥಮಾಗಿ ಕುರುಹಿಲ್ಲದ ಮತ್ತೊಂದರಿವಿಲ್ಲದೆ
> ಅಖಂಡಪೂರ್ಣ ಚೈತನ್ಯರೂಪಮಾಗಿ, ಕೇವಲ ತಾನೆ ತಾನೆಯಾಗಿ,
> ಅಖಂಡ ಮಹಾ ಚಿದಾಕಾಶರೂಪಮಾದ ನಿರಂಜನಬ್ರಹ್ಮವೇ
> ನಿಶ್ಶಬ್ದವಾಗಿ ಅನಿರ್ವಾಚ್ಯವಾಗಿರ್ಪುದೆ ನಿರವಯವಲಿಂಗ"

ಏಕಮೇವಾದ್ವಿತೀಯವಮಾದ ಈ ನಿರಂಜನಲಿಂಗವೇ ಶಿವಾದ್ವೈತದ ಗುರಿ. ಈ ಏಕಮೇವಾದ್ವೈತವೆನಿಸಿದ ನಿರಂಜನಲಿಂಗದಲ್ಲಿ ಲೀಲೆದೋರಿ ಅದರ ಸೂಕ್ಷ್ಮ ಸ್ಮರಣೆಯಿಂದ ನಾದ-ಬಿಂದು-ಕಲೆಗಳು ಉದಯವಾಗಿ ಶಕ್ತಿಯು ಆವಿರ್ಭವವಾಗಿ ದ್ವೈತಪ್ರಪಂಚವು ಹೊರ ಹೊಮ್ಮುವುದು. ಪರಶಿವನಲ್ಲಿ ನೆನಹುದೋರಿ ಶಕ್ತಿಯು ಆವಿರ್ಭಾವವಾಗುವ ಮೊದಲು ಶಿವಾದ್ವೈತವಿರುವುದು. ಹೀಗೆ ಸ್ಮರಣೆ ಅಥವಾ ನೆನಹು ತೋರಿದ ಮೇಲೆ ಶಿವನಲ್ಲಿ ಶಕ್ತಿಯು ಆವಿರ್ಭಾವವಾಗುವುದು. ಆಗ ಶಕ್ತಿ ವಿಶಿಷ್ಟ ಶಿವನಾಗುವನು. ಹೀಗೆ ಶಕ್ತಿ ವಿಶಿಷ್ಟನಾಗದ ಮುನ್ನ "ತೋರಿಕೆಗಳೇನೂ ತೋರದಂದು ಏಕಮೇವಾದ್ವಿತೀಯಂ" ಎನಿಸಿ, "ಕುರುಹಿಲ್ಲದೆ, ಮತ್ತೊಂದರಿವಿಲ್ಲದೆ" ಶಿವಾದ್ವೈತ ಸ್ಥಿತಿಯೇ ಇರುವುದು.

CC-0. Jangamwadi Math Collection. Digitized by eGangotri

"ಆ ನಿರವಯಲಿಂಗವು ತನ್ನ ಲೀಲಾ....ಅತಿಸೂಕ್ಷ್ಮಸ್ಮರಣೆ-
ಯಿಂದ ಅಖಂಡಮಹಾ ಚಿದಾಕಾಶಸ್ವರೂಪವಾದ ನಿರಂಜನಬ್ರಹ್ಮ
ವಾಯಿತು. ಅತಿಸೂಕ್ಷ್ಮಸ್ಮರಣೆಯೆಂದುದೂ, ಸೂಕ್ಷ್ಮದೊಳಗಣ
ಸೂಕ್ಷ್ಮಸ್ಮರಣೆಯೆಂದುದೂ ಒಂದೇ....ಆ ನೆನಹೇ
ನಿಷ್ಕಳ ಚಿತ್ತ....ಚಿತ್ತನ ಚಿತ್ರಭಾಚೈತನ್ಯವೆ ಚಿತ್ಕಳೆ;
ಆ ಚಿತ್ತಿನ ಚಿತ್ ಪ್ರಭಾಚೈತನ್ಯ ಘೋಷವೇ ಚಿನ್ನಾದ.
ಆ ಚಿತ್ಕಳೆ ಚಿನ್ನಾದವೆರಡರ ಸಮರಸಾನಂದ ಪ್ರವಾಹದ
ಘಟ್ಟಿಯೆ ಚಿದ್ಬಿಂದು....ಚಿದ್ಬಿಂದು ಚಿನ್ನಾದಂಗಳ ಚೈತನ್ಯವೇ
ಚಿತ್ಕಳೆ. ಈ ಮೂರರೊಳಗೊಂಡ ಶುದ್ಧ ನಿಷ್ಕಳ ಚಿತ್ತಿನ
ಚೈತನ್ಯವೇ ಮಹಾಲಿಂಗವು....ಅಖಂಡ ಗೋಳಾಕಾರಮಾಗಿ
ಜಗತ್ಸೃಷ್ಟಿ ವೈಭವದ ಸಮಯದಲ್ಲಿ ಸಕಲ ನಿಷ್ಕಲವಾದ ಸದಾಶಿವ
ತತ್ವಾದಿ ಸರ್ವ ತತ್ವಂಗಳು ಅನಂತಕೋಟಿ ಬ್ರಹ್ಮಾಂಡಂಗಳು
ತೋರಿಯಡಗುವುದಕ್ಕೆ ಸ್ಥಾನವಾಗಿ ಚಿದ್‌ಬ್ರಹ್ಮಾಂಡರೂಪವಾಗಿದ್ದ ಕಾರಣ
ನಿಷ್ಕಳ ಚಿದ್ಬಿಂದುವೆ ಲಿಂಗವೆಂದು ಹೇಳಲ್ಪಟ್ಟಿತ್ತು."

ಹೀಗೆ 'ವೀರಶೈವ ತತ್ವಪ್ರಕಾಶ'ದಲ್ಲಿ ಹೇಳಿರುವಂತೆ, ಶಿವಾದ್ವೈತದಲ್ಲಿ ಶಕ್ತಿಯು ಆವಿರ್ಭವಿಸಿ ಅನಂತ ಬ್ರಹ್ಮಾಂಡಗಳು ಉದಯಿಸಿ ಅಲ್ಲಿಯೇ ಲಯವಾಗುವವು. ಶಕ್ತಿಯುದಯಿಸಿದ ಮುನ್ನಿನ ಎಂದರೆ ಅಂತಿಮ ಸ್ಥಿತಿಯು "ಕುರುಹಿಲ್ಲದೆ ಮತ್ತೊಂದರಿವಿಲ್ಲದೆ....ತಾನೆತಾನೆಯಾಗಿ ಅಖಂಡ ಚಿದಾಕಾಶರೂಪವಾದ ನಿರಂಜನ ಬ್ರಹ್ಮವೇ" ಎನಿಸಿದ ಅದ್ವೈತವಾದ ಪರವಶಿವೇ ಆದುದರಿಂದ ವೀರಶೈವ ಮತಕ್ಕೆ ಶಿವಾದ್ವೈತ ಮತವೆಂಬುಡೇ ಸರಿಯಾದ ಹೆಸರು. ಶಕ್ತಿಯು ಆವಿರ್ಭಾವ ವಾದ ಮೇಲೆ ಶಿವನನ್ನು ಶಕ್ತಿವಿಶಿಷ್ಟವೆಂದು ಹೇಳುವಾಗಲೂ ಶಿವನಿಗೂ ಶಕ್ತಿಗೂ ಅಭೇದವೆಂಬುದನ್ನೂ, ದ್ವೈತ ಭಾವನೆ ಇಲ್ಲವೆಂಬುದನ್ನು ಮರೆಯಲಾಗದು.

ಪರತರ ತತ್ವವನ್ನು ಪರಶಿವನೆಂದೂ, ಶಕ್ತಿ ತತ್ವವನ್ನು ಪರಶಿವನು ಸಹ ಧರ್ಮಿಣಿಯೆಂದೂ, ಇವರಿಂದ ಸರ್ವಜೀವರೂ ಉದಯಿಸಿದರೆಂದೂ ಭಾವಿಸಿ ಶಿವನನ್ನು ಲಿಂಗರೂಪದಲ್ಲಿ ಪೂಜಿಸಿ ಶಿವಯೋಗದಿಂದ ಮೋಕ್ಷವನ್ನು ಪಡೆಯ ಬಹುದೆಂಬುದೇ ಸ್ಥೂಲವಾಗಿ ಹೇಳಬಹುದಾದ ವೀರಶೈವಸಿದ್ಧಾಂತ. ಈ ಸಿದ್ಧಾಂತವು ಬೀಜರೂಪದಲ್ಲಿ ಅನಾದಿ ಕಾಲದಲ್ಲಿಯೇ ಉಗಮವಾಗಿ ಕಾಲಕ್ರಮದಲ್ಲಿ ಪ್ರಗತಿ ಹೊಂದಿ ವೀರಶೈವದಲ್ಲಿ ಪರಿಪೂರ್ಣವಾಯಿತು. ಸಹಸ್ರಾರು ವರ್ಷಗಳ ಹಿಂದೆಯೇ ವೀರಶೈವದ ಮೂಲರೂಪವಿದ್ದಿತೆಂದರೆ ಆಶ್ಚರ್ಯವಾಗಬಹುದು. ಆದರೆ, ಈ ಮಾತು ನಿಜ.

CC-0. Jangamwadi Math Collection. Digitized by eGangotri

## ಮೂಲರೂಪದಲ್ಲಿ ವೀರಶೈವದ ಉಗಮ

ನರನು ವಾನರ ಮಟ್ಟದಿಂದ ಮಾನವಮಟ್ಟಕ್ಕೆ ಏರಿದಾಗಲೇ ಹೂವಿನಂತೆ ಸರ್ವಸುಂದರವೂ ಶುಭದಾಯಕವೂ ಆಗಿರುವಂತೆಯೇ, ಇನ್ನೊಂದು ರೀತಿಯಲ್ಲಿ ಸಿಡಿಲಿನಂತೆ ರುದ್ರಭಯಂಕರವಾಗಿರುವ ಈ ಜಗತ್ತನ್ನು ನೋಡಿ ಶಿವರುದ್ರ ಸೃಷ್ಟಿಕರ್ತನ ಕಲ್ಪನೆಯು ಮಾನವನ ಮನಸ್ಸಿನಲ್ಲಿ ಮೂಡಿರಬೇಕು. ಅವನಿಗೆ ಅದ್ಭುತವಾಗಿ ಕಂಡ ಸೂರ್ಯ ಚಂದ್ರ ನಕ್ಷತ್ರ ಆಕಾಶಗಳಂತೆ ಗೋಳಾಕಾರವಾದ ಲಿಂಗರೂಪದಲ್ಲಿ ಆ ಸೃಷ್ಟಿಕರ್ತನನ್ನೂ ಪೂಜಿಸಿರಬೇಕು. ಆ ಶಿವರುದ್ರನಿಂದ ಸಕಲ ಚರಾಚರಗಳುತ್ಪತ್ತಿಯಾಗಲು ಅವನಿಗೆ ಸರ್ವಮಂಗಳೆಯೂ ಹಾಗೂ ಕಾಳಿಯೂ ಆದ ಶಕ್ತಿಯು ಜತೆಗೂಡಿಸಿದುದೂ ಆಯಿತು. ಅವನ ಬಗೆಗಿನ ಈ ಭಾವನೆಗಳು ಭಾರತದೇಶದಲ್ಲಿ ಪ್ರಗತಿಹೊಂದಿ ಪರಿಪೂರ್ಣತೆಯನ್ನು ಪಡೆದು ಇಂದೂ ನೆಲೆಯಾಗಿರುವುವು. ವೇದದ ಕಾಲಕ್ಕಿಂತಲೂ ಹಿಂದಿನ ಹಿಂದುಸ್ಥಾನದ ಮೊಹೆಂಜೋದಾರೋ ಮತ್ತು ಸಿಂಧುತೀರದ ನಾಗರಿಕತೆಯ ವಿಷಯವಾಗಿ ಬರೆದಿರುವ ಗ್ರಂಥದ ಅವತರಣಿಕೆಯಲ್ಲಿ ಸರ್ ಜಾನ ಮಾರ್ಷೆಲ್ಲರು ಬರೆದಿರುವುದಿದ್ದು ಮೇಲೆ ಹೇಳಿದುದನ್ನು ಸಮರ್ಥಿಸುತ್ತದೆ.

"In the religion of the Indus people there is much of course that might be paralleled in other countries. This is true of every pre-historic religions as well. But taken as a whole their religion is so charactoristically Indian as hardly to be distinguishable from still living Hinduism or at least from that aspect of it which is bound up with animism and the cults of Shiva and the Mother Goddess–still the two most potent forces in popular worship. Among the many revelations that Mohenjo–daro and the Harappa have had in store for us, none perhaps is more remarkable than this discovery that Shaivism has a history going back to the chalcolithic Age or perhaps even further still and that it thus takes its place as the most ancient living faith in the world".

CC-0. Jangamwadi Math Collection. Digitized by eGangotri

ಆದಿಮಾನವನ ಕಾಲದಿಂದಲೂ ಬೆಳೆದು ಬಂದ ಶೈವಮತದಷ್ಟು ಪುರಾತನವಾದುದು ಬೇರೆ ಯಾವ ಮತವೂ ಇಲ್ಲವೆಂಬುದೂ ಮತ್ತು ಆಗಿನ ಶೈವಮತಕ್ಕೂ ಈಗಿನ ಶೈವಮತಕ್ಕೂ ಅಷ್ಟು ವ್ಯತ್ಯಾಸವೇನೂ ಇಲ್ಲವೆಂಬುದೂ ಮೇಲಿನ ಆಧಾರದಿಂದ ತಿಳಿದುಬರುವುದು. ಆದಿಮಾನವನ ಕಾಲದಲ್ಲಿ ಉಗಮವಾಗಿ, ವೇದೋಪನಿಷತ್ತುಗಳ ಕಾಲದಲ್ಲಿ ಪ್ರಗತಿಹೊಂದಿ, ಬಸವಾದಿ ಪ್ರಮಥರ ಕಾಲದಲ್ಲಿ ಪರಿಪೂರ್ಣತೆಯನ್ನು ಪಡೆದ ಶೈವ ಧರ್ಮದ ಈಗಿನ ವೀರಶೈವಧರ್ಮದಲ್ಲಿರುವ ಲಕ್ಷಣಗಳೆಲ್ಲವನ್ನೂ ಶೈಶವಾವಸ್ಥೆಯ ಶೈವದಲ್ಲಿ ಕಾಣಬಯಸುವುದು, ಇಂದು ಗಂಗಾತೀರದಲ್ಲಿ ಕಾಣುವ ಜಟಾಧಾರಿ ದೇವದತ್ತನ ಲಕ್ಷಣಗಳೆಲ್ಲ ಅಂದು ಗಂಗಾತೀರದಲ್ಲಿ ನೋಡಿದ ದೇವದತ್ತ ವಟುವಿನಲ್ಲಿಯೋ ಶಿಶುದೇವದತ್ತನಲ್ಲಿಯೋ ಇದ್ದಿತೇ ಎಂದು ವಿಚಾರಮಾಡಿದಷ್ಟು ಕಷ್ಟವಾಗಬಹುದು. ಆದರೆ ಶಿಶುವೇ ವಟುವಾಗಿ ಆ ಮುಂದೆ ಜಟಾಧಾರಿಯಾದ ದೇವದತ್ತನಾಗಿ ಪರಿಣಮಿಸಿದನಷ್ಟೆ ಸ್ಪಷ್ಟವಾಗಿ ಆಗಿನಶೈವವು ಈಗಿನ ವೀರಶೈವವಾಗಿ ಪರಿಣಮಿಸುವದರಲ್ಲಿ ಸಂದೇಹವಿಲ್ಲ. ಆದಿ ಮಾನವನ ಶೈವದ ಲಕ್ಷಣಗಳು ಇನ್ನೂ ಅಳಿಯದೆ ಉಳಿದು ಬಂದಿವೆ.

## ಅಂದಿನ ಶಿವನ ಕಲ್ಪನೆಯು ಇಂದೂ ಉಳಿದು ಬಂದಿದೆ

ಆದಿಮಾನವನ ಕಲ್ಪನೆಯಂತೆ ಶಿವನು ಊರ್ಧ್ವರೇತುವು; ವಿರೂಪಾಕ್ಷನಾದ "ಮೂನ್‌ಕಣ್ಣ"ನು ಎಂದರೆ ಮೂರು ಕಣ್ಣುಳ್ಳವನು, ತ್ರಿಶೂಲಧಾರಿಯು, ಸರ್ಪಭೂಷಣನು, ಅರ್ಧನಾರೀಶ್ವರನು ಮತ್ತು ಪಶುಪತಿಯು. ಇವೆಲ್ಲವು ಮೊಹೆಂಜೋದಾರೋ ಮತ್ತು ಹರಪ್ಪಾ ಸಂಬಂಧವಾದ ಗ್ರಂಥ ಮತ್ತು ಲೇಖನಗಳಿಂದ ವಿಶದೀಕರಿಸಲ್ಪಟ್ಟಿರುವುದು ಪ್ರಸಿದ್ಧವೇ ಆಗಿರುವುದರಿಂದ ಆ ಆಧಾರಗಳನ್ನು ಇಲ್ಲಿ ಕೊಟ್ಟು ಲೇಖನವನ್ನು ವಿಸ್ತಾರಗೊಳಿಸಬೇಕಾಗಿಲ್ಲ. ಆದರೂ ಆಗಿನ ಶಿವಶಕ್ತಿಯರ ಕಲ್ಪನೆಯಲ್ಲಿ ಎಷ್ಟು ಹಿರಿಮೆ ಇತ್ತೆಂಬುದು ತೋರಿಸಲು ಕೆಳಗಿನ ಭಾಗವನ್ನೂ ಕೊಟ್ಟಿದೆ :

One marble statuette has the head neck and body quite erect and half shut eyes fixed on the tip of the nose. Another is draped in the Upavita fashion....His shawl has rosettes having the form of the bilva leaf, the most sacred material for worship in the Shiva cult. The philosophy of the age crystallised in the discipline known later as

CC-0. Jangamwadi Math Collection. Digitized by eGangotri

brahmacharya sextual restraint, is an evidence in the urdhvamedhra representation of Shiva on the seal. It is not phallic Orgies but their conquest that constituted the essence of religion at the time. It is not without significance that the icon of the goddess has seven other goddesses standing below in a row. It is the theme of the Chandi Saptasati that the seven symbolise the conquest of the flesh–lust, anger, greed, pride, jealousy, infatuation and ignorance. The victory of the goddess was after those purified energies had entered into her spirit.

(Pro–Indian culture,
by S. V. Venkateshwar, *M. A.*)

ಯೋಗಾರೂಢನಾದ ಶಿವನ ಪ್ರತಿಮೆಯಿಂದ ಶಿವಯೋಗದ ಕಲ್ಪನೆಯು ಆ ಕಾಲದಲ್ಲಿತ್ತೆಂಬುದು ಗೊತ್ತಾಗುವುದು. ಎದೆ, ಕತ್ತು, ಶಿರಸ್ಸುಗಳು ನೇರವಾಗಿರಲು ಅರ್ಧ ನಿಮೀಲಿತ ನೇತ್ರದ ದೃಷ್ಟಿಯು ನಾಸಿಕಾಗ್ರದಲ್ಲಿರುವುದರಿಂದ ಇಂದ್ರಿಯ ಗಳನ್ನು ಮನಸ್ಸಿನಿಂದ ದಮನಮಾಡಿರುವುದು ಕಂಡುಬರುವುದು. ಶ್ವೇತಾಶ್ವತ ರೋಪನಿಷತ್ತಿನಲ್ಲಿ ಹೇಳಿನಂತೆ :

ತ್ರಿರುನ್ನತಂ ಸ್ಥಾಪ್ಯ ಸಮಂ ಶರೀರಂ
ಹೃದೀಂದ್ರಿಯಾಣಿ ಮನಸಾ ಸನ್ನಿವೇಶ್ಯ ।
ಬ್ರಹ್ಮೋಡುಪೇನ ಪ್ರತರೇತ ವಿದ್ವಾನ್
ಸ್ರೋತಾಂಸಿ ಸರ್ವಾಣಿ ಭಯಾನಕಾನಿ ॥

ಎಂದರೆ,

ಕಂ.॥ ನಿಲೆ ಕಂಧರವಕ್ಷಶಿರಂ
ಸಲೆ ನೆಟ್ಟನೆ, ಮನದಿನಿಂದ್ರಿಯತತಿ ಹೃದಯದೋಳ್
ನಿಲಲಾ ಬ್ರಹ್ಮೋಡುಪದೋಳ್
ಜಲದ ಭಯಾನಕ ಸೆಳವನೆ ದಾಂಟುಗಮಲ್ತೇಂ ॥

ಎಂಬ ಅರ್ಥವುಳ್ಳ ಶ್ವೇತಾಶ್ವತರ ಮಂತ್ರವು ಜ್ಞಾಪಕಕ್ಕೆ ಬರುವುದು. ವಿಗ್ರಹದ ಮೇಲೆ ಕೆತ್ತಿರುವ ಬಿಲ್ವದಳದ ಹಾರವು ಗಮನಾರ್ಹವಾದುದು. ವಿಗ್ರಹದ

CC-0. Jangamwadi Math Collection. Digitized by eGangotri

ಊರ್ಧ್ವರ್ವೇಢ್ರವು ಬ್ರಹ್ಮಚರ್ಯದ ಅವಶ್ಯಕತೆಯನ್ನು ಸೂಚಿಸುವುದು. ಸಪ್ತ ಮಾತೃಕೆಗಳಿಂದ ಕೂಡಿದ ಶಕ್ತಿವಿಗ್ರಹವು ಚಂಡಿಸಪ್ತಶತಿಯಲ್ಲಿ ಹೇಳಿದಂತೆ, ವಿಷಯವಾಸನೆ, ಕೋಪ, ದುರಾಶೆ, ಅಹಂಭಾವ, ಮತ್ಸರ, ಉನ್ಮಾದ, ಅಜ್ಞಾನ ಮತ್ತು ಮೋಹಗಳನ್ನು ಜಯಿಸಿದ ಕುರುಹಿನಿಂದ ಕೂಡಿದೆ.

"Shiva was one of the principal dieties of the people along with mother goddess"

ಎಂದೂ

"The diety is sitting crosslegged in a padmasana posture with eyes turned towards the tip of the nose which evidences yogeswar aspect of the diety"

ಎಂದೂ ಆಲೆನ್ ಮತ್ತು ಆನ್‌ವಿನ್ ಎಂಬವರು, ತಮ್ಮ "Vedic Age" ಎಂಬ ಗ್ರಂಥದಲ್ಲಿ ಮೊಹೆಂಜೋದಾರೋ ವಿಗ್ರಹಗಳ ವಿಷಯವಾಗಿ ಹೇಳಿದ್ದಾರೆ. ಶಕ್ತಿಯೊಡನೆ ಶಿವನು ಪ್ರಧಾನ ದೇವರಾಗಿ ಪೂಜಿಸಲ್ಪಡುತ್ತಿದ್ದನೆಂದೂ, ಪದ್ಮಾಸೀನನಾಗಿ ಮೂಗಿನ ತುದಿಯಲ್ಲಿ ದೃಷ್ಟಿ (ನಾಸಿಕಾಗ್ರದೃಷ್ಟಿ) ನೆಟ್ಟಿರುವನಾಗಿ ಯೋಗೀಶ್ವರನಂತೆ ಕೆತ್ತಲ್ಪಟ್ಟಿರುವದಾಗಿಯೂ ಹೇಳಿದ್ದಾರೆ.

ವೇದಗಳ ಕಾಲಕ್ಕಿಂತಲೂ ಬಹಳ ಹಿಂದೆಯೇ ಎಂದರೆ, ಸಿಂಧುನದಿಯ ತೀರದ ನಾಗರಿಕತೆಯ ಕಾಲದಲ್ಲಿಯೇ ಲಿಂಗಧಾರಣೆಯು ಪ್ರಚಾರದಲ್ಲಿತ್ತೆಂಬುದು ಭೂಗರ್ಭಸಂಶೋಧನೆಯಲ್ಲಿ ನಿಷ್ಣಾತರಾದ ಸರ್ ಜಾನ್ ಮಾರ್ಷೆಲ್ಲರು ಬರೆದಿರುವ "Mohenzo-daro and the Indus civilisation" ಎಂಬ ಗ್ರಂಥದ ಮೊದಲು ಭಾಗದ ೫೯ ನೆಯ ಪುಟದಲ್ಲಿ ಸಿಂಧು ತೀರದಲ್ಲಿ ಲಿಂಗಗಳ ವಿಷಯವಾಗಿ ಬರೆದಿರುವುದರಿಂದ ತಿಳಿದು ಬರುವುದು. ಅದು ಹೀಗಿದೆ—

"Indeed the only explanation applicable to them all is that they were sacred objects of some sort, the larger ones serving as aniconic agalmata for cult purposes, the smaller as amulets to be carried on the person just as miniature lingas are commonly carried by saivites today."

CC-0. Jangamwadi Math Collection. Digitized by eGangotri

ಈಗ ಸಿಕ್ಕಿರುವ ಆಗಿನ ಕಾಲದ ಲಿಂಗಗಳಲ್ಲಿ ಸಣ್ಣವನ್ನು ಆಗಿನ ಜನರು ಈಗಿನ ಶೈವರಂತೆ ಧರಿಸುತ್ತಿದ್ದರೆಂಬ ಅಭಿಪ್ರಾಯಕ್ಕೆ ಮಾರ್ಷೆಲ್ಲರು ಬಂದಿದ್ದಾರೆ. ಈ ಶೈವರು ಲಿಂಗಾಯತರೆಂಬುದು ೬೧ನೆಯ ಪುಟದ ಅಡಿಟಿಪ್ಪಣಿಯಲ್ಲಿ ಸ್ಪಷ್ಟ ಮಾಡಿದ್ದಾರೆ. ಆ ಟಿಪ್ಪಣಿಯಿದು :

"Miniature lingas made of stone glass and other materials are frequently carried by saivites and invariably by members of the saiva sect of Lingayats who wear them in a little casket suspended round the neck."

ಈ ಅಡಿಟಿಪ್ಪಣಿಯನ್ನು ಅವಶ್ಯಪಡಿಸಿದ ಪುಟದ ಮೇಲಿನ ವಾಕ್ಯವಿದು :

"The use of phallic as protective and spatropaic amulets or as luck bringing talisman is worldwide and is as common in India as it was for example in the Roman world or as it for the matter of that, in Italy."

ಲಿಂಗಧಾರಣೆಯು ಭಾರತದಲ್ಲಿ ಬಹಳ ಹಿಂದಿನಿಂದ ಇದ್ದುದಲ್ಲದೆ ಪ್ರಪಂಚದ ಅನೇಕ ಭಾಗಗಳಲ್ಲಿತ್ತೆಂಬುದು ಇದರಿಂದ ತಿಳಿದು ಬರುವುದು.

ಸರ್ ಜಾನ್ ಮಾರ್ಷೆಲ್ಲರು ಆಗಿನ ಕಾಲದ ಲಿಂಗಗಳೆಲ್ಲವುಗಳಲ್ಲಿಯೂ ಈಗಿನಕಾಲದ ದೇವಸ್ಥಾನದ ಲಿಂಗಗಳಲ್ಲಿಯೂ ಶಿಶ್ನದ ರೂಪವನ್ನು ಕಾಣುವದು ಸರಿಯಲ್ಲವೆಂದು ಹೇಳುತ್ತಾರೆ. ಮೇಲಿನ ಗ್ರಂಥದ ೫೮ ನೆಯ ಪುಟದ ಅಡಿಟಿಪ್ಪಣಿಯಲ್ಲಿ ಅವರೇ ಹೇಳುವಂತೆ :

"Which it is often difficult to separate phallic from beatalic or other sacred stones, it is necessary to guard against the mistake of seeing a phallic meaning in sacred stones, which none really exists.

ಈಗಿ ದೊರೆತಿರುವ ಹಿಂದಿನ ಕಾಲದ ಲಿಂಗಗಳಲ್ಲಿ ಕೆಲವು ಸ್ಪಷ್ಟವಾಗಿ ಶಿಶ್ನಾಕಾರವಾಗಿವೆ. ಇವು ಮೊದಲು ದುಂಡಗಿದ್ದು ಮಧ್ಯ ಕತ್ತಿನಂತೆ ಸಣ್ಣಗಾಗಿ

CC-0. Jangamwadi Math Collection. Digitized by eGangotri

ಕೊನೆಯಲ್ಲಿ ಶಿಶ್ನದ ತುದಿಯಂತೆ ಮೂರ್ತಿಯುಳ್ಳವು. ಉಳಿದವು ಈಗಿನ ದೇವಸ್ಥಾನದ ಲಿಂಗಗಳಂತೆ ದುಂಡಗಾಗಿರುವವು. ಎರಡು ರೀತಿಯಲ್ಲಿ ಇರುವ ಲಿಂಗಗಳೂ ಶಿಶ್ನಾಕಾರವೆನ್ನುವುದು ಸರಿಯಲ್ಲವೆಂದು ಅವರೇ ಅಭಿಪ್ರಾಯ ಪಟ್ಟಿರುವರು:

"But primar facie itis unlikely that phallic emblem would have been conventionalised in two different forms in the Indus Valley, and if a choice has to be made between the first and the second classes of these objects, the shape of the former clearly gives them more little to be regarded as phallic than the latter. Moreover though they resemble the Indian lingas, they equally resemble the bactylic stones of Western Asia, such as the semitic massebha, to which there is no reason to attach any phallic meaning..In India itself bactylic stones such as lhose which guard the fields and crossways are just as numerous as phallic ones."

ಹೊಲದಲ್ಲಿ ಪೂಜಿಸುವ ಗುಂಡುಕಲ್ಲುಗಳನ್ನು ಶಿಶ್ನರೂಪದವೆನ್ನುವದಿಲ್ಲ. ಶಿಶ್ನಾಕಾರವು ಸ್ಪಷ್ಟವಾಗಿರುವ ಕೆಲವನ್ನು ಶಿಶ್ನಾಕಾರವೆನ್ನಬೇಕೇ ಹೊರತು ದುಂಡಗಾಗಿರುವವನ್ನೆಲ್ಲ ಶಿಶ್ನಾಕಾರವೆಂದು ಏಕೆನ್ನಬೇಕು ? ಆಗಿನ ಕಾಲದ ಜನರು ಶಿಶ್ನಾಕಾರವನ್ನು ಎರಡು ರೀತಿಯಲ್ಲಿ ಪೂಜಿಸಲಾರರು–ಎಂಬುದೇ ಮಾರ್ಷಲ್ಲರ ವಾದಸರಣಿ.

ಹಿಂದಿನ ಕಾಲದಲ್ಲಿ ಶಿಶ್ನಾಕಾರವನ್ನು ಪೂಜಿಸುವವರು ಇರಲಿಲ್ಲವೆಂದಲ್ಲ. ಅವರೇ ಈಗಿನ ಕಾಲದ ಶಾಕ್ತರ ಪೂರ್ವಜರು; ಅವರ ಸಿದ್ಧಾಂತದಲ್ಲಿ ಈ ಸಂಪ್ರದಾಯವು ಈಗಲೂ ಇದೆ. ಇವರು ದಕ್ಷಿಣದೇಶದಲ್ಲಿಲ್ಲ. ದಕ್ಷಿಣ ದೇಶದ ತಮಿಳು ಶೈವರ ಮತ್ತು ವೀರಶೈವರ ಗ್ರಂಥಗಳಲ್ಲಿ ಲಿಂಗಕ್ಕೂ ಶಿಶ್ನಕ್ಕೂ ಯಾವ ಸಂಬಂಧವೂ ಕಂಡುಬರುವದಿಲ್ಲ. ಇವರು ಇವೆರಡಕ್ಕೂ ಸಂಬಂಧವನ್ನು ಕಲ್ಪಿಸುವದು ಪಾಪವೆಂದು ಭಾವಿಸುತ್ತಾರೆ. ದೇವಸ್ಥಾನದ ಲಿಂಗಗಳನ್ನು ಶಿಶ್ನಾಕಾರವೆಂದು ಭಾವಿಸಿ ಪೂಜಿಸುವ ಹಿಂದುವು ಇಲ್ಲವೇ ಇಲ್ಲ. ಈ ವಿಷಯವಾಗಿ ವಿಸ್ತಾರಭಯದಿಂದ ಹೆಚ್ಚು ವಿಷಯಗಳನ್ನು ಇಲ್ಲಿ ಕೊಡಲು ಅವಕಾಶವಿಲ್ಲ. ಆದರೆ, ಇಷ್ಟನ್ನು

CC-0. Jangamwadi Math Collection. Digitized by eGangotri

ಹೇಳಬಹುದು. ಆದಿಮಾನವನ ಮೊದಲನೆಯ ಕಲ್ಪನೆ ಅಧಿಭೌತಿಕವಾದುದು. ಅವನು ನೋಡಿದುದರಲ್ಲಿ ಅತ್ಯಂತ ಪ್ರಕಾಶಮಾನವಾದುದೂ ಪ್ರಯೋಜನಕರ ವಾದುದೂ ಸೂರ್ಯಮಂಡಲವು. ದೂರದಲ್ಲಿರುವುದರಿಂದ ಅದನ್ನು ಪೂಜಿಸುವುದು ಸಾಧ್ಯವಿಲ್ಲವಾಗಿ ದುಂಡಾದ ಅದರ ರೂಪದಿಂದ ಎಂದರೆ ಲಿಂಗರೂಪದಿಂದ ಪೂಜಿಸಿದನು. ಆ ಮೇಲೆ ಸೂರ್ಯನು ಕಾಲಕಾಲಕ್ಕೆ ಸರಿಯಾಗಿ ಉದಯಿಸಿ ಮುಳುಗುವಂತೆ ಮಾಡುವ ದೇವನ ಕಲ್ಪನೆಯಾಯಿತು. ಇದು ಆಧಿದೈವಿಕ ಕಲ್ಪನೆ. ಜನರು ಮಂಗಳಕರನಾದ ಅವನನ್ನು ಲಿಂಗರೂಪದಲ್ಲಿಯೇ ಶಿವನೆಂದು ಕರೆದು ಪೂಜಿಸಿದರು. ಶಿವನೂ ಸೂರ್ಯನು ಒಂದೇ ಎಂಬ ಭಾವನೆ ವೇದಗಳ ಮತ್ತು ಪುರಾಣಗಳ ಕಾಲದವರೆಗೂ ಮುಂದುವರೆದುದು ಕಂಡುಬರುವುದು. ಇದಕ್ಕೆಲ್ಲ ಆಧಾರಗಳನ್ನು "ವೇದಗಳ ಕಾಲದಲ್ಲಿ ವೀರಶೈವದ ಪ್ರಗತಿ" ಎಂಬ ಲೇಖನದಲ್ಲಿ ಕೊಡಲಾಗುವುದು. ಮೊಹೆಂಜೊದಾರೊ ನಾಗರಿಕರು ಮೊದಲು ಸೂರ್ಯನನ್ನು ಆ ಮೇಲೆ ಶಿವನನ್ನು ಲಿಂಗರೂಪದಲ್ಲಿ ಪೂಜಿಸುದುದಕ್ಕೆ ಆಗಿನ ಕಾಲದ ಶಿಲಾಲಿಪಿಗಳ ಆಧಾರಗಳಿವೆ. ಸಕಲನೂ, ಸುಗುಣನೂ ಆದ ಉಮಾಪತಿಯು ಕಲ್ಪನೆಗೂ ಮೀರಿದ ನಿಷ್ಕಲ ನಿರ್ಗುಣ ಪರಶಿವಬ್ರಹ್ಮದ ಕುರುಹಾಗಿ ಲಿಂಗವು ಆಧಾರಿಸಲ್ಪಡುವುದು ವೀರಶೈವರ ಆಧ್ಯಾತ್ಮಿಕ ಕಲ್ಪನೆಯು.

ಮೊಹೆಂಜೊದಾರೋ ವಿಷಯವಾಗಿ ಬರೆಯುತ್ತ ಫಾದರ್ ಹೆರಾಸ್‌ರವರು ಆಗಿನ ಕಲ್ಪನೆಯಲ್ಲಿ ಶಿವಶಕ್ತಿಯರ ಕಲ್ಪನೆಯು ಈಗಿನಂತೆಯೇ ಇದ್ದಿತೆಂಬುದನ್ನು ತೋರಿಸಿರುವರು. ಅವರ (ಬೊಂಬಾಯಿ ಯುನಿವರ್ಸಿಟಿಯ ಜರ್ನಲ್, ೧೯೩೬ ನೆಯ ಜುಲೈ ತಿಂಗಳದು) ಈ ವಿಷಯದಲ್ಲಿ ಗಮನಾರ್ಹವಾದ ಸಂಗತಿಗಳನ್ನು ಹೊರಗೆಡವಿರುವರು:

"Iruvan-adu kom ininanir i. e., the horn playing minas of the....exists..koil ella kadvut and..the supreme god of all the gods of the temple..The name, therefore, of this supreme God must be of one revealing these two ideas superiority and self-existance. In all the Dravidian dictionaries, there is only one word that would embody them and this word is 'An' which might be properly translated 'Supreme Being'..In an inscription he is called "The Supreme Being of life" The word 'val' may

CC-0. Jangamwadi Math Collection. Digitized by eGangotri

mean life and happiness..He is the only one "Orvan" ..We read in an inscription "of the very great one." Two inscriptions speak of the city of Nalur under the name 'Viducan.' Now this name properly means 'open eye' and refers to a person who..knows everything..A very important inscription.. "Udanu ir Min-adu An i. e, the Supreme Being of Mina being help"..He is elsewhere often called 'the god of the chariot and of cultivated fields' Two symbols of distinction and fertility which finally reveal An as the forerunner of the modern Shiva."

[ಅದ್ವೈತನೂಸಚ್ಚಿದಾನಂದ ಸ್ವರೂಪನೂ ಸರ್ವಜ್ಞನೂ ದೇವೋತ್ತಮನೂ
ತ್ರಿಶೂಲಧಾರಿಯೂ ಅರ್ಧನಾರೀಶ್ವರನೂ ದಕ್ಷಿಣಾಮೂರ್ತಿಯೂ
ಆಗಿದ್ದ ಆನ್ ಶಿವನು 'ಅಮ್ಮಾ' ಎನಿಸಿದ ಶಕ್ತಿಯೊಡನೆ ಅರ್ಧನಾರೀಶ]

ಬಹಳ ಉದ್ದವಾದ ಲೇಖನದಲ್ಲಿ ಬಹಳವಾಗಿ ಸಂಕ್ಷೇಪಮಾಡಿದ ಮೇಲಿನ ಆಧಾರದಲ್ಲಿ, ಆದಿಮಾನವನ ದೈವಕಲ್ಪನೆಯನ್ನೆಲ್ಲ ವಿವರಿಸಿ, ಅಂದು ಭಾವಿಸಿದ 'ಆನ್' ದೈವವು ಮುಂದೆ ಭಾವಿಸಲ್ಪಟ್ಟ ಸೃಷ್ಟಿಕರ್ತನೂ ವಿಲಯಕರ್ತನೂ ಅದ ಶಿವನೆ ಎಂದು ಸ್ಪಷ್ಟಮಾಡಿ ಹೇಳಿದೆ. ಮೊಹೆಂಜೊದಾರೋ ಹೆರಪ್ಪಾದ ಆದಿ ಮಾನವನ ಭಾಷೆಯು ತಮಿಳು ಕನ್ನಡಗಳಿಗೆ ಸಮೀಪವಾದುದಾಗಿದೆ. 'ಇರುವನ್' ಎಂದರೆ ಅವರು ದೈವವನ್ನು 'ಇರುವವನು' ಎಂದು ಕರೆದಿದ್ದಾರೆ. ಅವನನ್ನು 'ಸತ್' ಪದವಾಚ್ಯನು ಎಂಬಂತೆ ಕರೆದಿದ್ದಾರೆ ಎಂದಂತಾಯಿತು. "The word 'Val' may mean life (ಚಿತ್) and happiness (ಆನಂದ)" ಎಂದು ಹೇಳುವುದರಿಂದ "ಆನ್" ಎಂಬ ಅವರ ದೈವವು ಚೇತನಯುತವೂ ಆನಂದ ಮಯವೂ ಆದುದೆಂದಾಯಿತು. ಹೀಗೆ ಸತ್‌ಚಿತ್ ಆನಂದಸ್ವರೂಪವು "ಆನ್" ಎಂಬ ಅವರ ದೈವಕ್ಕಿರುವುದಾಗಿ ಅವರು ಭಾವಿಸಿದ್ದರಲ್ಲದೆ ದೇವಮಂದಿರದ ದೇವರುಗಳಲ್ಲೆಲ್ಲ ಅವನು ದೊಡ್ಡವನು ಎಂದಿರುವುದರಿಂದ ಸರ್ವದೇವೋತ್ತಮನು ಪಟ್ಟವನ್ನು "ಆನ್" ದೈವಕ್ಕೆ ಕಟ್ಟಿದ್ದಾರೆ. "ವಿಡುಕಣ್" ಎಂದರೆ ತೆರೆದ ಕಣ್ಣುಳ್ಳವನೆಂಬ ಪದಪ್ರಯೋಗದಿಂದ ಸರ್ವಜ್ಞ ಪಟ್ಟವೂ ಅವನದೇ ಎಂದಾಯಿತು. "ಎಣ್‌ಮೈ" ಎಂದರೆ ಅಷ್ಟತನುವುಳ್ಳವನು ಎಂದು ಅರ್ಥ. ಅವನು ತ್ರಿನೇತ್ರ ವುಳ್ಳವನು, ಸರ್ಪಭೂಷಣನು, ತ್ರಿಶೂಲಧಾರಿಯು, ಪಶುಪತಿಯು, ಯೋಗೀಶ್ವರ

CC-0. Jangamwadi Math Collection. Digitized by eGangotri

ನಾದ ದಕ್ಷಿಣಾಮೂರ್ತಿಯು ಎಂಬ ಭಾವನೆಗಳಿದ್ದುದಕ್ಕೆ ಆಧಾರಗಳಿವೆ. ಲೇಖನ ವಿಸ್ತಾರ ಭಯದಿಂದ ಆ ಆಧಾರಗಳನ್ನೆ ಕೊಟ್ಟಿಲ್ಲ.

"ಅಮ್ಮಾ" ಎಂಬ ಶಿವನ ಶಕ್ತಿಯ ಮೂಲರೂಪಕ್ಕೆ "ಮೀನ್ ಕಣ್" ಎಂಬ ಹೆಸರನ್ನು ಕೊಟ್ಟಿರುವುದು ಮಧುರೆಯ ಮೀನಾಕ್ಷಿಯ ಪೂರ್ವದ ಹೆಸರಿರಬೇಕೆಂದು ತಜ್ಞರು ಊಹಿಸಿದ್ದಾರೆ. ಶಿವಶಕ್ತಿಯರು ಒಂದೇ ಎಂಬುದು ಅರ್ಧನಾರೀಶ್ವರನ ಕಲ್ಪನೆಯಲ್ಲಿ ಅಂದೂ ಕೊನೆಗೊಂಡಿತ್ತೆಂಬುದನ್ನು ಯಾರೂ ನಿರೀಕ್ಷಿಸಲಾರರಾದರೂ ಅದು ನಿಜವೆಂದು ಕಂಡುಬಂದಿರುವುದು :

What has been found is the combination of 'An' and 'Amma'. The inscription reads: Uyarel ter or Amman i. e. one Amman is the chariot of the sun. This diety half man (proper left) and half woman (proper right) which also is found in Sumer with the name of Amma-a seems to be the original idea of the Hindu image of Ardhanariswar which is found only in Shaivism which has the two parts put in the same relative position."

[ಶಿವಶಿವೆಯರೊಡನೆ ಜೀವನಿಗೆ ಏಕತ್ವವನ್ನು ಹೇಳುವ ಶಿವಾದ್ವೈತದ ಮೂಲವು ಅಂದೇ ಇದ್ದಿತು]

ಹೀಗೆ ಶಿವಶಿವೆಯರಿಗೆ ಅದ್ವೈತವನ್ನು ವೀರಶೈವ ಶಿವಾದ್ವೈತದಂತೆ ಆ ಹಿಂದೆಯೇ ಭಾವಿಸಿದ್ದರೆಂಬುದಕ್ಕಿಂತಲೂ ಅದ್ಭುತವಾದ ವಿಷಯವೆಂದರೆ ಶಿವಾದ್ವೈತ ದಂತೆ ಶಿವಶಿವೆಯರೊಡನೆ ಜೀವನಿಗೂ ಅದ್ವೈತವನ್ನು ಆ ಹಿಂದೆಯೇ ಭಾವಿಸಿದ್ದುದು.

"Among the Mohenjo-Daro inscriptions there in one extra ordinary importance on account of its unexpected revelations in the field of the history of comparative religions and even in the general field of ancient civilization. The inscription reads: "Uda mun per Kadavul-adu Kalak air i. e. the joined life of the theree Gods..."

CC-0. Jangamwadi Math Collection. Digitized by eGangotri

"A similar triad of gods is also found in Sumerian inscriptions and the three gods of Sumer in per historic times were An, Ama and Enlil. 'An' was the father; 'Ama' was the mother and Enlil was the son.. The proto-Dravidian triad is supposed to be similar to this. Infact the 'An' the father of Sumer is the same 'An' the Supreme Being of India. The mother is called Ama in Sumerian."

'An' ಎನಿಸಿಕೊಂಡ ಶಿವನು 'ಅಮ್ಮಾ' ಎನಿಸಿಕೊಂಡ ಶಕ್ತಿಯಿಂದ ವಿಶಿಷ್ಟವಾಗಲು 'ಅನಿಲ್' ಎಂಬ ಜೀವನು ಉದಯಿಸುವನು. ಐಕ್ಯಸ್ಥಿತಿಯಲ್ಲಿ ಇವರು ಮೂವರೂ ಒಂದೆಂಬುದೇ ಶಿವಾದ್ವೈತಸಿದ್ಧಾಂತ.

ಶಿವಾದ್ವೈತ ಸಿದ್ಧಾಂತದ ಮುಖ್ಯ ತತ್ತ್ವಗಳನ್ನೆಲ್ಲ ವೇದಗಳ ಕಾಲಕ್ಕೆ ಹಿಂದೆಯೇ ಸಿಂಧೂನದಿಯತೀರದ ಪುರಾತನ ನಾಗರಿಕರಲ್ಲಿ ಗುರುತಿಸಬಹುದೆಂಬುದನ್ನು ನೋಡಿದರೆ ಈ ಮಹಾವೃಕ್ಷದ ಬೀಜವು ಅದಕ್ಕೆ ಬಹಳ ಹಿಂದೆಯೇ ನಟ್ಟಿರಬೇಕೆಂಬುದು ಸ್ಪಷ್ಟವಾಗುತ್ತದೆ. ಆಚರಣೆಯ ದೃಷ್ಟಿಯಿಂದ ನೋಡಿದರೆ ಶಿವನು ಬಿಲ್ವದಳಗಳಿಂದ ಪೂಜಿಸಲ್ಪಡುವುದು ಆ ಕಾಲದಲ್ಲಿಯೇ ರೂಢಿಯಲ್ಲಿತ್ತೆಂಬುದನ್ನು ಮತ್ತು ಆ ಜನರ ಶಿವನು ಪರಮಯೋಗಿ ಎಂಬ ಕಲ್ಪನೆಯಿಂದ ಆ ಜನರಿಗೆ ಶಿವಯೋಗದ ಪರಿಚಯವಿತ್ತೆಂಬುದನ್ನು ಹಿಂದೆಯೇ ಹೇಳಿದೆ. ಆದರೆ, ಆಗ ಲಿಂಗಧಾರಣೆಯು ರೂಢಿಯಲ್ಲಿತ್ತೆಂದು ತೋರಿಸಿದರೆ ಪುರಾತನವಾದ ಆ ನಾಗರಿಕತೆಗೂ ವೀರಶೈವಕ್ಕೂ ಇವರು ಸಂಬಂಧವು ಮತ್ತಷ್ಟು ಸ್ಪಷ್ಟವಾಗುವದು. ಇದನ್ನು ತಿಳಿಯಲು ಕೆಲವು ವಿಷಯಗಳನ್ನು ಮನನ ಮಾಡಿಕೊಳ್ಳುವುದು ಅವಶ್ಯ. ಹಿಂದಿನ ಕಾಲದಲ್ಲಿ ಭರತಖಂಡವು ಬಹುದೊಡ್ಡ ಭೂಭಾಗದ ಮಧ್ಯದಲ್ಲಿದ್ದಿತು. ಆದಿ ಮಾನವನು ಒಂದು ಕಡೆಯಿಂದ ಮತ್ತೊಂದು ಕಡೆಗೆ ವಲಸೆ ಹೋಗುವುದು ಸುಲಭವಾಗಿದ್ದಿತು. ಈಚೆಗೆ ಕೆಲವು ಭೂಭಾಗಗಳು ಸಮುದ್ರದ ಕೆಳಗೆ ಹೋಗಿ ಭೂಸಂಪರ್ಕವು ಕಡಿಮೆಯಾಗಿದೆ. ಆಗ ಹಿಂದೂ ದೇಶದಲ್ಲಿ ಬೆಳೆದು ಬಂದ ನಾಗರಿಕತೆಯು ಸುಮಾರ್ ಮತ್ತು ಮೇಡಿಟರೇನಿಯನ್ ಕಡೆಗೆ ಹರಿದು ಹೋಗಿದ್ದಿತು. ಕರ್ನಾಟಕಕ್ಕೂ ಸಿಂಧೂನದಿಯ ಪ್ರದೇಶಗಳಿಗೂ ಸಂಪರ್ಕವಿದ್ದಿತಲ್ಲದೆ ಆರ್ಯರು ಇಂಡಿಯಾಕ್ಕೆ ಬರುವ ಮೊದಲು ಅವರ ಹಿಂದೆ ಇದ್ದ ದ್ರಾವಿಡರು ಮತ್ತು ಇತರರು ಉತ್ತರ ಇಂಡಿಯಾದಲ್ಲೂ ವಾಸಿಸಿದ್ದರು. ದಕ್ಷಿಣ ಭಾರತವೆ ಮಾನವಜನಾಂಗದ ತೊಟ್ಟಿಲಾಗಿದ್ದು ಅಲ್ಲಿಂದ ನಾಗರಿಕತೆಯು ಹಬ್ಬಿತು.

CC-0. Jangamwadi Math Collection. Digitized by eGangotri

(Cultural Heritage of India) ದಿಂದ ಇದಕ್ಕೆ ಆಧಾರಕೊಟ್ಟು ಇವನ್ನು ಸ್ಪಷ್ಟ ಮಾಡಬಹುದು:

Sir John Evans in his Presidential Address to the British Association says "Southern India was probably the craddle of human race. Investigations in relation to race show it to be possible that Southern India was once the passage ground by which the ancient progenitors of Northern and Meditarian races proceeded to the parts of the globe which they inhabit.

ಇನ್ನು ಐರೋಪ್ಯ ಸಂಶೋಧಕರ ಆಧಾರದಿಂದ "ಕನ್ನಡಿಗರ ನೆಲೆ" ಎಂಬ ಗ್ರಂಥದಲ್ಲಿ ಹೀಗೆ ಹೇಳಿದೆ: ಹೊಸದಾಗಿ ಮುಂದೆ ಬಂದ ಯಾವ ಮಾತನ್ನೂ ಅರೆದು, ಮನವರಿಕೆಯಾದ ಮೇಲೆಯೇ ಆಹುದೆನಲು ಮನಸ್ಸು ಮಾಡುವ ಕೀಥರು ಸಹ ಪ್ರಿಲಿಸ್ಕಿ ವಿಚಾರಸರಣಿಗೆ ಸಮ್ಮತಿಯನ್ನಿತ್ತಿದ್ದಾರೆ. ಕೀಥರು ಹೇಳುವದೇನಂದರೆ :

It may be noted that here the paucity of phallic worship in the case of other Indo European peoples strengthens the argument for borrowing.

### ಲಿಂಗಧಾರಣೆಯೂ ಆದಿಮಾನವನ ಕಾಲದಿಂದಲೂ ಇರುವ ಪದ್ಧತಿ

ಯುರೋಪದಲ್ಲಿ ಭೂಮಧ್ಯ ಸಮುದ್ರ ತೀರದ ಕೆಲವು ಜನಗಳಲ್ಲಿ ಲಿಂಗಚಿಹ್ನೆವನ್ನು ತಾಯತದಂತೆ ಪೀಡಾನಿವಾರಣೆಗಾಗಿ ಕೊರಳಲ್ಲಿ ಕಟ್ಟಿಕೊಳ್ಳುವ ರೂಢಿಯಿದ್ದಿತು. ಆದರೂ ಅದು ಆರ್ಯಜನಾಂಗದ ಆಚಾರವಲ್ಲವೆಂದು ಎಲ್ಲರೂ ಒಪ್ಪಿದ್ದಾರೆ. ಅಲ್ಲದೆ ದ್ರಾವಿಡರ ದೇವತೆಯೂ ಅಲ್ಲ. ಹಿಂದೂ ದೇಶದೊಳಗಿನ ಆರ್ಯರೂ ದ್ರಾವಿಡರೂ 'ಲಿಂಗ'ದೇವರನ್ನು ಆಸ್ಟ್ರೋ ಏಶಿಯಾಟಿಕ್ ಜನಾಂಗದವರಿಂದ ಸ್ವೀಕರಿಸಿರುವ ಸಂಭವವಿದೆಯೆಂದು ಪ್ರಿಲಸ್ಕಿಯವರ ಮತ. ಇವರು ಬರೆಯುವದೇನಂದರೆ :

It is more probable that the Aryans have borrowed from the aboriginies of India the cult of 'Linga' as well as the name of the idol.

CC-0. Jangamwadi Math Collection. Digitized by eGangotri

ಸಾರಾಂಶವೇನಂದರೆ ಮೇಡಿಟರೇನಿಯನ್ ಸಮುದ್ರತೀರದ ಜನರು ಇಷ್ಟ ಪ್ರಾಪ್ತಿಗೋ ಅನಿಷ್ಟನಿವಾರಣೆಗೋ ಲಿಂಗವನ್ನು ಕೊರಳಲ್ಲಿ ಕಟ್ಟಿಕೊಳ್ಳುತ್ತಿದ್ದರು. ಇತರ ಯುರೋಪಿನ ಆರ್ಯರಲ್ಲಿ ಲಿಂಗಪೂಜೆಯ ಪದ್ಧತಿಯಿರಲಿಲ್ಲ. ಇಂಡಿಯಾ ದೇಶದಲ್ಲಿ ಆರ್ಯರಿಗಿಂತಲೂ ಹಿಂದೆ ಇದ್ದ ಜನಾಂಗದಿಂದ ಇದನ್ನು ಮೆಡಿಟ ರೇನಿಯನ್ ಸಮುದ್ರತೀರದವರು ಕಲಿತಿರಬೇಕಾಯಿತು. ಆದರೆ ಗಮನಾರ್ಹವಾದ ವಿಷಯವೇನೆಂದರೆ ಭಾರತದೇಶದ ದಕ್ಷಿಣ ಭಾರತದಲ್ಲೂ ಮುಖ್ಯವಾಗಿ ಕರ್ನಾಟಕ ದಲ್ಲೇ ಲಿಂಗಧಾರಣೆಯು ಉಳಿದು ನಿಂದಿರುವುದರಿಂದ ಕರ್ನಾಟಕಕ್ಕೂ ಮೇಡಿಟ ರೇನಿಯನ್ ಸಮುದ್ರ ತೀರದವರಿಗೂ ಏನಾದರೂ ಸಂಬಂಧವಿದ್ದಿರಬಹುದೆ ಎಂಬುದು. ಹಿಂದೆ ಕೊಟ್ಟಿರುವ ಸರ್ ಜಾನ್ ಇವ್ಯಾನ್ಸರ ಅಭಿಪ್ರಾಯವು ದಕ್ಷಿಣ ಇಂಡಿಯಾಕ್ಕೂ ಮೆಡಿಟರೇನಿಯನ್ ಸಮುದ್ರತೀರದ ಜನರಿಗೂ ಇದ್ದ ಸಂಬಂಧ- ವನ್ನು ವಿಶದೀಕರಿಸಿದೆ. "ಮೊಹೆಂಜೊದಾರೊ ಅಂಡ್ ಇಂಡಸ್ ಸಿವಿಲಿಜೇಶನ್" ಗ್ರಂಥದ ಈ ಆಧಾರವು ಕರ್ನಾಟಕಸ್ಥರಿಗೂ ಮೆಡಿಟರೇನಿಯನ್ ಜನಾಂಗಕ್ಕೂ ಇದ್ದ ರಕ್ತಸಂಬಂಧವನ್ನು ಸ್ಪಷ್ಟಪಡಿಸುತ್ತದೆ:

Western Alpines are said to be strongly represented among the Kanarese speaking peoples of the Western Deccan and Mysore but if racial charecteristics can be taken into account in this problem of language, it is clearly the long headed Meditarians who have the strongest claim to a connection by blood with the Dravidians and are most likely to have used a Dravadic speech. May it be that the same Mediteranians—who are traceable across the whole south of the Afrasion belt spoke agglutinative languages and that they perhaps, more than any others, were the race at the back of this farflung civilization of the chalcolithic age.

ಇವೆಲ್ಲ ಆಧಾರಗಳಿಂದ ಆ ಕಾಲದ ಮೆಡಿಟರೇನಿಯನ್ ಜನರು ದಕ್ಷಿಣ ದೇಶದ ದ್ರಾವಿಡರಿಗೆ ರಕ್ತಸಂಬಂಧವಿರುವವರಾದುದರಿಂದಲೂ ಅವರ ಲಿಂಗ ಧಾರಣೆಯು ದಕ್ಷಿಣ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಇಂದೂ ಪ್ರಚಾರದಲ್ಲಿ ರುವ ಲಿಂಗಧಾರಣೆಯ ಪದ್ಧತಿಯಿಂದಲೇ ಪ್ರಚುರವಾಗಿರಬೇಕೆಂಬುದರಲ್ಲಿ ಸಂದೇಹ

CC-0. Jangamwadi Math Collection. Digitized by eGangotri

ವಿಲ್ಲ. ಅಂತೂ ಲಿಂಗಧಾರಣೆಯ ಪದ್ಧತಿಯು ಶಿವನೇ ಪರಮಾತ್ಮನೆಂಬ ಕಲ್ಪನೆಯಷ್ಟೆ ಹಳೆಯದೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಹಿಂದೂ ದೇಶದ ಹೊರಗೆ ಕ್ರಿಶ್ಚಿಯನ್ ಮತ್ತು ಮಹಮ್ಮದೀಯ ಮತಗಳ ಪ್ರಭಾವದಿಂದ ಶೈವ ಮತವು ನಾಮಾವಶೇಷವಾಗಿ ಹೋಯಿತು. ಆರ್ಯರ ಆಕ್ರಮಣದಿಂದ ಮೂಲದ್ರಾವಿಡರು ದಕ್ಷಿಣ ಭಾರತಕ್ಕೆ ತಳ್ಳಲ್ಪಟ್ಟರು. ಆದುದರಿಂದ ಮೂಲದ್ರಾವಿಡರು ಉಳಿದು ನಿಂತಿರುವ ದಕ್ಷಿಣ ಭಾರತದಲ್ಲೇ ಲಿಂಗಧಾರಣೆಯು ಉಳಿದು ನಿಂದಿದೆ.

ವೀರಶೈವರ ಲಿಂಗಧಾರಣೆಯಂತೆಯೇ ಅಂದಿನಿಂದ ಇಂದಿನವರೆಗೂ ಅಳಿಯದೆ ಉಳಿದುಬಂದಿರುವ ಪದ್ಧತಿಯಿನ್ನೊಂದನ್ನು ಹೇಳಿ ಈ ಲೇಖನವನ್ನು ಮುಗಿಸಬಹುದು. ೧೯೩೭ ನೆಯ ಇಸವಿಯ ಜುಲೈ ತಿಂಗಳ "ಕರ್ನಾಟಕ್ ಹಿಸ್ಟಾರಿಕಲ್ ರಿವ್ಯೂ"ದಲ್ಲಿ ಕರ್ನಾಟಕ ಮತ್ತು ಮೊಹೆಂಜೊದಾರೋ-ಎಂಬ ವಿಷಯದಲ್ಲಿ ಹೀಗೆ ಬರೆದಿದೆ :

The people of Karnataka are apparently referred to in one of the seal inscriptions of Mohonjo Daro as one of the ancient tribes of the land..Before ending we must refer to another link still existing from those ancient days between Mohenjo Daro and Karnatak. The modern Lingayats of Kannada Country depict a sign on the walls of their houses, the meaning of which dose not seem to be known to them..This sign is often found in the inscriptions of Mohenjo Daro and Harappa.

ಕರ್ನಾಟಕದವರು ಮೊಹೆಂಜೊದಾರೋ ಹೆರಪ್ಪಾ ಕಾಲದ ಒಂದು ಪುರಾತನ ಜನಾಂಗವೆಂದೂ ಕರ್ನಾಟಕದ ವೀರಶೈವರು ಇಂದು ಅವರ ಮನೆಗಳ ಗೋಡೆಗಳ ಮೇಲೆ ಬರೆವ ಚಿತ್ರವು ನೊಹೆಂಜೊದಾರೊ ಜನರ ಮುದ್ರಿಕೆಗಳಲ್ಲಿ ಜಹಳವಾಗಿ ದೊರೆಯುತ್ತದೆಂದೂ ಮೇಲೆ ಹೇಳಲ್ಪಟ್ಟಿದೆ. ಈ ರೇಖಾಚಿತ್ರವು ಎರಡು ತ್ರಿಕೋಣಗಳನ್ನು ಒಂದರ ತುದಿಯು ಇನ್ನೊಂದರ ತುದಿಯನ್ನು ಮುಟ್ಟುವಂತೆ ಬರೆದುದಾಗಿದೆ. ಇದು ಬುಡುಬುಡಿಕೆಯ ಚಿತ್ರದ ಆಕಾರದಲ್ಲಿದೆ. ಬರೆಯುವವರು ಶಿವಭಕ್ತರಾದುದರಿಂದ ಇದು ಶಿವಲಿಂಗದ ಪೀಠವೆಂಬುದು ಸ್ಪಷ್ಟ. ಇದರ ಮೇಲೆ ನಿರಾಕಾರವಾದ ಪರಶಿವಬ್ರಹ್ಮವನ್ನು ಶೂನ್ಯದಿಂದ ಗ್ರಹಿಸಬೇಕಾಗಿದೆ. ಎರಡು ತ್ರಿಕೋಣಗಳಿಂದ ಕೂಡಿದ ಪೀಠವು ಶಕ್ತಿಪ್ರಸಾರದಿಂದ ತ್ರಿಗುಣಾತ್ಮಕ ಜಗತ್ತು

CC-0. Jangamwadi Math Collection. Digitized by eGangotri

ಹೊರಹೊಮ್ಮುವದನ್ನು ಸೂಚಿಸುತ್ತದೆ. ತ್ರಿಕೋಣದ ಕಲ್ಪನೆಯಲ್ಲಿ ಅರ್ಥವಿದೆ. ಶಿವ, ಶಕ್ತಿ ಮತ್ತು ಚರಾಚರಾತ್ಮಕ ಸೃಷ್ಟಿ ಇವು ಮೂರು ಒಂದೆಯೆಂಬುದನ್ನು ಮೂರು ರೇಷೆಗಳನ್ನು ಒಂದು ಗೂಡಿಸುವ ತ್ರಿಕೋಣವು ಸೂಚಿಸುತ್ತದೆ. ಇನ್ನು ಎರಡು ತ್ರಿಕೋಣಗಳು ಏಕೆಂದರೆ, ವೀರಶೈವ ಸಿದ್ಧಾಂತದಂತೆ ಸೃಷ್ಟಿಯಲ್ಲಿ ಎರಡು ಭಾಗವು ಕಂಡು ಬರುವುದು. ನಿಷ್ಕಲ ಬ್ರಹ್ಮವು ತತ್ವಾತೀತವಾದುದರಿಂದ ಈ ಎರಡು ತ್ರಿಕೋಣಗಳಿಗೆ ಮೀರಿದುದಾದ ಶೂನ್ಯವಾಗಿಯೇ ಅರಿಯಲ್ಪಡುವುದು. ನಿವೃತ್ತಿಯೇ ಮೊದಲಾದ ಐದು ಕಲೆಗಳೂ ಕರ್ಮಸಾದಾಖ್ಯಾದಿ ಐದು ಸಾದಾಖ್ಯಗಳೂ ಮಹಾಲಿಂಗವೂ ಸೇರಿ ಹನ್ನೊಂದು ಲಿಂಗ ತತ್ವಗಳು ಮೇಲಿನ ತ್ರಿಕೋಣದಲ್ಲಿ ಸಂಕೇತವಾಗಿರುವುವು. ಜ್ಞಾನೇಂದ್ರಿಯ ಪಂಚಕ, ಕರ್ಮೇಂದ್ರಿಯ ಪಂಚಕ, ವಿಷಯ ಪಂಚಕ, ವಾಯುಪಂಚಕ ಅಂತಃಕರಣ ಪಂಚಕಗಳೆಂಬ ಅಂಗತತ್ವಗಳಿಪ್ಪತ್ತೈದು ಕೆಳಗಿನ ತ್ರಿಕೋಣದಲ್ಲಿ ಸಂಕೇತವಾಗಿರುವವು. ಲಿಂಗತತ್ವಗಳಿಂದ ಅಂಗತತ್ವಗಳ ಕಡೆಗೆ ಇಳಿದಂತೆ ಮೇಲಿನ ತ್ರಿಕೋಣವು ಸಂಕುಚಿತವಾಗುತ್ತಾ ಬರುವುದು. ಕೆಳಗಿನ ತ್ರಿಕೋಣದಲ್ಲಿ ಸತ್ವಗುಣವು ಕಡಿಮೆಯಾಗುತ್ತಾ ರಜೋ ಮತ್ತು ತಮೋ ಗುಣಗಳು ಹೆಚ್ಚಿ ಕೊನೆಯಲ್ಲಿ ತಮೋ ಗುಣ ಹೆಚ್ಚಿ ಅಧರ ಜಗತ್ತಿಗೆ ಇಳಿದಂತೆಲ್ಲ ತ್ರಿಕೋಣವು ವಿಸ್ತಾರವಾಗುತ್ತಾ ಹೋಗುವುದು. ಕಾಶ್ಮೀರ ಶೈವದ ದೃಷ್ಟಿಯಿಂದ ಶಿವನಿಂದ ಶುದ್ಧ ವಿದ್ಯೆಯವರೆಗಿನ ಶುದ್ಧಾಧ್ವಕ್ಕೆ ಮೇಲಿನ ತ್ರಿಕೋಣವು, ಉಳಿದು ಮಾಯೆಯಿಂದ ಪೃಥ್ವೀತತ್ವದ ವರೆಗಿನ ಅಶುದ್ಧಾಧ್ವಕ್ಕೂ ಕೆಳಗಿನ ತ್ರಿಕೋಣವೂ ಸಂಕೇತವಾಗಿವೆಯನ್ನಬಹುದು. ಸಕಲ ನಿಷ್ಕಲಕ್ಕೆ ಮೇಲಿನ ತ್ರಿಕೋಣವೂ ಸಕಲಕ್ಕೆ ಕೆಳಗಿನ ತ್ರಿಕೋಣವೂ ಸಂಕೇತವಾಗಿದೆಯೆನ್ನಬಹುದು. ಅವರವರ ಸಿದ್ಧಾಂತಕ್ಕೆ ಅನುಸಾರವಾದ ಸಂಕೇತವನ್ನು ಈ ತ್ರಿಕೋಣಗಳಲ್ಲಿ ಕಾಣಬಹುದು.

ಸಾರಾಂಶವನ್ನು ಒಂದೆರಡು ಮಾತಿನಲ್ಲಿ ಹೇಳಬೇಕಾಗುವುದು. ಶೈವಮತವೇ ವಿಶ್ವದ ಎಲ್ಲ ಮತಗಳಲ್ಲಿಯೂ ಬಹಳ ಪುರಾತನವಾದುದು; ಶಿವನನ್ನು ಲಿಂಗ ರೂಪದಲ್ಲಿ ಪೂರ್ವದಿಂದಲೂ ಅರ್ಚಿಸುತ್ತಿದ್ದರು. ಇದು ಬೆಳೆದು ಬಂದು, ಸಂಸ್ಕರಿಸಲ್ಪಟ್ಟ ಈಗಿನ ವೀರಶೈವದ ರೂಪವನ್ನು ತಾಳಿದೆ. ವೇದಗಳ ಕಾಲಕ್ಕಿಂತಲೂ ಬಹಳ ಹಿಂದೆಯೂ ಎಂದರೆ ೬-೭ ಸಾವಿರವರ್ಷಗಳಿಗಿಂತಲೂ ಹಿಂದೆಯೇ ಆದಿ ಮಾನವನ ಕಾಲದಲ್ಲಿಯೇ ವೀರಶೈವವು ಬೆಳೆದುನಿಂದ ಗಿಡವಾಗಿದ್ದಿತು. ಲಿಂಗವನ್ನು ಕೊರಳಲ್ಲಿ ಕಟ್ಟಿಕೊಳ್ಳುವುದು, ಬಿಲ್ವಪತ್ರಿಯಿಂದ ಪೂಜಿಸುವುದು, ಶಿವಯೋಗದಿಂದ ಧ್ಯಾನಿಸುವುದು, ಶಿವನನ್ನು ಶಕ್ತಿವಿಶಿಷ್ಟನನ್ನಾಗಿ ಭಾವಿಸುವುದು, ಶಿವಶಕ್ತಿ ಶರಣರಲ್ಲಿ ಅದ್ವೈತವನ್ನು ಕಾಣುವುದು ಮೊದಲಾದ ವೀರಶೈವದ ಮುಖ್ಯ ತತ್ವಗಳೆಲ್ಲ ಮೊಹೆಂಜೊದಾರೋ ಹರಪ್ಪಾ ನಾಗರಿಕತೆಯ ಕಾಲದಲ್ಲಿಯೇ ಕಂಡುಬರುವುದರಿಂದ ವೀರಶೈವದ ಉಗಮವು ಆಗಲೇ ಆಗಿದ್ದಿತೆಂಬುದರಲ್ಲಿ ಅನುಮಾನವೇ ಇಲ್ಲ.

CC-0. Jangamwadi Math Collection. Digitized by eGangotri

ಆದರೆ ಈಗಿನ ವೀರಶೈವ ರೂಪಕ್ಕೆ ಅದವನ್ನು ಸಂಸ್ಕರಿಸಿದ ಹಿರಿಮೆ ರೇಣುಕಾದ್ಯಾಚಾರ್ಯರಿಗೂ ಬಸವಾದಿ ಪ್ರಮಥರಿಗೂ ಸೇರಿದುದು. ರಸ್ತೆ ಒಳಚರಂಡಿ ಮನೆ ಮಠಗಳು ಮೊದಲಾದುವನ್ನು ಪಡೆದು ಸುಸಂಸ್ಕೃತರಾಗಿದ್ದರು ಆಗಿನ ಜನರು. ಎಂದಮೇಲೆ, ಮತ್ತು ಶಿವಾದ್ವೈತದ ಸಿದ್ಧಾಂತವು ಮೇಲೆ ಹೇಳಿದಂತೆ ಅವರಲ್ಲಿ ಆಗಲೇ ರೂಪುಗೊಂಡಿತ್ತು ಎಂದಮೇಲೆ ಶಿವಾದ್ವೈತದ ಬಿತ್ತು ಅದಕ್ಕೆ ಹಿಂದೆಯೇ ಬಿತ್ತಿದುದಾಗಿರಬೇಕು.

ಈ ಗಿಡವು ಬೆಳೆದು ಮರವಾಗಿ ಮಹಾವೃಕ್ಷವಾದುದರ ಪ್ರಗತಿಯನ್ನು ಕಾಣಲು ಮುಂದೆ ಲೇಖನಗಳನ್ನು ಬರೆಯಬೇಕಾಗುವುದು. ವೇದೋಪನಿಷತ್ತುಗಳ ಕಾಲದಲ್ಲಿ ವೀರಶೈವದ ಪ್ರಗತಿ, ಪ್ರಾಚೀನ ಚಾರಿತ್ರಿಕ ಕಾಲದಲ್ಲಿ ಅದರ ಗತಿ, ಈಚಿನ ಅವನತಿ ಮುಂದೆ ರೇಣುಕಾದಿ ಆಚಾರ್ಯರಿಂದಲೂ ಬಸವಾದಿ ಪ್ರಮಥರಿಂದಲೂ ಅದು ಪಡೆದ ಮಹೋನ್ನತಿ ಮೊದಲಾದವು ಮುಂದೆ ಬರುವ ಲೇಖನಗಳಿಗೆ ವಿಷಯವಾಗಿರುವವು. ಈ ವಿಷಯಗಳನ್ನೆಲ್ಲ ಒಳಗೊಂಡ ಗ್ರಂಥವು ಮುದ್ರಣಕ್ಕೆ ಸಿದ್ಧವಾಗಿದೆ.

CC-0. Jangamwadi Math Collection. Digitized by eGangotri

# ವೀರಶೈವ ದರ್ಶನ

ಪಂಡಿತ ಬಸವರಾಜ ಶಾಸ್ತ್ರಿಗಳು, ಪಗಡದಿನ್ನಿ ಬೃಹನ್ಮಠ.

ಮಾನವನು ಈ ಸಂಸಾರದಲ್ಲಿ ಜನ್ಮವೆತ್ತಿದ ಬಳಿಕ ತನ್ನ ಜೀವನಯಾತ್ರೆಯನ್ನು ಸುಗಮವಾಗಿಯೂ, ಸುಂದರವಾಗಿಯೂ ಸಾಗಿಸಿಕೊಂಡು ಹೋಗುವದು ಅವನ ಕರ್ತವ್ಯವಾಗಿದೆ. ತನ್ನ ಕರ್ತವ್ಯದ ಅರಿವಿನಿಂದ ಆಚರಿಸುವ ಮಾನವನ ಪ್ರವೃತ್ತಿಗೂ ಇತರ ಪ್ರಾಣಿಗಳ ಪ್ರವೃತ್ತಿಗೂ ಮಹದಂತರ ಉಂಟು. ಇತರ ಪ್ರಾಣಿಗಳು ಯಾವ ವಿಚಾರದ ಗೊಂದಲಕ್ಕೆ ಹೋಗದೆ ತಮ್ಮ ಜೀವನ ಸಂಗ್ರಾಮದಲ್ಲಿ ಸ್ವಾಭಾವಿಕವಾಗಿಯೇ ಪ್ರವೃತ್ತಿಯುಳ್ಳವುಗಳಾಗುತ್ತವೆ. ಮಾನವನು ಪ್ರತಿಯೊಂದು ಕಾರ್ಯವನ್ನು ಆರಂಭಿಸುವಾಗ ವಿಚಾರಶಕ್ತಿಯನ್ನು ಉಪಯೋಗಿಸಬೇಕಾಗುತ್ತದೆ. ಏಕಂದರೆ ಮಾನವನ ಕರ್ತವ್ಯ ಕರ್ಮಗಳಿಗೆಲ್ಲ ವಿಚಾರ ಶಕ್ತಿಯೇ ಆಧಾರಸ್ತಂಭವಾಗಿದೆ. ವಿಚಾರವಿಲ್ಲದೆ ಕಾರ್ಯದಲ್ಲಿ ತೊಡಗಿದ್ದಾದರೆ,

"ಆಹಾರ ನಿದ್ರಾ ಭಯ ಮೈಥುನಾನಿ ಸಮಾನಮೇತತ್ ಪಶುಭಿರ್ನರಾಣಾಂ"

ಎಂಬ ಮಹಾಜನರ ವಚನದಂತೆ ಪಶುಜೀವನವಾಗುವದು. ಆಹಾರ, ನಿದ್ರೆ, ಭಯ, ಕಾಮಾದಿ ವಿಕಾರಗಳು ಪಶುಗಳಿಗೂ ಮಾನವರಿಗೂ ಸಮಾನಗಳಾಗಿರುತ್ತವೆ. ಹೀಗೆ ಇವೆಲ್ಲ ಸಮಾನವಾಗಿದ್ದರೂ ಮಾನವನಲ್ಲಿ ವಿಶೇಷವಾದುದೆಂದರೆ ಧರ್ಮ ಅರ್ಥಾತ್ ಉದ್ಧಾರ ಮಾಡುವ ವಸ್ತುಗಳ ಗುಂಪು. ಅವುಗಳ ವಿಚಾರ ಅಥವಾ ಅವುಗಳ ದರ್ಶನ. ಈ ರೀತಿಯಾಗಿ ದರ್ಶನವೂ ಪ್ರತಿಯೊಬ್ಬ ಮಾನವನಿಗೂ ಅವಶ್ಯವಾದದ್ದಾಗಿರುತ್ತದೆ. ದರ್ಶನದ ಅರಿವು ಮಾನವನಿಗೆ ಇರಲಿ ಇಲ್ಲದಿರಲಿ, ದರ್ಶನವು ಮಾತ್ರ ಮಾನವನಿಗೆ ಪ್ರತಿಯೊಂದು ಕಾರ್ಯದಲ್ಲಿ ಬೆರೆತು ಹೋಗಿರುತ್ತದೆ. ಅದನ್ನು ತ್ಯಾಗ ಮಾಡಲು ಸಾಧ್ಯವಿಲ್ಲ. ದರ್ಶನವೆಂದರೆ ಏನೆಂಬುದನ್ನು ಚೆನ್ನಾಗಿ ಮನನ ಮಾಡಿಕೊಂಡಾಗ ಇದು ಸ್ಫುಟವಾಗಿ ತೋರುವದು.

## ದರ್ಶನ ಶಬ್ದಾರ್ಥ

'ದೃಶ್ಯತೇ ಅನೇನೇತಿ ದರ್ಶನಂ' ಯಾವುದರ ಸಹಾಯದಿಂದ ನೋಡಲ್ಪಡು-ವುದೋ ಅದು ದರ್ಶನ, ನೋಡಿಸಿ ಕೊಳ್ಳುವದು ಯಾವುದೆಂದರೆ ಸತ್ಯವಾದ ವಸ್ತುವು. ನಾನು ಯಾರು ? ಎಲ್ಲಿಂದ ಬಂಡೆ ? ದೃಶ್ಯಮಾನವಾದ ಈ ಜಗತ್ತಿನ ನಿಜವಾದ ಸ್ವರೂಪವೇನು ? ಇದರ ಸೃಷ್ಟಿಯು ಹೇಗೆ ಆಯಿತು ? ಜಗತ್ತಿನ ಉತ್ಪತ್ತಿಗೆ ಕಾರಣವೇನು ? ಇದು ಚೇತನವೊ ? ಅಚೇತನವೊ ? ಇದು ಸತ್ಯವಾದುದೊ ? ಮಿಥ್ಯವಾದುದೊ ? ಈ ಜಗತ್ತಿನಲ್ಲಿ ನನ್ನ ಕರ್ತವ್ಯವೇನು ? ಜನನ ಮರಣರೂಪ

CC-0. Jangamwadi Math Collection. Digitized by eGangotri

ಸಂಸಾರ ಸಾಗರದಿಂದ ಪಾರಾಗಲಿಕ್ಕೆ ಸುಗಮವಾದ ಮಾರ್ಗವಾವುದು ? ಇತ್ಯಾದಿ ನಾನಾ ಪ್ರಶ್ನೆಗಳಿಗೆ ಯೋಗ್ಯವಾದ ಉತ್ತರವನ್ನು ಕೊಡುವದೇ ದರ್ಶನವು. ಈ ದರ್ಶನಕ್ಕೆ ಶಾಸ್ತ್ರ ಎಂಬ ಶಬ್ದವನ್ನು ಸೇರಿಸಿ "ದರ್ಶನ ಶಾಸ್ತ್ರ" ಎಂದು ಹೇಳುತ್ತಾರೆ. ಶಾಸ್ತ್ರ ಶಬ್ದದ ವ್ಯುತ್ಪತ್ತಿಯು ಎರಡು ವಿಧವಾಗಿರುತ್ತದೆ 'ಶಾಸು ಅನುಶಿಷ್ಟೌ ಶಂಸ ಪ್ರಶಂಸಾಯಾಂ' ಎಂಬ ಎರಡು ಧಾತುಗಳಿಂದ ಶಾಸ್ತ್ರ ಶಬ್ದವು ಸಿದ್ಧವಾಗುತ್ತದೆ.

ಶಸನಾತ್ ಶಂಸನಾಚ್ಛಾಸ್ತ್ರಂ ಶಾಸ್ತ್ರಮಿತ್ಯಭಿಧೀಯತೇ
ಶಾಸನಂ ದ್ವಿವಿಧಂ ಪ್ರೋಕ್ತಂ ಶಾಸ್ತ್ರ ಲಕ್ಷಣವೇದಿಭಿಃ
ಶಂಸನಂ ಭೂತ ವಸ್ತ್ವೇಕ ವಿಷಯಂ ನ ಕ್ರಿಯಾ ಪರಂ ॥

ಎಂಬ ಪ್ರಮಾಣಾನುಸಾರವಾಗಿ ಶಾಸನವು ಶ್ರುತ್ಯಾಗಮಾದಿ ಪ್ರತಿಪಾದಿತವಾದ ಕಾರ್ಯವು ಮಾಡಲು ಯೋಗ್ಯವಾದುದು ಎಂದು ವಿಧಿರೂಪವಾಗಿಯೂ ದುಷ್ಟ ಕಾರ್ಯ, ಕಲಾಪಗಳೆಲ್ಲಾ ಮಾಡತಕ್ಕವುಗಳಲ್ಲ ಎಂದು ನಿಷೇಧರೂಪವಾಗಿಯೂ ಇರುತ್ತದೆ. ಹೀಗೆ ವಿಧಿನಿಷೇಧ ರೂಪ ಶಾಸನವನ್ನು ಹೇಳುವ ಶಾಸ್ತ್ರಶಬ್ದವು ಧರ್ಮ ಶಬ್ದದೊಡನೆ ಕೂಡಿಕೊಂಡು ಧರ್ಮಶಾಸ್ತ್ರ ಎನಿಸಿಕೊಳ್ಳುವುದು. ವಿಧಿನಿಷೇಧ ಗಳನ್ನು ಪ್ರತಿಪಾದಿಸುವದೇ ಧರ್ಮಶಾಸ್ತ್ರವು. ಇದು ಕ್ರಿಯಾಪ್ರಧಾನವಾದುದು. ಜಗಜ್ಜೀವೇಶ್ವರರ ನಿಜವಾದ ಸ್ವರೂಪವನ್ನು ವರ್ಣಿಸುವದು ಶಂಸನಾತ್ಮಕಶಾಸ್ತ್ರವು. ಇದೇ ದರ್ಶನ ಶಬ್ದದೊಡನೆ ಕೂಡಿಕೊಂಡು ದರ್ಶನಶಾಸ್ತ್ರ ಎನಿಸಿಕೊಳ್ಳುವದು. ಈ ದರ್ಶನಶಾಸ್ತ್ರವು ಜ್ಞಾನಪ್ರಧಾನವಾದುದು. ಪ್ರಾಧಾನ್ಯವಾಗಿ ಕರ್ತವ್ಯಾ ಕರ್ತವ್ಯಗಳನ್ನು ಪ್ರತಿಪಾದಿಸುವ ಧರ್ಮಶಾಸ್ತ್ರವು ಪುರುಷ ಪರತಂತ್ರವಾದರೆ ವಸ್ತುವಿನ ಸತ್ಯಸ್ವರೂಪವನ್ನು ಪ್ರತಿಪಾದಿಸುವ ದರ್ಶನಶಾಸ್ತ್ರವು ವಸ್ತು ತಂತ್ರವಾಗಿರುವದು.

## ದರ್ಶನ ವೈವಿಧ್ಯ

ವೇದಾಗಮೋಪನಿಷತ್ತುಗಳಲ್ಲಿ ಪ್ರತಿಪಾದ್ಯಮಾನವಾದ ಜಗಜ್ಜೀವೇಶ್ವರರ ಯಥಾರ್ಥ ಸ್ವರೂಪವನ್ನು ಮಾನವನು ತನ್ನ ಬುದ್ಧಿಗೆ ಅಳವಡಿಸಿಕೊಳ್ಳುವಾಗ ತನ್ನ ಬುದ್ಧಿಶಕ್ತಿಗೆ ತಕ್ಕಂತೆ ಕಲ್ಪಿಸಿಕೊಳ್ಳುವದು ಸಹಜವಾದುದರಿಂದ ಅವರವರ ಪ್ರತಿಭಾಶಕ್ತಿಗೆ ಅನುಗುಣವಾಗಿ ದರ್ಶನವು ನಾನಾತ್ವವನ್ನು ಹೊಂದುವದು. ದರ್ಶನ ಶಾಸ್ತ್ರ ಹಾಗೂ ಧರ್ಮಶಾಸ್ತ್ರಕ್ಕೂ ತತ್ವಜ್ಞಾನ ಹಾಗೂ ಜನಜೀವನಕ್ಕೂ ಪರಸ್ಪರ ಸಂಬಂಧವು ಬಹು ದೃಢವಾದದ್ದಿರುತ್ತದೆ. ಏಕೆಂದರೆ ಧಾರ್ಮಿಕಾಚಾರಗಳ ಅನುಷ್ಠಾನ ಮಾಡದೆ ಕೇವಲ ದಾರ್ಶನಿಕ ಜ್ಞಾನವು ಫಲಕಾರಿಯಾಗಲಾರದು. ಇದರಂತೆ ದಾರ್ಶನಿಕ ವಿಚಾರಗಳನ್ನು ಬದಿಗಿರಿಸಿ ದೊಡ್ಡ ಪ್ರಮಾಣದಿಂದ ಮಾಡಿದ

CC-0. Jangamwadi Math Collection. Digitized by eGangotri

ಧರ್ಮವೂ ಸಹ ಪ್ರತಿಷ್ಠಿತವಾಗಲಾರದು. ಹೇಗೆ ವಿಚಾರವೊ ಹಾಗೆ ಆಚಾರವೂ ಇರಲೇಬೇಕು.

## ವೇದ

ವೇದವು ಸನಾತನ ಧರ್ಮ ಮತ್ತು ದರ್ಶನ ಇವುಗಳಿಗೆ ಪ್ರಾಣಸ್ವರೂಪವಾಗಿರುತ್ತದೆ. ವೇದವು ಪೌರುಷೇಯವೊ? ಅಪೌರುಷೇಯವೊ? ಪರಶಿವನ ನಿಶ್ವಾಸ ರೂಪವಾದುದೊ? ಋಷಿಗಳಿಂದ ದೃಷ್ಟವಾದುದೊ ಇತ್ಯಾದಿ ವಿಚಾರದ ಗೊಂದಲಕ್ಕೆ ಹೋಗದೇ ಶಾಂತಮನಸ್ಸಿನಿಂದ ವಿಚಾರಮಾಡಿದಾಗ ಭಾರತೀಯ ಸಂಸ್ಕೃತ ವಾಙ್ಮಯದಲ್ಲಿ ಎಲ್ಲವುಗಳಿಗಿಂತಲೂ ಮೊಟ್ಟ ಮೊದಲನೆಯ ಗ್ರಂಥವೆಂದರೆ ವೇದವೇ ಎಂದು ಎದೆತಟ್ಟಿ ಹೇಳಬಹುದು. ಇಷ್ಟೇ ಅಲ್ಲ, ಇಡೀ ಮಾನವ ಕೋಟಿಗೇನೇ ವೇದಕ್ಕಿಂತಲೂ ಪ್ರಾಚೀನವಾದ ಗ್ರಂಥವು ಮತ್ತೊಂದಿಲ್ಲವೆಂದು ಧೈರ್ಯವಾಗಿ ಹೇಳಬಲ್ಲೆವು. ಇಂತಹ ಅತ್ಯಂತ ಪ್ರಾಚೀನವಾದ ಮತ್ತು ಮಾನವನ ಜೀವನೋದ್ಧಾರದ ಸರ್ವಸ್ವವನ್ನೇ ಗರ್ಭೀಕರಿಸಿಕೊಂಡಿರುವ ವೇದದ ಅರ್ಥವನ್ನು ಯಥಾರ್ಥವಾಗಿ ತಿಳಿದುಕೊಳ್ಳಬೇಕಾದರೆ ಇತಿಹಾಸ, ಪುರಾಣಾದಿಗಳ ಉಪಬೃಂಹಣ ವಾಕ್ಯಗಳನ್ನು ಅವಲಂಬಿಸಬೇಕಾಗುತ್ತದೆ. ಅಂತೆಯೇ—

ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹ್ಮಯೇತ್ ||
ಬಿಭೇತ್ಯಲ್ಪಶ್ರುತಾದ್ವೇದೊ ಮಾಮಯಂ ಪ್ರಹರಿಷ್ಯತಿ ||

ಗೂಢವಾದ ವೇದದ ಅರ್ಥವನ್ನು ಪುರಾಣಾದಿಗಳ ಉಪಬೃಂಹಣ ವಾಕ್ಯಗಳಿಂದ ನಿರ್ಧರಿಸಿಕೊಳ್ಳಬೇಕು. ಹಾಗೆ ಮಾಡದೆ ಅರ್ಥಮಾಡಲಿಕ್ಕೆ ಹೋದರೆ ಅಲ್ಪಜ್ಞನಾದ ಮಾನವನು ನನ್ನನ್ನು ನಾಶಮಾಡುವನೆಂದು ವೇದವು ಹೆದರುತ್ತದೆ ಎಂದು ಪ್ರಾಚೀನ ಋಷಿಗಳ ಅಭಿಪ್ರಾಯವಿರುತ್ತದೆ.

ವೇದವು ಮೊದಲಿಗೆ ಏಕವಿಧವಾಗಿತ್ತು. ವ್ಯಾಸ ಮಹರ್ಷಿಯು ಬೇರೆ ಬೇರೆ ದೇವತೆಗಳ ವರ್ಣನಪರವಾದ ವಾಕ್ಯಗಳಿಗೆ ಮಂತ್ರವೆಂಬ ಹೆಸರಿಟ್ಟು ಬೇರೆ ಮಾಡಿದನು. ಇಂಥ ಅನೇಕ ಮಂತ್ರಗಳ ಗುಂಪಿಗೆ ಸಂಹಿತಾ ಎಂದು ಹೆಸರಾಯಿತು. ಮತ್ತು ನಾನಾ ಯಜ್ಞ ಯಾಗಾದಿಗಳ ವಿಸ್ತಾರವಾದ ವರ್ಣನೆಯುಳ್ಳ ಭಾಗಕ್ಕೆ ಬ್ರಾಹ್ಮಣ ಎಂಬ ಹೆಸರುಂಟಾಯಿತು. ಹೀಗೆ ವೇದಗಳನ್ನು ವಿಭಾಗಿಸಿದ್ದರಿಂದ ಆ ಮುನಿಯು ವೇದವ್ಯಾಸನೆಂದು ಪ್ರಸಿದ್ಧನಾದನು. ಯಾವುದಾದರೊಂದು ಯಜ್ಞ ಮಾಡಬೇಕಾದರೆ ನಾಲ್ಕುಜನ ಋತ್ವಿಜರು ಬೇಕಾಗುತ್ತಾರೆ. ಅವರಿಗೆ ಹೋತಾ, ಉದ್ಗಾತಾ, ಅಧ್ವರ್ಯು, ಬ್ರಹ್ಮಾ, ಎಂದು ಹೆಸರುಗಳಿರುತ್ತವೆ. ಹೋತಾ ಎಂಬವನು ದೇವತೆಗಳನ್ನು ಪ್ರಶಂಸಿಸುವಂತಹ ಮಂತ್ರಗಳನ್ನು ಉಚ್ಚಾರಮಾಡಿ

CC-0. Jangamwadi Math Collection. Digitized by eGangotri

ಆ ದೇವತೆಗಳನ್ನು ಬರಮಾಡಿಕೊಳ್ಳುತ್ತಾನೆ ಈ ಹೋತೃವಿನ ಕಾರ್ಯಕ್ಕೆ ಆವಶ್ಯಕಗಳಾದ ಮಂತ್ರಗಳ ಸಂಕಲವೇ ಋಗ್ವೇದವು. ಉದ್ಗಾತಾ ಎಂಬುವನು ಋಕ್ಕುಗಳನ್ನು ಉಚ್ಚಸ್ವರದಿಂದ ಗಾನ ಮಾಡುತ್ತಾನೆ. ಇವನ ಕಾರ್ಯಕ್ಕಾಗಿ ಸಾಮವೇದದ ಸಂಕಲನವಾಯಿತು. ಅಧ್ವರ್ಯು ಎಂಬವನು ಯಜ್ಞ ಯಾಗಾದಿಗಳ ಅಂಗೋಪಾಂಗಾದಿಗಳನ್ನು ವಿಧಿವತ್ತಾಗಿ ಸಂಪಾದನ ಮಾಡುವನು. ಈ ಅಧ್ವರ್ಯುವಿನ ಕಾರ್ಯಕ್ಕಾಗಿ ಯಜುಃಸಂಹಿತಾದ ಸಂಕಲನವಾಯಿತು. ಬ್ರಹ್ಮಾ ಎಂಬವನು ಸಂಪೂರ್ಣ ಯಾಗವು ವಿಧಿವತ್ ನಡೆಯುವದನ್ನು ನೀರೀಕ್ಷಿಸುತ್ತ ಸ್ವಲ್ಪು ಲೋಪದೋಷವಿಲ್ಲದಂತೆ ಮತ್ತು ಯಾವ ವಿಘ್ನವೂ ಬರದಂತೆ ನೋಡಿಕೊಳ್ಳುತ್ತಾನೆ. ಇವನ ಸಲುವಾಗಿ ಅಥರ್ವಣ ವೇದದ ಸಂಕಲನವಾಯಿತು.

ವೇದದಲ್ಲಿ ಸಂಹಿತಾ, ಬ್ರಾಹ್ಮಣ ಮತ್ತು ಆರಣ್ಯಕ ಎಂದು ಮೂರು ಭಾಗಗಳಿರುತ್ತವೆ. ಮೂರನೆಯದಾದ ಆರಣ್ಯಕದಲ್ಲಿ ವಾನಪ್ರಸ್ಥಾಶ್ರಮದಲ್ಲಿ ಮಾಡತಕ್ಕಂಥ ಕಾರ್ಯಕಲಾಪಗಳ ವರ್ಣನವಿರುತ್ತದೆ. ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದವರು ಅರಣ್ಯದಲ್ಲಿದ್ದು ಅಧ್ಯಾತ್ಮದ ಕಡೆಗೆ ಒಲವುಳ್ಳವರಾಗಿ ಸಾಮಾನ್ಯ ಕ್ರಿಯೆಗಳನ್ನು ಆಚರಿಸುತ್ತಿರುವರು. ಅರಣ್ಯದಲ್ಲಿದ್ದವರಿಂದ ಅಧ್ಯಯನ ಮಾಡಲ್ಪಡುವ ಮೂಲಕ ಈ ಭಾಗಕ್ಕೆ ಆರಣ್ಯಕವೆಂಬ ಹೆಸರು ಉಂಟಾಯಿತು. ಮಾನವನ ವಿಚಾರ ಶಕ್ತಿಯು ಹೇಗೆ ಹೇಗೆ ವಿಕಾಸವಾಗುತ್ತ ನಡೆಯುವದೋ ಹಾಗೆ ಹಾಗೆ ಇಹಲೋಕದ ಭೋಗ ಭಾಗ್ಯಗಳ ಕಡೆಗೆ ಅವನ ಒಲವು ಕಡಿಮೆಯಾಗುತ್ತ ನಡೆಯುತ್ತದೆ. ಏಕಂದರೆ ಈ ಲೋಕದಲ್ಲಿ ದೊಡ್ಡ ದೊಡ್ಡ ಶ್ರೀಮಂತರೂ ರಾಜಾಧಿರಾಜರೂ ಸಮುದ್ರ ಪರ್ಯಂತ ಭೂಮಿಯನ್ನು ಏಕಚಕ್ರಾಧಿಪತ್ಯದಿಂದ ಆಳುವಂತಹ ಮಹಾರಾಜರೂ ಹಾಗೂ ಯೋಗಬಲದಿಂದ ಪರಕಾಯ ಪ್ರವೇಶ ಜಲ ಪರ್ಯಟನ, ಆಕಾಶ ಗಮನಾದಿಗಳನ್ನು, ಅಣಿಮಾದಿ ಅಷ್ಟ ಸಿದ್ಧಿಗಳನ್ನು ಪಡೆದು ಸಾವಿರಾರು ವರುಷಗಳವರೆಗೂ ಜೀವಿಸಬಲ್ಲ ಮಹಾ ಮಹಾ ಯೋಗಿ ವರೇಣ್ಯರೂ ಕೊನೆಗೆ ಧನಕನಕಾದಿಗಳನ್ನು ಭೂಮಿ ಸೀಮೆಗಳನ್ನೂ, ಹೆಂಡರು, ಮಕ್ಕಳನ್ನೂ, ಭಂದು-ಬಳಗವನ್ನು ಕಿಂಬಹುನಾ ಎಲ್ಲವನ್ನು ತ್ಯಾಗ ಮಾಡಿ ಹೋಗಬೇಕಾದುದನ್ನು ಅನ್ಯರಿಂದ ಕೇಳಿಯೂ ತಾನು ಸ್ವತಃ ನೋಡಿಯೂ ನೋಡುತ್ತಲೂ ಇರುವುದರಿಂದ ಭೂಲೋಕದ ಭೋಗ ಭಾಗ್ಯಗಳು ನಶ್ವರವಾದವುಗಳು. ಇಷ್ಟರಿಂದಲೇ ತೃಪ್ತಿಹೊಂದುವದು ಯೋಗ್ಯವಾದುದಲ್ಲ ಎಂದು ಭಾವಿಸಿ ಪರಲೋಕದ ಸುಖದ ಕಡೆಗೆ ಧಾವಿಸುವನು. ಏಕೆಂದರೆ ಸ್ವರ್ಗಾದಿಗಳಲ್ಲಿರುವವರು, ನಿತ್ಯದಲ್ಲಿಯೂ ದುಡಿಯುವದಾಗಲೀ ಪಾಕಾದಿಗಳನ್ನು ಮಾಡುವದಾಗಲೀ ಇತರ ಯಾವ ಕಾರ್ಯವನ್ನಾಗಲೀ ಮಾಡದೇ ಬಾಲ್ಯವೃದ್ಧಾಪ್ಯಗಳಿಲ್ಲದೆ ತ್ರಿಶದ (ಮೂವತ್ತು ವರ್ಷದ ತರುಣ) ರೆನಿಸಿಕೊಂಡು ಹೆಂಡಿರು ಮಕ್ಕಳೊಡನೆ ಚೆಕ್ಕಂದವಾಡುತ್ತ ಎಂದೋ

CC-0. Jangamwadi Math Collection. Digitized by eGangotri

ಒಂದುದಿನ ಅಮೃತವನ್ನು ಸೇವಿಸಿ ಹಸಿವು ತೃಷೆಗಳನ್ನು ಕಳೆದುಕೊಂಡು ಓಲಾಡುತ್ತಿರುವರು. ಇಂಥ ಸುಖಕ್ಕೆ ಬಾಯ್ದೆರೆದು ಯಜ್ಞಯಾಗಾದಿಗಳನ್ನು ಮಾಡಲು ಮಾನವನು ಪ್ರವೃತ್ತನಾಗುತ್ತಾನೆ. ಇಂಥ ಯಜ್ಞ ಯಾಗಾದಿಗಳಿಂದ ಪ್ರಾಪ್ತವಾದ ಸ್ವರ್ಗದ ಭೋಗದಲ್ಲಾದರೂ ತೃಪ್ತಿ ಇದೆಯೋ? ಇರುವದಿಲ್ಲ. ಆ ಸ್ವರ್ಗದಲ್ಲಿಯೂ ತನ್ನದೊಂದು ರಾಜ್ಯವನ್ನು ಗಳಿಸಬೇಕೆಂಬ ಬುದ್ಧಿಯುಂಟಾಗಿ "ಜ್ಯೋತಿಷ್ಟೋಮೇನ ಸ್ವರಾಜ್ಯಕಾಮೋ ಯಜೇತ" ಎಂಬ ವಿಧಿಯ ಬೆನ್ನಹತ್ತಿ ಅಪಾರವಾದ ಸಂಪತ್ತನ್ನು ಸೂರೆಮಾಡಿ ಮಹಾ-ಮಹಾ ಯಾಗಗಳನ್ನು ಮಾಡಿ ಸ್ವರಾಜ್ಯವನ್ನು ಗಳಿಸುವನು. ಇಷ್ಟೆಲ್ಲ ಆದರೂ ಅವನು ಭೂಲೋಕದಲ್ಲಿ ಗಳಿಸಿದ ಪುಣ್ಯವು ತೀರಿದಕೂಡಲೇ ಒದ್ದು ಕೆಳಗೆ ದೂಡುವದರಿಂದ ಭೂಲೋಕಕ್ಕೆ ಬರಬೇಕಾಗುತ್ತದೆ. ಹೀಗೆ ದೂಡಿಸಿಕೊಂಡು ಬಂದು ಪುನಃ ಭೂಲೋಕದಲ್ಲಿ ಜನಿಸಿ ಸತ್ಕರ್ಮಗಳನ್ನು ಮಾಡಿ ವಾನಪ್ರಸ್ಥಾಶ್ರಮವನ್ನು ಹೊಂದಿ ಅರಣ್ಯದಲ್ಲಿ ಕೂತು ವಿಚಾರ ಮಾಡಲಿಕ್ಕೆ ಹತ್ತುವನು— "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ." ಭೂಲೋಕದಲ್ಲಿ ಮಾಡಿದ ಯಜ್ಞಾದಿಗಳ ಪುಣ್ಯ ಪ್ರಭಾವದಿಂದ ಸ್ವರ್ಗಾದಿಗಳು ಸಿಕ್ಕರೂ ಆ ಪುಣ್ಯವು ತೀರಿದಕೂಡಲೇ ಭೂಲೋಕಕ್ಕೆ ಬರಬೇಕಾದುದರಿಂದಲೂ ಮೊದಲಿಂದಲೇ ಆ ಸ್ವರ್ಗದಲ್ಲಿ ಇದ್ದವರಿಗಾದರೂ ಶಾಶ್ವತವಾದ ಸುಖವಿರುವದಿಲ್ಲ. ಮಾನವರ ಸುಖದ ಕಾಲಕ್ಕಿಂತಲೂ ಸ್ವರ್ಗೀಯರ ಕಾಲವು ಬಹು ದೊಡ್ಡದಾಗಿ ಕಂಡರೂ ಅವರಿಗೂ ಒಂದು ಕಾಲ ಪರಿಮಿತಿಯುಂಟು. ಮಹಾಪ್ರಳಯದಲ್ಲಿ ಅವರೂ ನಾಶವಾಗಲೇ ಬೇಕಾದುದರಿಂದಲೂ ಸ್ವರ್ಗಾದಿ ಭೋಗಗಳೂ ಸಹ ನಶ್ವರವಾದವುಗಳು. ಆದುದರಿಂದ ಕಾಮ್ಯಕರ್ಮಗಳಿಂದ ನಿತ್ಯವಾದ ಸುಖವು ಎಂದೂ ದೊರೆಯಲಾರದೆಂದು ಆರಣ್ಯಕಗಳಿಂದ ಸ್ಪಷ್ಟವಾಗಿ ತೋರುವದು. ಆ ಆರಣ್ಯಕಗಳ ಅಂತಿಮ ಭಾಗದ ಕಡೆಗೆ ಅವರ ದೃಷ್ಟಿಯು ಹರಿಯುವದು. ಈ ಆರಣ್ಯಕಗಳ ಅಂತಿಮಭಾಗವೇ ಉಪನಿಷತ್ತುಗಳು. ಸಂಹಿತಾ, ಬ್ರಾಹ್ಮಣ, ಆರಣ್ಯಕ, ಎಂಬ ಅವಾಂತರ ೩ ಭಾಗಗಳಿಂದ ಕೂಡಿದ ವೇದಕ್ಕೆ ಕರ್ಮಕಾಂಡವೆಂದೂ ಉಪನಿಷದ್ ಭಾಗಕ್ಕೆ ಜ್ಞಾನಕಾಂಡವೆಂದೂ ವೇದದಲ್ಲಿ ಎರಡು ಭಾಗವುಂಟು. ಈ ಜ್ಞಾನಕಾಂಡದಲ್ಲಿಯೇ ಭಕ್ತಿಕಾಂಡವೂ ಇರುತ್ತದೆ ಎಂದು ಕೆಲವರ ಮತವಿರುತ್ತದೆ.

## ಉಪನಿಷತ್

ಉಪನಿಷತ್ ಎಂದರೆ ಏನೆಂಬುದನ್ನು ಆ ಶಬ್ದದ ವ್ಯುತ್ಪತ್ತಿಯಿಂದ ತಿಳಿದುಕೊಳ್ಳಬೇಕು. ಈ ಶಬ್ದದಲ್ಲಿ ಉಪ, ನಿ, ಎರಡು ಉಪಸರ್ಗಗಳು ಮತ್ತು ಸದ್, ಧಾತು ಮೂರು ಇರುತ್ತವೆ. 'ಸದ್ ವಿಶರಣಗತ್ಯವಸಾದನೇಷು' ಎಂಬ ಪಾಣಿನೀಯ

CC-0. Jangamwadi Math Collection. Digitized by eGangotri

ವಾಕ್ಯದಂತೆ ಸದ್ ಧಾತುವಿಗೆ ವಿಶರಣ–ನಾಶ–ಗತಿ–ಪ್ರಾಪ್ತಿ ಅವಸಾದನ–ಶಿಥಿಲೀಕರಣ ಎಂಬ ಮೂರು ಅರ್ಥಗಳಿರುತ್ತವೆ. ಒಂದರ ನಾಶ ಮತ್ತೊಂದರ ಪ್ರಾಪ್ತಿ, ಇನ್ನೊಂದರ ಶಿಥಿಲೀಕರಣ ಈ ಮೂರು ಉಪನಿಷತ್ತಿನಿಂದ ಆಗುತ್ತವೆ. (೧) ಯಾವುದನ್ನು ಅಧ್ಯಯನ ಮಾಡುವದರಿಂದ ಜನನ–ಮರಣರೂಪ ಸಂಸಾರಕ್ಕೆ ಕಾರಣೀಭೂತವಾದ, ಕಣ್ಣಿನಿಂದ ಕಂಡ, ಕಿವಿಯಿಂದ ಕೇಳಿದ, ಇತರ ಯಾವತ್ತೂ ವಿಷಯಗಳ ವಾಸನರೂಪವಾದ ಅಜ್ಞಾನದ ನಾಶವಾಗುತ್ತದೋ (೨) ಮತ್ತು ವಿಷಯ ವಾಸನಾರೂಪ ಅಜ್ಞಾನದ ನಾಶವನ್ನು ಮಾಡಿಕೊಂಡ ಮುಮುಕ್ಷುವಿಗೆ ಬ್ರಹ್ಮಸ್ವರೂಪದ ಪ್ರಾಪ್ತಿ (ಅರಿವು) ಉಂಟಾಗುತ್ತದೋ (೩) ಯಾವುದರ ಮನನದಿಂದ ಶರೀರೇಂದ್ರಿಯಾದಿಗಳು ನಾನಲ್ಲ, ನನ್ನನ್ನು ಆಯುಧಗಳು ಕತ್ತರಿಸಲಾರವು, ಮತ್ತು ಅಗ್ನಿಯು ಸುಡಲಾರದು. ನನಗೆ ಜನನ ಮರಣವಿಲ್ಲ. ನಾನು ನಿತ್ಯನು, ಮುಕ್ತನು ಎಂಬ ಅರಿವು ಉಂಟಾಗಿ ಸಾಂಸಾರಿಕವಾದ ನಾನಾವಿಧ ದುಃಖದ ರಾಶಿಯಲ್ಲಿ ಶಿಥಿಲತೆಯುಂಟಾಗುತ್ತದೋ, ಯಾವುದರ ನಿದಿಧ್ಯಾಸದಿಂದ ಕೊನೆಗೆ ಶಿವಜೀವರ ಐಕ್ಯವು ಲಿಂಗಾಂಗ ಸಾಮರಸ್ಯವು ಉಂಟಾಗುತ್ತದೋ ಅಂತಹ ಅಧ್ಯಾತ್ಮ ವಿದ್ಯೆಯೇ "ಉಪನಿಷತ್" ಶಬ್ದದ ಮುಖ್ಯಾರ್ಥವು. ಇಂತಹ ಅಧ್ಯಾತ್ಮವಿದ್ಯೆಯನ್ನು ಪ್ರತಿಪಾದನ ಮಾಡುವಂತಹ ಗ್ರಂಥ ಸಮೂಹಕ್ಕೆ ಉಪನಿಷತ್, ಎಂಬುದು ಗೌಣಾರ್ಥವು. ಗ್ರಂಥರೂಪಗಳಾದ ಉಪನಿಷತ್ತುಗಳು ೧೦೮ ಎಂದು ಮುಕ್ತಿಕೋಪನಿಷತ್ತಿನ

ವಿದೇಹಮುಕ್ತಾವಿಚ್ಛಾಚೇದಷ್ಟೋತ್ತರ ಶತಂ ಪಠ ।
ತಾಸಾಂ ಕ್ರಮಂ ಸಶಾಂತಿಂ ಚ ಶೃಣು ವಕ್ಷ್ಯಾಮಿ ತತ್ವತಃ ।
ಈಶ, ಕೇನ, ಕಠ,ಪ್ರಶ್ನ, ಮುಂಡ, ಮಾಂಡೂಕ್ಯ, ತಿತ್ತಿರಿಃ

ಇತ್ಯಾದಿ ವಾಕ್ಯಗಳಿಂದ ಕಂಡುಬರುತ್ತದೆ. ಇವುಗಳಲ್ಲಿ ಹತ್ತು ಋಗ್ವೇದಕ್ಕೆ ಸಂಬಂಧಪಟ್ಟವು. ಹದಿನೆಂಟು ಶುಕ್ಲಯಜುರ್ವೇದಕ್ಕೆ ಸಂಬಂಧಿಸಿದವು, ಮೂವತ್ತುಮೂರು ಕೃಷ್ಣಯಜುರ್ವೇದದವು, ಹದಿನಾರು ಸಾಮವೇದದವು, ಮೂವತ್ತೊಂದು ಅಥರ್ವಣ ವೇದದವು; ಅಂತೂ ೧೦೮ ಈ ಉಪನಿಷತ್ತುಗಳಿಗೆ ವೇದಾಂತ ಎಂಬ ಹೆಸರು ರೂಢವಾಗಿರುತ್ತದೆ. ವೇದಗಳ ಅಂತಿಮಭಾಗದಲ್ಲಿ ಉಪನಿಷತ್ತುಗಳು ಇರುವುದರಿಂದ ಈ ಹೆಸರು ಅನ್ವರ್ಥಕವೂ ಆಗಿದೆ. ಇದಲ್ಲದೆ ವೇದಗಳು ಯಜ್ಞಯಾಗಾದಿ ಕಾಮ್ಯ–ಕರ್ಮಗಳ ಮೂಲಕವಾಗಿ ಭೌತಿಕ ಸಂಪತ್ತನ್ನೇ ಮುಖ್ಯವಾಗಿಟ್ಟುಕೊಳ್ಳದೆ ಮಾನವನ ಜೀವನೋದ್ಧಾರದ ಮುಖ್ಯ ಸಾಧನವಾದ ಆಧ್ಯಾತ್ಮಿಕ ಸಂಪತ್ತನ್ನು ಬೋಧಿಸುವದನ್ನೇ ಪ್ರಧಾನಕಾರ್ಯವನ್ನಾಗಿ ಇಟ್ಟುಕೊಂಡಿರುವದರಿಂದ ವೇದ–ವೇದಗಳ ಅಂತ–ಸಿದ್ಧಾಂತ ಎಂದು ಅರ್ಥವಾಗುವದರಿಂದ ಇವುಗಳಿಗೆ

CC-0. Jangamwadi Math Collection. Digitized by eGangotri

ವೇದಾಂತ ಎಂಬ ಹೆಸರು ಸಾರ್ಥಕವಾಗುತ್ತದೆ. ಈ ಉಪನಿಷತ್ತುಗಳಲ್ಲಿ ದ್ವೈತ ಬೋಧಕ ಶ್ರುತಿಗಳೂ ಅದ್ವೈತ ಬೋಧಕ ಶ್ರುತಿಗಳೂ ವಿಶಿಷ್ಟಾದ್ವೈತ ಬೋಧಕ ಶ್ರುತಿಗಳೂ ಮತ್ತು ಶಕ್ತಿವಿಶಿಷ್ಟಾದ್ವೈತ ಬೋಧಕ ಶ್ರುತಿಗಳೂ ಉಪಲಬ್ಧವಾಗಿರುತ್ತವೆ. ಈ ಎಲ್ಲ ಶ್ರುತಿಗಳು ಯುಕ್ತಿ-ಯುಕ್ತಗಳೂ ಪ್ರಮಾಣಬದ್ಧವಾದವುಗಳೂ ಇರುತ್ತವೆ. ಪ್ರತಿಯೊಬ್ಬ ಆಚಾರ್ಯರು ತಮ್ಮ ತಮ್ಮ ಸಿದ್ಧಾಂತಕ್ಕೆ ಅನುಗುಣವಾದ ಶ್ರುತಿಗಳಿಗೆ ಪ್ರಾಧಾನ್ಯತೆಯನ್ನು ಅನ್ಯಶ್ರುತಿಗಳಿಗೆ ಗೌಣತ್ವವನ್ನು ಹೇಳುತ್ತ ತಮ್ಮ ತಮ್ಮ ಸಿದ್ಧಾಂತವನ್ನು ಸ್ಥಾಪನೆ ಮಾಡಿಕೊಂಡಿರುವರು. ಉಪನಿಷತ್ತಿನ ಸಿದ್ಧಾಂತವು ಒಂದೇ ಇದ್ದರೂ ಅವರವರ ದೃಷ್ಟಿಯಲ್ಲಿ ಭಿನ್ನ ಭಿನ್ನವಾಗಿ ತೋರಿದುತ್ತದೆ. ಮಧ್ವಾಚಾರ್ಯರು ದ್ವೈತವನ್ನು ಉಪನಿಷತ್ತುಗಳ ಸಹಾಯದಿಂದ ಸಿದ್ಧಮಾಡುತ್ತ ಹೋಗಿದ್ದರೆ ಶಂಕರಾಚಾರ್ಯರು ಉಪನಿಷತ್ತುಗಳನ್ನೇ ಆಧಾರವಾಗಿಟ್ಟುಕೊಂಡು ಅದ್ವೈತವನ್ನು ಸಾಧಿಸಿರುವರು. ರಾಮಾನುಜಾಚಾರ್ಯರು ದ್ವೈತಾದ್ವೈತಗಳನ್ನು ಖಂಡಿಸಿ, ವಿಶಿಷ್ಟಾದ್ವೈತವನ್ನು ಪ್ರತಿಪಾದನಮಾಡಿರುವರು. ಶ್ರೀ ನೀಲಕಂಠ ಶಿವಾಚಾರ್ಯರು ಮತ್ತು ಶ್ರೀಪತಿ ಪಂಡಿತರು ಇವರನ್ನು ಖಂಡಿಸಿ ಶಕ್ತಿವಿಶಿಷ್ಟಾದ್ವೈತವನ್ನು ಸಿದ್ಧಾಂತಮಾಡಿರುವರು. ಈ ನಾಲ್ಕು ವೇದಾಂತಮತಗಳ ಪ್ರಬಲ ಪ್ರಾಚುರ್ಯದಿಂದ ಕಂಡುಬರುವದೇನಂದರೆ- ಉಪನಿಷತ್ತುಗಳಲ್ಲಿ ಎಲ್ಲ ದರ್ಶನಗಳ ಬೀಜಭೂತ ತತ್ವವು ಸೂಕ್ಷ್ಮರೂಪವಾಗಿ ಅಡಗಿರುತ್ತದೆ. ಅಂತೆಯೇ ಅನೇಕ ದರ್ಶನಗಳು ಪ್ರಾದುರ್ಭವಿಸಿದವು.

ಉಪನಿಷತ್ ಪ್ರತಿಪಾದಿತವಾದ ತತ್ವವನ್ನು ಅತಿ ಪ್ರಾಚೀನಕಾಲದ ಅತ್ರೇಯ, ಓಡುಲೋಮಿ, ಕಾಶಕೃತ್ಸನ, ಜೈಮಿನಿ ಮೊದಲಾದ ಋಷಿಗಳು ಭಿನ್ನ ಭಿನ್ನವಾಗಿ ಪ್ರತಿಪಾದಿಸತೊಡಗಿದ್ದರೂ ಆಗ ಈ ವಿರೋಧವನ್ನು ಪರಿಹರಿಸಿ ಉಪನಿಷದ್ ವಾಕ್ಯಗಳಿಗೆಲ್ಲ ಏಕರೂಪತೆಯನ್ನು ಸಿದ್ಧಮಾಡುವದಕ್ಕಾಗಿ ಬಾದರಾಯಣನೆಂದು ಪ್ರಸಿದ್ಧನಾದ ವ್ಯಾಸಮುನಿಯು ಮೊಟ್ಟಮೊದಲಿಗೆ ಉಪನಿಷದ್ ವಾಕ್ಯಗಳ ಸಾರವನ್ನೇ ಸಂಗ್ರಹಿಸಿ 'ಬ್ರಹ್ಮಸೂತ್ರ' ಎಂಬ ಗ್ರಂಥವನ್ನು ರಚಿಸಿದನು. ಈ ಬ್ರಹ್ಮಸೂತ್ರವು ನಾಲ್ಕು-ನಾಲ್ಕು ಪಾದಗಳುಳ್ಳ ನಾಲ್ಕು ಅಧ್ಯಾಯದಿಂದ ಕೂಡಿದುದಾಗಿದೆ. ಇದರ ಮೊದಲನೆಯ ಅಧ್ಯಾಯಕ್ಕೆ ಸಮನ್ವಯಾಧ್ಯಾಯ ಎಂದು ಹೆಸರಿಟ್ಟು ಬೇರೆ ಬೇರೆ ವಸ್ತುಗಳಿಗೆ ಬ್ರಹ್ಮವೆಂದು ಹೇಳುವ ಶ್ರುತಿಗಳನ್ನೆಲ್ಲ ಪರಬ್ರಹ್ಮದಲ್ಲಿ ಸಮನ್ವಯ ಮಾಡಿರುವನು.

## ಬ್ರಹ್ಮಸೂತ್ರ ಭಾಷ್ಯಕಾರರು

ಈ ಬ್ರಹ್ಮಸೂತ್ರಗಳಿಗೆ ಹನ್ನೊಂದು ಜನರು ಭಾಷ್ಯಗಳನ್ನು ಬರೆದು ತಮ್ಮ ತಮ್ಮ ಸಿದ್ಧಾಂತಗಳನ್ನು ಸಪ್ರಮಾಣವಾಗಿಯೂ ಯುಕ್ತಿ-ಯುಕ್ತವಾಗಿಯೂ ಸಿದ್ಧಮಾಡಿರುವರು.

CC-0. Jangamwadi Math Collection. Digitized by eGangotri

| ಸಂಖ್ಯೆ | ಭಾಷ್ಯಕಾರರು | ಭಾಷ್ಯಗಳು | ಸಿದ್ಧಾಂತ |
|---|---|---|---|
| ೧) | ಶ್ರೀ ಶಂಕರಾಚಾರ್ಯರು | ಶಾರೀರಿಕ ಭಾಷ್ಯ | ನಿರ್ವಿಶೇಷಾದ್ವೈತ |
| ೨) | ,, ನೀಲಕಂಠ ಶಿವಾಚಾರ್ಯರು | ನೀಲಕಂಠ ಭಾಷ್ಯ | ಶಕ್ತಿವಿಶಿಷ್ಟಾದ್ವೈತ |
| ೩) | ,, ರಾಮಾನುಜಾಚಾರ್ಯರು | ಶ್ರೀಭಾಷ್ಯ | ವಿಶಿಷ್ಟಾದ್ವೈತ |
| ೪) | ,, ಮಧ್ವಾಚಾರ್ಯರು | ಪೂರ್ಣಪ್ರಜ್ಞ ಭಾಷ್ಯ | ದ್ವೈತ |
| ೫) | ,, ಶ್ರೀಪತಿ ಪಂಡಿತರು | ಶ್ರೀಕರ ಭಾಷ್ಯ | ಶಕ್ತಿವಿಶಿಷ್ಟಾದ್ವೈತ |
| ೬) | ,, ಭಾಸ್ಕರಾಚಾರ್ಯರು | ಭಾಸ್ಕರ ಭಾಷ್ಯ | ಭೇದಾಭೇದ |
| ೭) | ,, ನಿಂಬಾರ್ಕರು | ವೇದಾಂತ ಪಾರಿಜಾತ | ದ್ವೈತಾದ್ವೈತ |
| ೮) | ,, ಶ್ರೀಕಂಠಾಚಾರ್ಯರು | ಶ್ರೀಕಂಠ ಭಾಷ್ಯ | ವಿಶಿಷ್ಟಾದ್ವೈತ |
| ೯) | ,, ವಲ್ಲಭಾಚಾರ್ಯರು | ಅಣುಭಾಷ್ಯ | ಶುದ್ಧಾದ್ವೈತ |
| ೧೦) | ,, ವಿಜ್ಞಾನ ಭಿಕ್ಷುಗಳು | ವಿಜ್ಞಾನಾಮೃತ ಭಾಷ್ಯ | ಅವಿಭಾಗಾದ್ವೈತ |
| ೧೧) | ,, ಬಲದೇವರು | ಗೋವಿಂದ ಭಾಷ್ಯ | ಅಚಿಂತ್ಯ ಭೇದಾಭೇಧ |

| ಭಾಷ್ಯಕಾರರು | ಅಧ್ಯಾಯ | ಪಾದ | ಅಧಿಕರಣ | ಸೂತ್ರ |
|---|---|---|---|---|
| ಶಂಕರಭಾಷ್ಯಾನುಸಾರ | ೪ | ೪ | ೧೯೨ | ೫೫೫ |
| ರಾಮಾನುಜ ಭಾಷ್ಯ | ೪ | ೪ | ೧೫೬ | ೫೪೫ |
| ಮಧ್ವ ಭಾಷ್ಯ | ೪ | ೪ | ೨೨೩ | ೫೬೪ |
| ಶ್ರೀಕರಭಾಷ್ಯ | ೪ | ೪ | ೧೧೩ | ೫೪೪ |

ವೈಷ್ಣವಧರ್ಮದಲ್ಲಿ ಪ್ರಸಿದ್ಧಗಳಾದ ಸಂಪ್ರದಾಯಗಳು, ಶ್ರೀ ವೈಷ್ಣವ ಸಂಪ್ರದಾಯ, ಬ್ರಹ್ಮಸಂಪ್ರದಾಯ, ರುದ್ರಸಂಪ್ರದಾಯ, ಸನಕಸಂಪ್ರದಾಯ, ಎಂದು ನಾಲ್ಕು ಇರುತ್ತವೆ. ಈ ನಾಲ್ಕು ಸಂಪ್ರದಾಯದವರಿಗೂ ಕೇವಲ ವೇದ ಒಂದೇ ಪ್ರಮಾಣವಾದುದಲ್ಲ. ವೇದದ ಜೊತೆಗೆ 'ಪಾಂಚರಾತ್ರ' ಎಂಬ ಆಗಮವೂ ಪ್ರಮಾಣವಾಗಿರುತ್ತದೆ. ಇವರಲ್ಲಿ ಶ್ರೀ ವೈಷ್ಣವರಿಗಂತೂ ಪಾಂಚರಾತ್ರಾಗಮವೇ ಪ್ರಾಣವಾಗಿರುತ್ತದೆ. ಮಧ್ವಸಂಪ್ರಾಯದಲ್ಲಿಯೇ ಚೈತನ್ಯ ಸಂಪ್ರದಾಯವೆಂಬ ಒಂದು ಅವಾಂತರ ಭೇದವಿರುತ್ತದೆ. ಈ ಐದು ವೈಷ್ಣವ ಸಂಪ್ರದಾಯಗಳಿಗೂ ವೇದ ಮತ್ತು ಆಗಮ ಎರಡೂ ಪ್ರಮಾಣವಾಗಿರುವವಲ್ಲದೆ ಪುರಾಣಗಳಲ್ಲಿ ವಿಷ್ಣುಪುರಾಣ ಮತ್ತು ಭಾಗವತ, ಇವೆರಡೂ ಪ್ರಮಾಣವಾದವುಗಳು. ಆದರೆ ಇವರ ಸಿದ್ಧಾಂತಗಳು ಮಾತ್ರ ಭಿನ್ನ ಭಿನ್ನ ವಾಗಿರುತ್ತದೆ. ಶ್ರೀ ವೈಷ್ಣವ ಸಂಪ್ರದಾಯದ ರಾಮಾನುಜಾಚಾರ್ಯರು ವಿಶಿಷ್ಟಾದ್ವೈತವನ್ನು, ಬ್ರಹ್ಮಸಂಪ್ರದಾಯದ ಮಧ್ವಾಚಾರ್ಯರು

CC-0. Jangamwadi Math Collection. Digitized by eGangotri

ದ್ವೈತವನ್ನು ರುದ್ರಸಂಪ್ರದಾಯದ ವಲ್ಲಭಾಚಾರ್ಯರು ಶುದ್ಧಾದ್ವೈತವನ್ನು, ಸನಕ ಸಂಪ್ರದಾಯದ ನಿಂಬಾರ್ಕರು, ದ್ವೈತಾದ್ವೈತವನ್ನು, ಚೈತನ್ಯ ಸಂಪ್ರದಾಯದ ಬಲದೇವರು ಅಚಿಂತ್ಯ ಭೇದಾಭೇದವನ್ನು ಸಿದ್ಧಾಂತ ಮಾಡಿರುವರು.

ಭಾಸ್ಕರಾಚಾರ್ಯರ ಭೇದಾಭೇದ ಸಿದ್ಧಾಂತವೂ, ನಿಂಬಾರ್ಕರ ದ್ವೈತಾದ್ವೈತ ಸಿದ್ಧಾಂತವೂ ಸಾಮಾನ್ಯವಾಗಿ ಒಂದೇ ಇರುತ್ತವೆ. ಕೆಲವು ವಿಷಯಗಳಲ್ಲಿ ಮಾತ್ರ ಅಲ್ಪಸ್ವಲ್ಪ ಭೇದವಿರುತ್ತದೆ. ವೈಷ್ಣವರಾದ ನಿಂಬಾರ್ಕರು ವಿಷ್ಣುವೇ ಪರವಸ್ತುವೆಂದು ಹೇಳುತ್ತಾರೆ. ಭಾಸ್ಕರರು ಮಾತ್ರ ಪರಬ್ರಹ್ಮವೇ ಪರವಸ್ತುವೆಂದು ಹೇಳುವರು.

ಶ್ರೀಕಂಠಾಚಾರ್ಯರ ವಿಶಿಷ್ಟಾದ್ವೈತವೂ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತವೂ ಪ್ರಾಯಃ ಒಂದೇ ವಿಧವಾದುದು. ಇವರಲ್ಲಿ ಒಡೆದು ಕಾಣುವಂತಹ ಭೇದವೆಂದರೆ ವಿಷ್ಣುವೇ ಪರಬ್ರಹ್ಮವೆಂದು ರಾಮಾನುಜರು ಹೇಳುವರು. ಶಿವನೇ ಪರಬ್ರಹ್ಮನೆಂದು ಶ್ರೀಕಂಠಾಚಾರ್ಯರು ಹೇಳುವರು. ಈ ಕಂಠಭಾಷ್ಯಕ್ಕೆ ಅಪ್ಪಯ್ಯದೀಕ್ಷಿತರು ಶಿವಾರ್ಕಮಣಿದೀಪಿಕಾ ಎಂಬ ಟೀಕೆಯನ್ನು ಬರೆದು ಶ್ರುತ್ಯಾಗಮಾದಿ ಬಹುವಿಧ ಪ್ರಮಾಣಗಳಿಂದ ಶಿವಪಾರಮ್ಯವನ್ನು ವಿದ್ವಜ್ಜನ ಮಾನ್ಯವಾಗುವಂತೆ ಸಿದ್ಧಮಾಡಿ ತೋರಿಸಿರುವರು.

## ವೀರಶೈವ ದರ್ಶನದ ಉದಯ

ಭಾರತೀಯ ಧರ್ಮಗಳಲ್ಲಿ ಅತಿ ಪ್ರಾಚೀನವಾದ ಧರ್ಮವೆಂದರೆ ಶೈವ ಧರ್ಮವು. ಶೈವಧರ್ಮದ ವಿಕಾಸರೂಪವಾದ ವೀರಶೈವಧರ್ಮವೂ ಅತಿ ಪ್ರಾಚೀನವಾದುದೆಂಬುದರಲ್ಲಿ ಸಂದೇಹವಿಲ್ಲ. ಈ ವೀರಶೈವಧರ್ಮ ಸಂಸ್ಥಾಪಕರಾದ ಮೂಲಪೀಠಾಚಾರ್ಯರ ಮಠಗಳಿಗೆ ಕ್ರಿಸ್ತಪೂರ್ವ ಎರಡು ಸಾವಿರ ವರ್ಷಗಳ ಹಿಂದಿನ ಸನದುಗಳೂ ತಾಮ್ರಪಟಗಳೂ ಮತ್ತು ಶಾಸನಗಳೂ ಇರುತ್ತವೆ. ಉತ್ತರ ದೇಶದಲ್ಲಿರುವ ಕಾಶೀ ಮತ್ತು ಕೇದಾರ ಪೀಠಗಳಿಗೆ ಶಿಷ್ಯರಾದ ಅನೇಕ ರಾಜ ಮಹಾರಾಜರು ಕಾಲ ಕಾಲಕ್ಕೆ ಈ ಸನದುಗಳನ್ನೂ ತಾಮ್ರ ಪಟಗಳನ್ನೂ ಕೊಟ್ಟಿರುತ್ತಾರೆ. ದಕ್ಷಿಣ ದೇಶದಲ್ಲಿರುವ ಉಜ್ಜಯಿನೀ, ಶ್ರೀಶೈಲ, ಬಾಳೇಹಳ್ಳಿ ಪೀಠಗಳಿಗೂ ಈ ಭಾಗದ ರಾಜಾಧಿರಾಜರು ಸಾವಿರಾರು ವರ್ಷಗಳಿಂದಲೂ ಮಾನ ಮನ್ನಣೆಗಳನ್ನು ಸಲ್ಲಿಸುತ್ತ ಬಂದಿರುವರು.

ಈ ಪೀಠಾಚಾರ್ಯ ಪರಂಪರೆಯಲ್ಲಿಯೇ ಒಬ್ಬರಾದ ನೀಲಕಂಠ ಶಿವಾಚಾರ್ಯರು ಬ್ರಹ್ಮಸೂತ್ರದ ಮೇಲೆ ನೀಲಕಂಠ ಭಾಷ್ಯ ವೆಂಬುದನ್ನು ಬರೆದಿರುತ್ತಾರೆ.

CC-0. Jangamwadi Math Collection. Digitized by eGangotri

## ವೀರಶೈವ ದರ್ಶನದ ಪ್ರಮಾಣ ಸಾಹಿತ್ಯ

ವೇದಗಳು, (ಜ್ಞಾನಕಾಂಡಮಾತ್ರ.) ಬ್ರಹ್ಮಸೂತ್ರ ಆ ಬ್ರಹ್ಮಸೂತ್ರದ ಮೇಲೆ ನೀಲಕಂಠ ಶಿವಾಚಾರ್ಯವಿರಚಿತ ನೀಲಕಂಠ ಭಾಷ್ಯ, ಮತ್ತು ಶ್ರೀಪತಿ ಪಂಡಿತ ವಿರಚಿತ ಶ್ರೀಕರ ಭಾಷ್ಯ, ಉಪನಿಷತ್ತುಗಳ ಮೇಲೆ ರಚಿತವಾದ ಸೋಮನಾಥ ಭಾಷ್ಯ ಮತ್ತು ಶಾಂಕರಭಾಷ್ಯ; ನೀಲಕಂಠಭಾಷ್ಯದ ಸಾರವನ್ನೇ ಪದ್ಯ (ಕಾರಿಕಾ) ರೂಪದಲ್ಲಿ ರಚಿಸಿದ ಕ್ರಿಯಾಸಾರ, ಸ್ವಪ್ರಭಾನಂದ ಶಿವಾಚಾರ್ಯವಿರಚಿತ ಶಿವಾದ್ವೈತ ಮಂಜರಿ, ಶಿವಯೋಗಿ ಶಿವಾಚಾರ್ಯ ವಿರಚಿತ ಶ್ರೀರೇಣುಕಾಗಸ್ತ್ಯ ಸಂವಾದಾತ್ಮಕ ಸಿದ್ಧಾಂತ ಶಿಖಾಮಣಿ, ಶ್ರೀಮರಿತೋಂಟದಾರ್ಯವಿರಚಿತ ವೀರಶೈವಾನಂದಚಂದ್ರಿಕಾ, ನಂದಿಕೇಶ್ವರ ಕೃತ ಲಿಂಗಧಾರಣಚಂದ್ರಿಕಾ, ಶಿವಾನು-ಭವಸೂತ್ರ, ವಿಶೇಷಾರ್ಥಪ್ರಕಾಶಿಕಾ ಮತ್ತು ೨೮ ಶಿವಾಗಮಗಳು ಈಶಾವಾಸ್ಯ, ಕೇನ, ಕಠ, ಶ್ವೇತಾಶ್ವತರ, ಕೈವಲ್ಯ, ಮುಂತಾಗಿ ಉಪನಿಷತ್ತುಗಳು, ಇತ್ಯಾದಿ ಸಂಸ್ಕೃತ ಗ್ರಂಥಗಳು ಪ್ರಾಧಾನ್ಯವಾಗಿ ಪ್ರಮಾಣಗಳಾಗಿವೆ ವೇದಾಗಮೋಪನಿಷತ್ತು-ಗಳಲ್ಲಿ ವೀರಶೈವ ಧರ್ಮಾಮೃತವು ಪ್ರವಹಿಸಿದ್ದರೂ ಬಹು ಜನರಿಗೆ ಅತ್ಯಂತ ದುರ್ಬೋಧವಾದ ಸಂಸ್ಕೃತ ಸಾಹಿತ್ಯದ ಸುಧಾರಸಾನುಭವವು ದುರ್ಲಭವಾಗಿರಲು ಹನ್ನೆರಡನೆಯ ಶತಮಾನದಲ್ಲಿ ಶಿವಶರಣರು ಬಹುಜನ ಗ್ರಾಹ್ಯವಾದ ಸುಲಲಿತ ಕನ್ನಡ ಭಾಷೆಯಲ್ಲಿ ಧಾರಾರೂಪವಾಗಿ ಪ್ರವಹಿಸುವಂತೆ ಮಾಡಿದರು. ಆಗ ಮೂಲೆ, ಮೂಲೆಗಳಲ್ಲಿದ್ದ ಜನಸ್ತೋಮವು ಬಸವಕಲ್ಯಾಣದಲ್ಲಿದ್ದ ಶಿವಾನುಭವ ಮಂಟಪಕ್ಕೆ ಧಾವಿಸಿ ಬರತೊಡಗಿದರು ಈ ಶರಣರ ಗುಂಪಿನಲ್ಲಿ ದೊಡ್ಡ ದೊಡ್ಡ ಶ್ರೀಮಂತರೂ ರಾಜಾಧಿರಾಜರೂ ಸಹ ತಮ್ಮ ಸಂಪತ್ತಿಗೆ ಮತ್ತು ರಾಜ್ಯಕ್ಕೆ ತಿಲಾಂಜಲಿಯನ್ನು ಬಿಟ್ಟುಬಂದು ಮುಮುಕ್ಷುಗಳಾಗಿ ಸೇರಿದ್ದರು. ಆ ಸಂಘದಲ್ಲಿ ಜಾತಿ, ಮತಗಳ ಗೊಂದಲವಿಲ್ಲದೆ ಪಕ್ಷಸಂಗಡಗಳ ಸಂಘರ್ಷಣವಿಲ್ಲವೆ ಸ್ತ್ರೀ ಪುರುಷ ಭೇದ-ವಿಲ್ಲದೆ ಸರ್ವರೂ ಸಮಾನ ಭಾವದಿಂದ ಶಿವಾನುಭವ ಜ್ಞಾನಾಮೃತವನ್ನು ಸವಿದು ಆನಂದಪಡುತ್ತಿದ್ದರು. ಆ ಕಾಲವು ವೀರಶೈವ ಧರ್ಮದ ಅತ್ಯಂತ ಪ್ರಾಬಲ್ಯ ಬೋಧಕ ವಾಗಿತ್ತು. ಇಂತಹ ಅನುಭವಿಗಳ ಪರಸ್ಪರಾನುಭವ ಜನ್ಯವಾದ ವಚನವಾಙ್ಮಯವೂ ಮತ್ತು ಆಂಧ್ರ ಹಾಗೂ ತಮಿಳು ಭಾಷೆಯಲ್ಲಿಯ ಅನೇಕ ಗ್ರಂಥಗಳೂ, ಪ್ರಮಾಣ-ಪ್ರಮಾಣಗಳಾಗಿರುತ್ತವೆ.

## ವೀರಶೈವ ಸಿದ್ಧಾಂತ ಸ್ವರೂಪ

ವೀರಶೈವ ಸಿದ್ಧಾಂತಕ್ಕೆ ಶಿವಾದ್ವೈತ, ವಿಶೇಷಾದ್ವೈತ, ಶಕ್ತಿವಿಶಿಷ್ಟಾದ್ವೈತ ಇತ್ಯಾದಿ ಪರ್ಯಾಯ ನಾಮಗಳಿರುತ್ತವೆ. ಇವುಗಳಲ್ಲಿ ಶಕ್ತಿವಿಶಿಷ್ಟಾದ್ವೈತ

CC-0. Jangamwadi Math Collection. Digitized by eGangotri

ವೆಂಬುದು ಮುಖ್ಯವಾದದ್ದು, ಶಕ್ತಿ ವಿಶಿಷ್ಟಾದ್ವೈತ ಶಬ್ದದ ವ್ಯುತ್ಪತ್ತಿಯು ಶಕ್ತಿಶ್ಚ ಶಕ್ತಿಶ್ಚ ಶಕ್ತೀ, ಶಕ್ತಿಭ್ಯಾವಿಶಿಷ್ಟಾ (ಜಿವೇಶಾ) ಶಕ್ತಿ ವಿಶಿಷ್ಟಯೋಃ ಅದ್ವೈತಂ । ಶಕ್ತಿ ವಿಶಿಷ್ಟ ಶಿವನಿಗೂ ಶಕ್ತಿ ವಿಶಿಷ್ಟ ಜೀವನಿಗೂ ಸಾಮರಸ್ಯ ಎಂದು ಸರಳಾರ್ಥ ಶಕ್ತಿಯು ಸ್ಥೂಲ-ಸೂಕ್ಷ್ಮ ಎಂದು ಚಿತ್-ಅಚಿತ್ ಎಂದು ಎರಡೆರಡು ಪ್ರಕಾರವಾಗಿ ರುತ್ತದೆ. ಜೀವನು ಸ್ಥೂಲವಾದ ಚಿತ್ ಮತ್ತು ಅಚಿತ್ ಶಕ್ತಿಯಿಂದ ಕೂಡಿ ಕೊಂಡಿರುತ್ತಾನೆ ಶಿವನು ಸೂಕ್ಷ್ಮವಾದ ಚಿತ್ ಮತ್ತು ಅಚಿತ್ ಶಕ್ತಿಯಿಂದ ಕೂಡಿಕೊಂಡಿರುವವನು. ಜೀವನಿಗೆ ಸ್ಥೂಲ ಚಿಚ್ಛಕ್ತಿಯಿಂದ ನಾನು ಕಿಂಚಿಜ್ಞನು ಎಂಬ ಮತ್ತು ಸ್ಥೂಲಾಚಿಚ್ಛಕ್ತಿಯಿಂದ ನಾನು ಕಿಂಚಿತ್ ಕರ್ತನು ಎಂಬ ತಿಳಿವಳಿಕೆ ಯಾಗಿದುತ್ತದೆ. ಶಿವನು ಸೂಕ್ಷ್ಮ ಚಿಚ್ಛಕ್ತಿಯು ಸರ್ವಜ್ಞತಾರೂಪವಾಗಿರುವುದು. ಮತ್ತು ಸೂಕ್ಷ್ಮಾಚಿಚ್ಛಕ್ತಿಯು ಸರ್ವ ಕರ್ತೃತಾರೂಪವಾಗಿರುವದು. ಈ ಉಭಯ ವಿಧ ಶಕ್ತಿಯಿಂದ ಯುಕ್ತರಾದ ಶಿವ ಮತ್ತು ಜೀವ ಇವರ ಅದ್ವೈತವೇ (ಸಾಮರಸ್ಯವೇ) ಶಕ್ತಿವಿಶಿಷ್ಟಾದ್ವೈತವೆನಿಸುವದು.

## ಶಕ್ತಿ ಸ್ವರೂಪ

ಶಕ್ತಿ ಯೆಂದರೆ ಪರಶಿವ ಬ್ರಹ್ಮದಲ್ಲಿ ಅವಿನಾಭಾವ ಸಂಬಂಧದಿಂದ ಅಪೃಥಕ್ ಸಿದ್ಧವಾಗಿರುವ ವಿಶೇಷಣವು, ಯಾವ ಸಂಬಂಧವು ಪೃಥಕ್ಕಾಗಿ ಮಾಡಲ್ಪಡುವ ದಿಲ್ಲವೊ ಅಂಥ ಸಂಬಂಧಕ್ಕೆ ಸಮವಾಯ ಸಂಬಂಧವೆನ್ನುತ್ತಾರೆ. ಹೇಗೆ ಸೂರ್ಯ ನಲ್ಲಿ ಪ್ರಭೆಯು ಚಂದ್ರನಲ್ಲಿ ಚಂದ್ರಿಕೆಯು ಇರುತ್ತದೋ ಇದೇ ಮಾತನ್ನೆ ಸಿದ್ಧಾಂತ ಶಿಖಾಮಣಿಯು—

ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತು ಪ್ರಕಾಶಿನೀ
ತಥಾ ಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿರಾ॥ ಎಂದೂ

ಸಾರುತ್ತಿದೆ. ಪರಶಿವನಿಗೂ ಶಕ್ತಿಗೂ ನಿತ್ಯ ಸಂಬಂಧವಿರುವದರಿಂದ ಶಕ್ತಿಯು ನಿತ್ಯ ವಾದುದೆಂಬುದು ತಾನಾಗಿಯೇ ಸಿದ್ಧವಾಗುತ್ತಿದೆ. ಈ ವಿಷಯವನ್ನು ಶ್ವೇತಾಶ್ವತರ ಶ್ರುತಿಯು,

ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀಜ್ಞಾನ. ಬಲಕ್ರಿಯಾಚ ೬-೮ ಎಂಬ ವಾಕ್ಯದಿಂದ ಸಾರುತ್ತಿರುವದು. ಈ ಮಂತ್ರದ ಅರ್ಥವನ್ನು ಪರ್ಯಾ-ಲೋಚಿಸದರೆ ಪರಶಿವ ಬ್ರಹ್ಮದಲ್ಲಿ ಶಕ್ತಿಯು ಸ್ವಭಾವ ಸಿದ್ಧವಾಗಿರುವದೆಂದೂ ಜ್ಞಾನಶಕ್ತಿ ಕ್ರಿಯಾಶಕ್ತಿ ಇತ್ಯಾದಿ ಭೇದದಿಂದ ನಾನಾಪ್ರಕಾರವಾಗಿರುವದೆಂದೂ

CC-0. Jangamwadi Math Collection. Digitized by eGangotri

ಸಿದ್ಧವಾಗುತ್ತದೆ. ಸ್ವಾಭಾವಿಕೀ ಎಂಬ ಪದವು ಶಕ್ತಿಯ ನಿತ್ಯತ್ವವನ್ನು ಸ್ಫುಟವಾಗಿ ಉದ್ಘೋಷಿಸುತ್ತಿರುವದು. ಇದಲ್ಲದೆ ಇದೇ ಉಪನಿಷತ್ತಿನಲ್ಲಿ–

ಯದಾತಮಸ್ತನ್ನದಿವಾನ ರಾತ್ರಿರ್ನ ಸನ್ನಚಾಸಚ್ಛಿವ ಏವ ಕೇವಲಃ ।
ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾಚ ತಸ್ಮಾತ್ ಪ್ರಸೃತಾ ಪುರಾಣೀ ॥೪-೧೮

ಎಂಬ ವಾಕ್ಯದಿಂದ ಯಾವಾಗ ಕತ್ತಲು, ಬೆಳಕು, ಹಗಲು,-ರಾತ್ರಿ, ಸತ್ ಮತ್ತು ಅಸತ್ ಇದೆಲ್ಲವೂ ಇರಲಿಲ್ಲವೋ ಕೇವಲ ಶಿವನೊಬ್ಬನೇ ಇದ್ದನೋ ಅಂಥ ನಾಶರಹಿತನಾದ ಕೋಟಿ ಸೂರ್ಯರಿಗಿಂತಲೂ ಮಿಗಿಲಾಗಿ ಪ್ರಕಾಶಿಸುತ್ತಿರುವ ಆ ಪರಶಿವ ಬ್ರಹ್ಮದಿಂದ ಪುರಾಣೀ-ಅನಾದಿ ಸಂಸಿದ್ಧವಾದ ಪ್ರಜ್ಞಾ-ಚಿಚ್ಛಕ್ತಿಯು ಪ್ರಸೃತಾ ಪ್ರಸರಣವನ್ನು ಹೊಂದಿತು ಎಂದು ಶಕ್ತಿವಿಕಾಸವು ಘಂಟಾಘೋಷವಾಗಿ ತೋರಿಸಲ್ಪಟ್ಟಿರುತ್ತದೆ. ಯಜುರ್ವೇದ ತೈತ್ತಿರೀಯ ಸಂಹಿತೆಯ "ಆಖುಸ್ತೇರುದ್ರ ಪಶುಸ್ತಂಜುಷಸ್ವೈಷತೇ ರುದ್ರಭಾಗಃ" ಸಹ ಸ್ವಸ್ರಾಂಬಿಕಯಾ ತಂಜುಷಸ್ವ ೧-೮-೬ ಎಂಬ ಮಂತ್ರದಿಂದಲೂ ಶಕ್ತಿಯ ನಿತ್ಯತ್ವವು ಸಿದ್ಧವಾಗುತ್ತಿದೆ. ಈ ಮಂತ್ರದಲ್ಲಿರುವ ಸ್ವಸ್ರಾ ಅಂಬಿಕಯೂ ಎಂಬ ಪದಗಳ ವಿವೇಚನದಿಂದ ಪರಶಿವನಲ್ಲಿ ಶಕ್ತಿಯು ಸ್ವಾಭಾವಿಕವಾಗಿರುವುವೆಂದು ಸ್ಪಷ್ಟವಾಗಿ ತೋರುತ್ತದೆ. "ನಮಃ ಸೋಮಾಯಚ ರುದ್ರಾಯಚ" ಎಂಬ ತೈತ್ತಿರೀಯ ಸಂಹಿತಾದ ಶ್ರೀ ರುದ್ರ ಮಂತ್ರದಿಂದಲೂ "ಉಮಾಸಹಾಯಂ ಪರಮೇಶ್ವರಂ ಪ್ರಭುಂ" ಎಂಬ ಕೈವಲ್ಯ ಶ್ರುತಿಯ ಮಂತ್ರದಿಂದಲೂ ಪರಶಿವನು ಉಮಾರೂಪ ಶಕ್ತಿಯುಕ್ತನಾಗಿರುವ ನೆಂಬುದು ಸಿದ್ಧವಾಗುತ್ತದೆ.

"ಮಾಯಾಂತು ಪ್ರಕೃತಿಂ ವಿದ್ಯಾ ನ್ಮಾಂಲಿನಂತು ಮಹೇಶ್ವರಂ"

ಎಂಬ ಶ್ವೇತಾಶ್ವತರ ೪-೧೦ ಮಂತ್ರದಿಂದಲೂ ಪರಶಿವನು ಶಕ್ತಿಯುತನಾಗಿರು ವನೆಂದು ಸಿದ್ಧವಾಗುತ್ತದೆ. ಇಲ್ಲಿ "ಮಂ ಪರಶಿವಂ ಆಯತಿ ಸ್ವಭಾವತಃ ಪ್ರಾಪ್ನೋತೀತೀ ಮಾಯಾ" ಎಂದು ವೀರಶೈವಾಚಾರ್ಯರು ವಿಗ್ರಹ ಮಾಡಿರುವು ದರಿಂದ ಮಾಯೆಯು ಶಾಂಕರದ್ವೈತಿಗಳು ಹೇಳುವಂತೆ ಮೂಲಾ ವಿದ್ಯಾ ರೂಪ ಮಾಯೆಯಾಗಿರದೆ ವಿಮರ್ಶ ಶಕ್ತಿಯ ವಿಕಾಸರೂಪ ಮಾಯೆಯಾಗಿರುವುದೆಂದು ತಿಳಿಯಬೇಕು, ಇತ್ಯಾದಿ ಅನೇಕ ಶ್ರುತಿಗಳು ಶಕ್ತಿಯ ನಿತ್ಯತ್ವವನ್ನು ಪರಶಿವನಲ್ಲಿ ಅವಿನಾಭಾವ ಸಂಬಂಧದಿಂದಿರುವದನ್ನು ಪ್ರತಿಪಾದಿಸುತ್ತಿರುವವು. ಇದೇ ಪ್ರಕಾರ ವಾಗಿ ಕಾಳಿದಾಸ ಮಹಾಕವಿಯು ರಘುವಂಶದ ಮಂಗಲ ಶ್ಲೋಕದಲ್ಲಿ.

ವಾಗರ್ಥಾವಿವ ಸಂಪೃಕ್ತೌ ವಾಗರ್ಥ ಪ್ರತಿಪತ್ತಯೇ ।
ಜಗತಃ ಪಿತರೌವಂದೇ ಪಾರ್ವತೀ ಪರಮೇಶ್ವರೌ ॥

CC-0. Jangamwadi Math Collection. Digitized by eGangotri

ಶಬ್ದವನ್ನು ಬಿಟ್ಟು ಅರ್ಥವೂ, ಅರ್ಥವನ್ನು ಬಿಟ್ಟು ಶಬ್ದವೂ ಇಲ್ಲದಿರುವಂತೆ ಶಿವನನ್ನು ಬಿಟ್ಟು ಶಕ್ತಿಯೂ, ಶಕ್ತಿಯನ್ನು ಬಿಟ್ಟು ಶಿವನೂ ಇರುವದಿಲ್ಲ ಶಿವ ಶಕ್ತಿಯರಿಗೆ ನಿತ್ಯ ಸಂಬಂಧವಿರುವುದು. ಆದುದರಿಂದ ಶಿವನು ಶಕ್ತಿವಿಷ್ಟ ನಾಗಿಯೇ ಇರುತ್ತಾನೆಂದು ಉಲ್ಲೇಖಿಸಿರುವನು.

## ಜೀವಸ್ವರೂಪ

ವೀರಶೈವದರ್ಶನದಲ್ಲಿ ಜೀವನು ಶಿವನ ಅಂಶರೂಪನಿದ್ದಾನೆ. "ಅಂಶೋ ನಾನಾವ್ಯಪದೇಶಾತ್" ಎಂಬ ಬ್ರಹ್ಮಸೂತ್ರವು ಜೀವನು ಶಿವನ ಅಂಶರೂಪ ನಾಗಿದ್ದಾನೆ ಎಂಬುದನ್ನು ಸಮರ್ಥಿಸುತ್ತಿರುವುದು. ಇದರಂತೆ ಮುಂಡಕ ಶ್ರುತಿಯು "ಯಥಾ ಸುದೀಪ್ತಾತ್ಪಾವಕಾತ್ ವಿಸ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಃ। ತಥಾ ಅಕ್ಷರಾದ್ವಿವಿಧಾಃ ಸೋಮ್ಯ ಭಾವಾಃ ಪ್ರಜಾಯಂತೆ. ತತ್ರ ಚೈವಾಪಿ ಯಂತಿ" ಅಗ್ನಿಯಿಂದ ಅಗ್ನ್ಯಂಶ ರೂಪಗಳಾದ ಅನಂತ ಅಗ್ನಿಕಣಗಳು ಹೇಗೆ ಆವಿರ್ಭವಿಸುವವೋ ಹಾಗೆಯೇ ಪರಶಿವ ಬ್ರಹ್ಮದಿಂದ ತದಂಶಭೂತರಾದ ಅನಂತಜೀವರು ಆವಿರ್ಭವಿಸುವರು. ಮತ್ತು ಅಲ್ಲಿಯೇ ಲಯವನ್ನು ಹೊಂದು ವರು, ಎಂದು ಸ್ಫುಟವಾಗಿ ಸಾರುತ್ತಿರುವದು.

ಅನಾದ್ಯವಿದ್ಯಾಸಂಬಂಧಾತ್ತದಂಶೋ ಜೀವನಾಮಕಃ।
ದೇವತಿರ್ಯಙ್ಮನುಷಾದಿ ಜಾತಿಭೇದೇ ವ್ಯವಸ್ಥಿತಃ ॥

ತನ್ನಲ್ಲಿ ಅವಿನಾಭಾವ ಸಂಬಂಧದಿಂದಿರುವ ವಿಮರ್ಶಶಕ್ತಿಯ ವಿಕಾಸರೂಪ ಅನಾದಿಮಾಯೆಯ ಸಂಬಂಧದಿಂದ ಆ ಪರಶಿವನ ಅಂಶವು ಜೀವನೆನಿಸಿ ಕೊಳ್ಳುವದು. ಈ ಜೀವನು ದೇವ, ಮನುಷ್ಯ, ಪಶು, ಪಕ್ಷಿ, ಮೃಗ ಜಲಚರಾದಿ ಅನಂತ ಪ್ರಾಣಿಗಳಲ್ಲಿ ವಾಸಿಸುವನೆಂದು ಶ್ರೀ ರೇಣುಕಾಚಾರ್ಯರು 'ಸಿದ್ಧಾಂತ ಶಿಖಾಮಣಿ'ಯಲ್ಲಿ ಘೋಷಣೆ ಮಾಡಿರುವರು. ಇದಲ್ಲದೆ ವೀರಶೈವರ ಸಿದ್ಧಾಂತ ದಲ್ಲಿ ಶಿವ ಜೀವರಿಗೆ ಪಾರಮಾರ್ಥಿಕವಾದ ಭೇದಾಭೇದವು ಅಂಗೀಕರಿಸಲ್ಪಡುತ್ತದೆ. ಅಗ್ನಿಯಿಂದ ಆವಿರ್ಭವಿಸಿದ ಅಗ್ನಿಕಣಗಳಿಗೂ, ಅಗ್ನಿಗೂ ಅತ್ಯಂತ ಭೇದವನ್ನಾಗಲೀ ಅಥವಾ ಅತ್ಯಂತಾಭೇದವನ್ನಾಗಲೀ ಹೇಳಲಿಕ್ಕೆ ಬಾರದಿರುವಂತೆ, ಶಿವನಿಂದ ಆವಿರ್ಭವಿಸಿದ ಶಿವಾಂಶರೂಪ ಜೀವರಿಗೂ ಶಿವನಿಗೂ ಅತ್ಯಂತ ಭೇದವನ್ನಾಗಲಿ ಅಥವಾ ಅತ್ಯಂತಾಭೇದವನ್ನಾಗಲೀ ಹೇಳಲಿಕ್ಕೆ ಬರುವದಿಲ್ಲ. ಪರಂತು ಭೇದಾ-ಭೇದವನ್ನು ಮಾತ್ರ ಹೇಳಬಹುದು. ಏಕಂದರೆ, ಅಂಶಾಂಶಿಗಳಿಗೆ ಅತ್ಯಂತಾ-ಭೇದವನ್ನು ಹೇಳಿದರೆ, ಅಗ್ನಿಯಿದಾಂಗುವ ಪಾಕಾದಿಕಾರ್ಯಗಳು ಅಗ್ನ್ಯಂಶಗಳಾದ ಕಿಡಿಗಳಿಂದಲೂ ಆಗಬೇಕಾದೀತು ! ಅತ್ಯಂತ ಭೇದವನ್ನು ಹೇಳಿದರೆ ಅಗ್ನಿಗೆ

CC-0. Jangamwadi Math Collection. Digitized by eGangotri

ಅತ್ಯಂತ ಭಿನ್ನಗಳಾದ ಜಲಾದಿಗಳಿಂದ ದಾಹಕಾರ್ಯವಾಗಿರುವಂತೆ ಅಗ್ನಿಕಿಡಿಗಳಿಂದಲೂ ದಾಹಕಾರ್ಯವಾಗದೇ ಹೋಗಬೇಕಾದೀತು, ಅಗ್ನಿಯ ಕಿಡಿಗಳು ಅರಳೆಯನ್ನು ಪ್ರವೇಶಿಸಿ ದಾಹವನ್ನುಂಟುಮಾಡುವುದು ಲೋಕ ಪ್ರಸಿದ್ಧವಾಗಿದೆ. ಇದರಂತೆ ಶಿವನಿಗೂ ಶಿವಾಂಶರೂಪರಾದ ಜೀವರಿಗೂ ಅತ್ಯಂತಾಭೇದವನ್ನು ಹೇಳಿದರೆ ಶಿವನಲ್ಲಿರುವ ಸರ್ವಜ್ಞತ್ವ ಸರ್ವಕರ್ತೃತ್ವಾದಿ ಗುಣಗಳು ಜೀವರಲ್ಲಿಯೂ ಇರಬೇಕಾಗುವದು. ಅತ್ಯಂತ ಭೇದವನ್ನು ಹೇಳಿದರೆ ಶಿವನಿಗೆ ಭಿನ್ನಗಳಾದ ಘಟಪಟಾದಿಗಳಿಂದ ಜ್ಞಾನರೂಪ ಕಾರ್ಯವಾಗದಿರುವಂತೆ. ಜೀವರಿಂದಲೂ ಆಗಬಾರದಾದೀತು. ಜೀವರಿಗೆ ಘಟಪಟಾದಿ ವಸ್ತುಗಳ ಜ್ಞಾನವಿರುವದು ನಿಶ್ಚಿತವಿರುವದಲ್ಲವೆ ? ಆದುದರಿಂದ, ಶಿವನಿಗೂ ಜೀವನಿಗೂ ಪಾರಮಾರ್ಥಿಕವಾದ ಭೇದಾಭೇದವನ್ನು ಒಪ್ಪಿರುವರು. ಇದರಿಂದಲೇ ವೀರಶೈವ ಮತಕ್ಕೆ ದ್ವೈತಾದ್ವೈತಮತವೆಂದು ನಾಮಾಂತರವುಂಟು

## ಜಗತ್‌ಸ್ವರೂಪ

ವೀರಶೈವ ದರ್ಶನಕಾರರು ಈ ಜಗತ್ತನ್ನು ಸತ್ಯವಾದುದೆಂದು ಹೇಳುತ್ತಾರೆ. ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣ ಎಂಬ ಪಂಚಲಕ್ಷಣ ಲಕ್ಷಿತನಾದ ಪರಶಿವ ಬ್ರಹ್ಮದಿಂದ ಆವಿರ್ಭವಿಸಿದ ಈ ಜಗತ್ತು ಸತ್ಯವಾದುದಾಗಿರುವದಲ್ಲದೇ ಮಿಥ್ಯವಾದುದಲ್ಲ. ಈ ವಿಷಯದಲ್ಲಿ:

ಸೋಽಕಾಮಯತ, ಬಹು ಸ್ಯಾಂ ಪ್ರಜಾಯೇಯೇತಿ ।
ಸ ತಪೋಽತಪ್ಯತ! ಸ ತಪಸ್ತಪ್ತ್ವಾ ಇದಂ ಸರ್ವಮಸೃಜತ ।
ಯದಿದಂ ಕಿಂಚ। ತತ್ ಸೃಷ್ಟ್ವಾ ತದೇವಾನುಪ್ರಾವಿಶತ್ ॥

ಎಂಬ ತೈತ್ತರೀಯ ಶ್ರುತಿಯು ಮುಖ್ಯ ಪ್ರಮಾಣವಾಗಿದೆ. ಪರಶಿವನು ಬಹಳರೂಪ ಆಗಬೇಕು. (ಹೇಗೆ ಆಗುವದು) ಅವಿರ್ಭವಿಸೋಣ ? ಎಂದು ಇಚ್ಛಿಸಿದನು. ಇದರಿಂದ ಇಚ್ಛಾಶಕ್ತಿಯ ಆವಿರ್ಭಾವವೂ, "ಸ ತಪೋಽತಪ್ಯತ" ಇಲ್ಲಿ ತಪಸ್ಸೆಂದರೆ ಜ್ಞಾನಚಿಂತನೆ, ಇದರಿಂದ ಜ್ಞಾನಶಕ್ತಿಯ ಆವಿರ್ಭಾವವೂ, ಇದಾದ ಬಳಿಕ ಆ ಪರಶಿವ ಬ್ರಹ್ಮವು ಕಾಣತಕ್ಕ ಇದೆಲ್ಲವನ್ನು ಸೃಷ್ಟಿಸಿತು. ಇದರಿಂದ ಕ್ರಿಯಾಶಕ್ತಿಯ ಆವಿರ್ಭಾವವೂ ತೋರುತ್ತದೆ. ಹೀಗೆ ಆವಿರ್ಭವಿಸಿದ ಜಗತ್ತಿನಲ್ಲಿ ತಾನೂ ಸೇರಿಕೊಂಡಿತು ಎಂದು ಈ ಶ್ರುತಿಯ ಭಾವಾರ್ಥವು. ಈ ಪ್ರಕಾರ ಆ ಪರಶಿವನಿಂದ ಬೆರೆತುದುದಾದ ಈ ಜಗತ್ತು ಮಿಥ್ಯವಾದದ್ದೆಂದು ಹೇಳಲಿಕ್ಕೆ ಸಾಧ್ಯವೇ ಇಲ್ಲ. ಈ ವಿಷಯವನ್ನು ಶ್ರೀ ರೇಣುಕಾಚಾರ್ಯರು

CC-0. Jangamwadi Math Collection. Digitized by eGangotri

"ಸಿದ್ಧಾಂತ ಶಿಖಾಮಣಿಯ"ಲ್ಲಿ ಸ್ಪಟವಾಗಿ ಹೇಳಿದ್ದಾರೆ:

ಯಸ್ಮಾದೇತತ್ಸಮುತ್ಪನ್ನಂ ಮಹಾದೇವಾಚ್ಚರಾಚ್ಚರಂ।
ತಸ್ಮಾದೇತನ್ನ ಭಿದ್ಯೇತ ಯಥಾ ಕುಂಭಾದಿಕಂ ಮೃದಃ॥
ಶಿವತತ್ತ್ವಾತ್ಸಮುತ್ಪನ್ನಂ ಜಗದಸ್ಮಾನ್ನ ಭಿದ್ಯತೇ।
ಫೇನೋರ್ಮಿಬುದ್ಬುದಾಕಾರೋ ಯಥಾ ಸಿಂಧೋರ್ನ ಭಿದ್ಯತೇ॥
ಯಥಾ ತಂತುಭಿರುತ್ಪನ್ನಃ ಪಟಸ್ತಂತುಮಯಃ ಸ್ಮೃತಃ॥
ತಥಾ ಶಿವಾತ್ಸಮುತ್ಪನ್ನಂ ಶಿವ ಏವ ಚರಾಚರಂ॥
ಪತ್ರಶಾಖಾದಿರೂಪೇಣ ಯಥಾ ತಿಷ್ಠತಿ ಪಾದಪಃ॥
ತಥಾ ಭೂಮ್ಯಾದಿರೂಪೇಣ ಶಿವ ಏಕೋ ವಿರಾಜತೇ॥ ಪಂ-೧೦

ಮಣ್ಣಿನಿಂದ ಹುಟ್ಟಿದ ಕೊಡ, ಹರಿವಿ ಮೊದಲಾದವುಗಳು ಮಣ್ಣಿಗಿಂತಲೂ ಹೇಗೆ ಭಿನ್ನಗಳಲ್ಲವೋ? ಸಮುದ್ರದಿಂದ ಹುಟ್ಟಿದ ನೊರೆ, ತೆರೆ, ಬುದ್ಬುದಾದಿಗಳು ಸಮುದ್ರಕ್ಕಿಂತಲೂ ಹೇಗೆ ಭಿನ್ನಗಳಾಗಿಲ್ಲವೋ, ತಂತುಗಳಿಂದ ಉತ್ಪನ್ನವಾದ ಪಟ(ವಸ್ತ್ರ)ವು ಹೇಗೆ ತಂತುಸ್ವರೂಪವಾಗಿರುವದೋ ಹಾಗೆ ಶಿವನಿಂದ ಉತ್ಪನ್ನವಾದ ಈ ಚರಾಚರಾತ್ಮಕ ಜಗತ್ತು ಶಿವನಿಗಿಂತಲೂ ಭಿನ್ನವಾದುದಲ್ಲ. ವೃಕ್ಷವು ಪತ್ರಶಾಖಾದಿ ರೂಪದಿಂದ ಹೇಗೆ ವಿರಾಜಿಸುತ್ತಿರುವುದೋ ಹಾಗೆಯೇ ಶಿವನು ಭೂಮಿ, ಜಲಾದಿ ರೂಪದಿಂದ ವಿರಾಜಿಸುತ್ತಿರುವನು ಎಂದು ಭಾವಾರ್ಥವು.

## ಸೃಷ್ಟಿಯ ವಿಚಾರ

ವೇದಾಂತ ಸಂಪ್ರದಾಯಗಳೆನಿಸಿಕೊಂಡ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ ಇವುಗಳಲ್ಲಿ ಜಗತ್ತಿನ ಸೃಷ್ಟಿಯ ಬಗ್ಗೆ ಭಿನ್ನ ಭಿನ್ನ ಅಭಿಪ್ರಾಯಗಳಿರುತ್ತವೆ. ಇವುಗಳಲ್ಲಿ ಸಾಮಾನ್ಯವಾಗಿ ಪರಿಣಾಮವಾದ, ವಿವರ್ತವಾದ ಎಂದು ಎರಡು ಭಾಗಗಳಿರುತ್ತವೆ. ವಿವರ್ತವಾದವೆಂದರೆ, ಒಂದಿದ್ದದ್ದು ಮತ್ತೊಂದಾಗಿ ತೋರುವದು. ಹಗ್ಗವು ಹಾವಾಗಿ ತೋರುವದು; ಶುಕ್ತಿಯು ರಜತವಾಗಿ ತೋರುವದು. ಇಲ್ಲಿ ಒಂದರ ಸತ್ತೆಯು ನಿಜವಾಗಿರುತ್ತದೆ. ಮತ್ತೊಂದರ ಸತ್ತೆಯು ಮಿಥ್ಯ (ಕಾಲ್ಪನಿಕ)ವಾಗಿರುತ್ತದೆ. ಇದರಂತೆ ಬ್ರಹ್ಮವು ಜಗತ್ತಾಗಿ ತೋರುವದು ವಿವರ್ತವು. ಬ್ರಹ್ಮದ ಸತ್ತೆಯು ನಿಜವಾದುದು. ಜಗತ್ತಿನ ಸತ್ತೆಯು ಮಿಥ್ಯ(ಕಾಲ್ಪನಿಕ)ವಾದುದು. ಏಕಂದರೆ, ಬ್ರಹ್ಮಕ್ಕಿಂತಲೂ ಭಿನ್ನವಾಗಿ ಜಗತ್ತಿನ ಸ್ಥಿತಿಯು ಸ್ವತಂತ್ರವಾಗಿ ಇರುವದೇ ಇಲ್ಲವೆಂದು ವಿವರ್ತವಾದದವರ ಅಭಿಪ್ರಾಯವು. ಇದಕ್ಕೆ ಭಿನ್ನವಾದುದು ಪರಿಣಾಮವಾದ.

CC-0. Jangamwadi Math Collection. Digitized by eGangotri

ಮೊದಲಿದ್ದ ಸ್ವರೂಪವನ್ನು ಬಿಟ್ಟು ಬೇರೊಂದು ಸ್ವತಂತ್ರರೂಪವನ್ನು ಹೊಂದು ವವಕ್ಕೆ ಪರಿಣಾಮುವಾದವೆನ್ನುತ್ತಾರೆ. ಈ ಪರಿಣಾಮವಾದವಲ್ಲಿ ಎರಡು ಪದಾರ್ಥಗಳ ಸತ್ತೆಯು ಸ್ವತಂತ್ರವಾಗಿಯೂ ಸತ್ಯವಾದುದಾಗಿಯೂ ಇರುತ್ತದೆ. ಹೇಗೆಂವರೆ ಹಾಲು ಮೊಸರಾಗುವವು, ಬೆಣ್ಣೆ ತುಪ್ಪವಾಗುವವು, ಹಾಲಿನಲ್ಲಿ ಹುಳಿಯ ಸಂಬಂಧದಿಂದ ವಿಕಾರ ಉತ್ಪನ್ನವಾಗಿ ಆ ವಿಕಾರದ ಪರಿಣಾಮ ರೂಪವಾದ ಮೊಸರೆಂಬ ಒಂದು ಸ್ವತಂತ್ರ ಪದಾರ್ಥವು ಉಂಟಾಗುತ್ತದೆ. ಬೆಣ್ಣೆಯಲ್ಲಿ ಅಗ್ನಿಯ ಸಂಯೋಗದಿಂದ ವಿಕಾರ ಉತ್ಪನ್ನವಾಗಿ ಆ ವಿಕಾರದ ಪರಿಣಾಮ ರೂಪವಾದ ತುಪ್ಪವೆಂಬ ಒಂದು ಸ್ವತಂತ್ರ ಪದಾರ್ಥವುಂಟಾಗುತ್ತದೆ. ಇಲ್ಲಿ ಹಾಲು, ಬೆಣ್ಣೆಗಳ ಮತ್ತು ಮೊಸರು ತುಪ್ಪಗಳ ಸ್ವತಂತ್ರವಾದ ಪ್ರತ್ಯೇಕ ಇರುವಿಕೆಯು ಇರುತ್ತದೆ. ಆದುದರಿಂದಲೇ ಹಾಲು, ಮೊಸರಾದನಂತರ, ಪುನಃ ಯಾವ ರೀತಿಯಿಂದಲೂ ಮೊಸರು ಹಾಲಾಗಲಾರದು. ಬೆಣ್ಣೆಯು ತುಪ್ಪವಾದ ಬಳಿಕ, ಪುನಃ ಏನು ಮಾಡಿದರೂ ತುಪ್ಪವು ಬೆಣ್ಣೆಯಾಗಲಾರದು. ಇಂಥ ಪರಿಣಾಮವನ್ನು ಸಾಂಖ್ಯಾದಿ ದರ್ಶನಕಾರರು ಹೇಳುವರು. ವೀರಶೈವರು ಹೇಳುವ ಪರಿಣಾಮವು ಇಂಥಾದ್ದಲ್ಲ. ಅದು ಅವಿಕೃತ ಪರಿಣಾಮ, ಅರ್ಥಾತ್ ಕಾರಣಭೂತವಾದ ವಸ್ತುವು ಕಾರ್ಯರೂಪದಿಂದ ನಾನಾರೀತಿಯಾಗಿ ಪರಿಣತ ವಾದರೂ ಕೊನೆಗೆ ಕಾರಣ ಸ್ವರೂಪವನ್ನು ಪಡೆದುಕೊಳ್ಳುವ ಯೋಗ್ಯತೆಯನ್ನು ಕಳೆದುಕೊಳ್ಳದಂತೆ ಪರಿಣಮಿಸುವವಕ್ಕೆ “ಅವಿಕೃತ ಪರಿಣಾಮ” ವೆನ್ನುತ್ತಾರೆ. ಹೇಗೆಂದರೆ, ಸುವರ್ಣವು ಕಡಗ, ಕುಂಡಲಿ, ಉಂಗುರ ಮೊದಲಾದ ನಾನಾ ವಿಕಾರ ರೂಪಗಳನ್ನು ಧರಿಸಿದ್ದರೂ ತನ್ನ ಮೂಲ ಸ್ವರೂಪವನ್ನು ಹೊಂದತಕ್ಕ ಯೋಗ್ಯತೆಯನ್ನು ಕಳೆದುಕೊಂಡಿರುವದಿಲ್ಲ; ಬೇರೆ ಬೇರೆಯಾಗಿದ್ದ ಎಲ್ಲ ಆಭರಣಗಳನ್ನು ಕರಗಿಸಿ ತೇಜಸ್ಸಿನಲ್ಲಿ ಹಾಕಿದರೆ ತನ್ನ ಪೂರ್ವದ ಸ್ವರೂಪವನ್ನೇ ಹೊಂದುವದು. ಇದರಂತೆ ಶಕ್ತಿ ವಿಶಿಷ್ಟವಾದ ಪರಶಿವಬ್ರಹ್ಮದ ಪರಿಣಾಮರೂಪ ವಾದ ಈ ಜಗತ್ತು ತಚ್ಛಕ್ತಿವಿಶಿಷ್ಟವಾದುದರಿಂದ ಸತ್ಯವಾದುದಾಗಿರುತ್ತದೆ. ಕೊನೆಗೆ ಮೂಲಸ್ವರೂಪವನ್ನೇ ಹೊಂದುತ್ತದೆ.

ಇದಲ್ಲದೇ ಸೃಷ್ಟಿಶಬ್ದದ ಪಾರಿಭಾಷಿಕಾರ್ಥವನ್ನು ತಿಳಿದುಕೊಳ್ಳಬೇಕು. ಸಾಮಾನ್ಯವಾಗಿ ಒಬ್ಬನು ಅನೇಕ ಸಾಮಾನುಗಳನ್ನು (ಕಲ್ಲು, ಕಟ್ಟಿಗೆ ಮುಂ.) ಕೂಡಿಸಿ ಒಂದು ಗೃಹವನ್ನು ಸೃಷ್ಟಿ ಮಾಡುವಂತೆ, ಕುಂಬಾರನು ಮಣ್ಣು, ಚಕ್ರ, ಚೀವರಾದಿಗಳಿಂದ ಮಡಿಕೆಗಳನ್ನು ಮಾಡುವಂತೆ, ಶಿವನು ಬೇರೆ ಪದಾರ್ಥಗಳನ್ನು ಸಂಗ್ರಹಿಸಿ ಈ ಜಗತ್ತನ್ನು ಹುಟ್ಟಿಸುವದಿಲ್ಲ. ಆದರೆ ಜೇಡಹುಳವು ಬೇರೆ ಸಾಮಗ್ರಿಗಳಿಂದ ಜಾಳಿಗೆಯನ್ನು ಹೆಣೆಯದೇ ತನ್ನ ಶರೀರದಿಂದ ರಸವನ್ನೇ ಜಾಳಿ ಗೆಯ ರೂಪವಾಗಿ ಮಾಡುವಂತೆ ಪರಶಿವನಲ್ಲಿ ಅವಿನಾಭಾವ ಸಂಬಂಧದಿಂದಿರುವ

CC-0. Jangamwadi Math Collection. Digitized by eGangotri

ಶಕ್ತಿಯ ವಿಕಾಸವೇ ಸೃಷ್ಟಿಯು. ಆ ಶಕ್ತಿಯ ಸಂಕೋಚವೇ ಲಯವು. ಇದಕ್ಕೆ ಸುಂದರವಾದ ಎರಡು ದೃಷ್ಟಾಂತಗಳನ್ನು ನೋಡಿರಿ. ಶ್ರೀ ರೇಣುಕಾಚಾರ್ಯರು "ಸಿದ್ಧಾಂತಶಿಖಾಮಣಿ"ಯಲ್ಲಿ ಸೃಷ್ಟಿಯ ಬಗ್ಗೆ :

ಆತ್ಮಶಕ್ತಿವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ!
ಕುಟೀಭಾವಾದ್ಯಥಾ ಭಾತಿ ಪಟಃ ಸ್ವಸ್ಯ ಪ್ರಸಾರಣಾತ್ ||

ಚತುರನಾದ ಸಿಂಪಿಗನು ಒಂದು ಥಾನು ಹೊಸ ಅರಿವೆಯನ್ನು ತೆಗೆದುಕೊಂಡು ಒಂದು ಡೇರಾ(ವಸ್ತ್ರಮಂದಿರ) ಹೊಲಿದು ಮಡಿಚಿ ಗಂಟು ಕಟ್ಟಿರುವನೆಂದು ತಿಳಿದುಕೊಳ್ಳೋಣ ಮಡಿಚಿದಂತೆ ಈ ಪಟವನ್ನು ಬಿಚ್ಚಿ ಹರವಿದರೆ ಅದರಲ್ಲಿ ನಾನಾ ಭಾಗಗಳು ಪಾಕಶಾಲಾ, ಭೋಜನಶಾಲಾ, ಪೂಜಾಮಂದಿರ, ಶಯನಗೃಹ, ಆಫೀಸ ಮೊದಲಾದವುಗಳಿಂದ ಕೂಡಿದ ನೂತನವಾದ ಗೃಹ ಒಂದು ತಯಾರಾಗುವದು. ಇಲ್ಲಿ ಪಟವನ್ನು ವಿಸ್ತರಿಸಿದಾಗ ಮನೆಯ ಉತ್ಪತ್ತಿಯನ್ನು, ಮಡಿಚಿ ಗಂಟು ಕಟ್ಟಿದಾಗ ಮನೆಯ ನಾಶವನ್ನು ಹೇಳುವದು ಹೇಗೆ ಹಾಸ್ಯಾಸ್ಪದವಾಗುವದೋ, ಮತ್ತು ಒಂದು ಮಡುವಿನಲ್ಲಿ ಒಂದು ಆವೆಯು ವಾಸಮಾಡಿಕೊಂಡಿದೆ. ಆವೆಯು ಒಂದು ಸಮಯದಲ್ಲಿ ಎಲ್ಲ ಕಾಲುಗಳನ್ನು ಹೊರಗೆ ಪಸರಿಸಿ ನೀರಿನಲ್ಲಿ ಈಸಾಡುತ್ತಿದೆ. ಮತ್ತೊಂದು ಸಮಯದಲ್ಲಿ ತನ್ನ ಕಾಲುಗಳನ್ನು ತನ್ನಲ್ಲಿ ಸೇರಿಸಿಕೊಂಡು ಸುಮ್ಮನೆ ಕೂತಿರುತ್ತದೆ. ಇಲ್ಲಿ ಆವೆಯು ತನ್ನ ಕಾಲುಗಳನ್ನು ಪಸರಿಸಿದ ಕಾಲದಲ್ಲಿ ಕಾಲುಗಳ ಸೃಷ್ಟಿಯನ್ನು ತನ್ನಲ್ಲಿ ಅಡಗಿಸಿಕೊಂಡಾಗ ಕಾಲುಗಳ ನಾಶವನ್ನು ಹೇಳುವದು ಹೇಗೆ ಹಾಸ್ಯಾಸ್ಪದವೋ, ಹಾಗೆಯೇ ಪರಶಿವನು ತನ್ನಲ್ಲಿ ನಿತ್ಯ ಸಂಬಂಧದಿಂದಿರುವ ಶಕ್ತಿಯ ವಿಕಾಸ ರೂಪ ಜಗತ್ತನ್ನು ಒಂದು ಕಾಲದಲ್ಲಿ ಲೀಲೆಗಾಗಿ ವಿಕಾಸ ಭಾವವ (ಹೊರಗೆ ಹಾಕುವಿಕೆಯ)ನ್ನು ಮತ್ತೊಂದು ಸಮಯದಲ್ಲಿ (ಲೀಲೆಯು ಮುಗಿದ ಕೂಡಲೇ) ಸಂಕೋಚಭಾವವ ( ತನ್ನಲ್ಲಿ ಅಡಗಿಸಿಕೊಳ್ಳುವಿಕೆಯ ) ನ್ನು ಮಾಡುತ್ತಾನೆ. ಇಂಥ ಪರಸ್ಥಿತಿಯಲ್ಲಿ ಸತ್ಯ ಮತ್ತು ನಿತ್ಯವಾದ ಈ ಪ್ರಪಂಚದ ಉತ್ಪತ್ತಿಯನ್ನು ಮತ್ತು ನಾಶವನ್ನು ಹೇಳುವದು ಹಾಸ್ಯಾಸ್ಪದವಾಗುವದು. ಆದುದರಿಂದ ಸೃಷ್ಟಿ ಮತ್ತು ಪ್ರಲಯ ಶಬ್ದಗಳಿಗೆ ವೀರಶೈವ ದರ್ಶನಕಾರರು ಶಕ್ತಿಯ ವಿಕಾಸ ಮತ್ತು ಶಕ್ತಿಯ ಸಂಕೋಚ ಎಂದು ಪಾರಿಭಾಷಿಕಾರ್ಥವನ್ನು ಹೇಳುವರು.

ಈ ವಿಷಯದಲ್ಲಿ ಪ್ರಾಯಃ ಶಂಕರಾಚಾರ್ಯರೊಬ್ಬರೇ ವಿವರ್ತವಾದವನ್ನು

CC-0. Jangamwadi Math Collection. Digitized by eGangotri

ಹೇಳುವದು. ಉಳಿದವರೆಲ್ಲರೂ ಪರಿಣಾಮವಾದವನ್ನೇ ಹೇಳುತ್ತಾರೆ. ಮತ್ತು ಪರಿಣಾಮವಾದದಲ್ಲಿ ಸಾಮಾನ್ಯವಾಗಿ ಪರಿಣಾಮವಾದ, ಅವಿಕೃತ ಪರಿಣಾಮ ವಾದ ಎಂದು ಎರಡು ಭಾಗಗಳಿರುತ್ತವೆ. ವೀರಶೈವ ದರ್ಶನಕಾರರು ಅವಿಕೃತ ಪರಿಣಾಮವಾದಿಗಳು. ಹಾಲು ಮೊಸರಾಗುವಾಗ್ಗೆ ಹಾಲಿನಲ್ಲಿ ವಿಕಾರ ಉಂಟಾ ಗುವಂತೆ ಮತ್ತು ಬೆಣ್ಣೆಯು ತುಪ್ಪವಾಗುವಂತೆ ಬೆಣ್ಣೆಯಲ್ಲಿ ವಿಕಾರ ಉಂಟಾಗುವಂತೆ ಪರಶಿವನು ಜಗದ್ರೂಪವಾಗುವಾಗ್ಗೆ ಪರಶಿವನಲ್ಲಿ ಯಾವ ವಿಕಾರವೂ ಉಂಟಾ ಗುವದಿಲ್ಲ. ಅವಿಕೃತನಾಗಿಯೇ ಜಗದ್ರೂಪದಿಂದ ಪರಣಮಿಸುತ್ತಾನೆ; ಎಂಬುದು ಅವಿಕೃತ ಪರಿಣಾಮವಾದದ ಮಥಿತಾರ್ಥವು.

## ತತ್ವವಿಚಾರ

ಭಾರತೀಯ ಋಷಿಗಳು ಮತ್ತು ಮಹಾಚಾರ್ಯರು ಈ ಜಗತ್ತಿಗೆ ಕರ್ತೃವು ಮತ್ತು ನಿಯಾಮಕವೂ ಆದ ಮೂಲತತ್ವವನ್ನು ಅಂತರ್ಹಿತ ದೃಷ್ಟಿಯ ಸಹಾಯದಿಂದ ಬಹಳ ಸೂಕ್ಷ್ಮವಾಗಿ ವಿಚಾರ ಮಾಡಿರುವರು. ಈ ವಿಶ್ವದ ಉತ್ಪತ್ತಿಯು ಎಲ್ಲಿಂದ ಆಯಿತು? ಮೊದಲಿಗೆ ಯಾವ ತತ್ವವಿತ್ತು? ಮೊಟ್ಟಮೊದಲು ಯಾವುದು ಹುಟ್ಟಿತು? ಇತ್ಯಾದಿ ಸಂದೇಹಗಳು ಅವರ ಮುಂದೆ ನಿಂತವು. ಆಗ ಅವರಿಗೆ ಋಗ್ವೇದದ ಹತ್ತನೆಯ ಮಂಡಲದ ಹನ್ನೊಂದನೆ ಅನುವಾಕದಲ್ಲಿರುವ ನಾಸದೀಯ ಸೂಕ್ತವು ಮಾರ್ಗದರ್ಶಕ ವಾಗಿದೆ. ಈ ಸೂಕ್ತದಲ್ಲಿ ಏಳು ಋಕ್ಕುಗಳಿರುತ್ತವೆ. ನಾಸದೀಯಸೂಕ್ತ:

ನಾಸ್ಸದಾಸೀನ್ನೋ ಸದಾಸೀತ್ತದಾನೀಂ ನಾಸೀದ್ರಜೋನೋ ವ್ಯೋಮಾ ಪರೊ ಯತ್।
ಕಿಮಾವರೀವಃ ? ಕುಹಕನ್ಯಶರ್ಮನ್ ಅಂಭಃ ಕಿಮಾಸೀತ್ ಗಹೆರಂ ಗಭೀರಂ॥
ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನಃ ಆಸೀತ್ ಪ್ರಕೇತಃ।
ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸ ॥೧೮-೧೧

ಸೃಷ್ಟಿಗಿಂತಲೂ ಪೂರ್ವದಲ್ಲಿ ಅಸತ್ ಇರಲಿಲ್ಲ, ಸತ್ ಇರಲಿಲ್ಲ, ಆಕಾಶ ಅಂತ ರಿಕ್ಷಗಳಿರಲಿಲ್ಲ. ಅದಕಿಂತ ಹೆಚ್ಚಿನ ಸ್ವರ್ಗಗಳಿರಲಿಲ್ಲ. ಏನನ್ನಾಶ್ರಯಸಿಕೊಂಡು ಯಾವುದರಿಂದ ಆರಿಸಲ್ಪಟ್ಟಿತ್ತು ? ಆಗ ಆಳವಾದ ನೀರೇನಾದರೂ ಇತ್ತೊ ? (ಆಳವಾದ ನೀರಿನಲ್ಲಿ ಮುಳಗಿತ್ತೊ)? ಮೃತ್ಯುವಿರಲಿಲ್ಲ. ಅಮೃತವಿರಲಿಲ್ಲ. ಹಗಲುರಾತ್ರಿಗಳ ಭೇದವಿರಲಿಲ್ಲ. ಹೀಗೆ ಎಲ್ಲವನ್ನು ನಿಷೇಧಮಾಡಿ ಆಗ ಇದ್ದ ದ್ದಾದರೂ ಏನಂದರೆ, ಆನ್ ಈತ್ ಚೈತನ್ಯದ ಸ್ಫುರಣೆ ಮಾತ್ರ ಇತ್ತು.

CC-0. Jangamwadi Math Collection. Digitized by eGangotri

'ಅನ್ ಪ್ರಾಣನೇ ಧಾತು' ಎಂಬುದಕ್ಕೆ 'ಪ್ರ' ಸೇರಿಸಿದರೆ ಪ್ರಾಣ ಎಂಬುದು ಸ್ಪಷ್ಟವಾಗುವದು. ಈ ಪ್ರಾಣದ ಕಲ್ಪನೆಯಲ್ಲಿ ಉಸಿರಾಡಿಸುವ ವಾಯುವಿನ ಕಲ್ಪನೆ ಬರುವದರಿಂದ ವಾಯುವಿತ್ತೆ ಎಂಬ ಸಂಶಯ ಪರಿಹಾರಕ್ಕಾಗಿ 'ಅವಾತಂ' ಆಗ ವಾಯುವಿರಲಿಲ್ಲ. ಹಾಗಾದರೆ ಚೈತನ್ಯದ ಸ್ಫುರಣೆಯು ಯಾವುದರಿಂದ ಆಗುತ್ತಿತ್ತು, ಎಂಬ ಪ್ರಶ್ನೆಗೆ 'ಸ್ವಧಯಾ' ತನ್ನಲ್ಲಿ ಅವಿನಾಭಾವದಿಂದ ಅಡಗಿರುವ ಶಕ್ತಿಯಿಂದ 'ತದೇಕಂ' ಅದೊಂದೇ ಸ್ಫುರಿಸುತ್ತಿತ್ತು ಎಂದು ಉತ್ತರ. ಅದೊಂದು ಇತ್ತು ಎಂದು ಹೇಳಿದ್ದರೂ ಮತ್ತಾವ ಸಂಶಯ, ಉಳಿಯಬಾರದೆಂದು ಅದಕ್ಕಿಂತಲೂ ಭಿನ್ನವಾದುದು ಮತ್ತಾವುದೂ ಇರಲಿಲ್ಲವೆಂದು ಸ್ಪಷ್ಟ ಮಾಡಿದೆ.

ವಾಙ್ಮನೋಗೋಚರವಲ್ಲದ, ನಾಮರೂಪಗಳಿಲ್ಲದ ಆ ವಸ್ತುವನ್ನು ವ್ಯವಹಾರದಲ್ಲಿ ಉಪಯೋಗಿಸುವಾಗ ಯಾವುದಾದರೊಂದು ಹೆಸರಿಡಲೇ ಬೇಕಾದುದರಿಂದ ಪ್ರಾಚೀನ ಋಷಿಗಳು ಅದನ್ನು "ಏಕಂ ಸದ್ ವಿಪ್ರಾ ಬಹುಧಾ ವದಂತಿ। ಅಗ್ನಿಂ ಯಮಂ ಮಾತರಿಶ್ವಾನಮಾಹುಃ॥" ಋಗ್ವೇದ ೧ ಮಂ ೨೨೪ ಸತ್, ಋತ, ಸ್ಕಂಭ, ಬ್ರಹ್ಮ, ಪರಬ್ರಹ್ಮ, ಹಿರಣ್ಯಗರ್ಭ ಇತ್ಯಾದಿ ಶಬ್ದಗಳಿಂದ ಕರೆದಿರುವರು. ವೀರಶೈವ ದರ್ಶನಕಾರರು ಅದನ್ನು ಲಿಂಗ, ಸ್ಥಲ, ಪರಶಿವ, ಶೂನ್ಯ, ಬಯಲು ಇತ್ಯಾದಿ ಶಬ್ದಗಳಿಂದ ವ್ಯವಹರಿಸುವರು. ಮೇಲೆ ಹೇಳಿದ ನಾಸದೀಯ ಸೂತ್ರದಲ್ಲಿ ಮೂರನೆಯ ಋಕ್ಕಿನಿಂದ "ತುಚ್ಛೇನಾಭ್ವಪಿಹಿತಂ ಯದಾಸೀತ್ತಪಸಸ್ತನ್ಮಹಿನಾ ಜಾಯತೈಕಂ" ತುಚ್ಛೇನ ಅಭು ಅಪಿಹಿತಂ, ಎಂದು ಪದವಿಭಾಗ ಅಭು ಎಂಬ ಆ ವಸ್ತುವು ಅಜ್ಞಾನದಿಂದ ಮುಚ್ಚಲ್ಪಟ್ಟಿತ್ತು ಎಂದು ಹೇಳಿ ಅದಕ್ಕೆ "ಅಭು" ಎಂದು ಕರೆದಿರುವರು. ಅಭು ಎಂದರೆ ಶೂನ್ಯ ಬಯಲು ಎಂದು ಅರ್ಥವಾಗುತ್ತದೆ. ಆ ಮೂಲ ಪರಶಿವ ವಸ್ತುವು ಶಕ್ತಿವಿಶಿಷ್ಟವೂ ಅದ್ವೈತವೂ ಆಗಿದೆ ಎಂದು ನಾಸದೀಯ ಸೂಕ್ತದಿಂದ ಸಿದ್ಧವಾಗುತ್ತದೆ.

ನೂರಾರು ವರ್ಷಗಳವರೆಗೆ ತಪಸ್ಸು ಮಾಡಿ ಪ್ರಾಚೀನ ಋಷಿಗಳು ಈ ಜಗತ್ತಿನ ಮೂಲ ವಸ್ತುವನ್ನು ಯಾವ ವಿಧವಾಗಿ ಕಂಡುಕೊಂಡಿದ್ದರೋ ಅದೇ ರೀತಿಯಾಗಿ ಶಿವಶರಣರು ಶಿವಯೋಗಬಲದಿಂದ ಕಂಡುಕೊಂಡು ಅದರ ಅನುಭವವನ್ನು ಸರ್ವರೂ ಮಾಡಿಕೊಂಡು ಪುನೀತರಾಗಲೆಂದು ಸಾಮಾನ್ಯ ಜನರಿಗೂ ಸುಬೋಧವಾದ ಕನ್ನಡದಲ್ಲಿ ನುಡಿದಿರುವರು :

"ಆದಿಯಾಧಾರವಿಲ್ಲದಂದು, ಹೆಮ್ಮಬಿಮ್ಮುಗಳಿಲ್ಲದಂದು, ಸುರಾಳ ನಿರಾಳ ವಿಲ್ಲದಂದು, ಶೂನ್ಯ ನಿಶ್ಶೂನ್ಯವಿಲ್ಲದಂದು, ಚರಾಚರವೆಲ್ಲ ರಚನೆಗೆ ಬಾರದಂದು ಗುಹೇಶ್ವರಾ ನೀನೊಬ್ಬನೇ ಇದ್ದೆಯಲ್ಲಾ ಇಲ್ಲದಂತೆ!"

CC-0. Jangamwadi Math Collection. Digitized by eGangotri

ಧರೆಯಾಕಾಶವಿಲ್ಲದಂದು; ತ್ರೈಮಂಡಲ ನೆಲೆಗೊಳ್ಳದಂದು; ಹೋಮ ನೇಮ ಜಪ-ತಪವಿಲ್ಲದಂದು ನಿಮ್ಮನಾರು ಬಲ್ಲರು ? ಹರಿಬ್ರಹ್ಮರಿಗೆ ಅಗೋಚರ ನಿರ್ಲೇಪ ನಿರಂಜನನಾಗಿ ವೇದಗಳು ನಿಮ್ಮನರಿಯವು. ಶಾಸ್ತ್ರಶ್ರುತಿ ಸ್ಮೃತಿಗಳು ನಿಮ್ಮನರಿಯವು. ಗಗನ ಕುಸುಮ ಪರಿಮಳದಿಂದತ್ತಲು

ಗುಹೇಶ್ವರಾ ನಿಮ್ಮ ನಿಲವನಾರು ಬಲ್ಲರು ?

ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಪರಮೇಶ್ವರ ಎಂಬ ಸಂದಣಿ ತಲೆದೋರದ ಮುನ್ನ ಬಯಲೇ ಸ್ವರೂಪವಾಯಿತ್ತು. ಆ ಸ್ವರೂಪಿನ ನಡೆಯ ನುಡಿಯ ಸಬ್ಬಾಳದು. ನೋಡಬಾರದ ಬೆಳಗು, ಕೂಡಬಾರದ ಮೂರ್ತಿ, ಅಖಂಡ ಅಪ್ರತಿಮ ಗುಹೇಶ್ವರ ಲಿಂಗದ ಬೆಳಗಿನ ಮೂಲವ ಲಿಂಗಸಂಗಿಗಳಲ್ಲದ

ಅಂಗವಿಕಾರಿಗಳೆತ್ತ ಬಲ್ಲರು ?

ಬ್ರಹ್ಮ, ವಿಷ್ಣು, ರುದ್ರ, ಈಶ್ವರ ಸದಾಶಿವ ಎಂಬ ಪಂಚಾಧಿದೇವತೆಗಳಿಲ್ಲದಂದು, ಈ ಪಂಚ (ಐವ) ರ ಲಯಗಮನಂಗಳಿಗೆ ಕಾರಣವಾದ ಶಿವ, ಶಕ್ತಿ ಇಲ್ಲದಂದು, ಈ ಶಿವಶಕ್ತಿಗೆ ಕಾರಣವಾದ ಸತ್ತು, ಚಿತ್ತು, ಆನಂದ, ನಿತ್ಯ, ಪರಿಪೂರ್ಣ ಎಂಬ ನಿಷ್ಕಲ ಶಿವತತ್ವವಿಲ್ಲದಂದು, ನೀನು ಶೂನ್ಯನಾಗಿ ಇದ್ದೆಯಯ್ಯಾ

ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ !

ಶೂನ್ಯ ಹೃದಯ ನಿಶ್ಶೂನ್ಯವಿಲ್ಲದಂದು; ಬ್ರಹ್ಮ, ವಿಷ್ಣು, ಮಹೇಶ್ವರರಿಲ್ಲದಂದು; ಹದಿನಾಲ್ಕು ಭುವನ ದಿಗ್ವಳಯವಿಲ್ಲದಂದು ಕೂಡಲ ಸಂಗನೆಂಬ

ಹೆಸರು ಮುನ್ನಿಲ್ಲದಂದು.

ಅಸುರ ಮಾಲೆಗಳಿಲ್ಲ, ತ್ರಿಶೂಲ ಡಮರುಗಳಿಲ್ಲ, ಬ್ರಹ್ಮ ಕಪಾಲವಿಲ್ಲ, ಭಸ್ಮ ಭೂಷಣನಲ್ಲ, ವೃಷಭವಾಹನನಲ್ಲ, ಋಷಿಗಳೊಡನಿದ್ದಾತನಲ್ಲ, ಎಸಗುವ ಸಂಸಾರದ ಕುರುಹಿಲ್ಲದಾತಂಗೆ ಹೆಸರಾವುದೂ ಇಲ್ಲವೆಂದನಂಬಿಗಚೌಡಯ್ಯ.

ಈ ವಚನಗಳ ವಿಮರ್ಶೆಯಿಂದ ವಚನಕಾರರ ಸೃಷ್ಟಿಕಲ್ಪನೆಯು ಋಗ್ವೇದದ ನಾಸದೀಯ ಸೂಕ್ತದಂತೆಯೇ ಅಥವಾ ಅದಕ್ಕಿಂತಲೂ ಮುಂದುವರಿದುದಾಗಿಯೇ ಸ್ಫುಟವಾಗಿ ತೋರುತ್ತಿದೆ. ಈ ವಚನಗಳ ಪರಿಶೀಲನೆಯಿಂದ ಪಂಚ-ಮುಖ, ದಶಭುಜ, ತ್ರಿನೇತ್ರ, ಕೈಲಾಸಾಧಿಪತಿ, ಗಿರಿಜಾಧವ ಇತ್ಯಾದಿ ವಿಶೇಷಣಬೋಧ್ಯನಾದ ಶಿವನು ಶೈವರ ಆರಾಧ್ಯ ದೇವತೆಯಲ್ಲದೆ ವೀರಶೈವರ ಉಪಾಸ್ಯ ಮೂರ್ತಿಯಲ್ಲ. ಮೇಲೆ ಹೇಳಿದ ವಿಶೇಷಣವಿಶಿಷ್ಟ ಶಿವನಿಗೂ ಮೂಲ ಕಾರಣೀಭೂತವಾದ ಪರಶಿವ ಬ್ರಹ್ಮವೇ ವೀರಶೈವರ ಉಪಾಸ್ಯವಸ್ತುವು. ಎಂಬುದನ್ನು ಸರ್ವರೂ ಸ್ಮರಣೆಯಲ್ಲಿಟ್ಟುಕೊಳ್ಳತಕ್ಕದ್ದು. ಆ ಮೂಲ ವಸ್ತುವಿನ ಬಗ್ಗೆ ಪ್ರಭುದೇವರು ಹೇಳಿದ "ಇದ್ದೆಯಲ್ಲಾ ಇಲ್ಲದಂತೆ" ಎಂಬ ಮಾತು ಎಷ್ಟು ಸುಂದರವಾಗಿದೆ ! ವಿಚಾರಿಸಿರಿ.

CC-0. Jangamwadi Math Collection. Digitized by eGangotri

ಸತ್, ಚಿತ್, ಆನಂದ ನಿತ್ಯ ಪರಿಪೂರ್ಣ ಅದ್ಯಂತ ರಹಿತ ಸರ್ವಶಕ್ತಿ ಸಮನ್ವಿತ ಎನಿಸಿಕೊಂಡ ಆ ಪರಶಿವ ಬ್ರಹ್ಮದಲ್ಲಿ ಅವಿನಾಭಾವ ಸಂಬಂಧದಿಂದ ವಿದ್ಯಮಾನವಾದ ವಿಮರ್ಶ ಶಕ್ತಿಯ ಸ್ಫುರಣವೇ ೩೬ ತತ್ವಗಳ ರೂಪವಾಗಿ ಪರಿಣಮಿಸುತ್ತದೆ.

ತತ್ವಗಳು:– ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯಾ, ಮಾಯಾ, ಕಲಾ, ವಿದ್ಯಾ, ರಾಗ, ಕಾಲ, ನಿಯತಿ, ಪುರುಷ, ಪ್ರಕೃತಿ, ಬುದ್ಧಿ, ಅಹಂಕಾರ, ಮನಃ, ಶ್ರೋತ್ರ, ತ್ವಕ್, ನೇತ್ರ, ಜಿಹ್ವಾ, ಘ್ರಾಣ, ವಾಕ್, ಪಾಣಿ, ಪಾದ, ಪಾಯು, ಉಪಸ್ಥ, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಆಕಾಶ, ವಾಯು, ವಹ್ನಿ, ಜಲ, ಪೃಥ್ವಿ, ಎಂದು ೩೬.

## ತತ್ವಗಳ ವಿಕಾಸ ಕ್ರಮ

ಶಕ್ತಿ ವಿಶಿಷ್ಟ, ಪರಶಿವಬ್ರಹ್ಮವು "ಬಹು ಸ್ಯಾಂ ಪ್ರಜಾಯೇಯ" ೬-೨-೩ ಎಂಬ ಛಾಂದೋಗ್ಯ ಶ್ರುತ್ಯನುಸಾರವಾಗಿ ಸೃಷ್ಟಿಗುನ್ಮುಖವಾಗಲು ತನ್ನಿಷ್ಟವಾದ ವಿಮರ್ಶ ಶಕ್ತಿಯೇ ಇಚ್ಛಾಶಕ್ತಿ ರೂಪವಾಗ ಪರಿಣಮಿಸುವದು.

ಅನಾದಿ ನಿಧನಾಚ್ಛಾಂತಾಚ್ಛಿವಾತ್ಪರಮಕಾರಣಾತ್ ।
ಇಚ್ಛಾಶಕ್ತಿರ್ವಿನಿಷ್ಕ್ರಾಂತಾ ತತೋ ಜ್ಞಾನಂ ತತಃ ಕ್ರಿಯಾ ॥
ತತೋತ್ಪನ್ನಾನಿ ಭೂತಾನಿ ಭುವನಾನಿ ಚತುರ್ದಶ ॥

ಎಂಬ ಶಿವಾಗಮ ಪ್ರಮಾಣಾನುಸಾರವಾಗಿ ಉತ್ಪತ್ತಿ ನಾಶರಹಿತವು, ಪರಮ ಕಾರಣವೂ, ಶಾಂತವೂ ಆದ ಪರಶಿವಬ್ರಹ್ಮದಿಂದ ಮೊಟ್ಟಮೊದಲು ಇಚ್ಛಾ ಶಕ್ತಿಯು, ಆದರಿಂದ ಜ್ಞಾನ ಶಕ್ತಿಯೂ ಮತ್ತು ಕ್ರಿಯಾಶಕ್ತಿಯೂ ಆವಿರ್ಭವಿಸುವವು. ಆ ಇಚ್ಛಾಶಕ್ತಿಗೆ ಜ್ಞಾನಶಕ್ತಿಯು ಅಂತರಂಗವಾಗಿಯೂ ಕ್ರಿಯಾಶಕ್ತಿಯು ಬಹಿರಂಗ ವಾಗಿಯೂ ಇರುವವು. ಪರಶಿವಬ್ರಹ್ಮವು ಜ್ಞಾನ ಶಕ್ತಿಯೊಡನೆ ಏಕಾಕಾರವಾಗಿ "ನಾನು ಸರ್ವಜ್ಞನು" ಎಂಬ ಅಭಿಮಾನವನ್ನು ಪಡೆಯುವದು. ಈ ಅಭಿಮಾನ ವಿಶಿಷ್ಟವಾದುದೇ "ಶಿವತತ್ವ" ವೆನಿಸಿಕೊಳ್ಳುವದು. ಈ ಶಿವತತ್ವ ರೂಪವಾದ ಪರಶಿವ ಬ್ರಹ್ಮವು ಜೇಡರ ಹುಳವು ಜಾಲಕ್ಕೆ ನಿಮಿತ್ತ ಕಾರಣವಾಗುವಂತೆ ಜ್ಞಾನ-ವಿಶಿಷ್ಟತ್ವಾಕಾರದಿಂದ ಭಾವೀ ಪ್ರಪಂಚಕ್ಕೆ ನಿಮಿತ್ತ ಕಾರಣವಾಗುವದು.

ಪರಶಿವಬ್ರಹ್ಮವು ಕ್ರಿಯಾಶಕ್ತಿಯೊಡನೆ ಏಕಾಕಾರವಾಗಿ "ನಾನು ಸರ್ವ ಕರ್ತೃವು" ಎಂಬ ಅಭಿಮಾನವನ್ನು ಪಡೆಯುವದು. ಇದೇ "ಶಕ್ತಿತತ್ವ" ವೆನಿಸಿ-ಕೊಳ್ಳುವದು. ಜೇಡರ ಹುಳವು ಜಾಲೋತ್ಪತ್ತಿ ಯೋಗ್ಯ ಶರೀರ ವಿಶೇಷ

CC-0. Jangamwadi Math Collection. Digitized by eGangotri

ವಿಶಿಷ್ಟತ್ವಾಕಾರದಿಂದ ಜಾಲಕ್ಕೆ ಉಪದಾನ ಕಾರಣವಾಗುವಂತೆ ಈ ಶಕ್ತಿತತ್ವ ರೂಪವಾದ ಪರಶಿವಬ್ರಹ್ಮವೇ ಕ್ರಿಯಾವಿಶಿಷ್ಟತ್ವಾಕಾರದಿಂದ ಭಾವೀಃಪ್ರಪಂಚಕ್ಕೆ ಉಪದಾನ ಕಾರಣವೂ ಆಗುವದು.

ಮುಂಡಕ ಶ್ರುತಿಯು "ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ ೧-೧-೭ ಎಂಬ ವಾಕ್ಯದಿಂದ ಪರಶಿವಬ್ರಹ್ಮವೊಂದೇ ಪ್ರಪಂಚಕ್ಕೆ ಅಭಿನ್ನ ನಿಮಿತ್ತೋಪಾದಾನ ಕಾರಣವಾಗಿರುವದೆಂದು ಪ್ರತಿಪಾದಿಸುತ್ತಿರುವದು.

ಈ ಶಕ್ತಿತತ್ವವು ಇಚ್ಛಾಶಕ್ತಿಗೆ ಅಂತರಂಗವಾದ ಜ್ಞಾನಶಕ್ತಿಯಲ್ಲಿ ಪ್ರವೇಶಿಸಿ ಜಲಾಧಿವಾಸದಿಂದ ಅಂಕುರೋನ್ಮುಖವಾದ ಕಡಲೆಯಂತೆ ಉಬ್ಬಿ ಅಂಕುರಾಯ-ಮಾಣವಾದ ಭಾವೀ ಪ್ರಪಂಚವನ್ನು ಕುರಿತು "ಸದಾಶಿವ ತತ್ವ" ವೆನಿಸಿಕೊಳ್ಳುವದು.

ಈ ಶಕ್ತಿ ತತ್ವವು ಇಚ್ಛಾಶಕ್ತಿಗೆ ಬಹಿರಂಗವಾದ ಕ್ರಿಯಾಶಕ್ತಿಯಲ್ಲಿ ಪ್ರವೇಶಿಸಿ ಸುಕ್ಷೇತ್ರದಲ್ಲಿ ಬಿತ್ತಿದ ಸುಬೀಜದಂತೆ ಅಂಕುರಿಸಿ ಅಂಕುರಿತವಾದ ಪ್ರಪಂಚವನ್ನು ಕುರಿತು "ಅಹಮಿದಂ" "ನಾನು ಈ ಪ್ರಪಂಚವು" ಎಂದು ಅಭಿಮಾನವನ್ನು ಪಡೆಯಲು "ಈಶ್ವರತತ್ವ" ವೆನಿಸಿಕೊಳ್ಳುವದು.

ಈ ಶಕ್ತಿತತ್ವವು–ಸಾಗರತರಂಗ ನ್ಯಾಯದಂತೆ (ಸಮುದ್ರಕ್ಕೂ ಸಮುದ್ರ ದಲ್ಲಿರುವ ತೆರೆಗಳಿಗೂ ಅಭೇದವಿರುವಂತೆ) "ಅಹಮಿದಂ" ನಾನು ಎಂಬ ಅಹಂಕಾರಕ್ಕೂ ಇದು ಎಂಬ ಪ್ರಪಂಚಕ್ಕೂ ಅಭೇದ ಜ್ಞಾನವನ್ನು ಪಡೆಯಲು "ಶುದ್ಧವಿದ್ಯಾತತ್ವ" ವೆನಿಸಿಕೊಳ್ಳುವದು.

ಶುದ್ಧವಿದ್ಯಾತತ್ವರೂಪವಾಗಿ ಪರಿಣಮಿಸಿರುವೀ ಶಕ್ತಿತತ್ವವು ಮಯೂರಾಂಡರಸ ನ್ಯಾಯದಂತೆ (ನವಿಲಿನ ತತ್ತಿಯ ರಸದಲ್ಲಿ ಕಾಲು, ರೆಕ್ಕೆ ನಾನಾವರ್ಣವೈಚಿತ್ರ್ಯಾದಿ ಗಳು ವಿಭಾಗ ರೂಪವಾಗಿ ಸೂಕ್ಷ್ಮರೂಪದಿಂದಿರುವಂತೆ) ತನ್ನಲ್ಲಡಕವಾಗಿರುವ ಭಾವಿಪ್ರಪಂಚ ನಿರ್ಮಾಣಕಾರಣೀಭೂತ ಸೂಕ್ಷ್ಮ ಪದಾರ್ಥಗಳಲ್ಲಿ ಅನ್ಯೋನ್ಯಾ-ಭಾವರೂಪ ಭೇದಬುದ್ಧಿ ಪ್ರಾಧಾನ್ಯದಿಂದ "ಮಾಯಾತತ್ವ" ವೆನಿಸಿಕೊಳ್ಳುವದು.

ಈ ಮಾಯಾಶಕ್ತಿಯಲ್ಲಿ ಪ್ರವೇಶಿಸಿದ, ಕಾಷ್ಠಸಂಯೋಗದಿಂದ ಅಗ್ನಿಕಣಗಳು ಆವಿರ್ಭವಿಸುವಂತೆ, ಪರಶಿವನ ಇಚ್ಛಾಶಕ್ತಿಯ ಯೋಗದಿಂದ ಆವಿರ್ಭವಿಸುವ ಶಿವಾಂಶವೇ "ಪುರುಷ ತತ್ವ" ವೆನಿಸಿಕೊಳ್ಳುವದು. ಈ ಪುರುಷ ತತ್ವಕ್ಕೆ ಮಾಯಾಮಲ ಸಂಬಂಧವುಂಟಾಗುವದರಿಂದ ಆತ್ಮನಲ್ಲಿ ಅನಾತ್ಮತ್ವ ಜ್ಞಾನವೂ, ಅನಾತ್ಮವಸ್ತುಗಳಲ್ಲಿ ಆತ್ಮತ್ವ ಜ್ಞಾನವೂ 'ನಾನು ಸುಖಿಯು' 'ನಾನು ದುಃಖಿಯು' ಎಂಬ ಬುದ್ಧಿಯೂ ಉತ್ಪನ್ನವಾಗುವವು. ಪುರುಷನು ಈ ರೀತಿಯಾಗಿ ಆಣವಾದಿ ಮಲಗಳಿಂದ ಯುಕ್ತನಾಗುವ ಮೂಲಕ ಸಂಸಾರಿಯೆನಿಸುವನು.

CC-0. Jangamwadi Math Collection. Digitized by eGangotri

ಪುರುಷನು ಮಾಯಾಮಲವೃತನಾಗಿ ತನ್ನ ಸರ್ವ ಕರ್ತೃತ್ವ, ಸರ್ವಜ್ಞತ್ವ, ಪೂರ್ಣತ್ವ, ನಿತ್ಯತ್ವ, ವ್ಯಾಪಕತ್ವ, ರೂಪ ಶಕ್ತಿಗಳನ್ನು ಕಳೆದುಕೊಂಡು, ಕಿಂಚಿತ್ಕರ್ತೃತ್ವಾದಿ ಶಕ್ತಿಗಳಿಂದ ಯುಕ್ತನಾಗುವನು. ಪುರುಷನ ಈ ಕಿಂಚಿತ್ಕರ್ತೃತ್ವ ರೂಪ, ಶಕ್ತಿಯೇ "ಕಲಾತತ್ವ" ವೆನಿಸಿಕೊಳ್ಳುವದು. ಕಿಂಚಿಜ್ಞತ್ವ ರೂಪ ಶಕ್ತಿಯೇ "ವಿದ್ಯಾತತ್ವ" ವೆನಿಸಿಕೊಳ್ಳುವದು. ಅಪೂರ್ಣ ರೂಪಶಕ್ತಿಯೇ ಸ್ರಕ್ಚಂದನ ವನಿತಾದಿ ವಿಷಯಕ ಪ್ರೀತಿರೂಪವಾದ "ರಾಗತತ್ವ" ವೆನಿಸಿಕೊಳ್ಳುವದು. ಅನಿತ್ಯತ್ವರೂಪ ಶಕ್ತಿಯೇ ಭೂತ ಭವಿಷ್ಯದ್ವರ್ತಮಾನ ಕಾಲಗಳ ವ್ಯವಹಾರಕ್ಕೆ ಅಸಾಧಾರಣಕಾರಣವಾದ "ಕಾಲತತ್ವ" ವೆನಿಸಿಕೊಳ್ಳುವದು. ಅವ್ಯಾಪಕತ್ವ ರೂಪ ಶಕ್ತಿಯೇ ಇಂಥ ಕಾರಣದಿಂದ ಇಂಥ ಕಾರ್ಯವೇ ಹುಟ್ಟುವದು, ಮತ್ತೊಂದು ಹುಟ್ಟುವದಿಲ್ಲವೆಂಬ ನಿಯಮಕ್ಕೆ ಅಸಾಧಾರಣಕಾರಣವಾದ "ನಿಯತಿತತ್ವ" ವೆನಿಸಿಕೊಳ್ಳುವದು.

ಕಾರ್ಯೋನ್ಮುಖತೆಯಿಂದ ಕೂಡಿದ ಇಚ್ಛಾಶಕ್ತಿಯು ಸ್ವಗತವಾದ ಜ್ಞಾನಶಕ್ತಿ ಕ್ರಿಯಾಶಕ್ತಿಗಳಲ್ಲಿರುವ 'ಜ್ಞಾನಂ ಕ್ರಿಯಾ ನ ಭವತಿ' 'ಕ್ರಿಯಾ ಜ್ಞಾನಂ ನ ಭವತಿ' ಎಂಬ ಅನ್ಯೋನ್ಯಾಭಾವ ರೂಪಭೇದ ಬುದ್ಧಿಪ್ರಧಾನವಾದ ಮಾಯಾತತ್ವದಲ್ಲಿ ಪ್ರತಿಸ್ಫುರಿಸಲು "ಪ್ರಕೃತಿ ತತ್ವ" ವೆನಿಸಿಕೊಳ್ಳುವದು. ಈ ಪ್ರಕೃತಿ ತತ್ವವು ಸುಖ ದುಃಖ, ಮೋಹಗಳಿಗೆ ಕಾರಣಗಳಾದ ಸತ್ವರಜಸ್ತಮೋಗುಣಗಳ ಸಾಮ್ಯಾವಸ್ಥಾ ರೂಪವಾಗಿದ್ದು ಮಹತ್ತತ್ವಾದಿ ಪೃಥಿವ್ಯಂತವಾಗಿರುವ ೨೩ ತತ್ವಗಳಿಗೆ ಮೂಲ ಕಾರಣವಾಗಿರುವುದು.

ಪ್ರಕೃತಿತತ್ವವಾದಿ ಪರಿಣಮಿಸಿದ ಈ ಶಕ್ತಿತತ್ವವೇ 'ಇದಮಿತ್ಥಂ'. ಇದು ಹೀಗೆಯೇ ಸರಿ ! ಎಂಬ ನಿಶ್ಚಯಕ್ಕೆ ಕಾರಣವಾದುದಾಗಿ "ಬುದ್ಧಿತತ್ವ" ವೆನಿಸಿಕೊಳ್ಳುವದು. ಇದಕ್ಕೆ ಮಹತ್ತತ್ವವೆಂದೂ ಹೇಳುವರು. ಬುದ್ಧಿತತ್ವ ರೂಪವಾದೀ ಶಕ್ತಿ ತತ್ವವೇ 'ನಾನು, 'ನನ್ನದು, ಎಂಬ ಅಹಂಕಾರಮಮಕಾರಗಳಿಗೆ ಕಾರಣವಾದುದಾಗಿ "ಅಹಂಕಾರತತ್ವ" ವೆನಿಸಿಕೊಳ್ಳುವದು.

ಅಹಂಕಾರ ತತ್ತ್ವರೂಪವಾದೀ ಶಕ್ತಿ ತತ್ತ್ವವೇ 'ಸ್ಥಾಣುರ್ವಾ ಪುರುಷೋ ವಾ' ಎಂಬ ಸಂಕಲ್ಪ ವಿಕಲ್ಪಗಳಿಗೆ ಕಾರಣವಾದುದಾಗಿ "ಮನಸ್ತತ್ವ" ವೆನಿಸಿಕೊಳ್ಳುವದು. ಬುಧ್ಯಹಂಕಾರಮನಸ್ತತ್ವಗಳು ಶರೀರದೊಳಗಿರುವದರಿಂದ "ಅಂತಃಕರಣ" ವೆನಿಸುವವು. ಈ ಅಂತಃಕರಣವು ಇಚ್ಛಾಶಕ್ತಿಪ್ರಧಾನವಾಗಿರುವುದು.

ಅಂತಃಕರಣ ರೂಪವಾಗಿ ಪರಿಣಮಿಸಿದ ಈ ಶಕ್ತಿತತ್ವವೇ ಬಾಹ್ಯ ಶರೀರವನ್ನವಲಂಬಿಸಿ ಶಬ್ದಜ್ಞಾನಕ್ಕೆ ಸಾಧನವಾಗಿ "ಶ್ರೋತ್ರತತ್ವ" ವೆಂದೂ, ಸ್ಪರ್ಶ

CC-0. Jangamwadi Math Collection. Digitized by eGangotri

ಜ್ಞಾನಕ್ಕೆ ಸಾಧನವಾಗಿ "ತ್ವಕ್‌ತತ್ವ" ವೆಂದೂ, ರೂಪಜ್ಞಾನಕ್ಕೆ ಸಾಧನವಾಗಿ "ನೇತ್ರ ತತ್ವ" ವೆಂದೂ, ರಸಜ್ಞಾನಕ್ಕೆ ಸಾಧನವಾಗಿ "ಜಿಹ್ವಾ ತತ್ವವೆಂದೂ, ಗಂಧ ಜ್ಞಾನಕ್ಕೆ ಸಾಧನವಾಗಿ "ಘ್ರಾಣ ತತ್ವ" ವೆಂದೂ ಹೇಳಿಸಿಕೊಳ್ಳುವುದು. ಈ ಐದು ಇಂದ್ರಿಯಗಳು ಜ್ಞಾನಶಕ್ತಿಪ್ರಧಾನವಾದುದರಿಂದ ಜ್ಞಾನೇಂದ್ರಿಯಗಳೆಂದು ಹೇಳಿಸಿ-ಕೊಳ್ಳುವವು.

ಜ್ಞಾನೇಂದ್ರಿಯ ರೂಪವಾಗಿ ಪರಿಣಮಿಸಿದ ಈ ಶಕ್ತಿತತ್ವವೇ ಉಚ್ಚಾರಣೆ ಕ್ರಿಯೆಗೆ ಸಾಧನವಾಗಿ "ವಾಕ್ತತ್ವ" ವೆಂದೂ, ದಾನಾದಾನಾದಿ ಕ್ರಿಯೆಗಳಿಗೆ ಸಾಧನವಾಗಿ "ಪಾಣಿತತ್ವ" ವೆಂದೂ, ಗಮನಾಗಮನಾದಿ ಕ್ರಿಯೆಗಳಿಗೆ ಸಾಧನ-ವಾಗಿ "ಪಾದತತ್ವ" ವೆಂದೂ, ಮಲಪರಿತ್ಯಾಗಕ್ಕೆ ಸಾಧನವಾಗಿ "ಪಾಯುತತ್ವ" ವೆಂದೂ, ರೇತೋಮೂತ್ರ ಪರಿತ್ಯಾಗಕ್ಕೆ ಸಾಧನವಾಗಿ "ಉಪಸ್ಥ ತತ್ವ" ವೆಂದೂ ಹೇಳಿಸಿಕೊಳ್ಳುವದು. ಈ ಐದು ಇಂದ್ರಿಯಗಳು ಕ್ರಿಯಾಶಕ್ತಿ ಪ್ರಧಾನವಾದುದ ರಿಂದ ಕರ್ಮೇಂದ್ರಿಯಗಳೆಂದು ಹೇಳಿಸಿಕೊಳ್ಳುವವು. ಈ ಮೇಲೆ ಹೇಳಿದ ಬುದ್ಧಿ ತತ್ವಾದಿತ್ರಯೋದಶ ತತ್ವಗಳು ಇಚ್ಛಾಶಕ್ತಿ-ಜ್ಞಾನಶಕ್ತಿ-ಕ್ರಿಯಾಶಕ್ತಿ ಪ್ರಧಾನ ವಾಗಿರುವವು.

ಈ ಶಕ್ತಿ ತತ್ವವೇ ಕೇವಲ ಶ್ರೋತ್ರೇಂದ್ರಿಯ ಗ್ರಾಹ್ಯವಾದ "ಶಬ್ದ ತತ್ವ" ರೂಪವಾಗಿಯೂ, ಕೇವಲ ತ್ವಗಿಂದ್ರಿಯಗ್ರಾಹ್ಯವಾದ "ಸ್ಪರ್ಶತತ್ವ" ರೂಪವಾಗಿಯೂ ಕೇವಲ ನೇತ್ರೇಂದ್ರಿಯಗ್ರಾಹ್ಯವಾದ "ರೂಪತತ್ವ" ರೂಪವಾಗಿಯೂ, ಕೇವಲ ಜಿಹ್ವೇಂದ್ರಿಯಗ್ರಾಹ್ಯವಾದ "ರಸತತ್ವ" ರೂಪವಾಗಿಯೂ, ಕೇವಲ ಘ್ರಾಣೇಂದ್ರಿಯ ಗ್ರಾಹ್ಯವಾದ "ಗಂಧತತ್ವ" ರೂಪವಾಗಿಯೂ ಪರಿಣಮಿಸುವದು. ಆಗ ಶಬ್ದದಲ್ಲಿ ಧ್ವನ್ಯಾತ್ಮಕ, ವರ್ಣಾತ್ಮಕ ಶಬ್ದವೆಂದೂ, ಸ್ಪರ್ಶದಲ್ಲಿ ಶೀತೋಷ್ಣಸ್ಪರ್ಶವೆಂದೂ, ರೂಪದಲ್ಲಿ ನೀಲಪೀತಾದಿ ರೂಪವೆಂದೂ, ರಸದಲ್ಲಿ ಮಧುರಾಮ್ಲಾದಿ ರಸವೆಂದೂ, ಗಂಧದಲ್ಲಿ ಸುಗಂಧ ದುರ್ಗಂಧವೆಂದೂ ವಿಭಾಗವು ವ್ಯಕ್ತವಾಗದೆ ಸಾಮಾನ್ಯರೂಪ ವಾಗಿರುವದರಿಂದ ಈ ಶಬ್ದಾದಿಗಳು "ತನ್ಮಾತ್ರ" ಗಳೆಂದು ಹೇಳಿಸಿಕೊಳ್ಳುವವು.

ಈ ಶಕ್ತಿ ತತ್ವವೇ ಶಬ್ದವೆಂಬ ಒಂದೇ ಗುಣವುಳ್ಳ "ಆಕಾಶತತ್ವ" ರೂಪ ವಾಗಿಯೂ, ಸ್ಪರ್ಶವೆಂಬ ಪ್ರಧಾನ ಗುಣವುಳ್ಳ "ವಾಯುತತ್ವ" ರೂಪವಾಗಿಯೂ, ರೂಪವೆಂಬ ಪ್ರಧಾನ ಗುಣವುಳ್ಳ "ತೇಜಸ್ತತ್ವ" ರೂಪವಾಗಿಯೂ, ರಸವೆಂಬ ಪ್ರಧಾನ ಗುಣವುಳ್ಳ "ಜಲತತ್ವ" ರೂಪವಾಗಿಯೂ, ಗಂಧವೆಂಬ ಪ್ರಧಾನ ಗುಣವುಳ್ಳ "ಪೃಥ್ವೀತತ್ವ" ರೂಪವಾಗಿಯೂ ಪರಿಣಮಿಸುವದು.

ಈ ಪಂಚಭೂತಗಳೊಳಗೆ ಉತ್ತರೋತ್ತರ ಭೂತಗಳಲ್ಲಿ ಪೂರ್ವಪೂರ್ವ

CC-0. Jangamwadi Math Collection. Digitized by eGangotri

ಭೂತಗಳ ಗುಣಗಳು ಅನುವರ್ತಿಸುವವು. ನಿಗಮಾಗಮ ಪ್ರಸಿದ್ಧವಾದೀ ಮೂವತ್ತಾರು ತತ್ವಗಳು ಸಚ್ಚಿದಾನಂದರೂಪವಾದ, ಶಕ್ತಿವಿಶಿಷ್ಟಪರಶಿವಬ್ರಹ್ಮದ ಪರಿಣಾಮ ರೂಪವಾಗಿರುವದರಿಂದ ವೀರಶೈವ ದರ್ಶನವು ಅವಿಕೃತ ಪರಿಣಾಮ ವಾದವನ್ನೂ ಜಗತ್ಸತ್ಯತ್ವ ವಾದವನ್ನೂ ಬೋಧಿಸುತ್ತಿರುವುದು.

ವೀರಶೈವ ದರ್ಶನದಲ್ಲಿ ಪರಶಿವಬಹ್ಮಕ್ಕೆ ಸ್ಥಲ, ಲಿಂಗ, ಎಂಬ ಪರ್ಯಾಯನಾಮ ಗಳಿರುತ್ತವೆಂದು ಹಿಂದೆ ಹೇಳಿದೆ. ಈ ಎರಡೂ ಶಬ್ದಗಳ ವ್ಯುತ್ಪತ್ತಿಲಭ್ಯವಾದ ಅರ್ಥದಿಂದಲೂ ಪರಶಿವಬ್ರಹ್ಮದ ತಟಸ್ಥ ಲಕ್ಷಣವು ತೋರುತ್ತದೆ. "ಯತೋ ವಾ ಇಮಾನಿ ಭೂತಾನಿ ಜಾಯಂತೆ, ಯೇನ ಜಾತಾನಿ ಜೀವಂತಿ, ಯತ್ಪ್ರಯಾಂತ್ಯಭಿ ಸಂವಿಶಂತಿ" ಎಂಬ ತಟಸ್ಥ ಲಕ್ಷಣವು ಈ ಎರಡು ಶಬ್ದಗಳಲ್ಲಿರುತ್ತದೆ. ಸ್ಥಲ–ಇದರಲ್ಲಿ ಸ್ಥ ಶಬ್ದದಿಂದ ಸೃಷ್ಟಿಯು ಸ್ಥಿತಿಯು, ಲ ಇದರಿಂದ ಜಗತ್ತಿನ ಲಯವು ಉಕ್ತವಾಗುತ್ತದೆ. ಸ್ಥಿತಿ ಲಯ ಎರಡು ಹೇಳಿದ್ದರೂ ಉತ್ಪತ್ತಿಯಾಗದೇ ಸ್ಥಿತಿಯು ಸಂಭವಿಸುವದಿಲ್ಲವಾದುದರಿಂದ ಸ್ಥಿತಿಯಲ್ಲಿ ಉತ್ಪತ್ತಿಯು ಅಂತರ್ಗತವಾಗಿದೆ. ಇದರಂತೆ ಲಿಂಗ ಶಬ್ದದಲ್ಲಿ ಲಿ–ಇದಕ್ಕೆ ಲಯವೆಂದೂ ಗ–ಇದಕ್ಕೆ ಗಮನ (ಉತ್ಪತ್ತಿ) ಎಂದೂ ಅರ್ಥವಿರುವದು. ಇಲ್ಲಿ ಉತ್ಪತ್ತಿ ಲಯ ಎರಡನ್ನೂ ಹೇಳಿದ್ದರೂ ಉತ್ಪನ್ನವಾದ ಜಗತ್ತು ಲಯವನ್ನು ಹೊಂದಬೇಕಾದರೆ ಕೆಲವು ಕಾಲ ಇರಬೇಕಾದುದರಿಂದ ಇಲ್ಲಿ ಸ್ಥಿತಿಯು ಅಂತರ್ಗತವಾಗಿರುತ್ತದೆ. ಪರಶಿವನಲ್ಲಿ ಈ ಜಗತ್ತು ಇರುವದಾದರೂ ಯಾವ ರೂಪದಲ್ಲಿರುತ್ತದೆ ಎಂಬ ಪಶ್ನೆಗೆ 'ಲಿಂಗ' ಶಬ್ದದೊಳಗಿನ ನಡುವಿನ ಪೂಜೆಯು ಶೂನ್ಯರೂಪವಾಗಿರುತ್ತದೆಂಬುದನ್ನು ಸೂಚಿಸುತ್ತದೆ ಆದುದರಿಂದಲೇ ಅದ್ವೈತಕ್ಕೆ ಹಾನಿಯಿಲ್ಲ.

ಯತ್ರಾದೌ ಸ್ಥೀಯತೇ ವಿಶ್ವಂ ಪ್ರಾಕೃತಂ ಪೌರುಷಂ ಯತಃ ।
ಲೀಯತೇ ಪುನರಂತೇ ಚ ಸ್ಥಲಂ ತತ್ಪ್ರೋಚ್ಯತೇ ತತಃ ॥

ಸ್ಥಕಾರಃ ಸ್ಥಾನವಾಚೀ ಸ್ಯಾಲ್ಲಕಾರೋ ಲಯವಾಚಕಃ ।
ತಯೋಃ ಕಾರಣಭೂತಂ ಯತ್ತದೇವ ಸ್ಥಲಮುಚ್ಯತೆ ॥

ಲಯಂ ಗಚ್ಛತಿಯತ್ರೈವ ಜಗದೇತಚ್ಚರಾಚರಂ ।
ಪುನಃಪುನಃ ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮ ಶಾಶ್ವತಂ ॥

ಈ ಪ್ರಮಾಣ ವಾಕ್ಯಗಳು ಮೇಲಿನ ವಿಷಯದಲ್ಲಿ ಪೋಷಕಗಳಾಗಿವೆ. ಅವಿನಾಭಾವ ಸಂಬಂಧದಿಂದ ಶಕ್ತಿಯೊಡನೆ ಸಮರಸಭಾವವನ್ನು ಹೊಂದಿ "ಏಕಮೇವಾದ್ವಿತೀಯಂ" ಎಂಬಂತೆ ಒಂದೇ ಒಂದಾಗಿರುವ ಆ ಪರಶಿವಬ್ರಹ್ಮದಲ್ಲಿ ಉಪಾಸ್ಯೋಪಾಸಕ ಭಾವದಿಂದ ಲೀಲೆಮಾಡಬೇಕೆಂಬ ಇಚ್ಛೆಯುಂಟಾದಾಗ ಕಿಂಚಿತ್ ಸ್ಪಂದ

CC-0. Jangamwadi Math Collection. Digitized by eGangotri

(ಚಲನ) ಉಂಟಾಗುತ್ತದೆ. ಈ ಸ್ಪಂದದಿಂದ ಸಾಮರಸ್ಯದ ಭೇದವಾಗಿ ಸ್ಥಲವಲ್ಲಿ ಎರಡು ಭಾಗವಾಗುತ್ತದೆ. ಒಂದು ಲಿಂಗಸ್ಥಲ, ಇನ್ನೊಂದು ಅಂಗಸ್ಥಲ ಇದರಂತೆ ಲಿಂಗದಲ್ಲಿ ಲಿಂಗ, ಅಂಗ ಎಂದು ಎರಡು ಭಾಗವಾಗುವದು. ಲಿಂಗವು ಎರಡು ಭಾಗವಾದಕೂಡಲೇ ಶಕ್ತಿಯೂ ಕಲಾ, ಭಕ್ತಿ ಎಂದು ಎರಡು ವಿಧವಾಗುವದು.

ಸ್ವಶಕ್ತಿಕ್ಷೋಭಮಾತ್ರೇಣ ಸ್ಥಲಂ ತದ್ದ್ವಿವಿಧಂ ಭವೇತ್ ।
ಯಥಾ ಸ್ಥಲಂ ದ್ವಿಧಾ ಭೂತಂ ತಥಾ ಶಕ್ತಿರ್ದ್ವಿಧಾ ಭವೇತ್ ॥

ಲಿಂಗವನಾಶ್ರಯಿಸಿದ್ದು ಕಲೆ, ಅಂಗವನಾಶ್ರಯಿಸಿದ್ದು ಭಕ್ತಿ, ಲಿಂಗ ಉಪಾಸ್ಯ, ಅಂಗ ಉಪಾಸಕ. ಕಲೆ (ಶಕ್ತಿ) ಪ್ರವೃತ್ತಿಕಾರಿಣೀ. ಭಕ್ತಿ ನಿವೃತ್ತಿಕಾರಿಣೀ. ಲಿಂಗವು ಮೊದಲು ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗವೆಂದು ಮೂರು ಪ್ರಕಾರ ವಾಗುತ್ತದೆ. ಬಳಿಕ ಭಾವಲಿಂಗದಲ್ಲಿ ಮಹಾಲಿಂಗ, ಪ್ರಸಾದಲಿಂಗವೆಂದೂ ಪ್ರಾಣ ಲಿಂಗದಲ್ಲಿ ಜಂಗಮಲಿಂಗ, ಶಿವಲಿಂಗವೆಂದೂ, ಇಷ್ಟಲಿಂಗದಲ್ಲಿ ಗುರುಲಿಂಗ, ಆಚಾರಲಿಂಗವೆಂದೂ ಎರಡೆರಡು ಭೇದವಾಗಿ ಒಟ್ಟಿಗೆ ಆರು ಪ್ರಕಾರವಾಗುತ್ತದೆ.

ಅಂಗವು ಮೊದಲು ಯೋಗಾಂಗ, ಭೋಗಾಂಗ, ತ್ಯಾಗಾಂಗ ಎಂದು ಮೂರು ಪ್ರಕಾರವಾಗುತ್ತದೆ. ಬಳಿಕ ಯೋಗಾಂಗದಲ್ಲಿ ಐಕ್ಯ, ಶರಣ ಎಂದೂ ಭೋಗಾಂಗದಲ್ಲಿ ಪ್ರಾಣಲಿಂಗ, ಪ್ರಸಾದಿ ಎಂದು ಆರು ವಿಧವಾಗಿರುತ್ತದೆ. ಕಲೆಯು ಶಾಂತ್ಯತೀತೋತ್ತರೆ, ಶಾಂತ್ಯತೀತ, ಶಾಂತಿ, ವಿದ್ಯಾ, ಪ್ರತಿಷ್ಠಾ, ನಿವೃತ್ತಿ ಎಂದು ಆರು ವಿಧವಾಗಿರುತ್ತದೆ. ಭಕ್ತಿಯು–ಸಮರಸಭಕ್ತಿ, ಆನಂದಭಕ್ತಿ, ಅನುಭವಭಕ್ತಿ, ಅವಧಾನಭಕ್ತಿ, ಶ್ರದ್ಧಾಭಕ್ತಿ ಎಂದು ಆರು ಪ್ರಕಾರವಾಗುವದು.

## ಲಿಂಗಾಂಗಗಳ ಆವಿರ್ಭಾವ ಕ್ರಮವು

"ಲಿಂಗವಾರು, ಅಂಗವಾರು, ಶಕ್ತಿಯಾರು, ಭಕ್ತಿಯಾರು ಇಂತಿವೆಲ್ಲವ ನಿನ್ನಲ್ಲಿ ಗರ್ಭೀಕರಿಸಿಕೊಂಡು ಸಚ್ಚಿದಾನಂದ ನಿತ್ಯಪರಿಪೂರ್ಣ ನಿರಂಜನ ನೀನಾದ ಕಾರಣ ನಿನ್ನ ನಿಷ್ಕಲಶಿವತತ್ವವೆಂದೆನು ಕಾಣಾ ಮಹಾಲಿಂಗ ಗುರುಶಿವ ಸಿದ್ಧೇಶ್ವರಪ್ರಭುವೇ."

ಎಂದು ಅನಾದಿ ಜಗದ್ಗುರು ಶ್ರೀ ಸಿದ್ಧಲಿಂಗಯತಿವರೇಣ್ಯರು ಹೇಳಿರುವಂತೆ "ಏಕಮೇವಾದ್ವಿತೀಯಂ ಬ್ರಹ್ಮ" ಎಂಬ ಶ್ರುತ್ಯನುಸಾರವಾಗಿ ನಿರಾಕಾರ ಪರಶಿವ ವಸ್ತುವು ತಾನೊಂದೇ ಆ ಪರಶಿವನು ನೆನೆದ ನೆನಹು ಸಾವಯವನವಾಗಿ ಸತ್ತು, ಚಿತ್ತು, ಆನಂದ, ನಿತ್ಯ, ಪರಿಪೂರ್ಣ ಎಂಬ ಐದವಯುವವನಂಗೀಕರಿಸಿ "ನಿಷ್ಕಲ ಶಿವತತ್ವ" ವೆನಿಸಿಕೊಳ್ಳುವದು. ಈ ನಿಷ್ಕಲ ಶಿವತತ್ವವು ಚಿಚ್ಛಕ್ತಿಯ ಸಂಗದಿಂದ

CC-0. Jangamwadi Math Collection. Digitized by eGangotri

ಮಹಾಲಿಂಗವಾದಾಗ, ಅಂಗನು 'ಶಾಂತ್ಯತೀತೋತ್ತರೆ' ಎಂಬ ಕಲೆಯಿಂದ ಉದಯಿಸಿ ಮಹಾಲಿಂಗಕ್ಕಾಶ್ರಯವಾಗಿ ಐಕ್ಯನೆನಿಸಿಕೊಳ್ಳುವನು. ಈ ಐಕ್ಯನ ಮಧ್ಯದಲ್ಲಿ ಆತ್ಮತತ್ವವು ಉದಯುವಾಗುವದು. ಇದಕ್ಕೆ ಮಹಾಸಾದಾಖ್ಯವೆನ್ನುವರು.

ಆ ಪರಶಿವತತ್ವವು ಚಿಚ್ಛಕ್ತಿಯಿಂದುದಯವಾದ ಪರಾಶಕ್ತಿಯ ಸಂಗದಿಂದ "ಪ್ರಸಾದಲಿಂಗ" ವಾದಾಗ ಅಂಗನು "ಶಾಂತ್ಯತೀತ" ಎಂಬ ಕಲೆಯಿಂದುದಯಿಸಿ ಆ ಪ್ರಸಾದ ಲಿಂಗಕ್ಕೆ ಆಶ್ರಯವಾಗಿ "ಶರಣ" ನೆನಿಸಿಕೊಳ್ಳುವನು. ಈ ಶರಣನ ಮಧ್ಯದಲ್ಲಿ ಆಕಾಶ ತತ್ವದ ಉದಯವಾಗುತ್ತದೆ. ಇದಕ್ಕೆ ಶಿವಸಾದಾಖ್ಯವೆನ್ನುವರು.

ಪರಾಶಕ್ತಿಯಿಂದುದಯವಾದ ಆದಿ ಶಕ್ತಿಯ ಸಂಗದಿಂದ ಆ ಶಿವತತ್ವವು ಜಂಗಮ ಲಿಂಗವಾದಾಗ ಅಂಗನು 'ಶಾಂತಿ'ಯೆಂಬ ಕಲೆಯಿಂದುದಯಿಸಿ ಆ ಜಂಗಮ ಲಿಂಗಕ್ಕಾಶ್ರಯವಾಗಿ "ಪ್ರಾಣಲಿಂಗಿ" ಎನಿಸಿಕೊಳ್ಳುವನು. ಈ ಪ್ರಾಣಲಿಂಗಿಯ ಮಧ್ಯದಲ್ಲ ವಾಯು ತತ್ವದ ಉದಯವಾಗುವದು. ಇದಕ್ಕೆ ಅಮೂರ್ತಸಾದಾಖ್ಯವೆನ್ನುವರು. ಆದಿ ಶಕ್ತಿಯಿಂದುದಯವಾದ ಇಚ್ಛಾಶಕ್ತಿಯ ಸಂಗದಿಂದ ಆ ಪರಶಿವ ತತ್ವವು ಶಿವಲಿಂಗವಾದಾಗ ಅಂಗನು 'ವಿದ್ಯಾ' ಎಂಬ ಕಲೆಯಿಂದುದಯಿಸಿ ಆ ಶಿವ ಲಿಂಗಕ್ಕಾಶ್ರಯವಾಗಿ 'ಪ್ರಸಾದಿ' ಯನಿಸಿಕೊಳ್ಳುವನು. ಈ ಪ್ರಸಾದಿಯ ಮಧ್ಯದಲ್ಲಿ ಅಗ್ನಿ ತತ್ವದ ಉದಯವಾಗುವದು. ಇದಕ್ಕೆ ಮೂರ್ತಿಸಾದಾಖ್ಯವೆನ್ನುವರು.

ಇಚ್ಛಾ ಶಕ್ತಿಯಿಂದುದಯವಾದ ಜ್ಞಾನಶಕ್ತಿಯ ಸಂಗದಿಂದ ಆ ಪರಶಿವ ತತ್ವವು "ಗುರುಲಿಂಗವಾದಾಗ" ಅಂಗನು 'ಪ್ರತಿಷ್ಠಾ' ಎಂಬ ಕಲೆಯಿಂದುದಯಿಸಿ ಆ ಗುರುಲಿಂಗಕ್ಕೆ ಆಶ್ರಯವಾಗಿ ಮಹೇಶ್ವರನೆನಿಸಿಕೊಳ್ಳುವನು. ಈ ಮಹೇಶ್ವರನ ಮಧ್ಯದಲ್ಲಿ ಜಲತತ್ವದ ಉದಯವಾಗುವದು. ಇದಕ್ಕೆ ಕರ್ತೃ ಸಾದಾಖ್ಯವೆನ್ನುವರು.

ಜ್ಞಾನಶಕ್ತಿಯಿಂದುದಯವಾದ ಕ್ರಿಯಾ ಶಕ್ತಿಯ ಸಂಗದಿಂದ ಆ ಪರಶಿವ ತತ್ವವು "ಆಚಾರಲಿಂಗ" ವಾದಾದ ಅಂಗನು 'ನಿವೃತ್ತಿ' ಎಂಬ ಕಲೆಯಿಂದುದಯಿಸಿ ಆಚಾರ ಲಿಂಗಕ್ಕೆ ಆಶ್ರಯನಾಗಿ ಭಕ್ತನೆನಿಸಿಕೊಳ್ಳುವನು. ಈ ಭಕ್ತನ ಮಧ್ಯದಲ್ಲಿ ಪೃಥವೀ ತತ್ವವು ಉದಯವಾಗುವದು. ಇದಕ್ಕೆ ಕರ್ಮ ಸಾದಾಖ್ಯವೆನ್ನುವರು. ಈ ಸೃಷ್ಟಿಯಲ್ಲಿ ಊರ್ಧ್ವಮುಖ ಸೃಷ್ಟಿ, ಅದೋಮುಖ ಸೃಷ್ಟಿ ಎಂದು ಎರಡು ವಿಧ. ಈ ಮೇಲೆ ಹೇಳಿದ್ದು ಊರ್ಧ್ವಮುಖ ಸೃಷ್ಟಿಯು. ಚತುರ್ಮುಖ ಬ್ರಹ್ಮನಿಂದ ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜ ಎಂಬುವ ಅಧೋಮುಖ ಸೃಷ್ಟಿಯಾಗುವದು.

CC-0. Jangamwadi Math Collection. Digitized by eGangotri

ವಿಶುದ್ಧಾಃ ಪ್ರಾಕೃತಾಶ್ಚೇತಿ ದ್ವಿವಿಧಾ ಮಾನುಷಾಃ ಸ್ಮೃತಾಃ ।
ಶಿವಸಂಸ್ಕಾರಿಣಃ ಶುದ್ಧಾಃ ಪ್ರಾಕೃತಾ ಇತರೇ ಮತಾಃ ॥

ಎಂದು ರೇಣುಕ ಭಗವತ್ಪಾದರು 'ಸಿದ್ಧಾಂತಶಿಖಾಮಣಿ' ಯಲ್ಲಿ ಪ್ರಾಕೃತ ಸೃಷ್ಟಿ ಅಪ್ರಾಕೃತ ಸೃಷ್ಟಿ ಎಂದು ಎರಡು ವಿಧವಾಗಿ ವಿಂಗಡಿಸಿರುವರು.

## ಸಾಧನ ಮಾರ್ಗ

ವೀರಶೈವ ಸಿದ್ಧಾಂತದಲ್ಲಿ ಸಾಧನಗಳು ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಎಂದು ಮೂರು ಇರುತ್ತವೆ. ಲಿಂಗಾಂಗ ಸಾಮರಸ್ಯವನ್ನು ಒಂದು ಮೂರ್ತಿ ಮತ್ತಾದ ವಸ್ತುವೆಂದು ಭಾವಿಸಿಕೊಂಡಾಗ ಆ ಮೂರ್ತಿಗೆ ಅಂಗವು (ಶರೀರವು) ಪ್ರಾಣವು ಮತ್ತು ಆತ್ಮನು ಹೇಗೆ ಅತ್ಯಾವಶ್ಯಕವಾದವುಗಳೋ ಹಾಗೇ ಸಿದ್ಧಾಂತಕ್ಕೂ ಅಷ್ಟಾವರಣಗಳು ಅಂಗವಾಗಿಯೂ, ಪಂಚಾಚಾರಗಳು ಪ್ರಾಣವಾಗಿಯೂ ಷಟ್-ಸ್ಥಲಗಳು ಆತ್ಮವಾಗಿಯೂ ಇರುತ್ತವೆ. ಅಂಗಗಳಾದ ಅಷ್ಟಾವರಣಗಳಲ್ಲಿ ಉಪಾಸ್ಯ ಸಾಧನ ಸ್ಥಲ ಎಂದು ಅವಾಂತರ ಮೂರು ಭಾಗವಿರುತ್ತದೆ. ಗುರು, ಲಿಂಗ, ಜಂಗಮ ಇವು ಉಪಾಸ್ಯಗಳು. ಭಸ್ಮ, ರುದ್ರಾಕ್ಷಿ, ಮಂತ್ರ ಇವು ಲಿಂಗಾಂಗ ಸಾಮರಸ್ಯದ ಸಾಧನಗಳು. ಪಾದೋದಕ, ಪ್ರಸಾದ ಇವೆರಡು ಲಿಂಗಾಂಗ ಸಾಮರಸ್ಯವನ್ನು ಕೃತಿಯಲ್ಲಿ ತಂದು ತೋರಿಸುತ್ತ ಫಲರೂಪಗಳಾಗಿರುವವು. ಆದರೆ ಇಲ್ಲಿ ಕೆಲವರು ಭಸ್ಮ, ರುದ್ರಾಕ್ಷಿ, ಮಂತ್ರ ಇವುಗಳನ್ನು ಗುರುಲಿಂಗ ಜಂಗಮರ ಪೂಜಾ ಸಾಧನಗಳೆಂದೂ ಪಾದೋದಕ ಪ್ರಸಾದಗಳನ್ನು ಗುರುಲಿಂಗ ಜಂಗಮರ ಪೂಜಾ ಫಲಗಳೆಂದೂ ತಪ್ಪು ತಿಳುವಳಿಕೆಯುಳ್ಳವರಾಗಿರುವರು ಏಕೆಂದರೆ ಅಷ್ಟಾವರಣಗಳಲ್ಲಿ ಎಂಟು ಆವರಣಗಳಿಗೂ ಪ್ರಾಧಾನ್ಯತೆ ಇರಬೇಕಾಗುತ್ತದೆ. ಗುರುಲಿಂಗ ಜಂಗಮರ ಪೂಜಾ ಸಾಧನಗಳೆಂದು ಭಸ್ಮ ರುದ್ರಾಕ್ಷಿ ಮಂತ್ರಗಳಿಗೆ ಹೇಳಿದರೆ ಅವುಗಳ ಪ್ರಾಮುಖ್ಯತೆಯು ನಷ್ಟವಾಗುವದು. ಇದಲ್ಲದೆ ಗುರು ಲಿಂಗ ಜಂಗಮರ ಪೂಜೆಗೆ ಜಲ, ಗಂಧಾಕ್ಷತ, ಧೂಪ, ದೀಪ, ನೈವೇದ್ಯಾದಿ ಸಾಮಗ್ರಿಗಳೆಲ್ಲವೂ ವಿಫಲಗಳಾಗಬೇಕಾಗುತ್ತವೆ. ಆದ್ದರಿಂದ ಭಸ್ಮ, ರುದಾಕ್ಷಿ, ಮಂತ್ರಗಳು ಲಿಂಗಾಂಗ ಸಾಮರಸ್ಯದ ಸಾಧನಗಳು ಮಾತ್ರ ಆಗಿರುವವು. ಇದರಂತೆ ಪಾದೋ-ಪ್ರಸಾದ ಇವೆರಡನ್ನು ಗುರುಲಿಂಗ ಜಂಗಮರ ಪೂಜಾಫಲಗಳೆಂದೂ ಭಾವಿಸುವದು ಸರಿಯಾದುದಲ್ಲ. ಏಕೆಂದರೆ ಹಾಗೆ ಭಾವಿಸಿದರೆ ಗುರು ಜಂಗಮರ ಸಾನ್ನಿಧ್ಯದಲ್ಲಿ ಲಿಂಗಪೂಜೆಯ ಅವಶ್ಯಕತೆಯೇ ಉಳಿಯದಂತಾದೀತು, ಮತ್ತು ಅಷ್ಟಾವರಣಗಳಲ್ಲಿ ಅವೆರಡು ಸೇರಬಾರದಾದೀತು. ಸಾಧನವರ್ಗದಲ್ಲಿ ಫಲವು ಸೇರುವದಿಲ್ಲ. ಏಕೆಂದರೆ ಫಲವು ಸಾಧನದಿಂದ ಸಂಪಾದಿಸತಕ್ಕದ್ದಿರುತ್ತದೆ. ಆದಕಾರಣ ಪಾದೋದಕ ಪ್ರಸಾದಗಳನ್ನು ಗುರುಲಿಂಗ ಜಂಗಮರ ಪೂಜಾಫಲವೆಂದು ಭಾವಿಸಿ ಲಿಂಗಪೂಜೆ

CC-0. Jangamwadi Math Collection. Digitized by eGangotri

ಯನ್ನೇ ತ್ಯಾಗಮಾಡಿ ಪಾದೋದಕ ಪ್ರಸಾದಗಳನ್ನಷ್ಟೇ ತೆಗೆದುಕೊಳ್ಳುವದು ಯುಕ್ತವಾದುದಲ್ಲ. ಆದರೆ ಗುರುಜಂಗಮರಿಗೆ ತೊಂದರೆಯಾಗದಂತೆ ತಮ್ಮ ತಮ್ಮ ಲಿಂಗ ಪೂಜಾಕಾರ್ಯವನ್ನು ಪೂರ್ವದಲ್ಲಿಯೇ ಪೂರೈಸಿಕೊಂಡಿರಬೇಕು. ವಸ್ತುತಃ ಈ ಪಾದೋದಕ ಪ್ರಸಾದಗಳು ಲಿಂಗಾಂಗ ಸಾಮರಸ್ಯದ ಫಲಗಳಾಗಿರುತ್ತವೆ. "ಸರ್ವಂ ಖಲ್ವಿದಂ ಬ್ರಹ್ಮ" ಎಂದು ಕೇವಲ ಮಾತಿನಲ್ಲಿ ಬ್ರಹ್ಮವನ್ನು ಹೇಳುವ ವೇದಾಂತಿಗಳಂತೆ ವೀರಶೈವ ಸಿದ್ಧಾಂತವು ಮಾತಿನ ಮಾಲೆಯದಲ್ಲ. ಕೃತಿಯಲ್ಲಿಯೂ ಅಂಗಲಿಂಗಗಳಿಗೂ ಗುರುಶಿಷ್ಯರಿಗೂ ಜಂಗಮ ಭಕ್ತರಿಗೂ ಅಭೇದವಿರುವದೆಂಬುದನ್ನು ಪಾದೋದಕ ಪ್ರಸಾದಗಳು ಸ್ಪಷ್ಟವಾಗಿ ತೋರಿಸುತ್ತವೆ. ಆದ್ದರಿಂದ ಈ ಪಾದೋದಕ ಪ್ರಸಾದಗಳು ಲಿಂಗಾಂಗ ಸಾಮರಸ್ಯದ ಫಲರೂಪ ಸಾಧನಗಳೆಂದೂ ತಿಳಿಯತಕ್ಕದ್ದು. ಅಷ್ಟಾವರಣಗಳಲ್ಲಿಯೂ ಸಾಧನತಾ ಧರ್ಮವೂ ಸಮಾನವಾದುದಾಗಿರುತ್ತದೆ. ಲಿಂಗಾಂಗ ಸಾಮರಸ್ಯ ಸಂಪಾದನ ಕಾರ್ಯದಲ್ಲಿ ಗುರು, ಲಿಂಗ, ಜಂಗಮ ಈ ಮೂರು ಉಪಾಸ್ಯಗಳಾಗಿ (ಪೂಜಾ ಮಾಡಿಸಿಕೊಳ್ಳುತ್ತ) ಸಾಧನಗಳಾಗಿವೆ. ಭಸ್ಮ, ರುದ್ರಾಕ್ಷಿ, ಮಂತ್ರ ಇವು ಮೂರು ಸಹಜವಾಗಿ ಲಿಂಗಾಂಗ ಸಾಮರಸ್ಯದ ಸಾಧನಗಳಾಗಿವೆ. ಪಾದೋದಕ ಪ್ರಸಾದಗಳು ಲಿಂಗಾಂಗ ಸಾಮರಸ್ಯವನ್ನು ಕೃತಿಯಲ್ಲಿ ತೋರಿಸುವ ಫಲರೂಪ ಸಾಧನಗಳಾಗಿವೆ. ಶರೀರವನ್ನಾಶ್ರಯಿಸದಲೇ ಪ್ರಾಣವಾಗಲಿ ಆತ್ಮನಾಗಲಿ ಇರಲಿಕ್ಕೆ ಸಾಧ್ಯವಿಲ್ಲ. ಪ್ರಾಣವಿಲ್ಲದ ಹಾಗೂ ಆತ್ಮನಿಲ್ಲದ ಶರೀರವು ವ್ಯರ್ಥವಾಗುವದು. ಆದುದರಿಂದ ಈ ಮೂರರ ಸಮಷ್ಟಿಯು ಫಲಕಾರಿಯಾಗುವಂತೆ ಅಷ್ಟಾವರಣ, ಪಂಚಾಚಾರ, ಷಟಸ್ಥಲ ಈ ಮೂರು ಸೇರಿಯೇ ಸಾಮರಸ್ಯರೂಪ ಫಲವನ್ನುಂಟು ಮಾಡುವವು.

## ಪಂಚಾಚಾರಗಳು

ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ ಎಂದು ಆಚಾರಗಳು ಐದು ಇರುತ್ತವೆ. ಈ ಪಂಚಾಚಾರಗಳ ಸ್ವರೂಪವನ್ನು ಸಂಕ್ಷೇಪವಾಗಿ ವಿವರಿಸುವೆವು. ಲಿಂಗಾಚಾರವೆಂದರೆ ಆಜ್ಞಾ, ಉಪಮಾ, ಕಲಶಾಭಿಷೇಕ, ಸ್ವಸ್ತಿಕಾರೋಹಣ, ವಿಭೂತಿಪಟ್ಟ, ಆಯತ್ತ, ಸ್ವಾಯತ್ತ ಎಂಬ ಏಳು ಅವಾಂತರ ಭೇದಗಳಿಂದ ಕೂಡಿದ ಕ್ರಿಯಾದೀಕ್ಷೆಯಿಂದಲೂ, ಸಮಯ, ಅಸಂಸಾರ, ತತ್ತ್ವಜ್ಞಾನ, ಅನುಗ್ರಹ, ಆಧ್ಯಾತ್ಮ, ಶುದ್ಧವಿದ್ಯಾ ಎಂಬ ಏಳು ಅವಾಂತರ ಭೇದಗಳಿಂದ ಕೂಡಿದ ವೇಧಾದೀಕ್ಷೆಯಿಂದಲೂ, ದೃಢವ್ರತ, ಅಹಿಂಸಾ, ಪಂಚೇಂದ್ರಿಯಾರ್ಪಣ, ಏಕಾಗ್ರ ಚಿತ್ತ, ಪರತತ್ವನಿಷ್ಠಾ, ಲಿಂಗಮನೋಲಯ, ಸದ್ಯೋಮುಕ್ತಿ ಎಂಬ ಏಳು ಅವಾಂತರ ದೀಕ್ಷೆಗಳಿಂದ ಕೂಡಿದ ಮಂತ್ರ ದೀಕ್ಷೆಯಿಂದಲೂ ಶ್ರೀ ಗುರುವಿನಿಂದ ಪ್ರಾಪ್ತವಾದ ಇಷ್ಟಲಿಂಗಕ್ಕಿಂತಲೂ ಶ್ರೇಷ್ಠವಾದ ದೈವವು ಈ

CC-0. Jangamwadi Math Collection. Digitized by eGangotri

ಪ್ರಪಂಪಚದಲ್ಲಿಯೇ ಇಲ್ಲವೆಂದು ತಿಳಿದು ಅದರ ಪೂಜಾಧ್ಯಾನಾದಿಗಳಲ್ಲಿ ನಿರತ-ನಾಗುವದೇ ಲಿಂಗಾಚಾರವು. ಸದಾಚಾರವೆಂದರೆ ಅಂಕುರಶೀಲ, ಉತ್ಪನ್ನಶೀಲ, ದ್ವಿದಲಶೀಲ, ಪ್ರವೃದ್ಧಶೀಲ, ಸಪ್ರಕಾಂಡಶೀಲ, ಸಶಾಖಶೀಲ, ಸವುಷ್ಟಿಶೀಲ, ಸಫಲಶೀಲ ಎಂಬ ಎಂಟು ವಿಧ ಶೀಲಗಳಿಂದ ತನ್ನ ಶರೀರವಿರುವವರೆಗೂ ಜ್ಞಾನಿ-ಯಾದವನೂ ಸಹ ಆಚಾರವಂತನಾಗಿಯೇ ಇದ್ದು ಧರ್ಮದಿಂದ ಸಂಗ್ರಹಿಸಿದ ಹಣದಿಂದ ಗುರುಲಿಂಗ ಜಂಗಮರನ್ನು ನಿತ್ಯದಲ್ಲಿ ಪೂಜಿಸುವದಕ್ಕೆ ಸದಾಚಾರ ವೆನ್ನುವರು. ಎಂಥ ಜ್ಞಾನವಂತನಾದರೂ ಶರೀರ ಪಾತವಾಗುವವರೆಗೆ ಆಚಾರ ವನ್ನು ಬಿಡದಿರುವದೇ ಮುಖ್ಯವಾದುದು. ಆಚಾರವೇ ಪ್ರಾಣ, ಆಚಾರವೇ ತಪಸ್ಸು. ಶಿವಾಚಾರ: ಸೃಷ್ಟಿ, ಸ್ಥಿಲ, ಲಯ, ನಿಗ್ರಹ, ಅನುಗ್ರಹ ಎಂಬ ಪಂಚ ಕೃತ್ಯ-ಗಳುಳ್ಳ ಪರಶಿವನೇ ಪರಬ್ರಹ್ಮವೆಂದೂ ಶಿವನ ಹೊರತು ಬೇರೆ ಗತಿಯಿಲ್ಲವೆಂದೂ ಪ್ರಪಂಚವೆಲ್ಲ ಶಿವಮಯವಾಗಿರುವದೆಂದೂ ತಿಳಿದು ಗೃಹ, ಕ್ಷೇತ್ರ, ದ್ರವ್ಯಾದಿ-ಷೋಡಶ ಪದಾರ್ಥಗಳ ಪರಿಶುದ್ಧಪೂರ್ವಕವಾಗಿ ಆಚರಿಸುವದೇ ಶಿವಾಚಾರವು. ಗಣಾಚಾರ-ಶಿವನ ಶಿವಾಲಯಾದಿಗಳ, ಶಿವಭಕ್ತರ, ಶಿವಧರ್ಮಾದಿಗಳ ನಿಂದೆಯನ್ನು ಕೇಳದೇ ೬೪ ಶೀಲಗಳಿಂದ ಪರಿಪೂರ್ಣನಾಗಿ ಆಚರಿಸುವದೇ ಗಣಾಚಾರವು. ಭೃತ್ಯಾಚಾರ—ಈ ಭೂಮಂಡಲದಲ್ಲಿರುವ ಪರಶಿವ ಭಕ್ತರೆಲ್ಲರೂ ಶ್ರೇಷ್ಠರು; ನಾನು ಅವರ ಸೇವಕನು ಎಂದು ಭಾವಿಸಿ ಗುರುವಿಗೆ ತನುವನ್ನು, ಲಿಂಗಕ್ಕೆ ಮನವನ್ನು, ಜಂಗಮಕ್ಕೆ ಧನವನ್ನು ಪರಮಾನಂದದಿಂದ ಸಮರ್ಪಿಸಿ ಕೈಂಕರ್ಯಭಾವ ದಿಂದುರುವುದೇ ಭೃತ್ಯಾಚಾರವು. ಈ ಪಂಚಾಚಾರಗಳ ಪೂರ್ಣ ಜ್ಞಾನ ಮಾಡಿ-ಕೊಳ್ಳಬೇಕೆನ್ನುವವರು ಚಂದ್ರಜ್ಞಾನಾಗಮದ ಒಂಭತ್ತನೆಯ ಪಟಲವನ್ನು ಚನ್ನಾಗಿ ನೋಡಿ ತಿಳಿದುಕೊಳ್ಳಬೇಕು.

## ಷಟ್‌ಸ್ಥಲಗಳು

ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂದು ಆರು ಸ್ಥಲ ಗಳಿದುತ್ತವೆ. ಉಪಾಸ್ಯರಾದ ಗುರು, ಲಿಂಗ, ಜಂಗಮರಲ್ಲಿ ಕಿಂಕರತ್ವವನ್ನು ಹೊಂದಿ ಗುರುವಿಗೆ ತನವನ್ನು, ಲಿಂಗಕ್ಕೆ ಮನವನ್ನು, ಜಂಗಮಕ್ಕೆ ಧನವನ್ನು ನಿರ್ವಂಚನೆ ಯಿಂದ ಸಮರ್ಪಿಸಿ ಆ ಗುರು, ಲಿಂಗ, ಜಂಗಮರಿಂದ ಪ್ರಾಪ್ತವಾಗುವ ಜನನ ಮರಣರೂಪ ಸಂಸಾರ ನಾಶಕವಾದ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದಗಳನ್ನು ಭೋಗಿಸುವ ಸೌಖ್ಯದಿಂದ ಪರಿಪೂರ್ಣನಾಗಿ; ಜಂಗಮವೇ ಲಿಂಗಮುಖವೆಂದು ನಿಃಸಂಶಯನಾಗಿ ಭಾವಿಸಿ ಧನ, ಕನಕ, ವಸ್ತ್ರ, ವಾಹನ ಅಲಂಕರಣಾದಿ ಪದಾರ್ಥ ಗಳನ್ನು ಸಮರ್ಪಿಸಿ ಭಸ್ಮ, ರುದ್ರಾಕ್ಷಿ, ಕಾವಿ, ಲಿಂಗ ಮುಂತಾದ ವೀರಶೈವ ಚಿಹ್ನೆಗಳನ್ನು ಧರಿಸಿದವರಲ್ಲಿ ಅಸಾಧಾರಣ ಭಕ್ತಿ ಭಾವವನ್ನು ತೋರ್ಪಡಿಸುವದೇ ಭಕ್ತಸ್ಥಲದ ಲಕ್ಷಣವು.

CC-0. Jangamwadi Math Collection. Digitized by eGangotri

ಮಹೇಶ್ವರ ಸ್ಥಲ:- ಪರಸ್ತ್ರೀ, ಪರದ್ರವ್ಯ, ಪರಹಿಂಸೆ ಮೊದಲಾದವುಗಳನ್ನು ಬಹುದೂರದಲ್ಲಿ ತ್ಯಜಿಸಿ; ಸಪ್ತಸಾಗರಗಳೊಂದಾಗಿ, ಮೇರೆದಪ್ಪಿದರೂ, ಸಪ್ತಕುಲ ಪರ್ವತಗಳು ಗಡ, ಗಡನೆ ನಡುಗಿದರೂ, ಭೂಮಿಯು ಪಾತಾಳಕ್ಕೆ ಇಳಿದರೂ, ಆಕಾಶವು ಹರಿದರೂ, ಸೂರ್ಯ-ಚಂದ್ರರು ನೆಲಕ್ಕೆ ಉರುಳಿದರೂ, ದಶದಿಕ್ಕುಗಳು ಬಿದ್ದರೂ, ಎಂಥ ಅಘಟಿತ ಕಾರ್ಯಗಳು ಘಟಿಸಿದರೂ ಕೂಡಾ ತನ್ನ ಲಿಂಗವ್ರತ ಸದಾಚಾರಗಳನ್ನು ದೇಹಾವಸಾನದ ವರೆಗೆ ಬಿಡದೆ ಆಚರಿಸುತ್ತ ಗುರುವಿನಿಂದ ಅನುಗ್ರಹಿಸಲ್ಪಟ್ಟ ಇಷ್ಟಲಿಂಗದಲ್ಲಿ ನಿಷ್ಠಾಪರನಾಗಿ ಅನ್ಯ ಸ್ಥಾವರಾದಿ ಲಿಂಗಗಳಲ್ಲಿ ನಿಷ್ಠೆಯನ್ನು ತೊರೆದು ಗುರುವಿನಿಂದ ಉಪದೇಶಿಸಲ್ಪಟ್ಟ ಜ್ಞಾನ, ಜ್ಞೇಯ, ಅನುಷ್ಠೇಯ, ಅಧಿಕಾರ, ಸಾಧನ, ಸಾಧ್ಯ ಎಂಬ ಆರು ಪ್ರಯೋಜನಗಳನ್ನು ಸಂಪಾದಿಸುವಲ್ಲಿ ಆಸಕ್ತಿಯುಳ್ಳವನಾಗಿ, ವ್ರತನಿಯಮೋಪವಾಸ ತೀರ್ಥಯಾತ್ರಾದಿ ಗಳನ್ನು ದೂರೀಕರಿಸಿ ಕರದಿಷ್ಟಲಿಂಗದಲ್ಲಿ ಮನೋಭಾವ ದೃಷ್ಟಿಗಳು ನಟ್ಟು ಸ್ವಕೀಯ ಶಿವತೇಜಸ್ಸಿನಲ್ಲಿ ವಿರಾಜಿಸುತ್ತಿರುವದೇ ಮಹೇಶ್ವರ ಸ್ಥಲದ ಲಕ್ಷಣವು. ಜ್ಞಾನವೆಂದರೆ:- ಗುರೂಪದಿಷ್ಟದಿಂದ ಶಿವಜ್ಞಾನ, ಜ್ಞೇಯವೆಂದರೆ ಅಂಗ, ಲಿಂಗ, ಭಕ್ತಿ, ಶಕ್ತಿ, ಮುಖ, ಹಸ್ತ, ಪದಾರ್ಥ, ಪ್ರಸಾದ ಎಂಬ ಎಂಟು ಪದಾರ್ಥಗಳು. ಅನುಷ್ಠೇಯವೆಂದರೆ ಲಿಂಗಪೂಜಾದಿಗಳು. ಅಧಿಕಾರವೆಂದರೆ ಭಸ್ಮ ರುದ್ರಾಕ್ಷಾದಿ ದೀಕ್ಷಾಸಂಪನ್ನತೆ. ಸಾಧನವೆಂದರೆ ಶಿವಮಂತ್ರ ಜಪಾದಿ. ಸಾಧ್ಯವೆಂದರೆ ಲಿಂಗಾಂಗ ಸಾಮರಸ್ಯ.

ಪ್ರಸಾದಿ ಸ್ಥಲ:- ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳಿಗೆ ಸಮರ್ಪಿಸು-ವದಕ್ಕೆ ಯೋಗ್ಯಗಳಾದ ರೂಪ, ರುಚಿ, ತೃಪ್ತಿಗಳನ್ನು ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯ, ಪೇಯಾದಿ ಸಮಸ್ತ ಪದಾರ್ಥಗಳನ್ನು ಗುರು-ಲಿಂಗ-ಜಂಗಮಕ್ಕೆ ಕಾಯ, ವಾಕ್ ಮನಸ್ಸುಗಳೆಂಬ ತ್ರಿಕರಣಪೂರ್ವಕವಾಗಿ ಅರ್ಪಣಾನುಸಂಧಾನ ಕ್ರಮ-ವನ್ನರಿತು ಸಮರ್ಪಿಸಿ ಗುರುವಿನಿಂದುಟಾದ ಶುದ್ಧ ಪ್ರಸಾದವನ್ನು, ಲಿಂಗದಿಂದಾದ ಸಿದ್ಧ ಪ್ರಸಾದವನ್ನು, ಜಂಗಮದಿಂದುಂಟಾದ ಪ್ರಸಿದ್ಧ ಪ್ರಸಾದವನ್ನು ನಿರಂತರವೂ ಪರಮ ಸಾವಧಾನ ಭಕ್ತಿಯಿಂದ ಸೇವಿಸುತ್ತ ಸಕಲೇಂದ್ರಿಯಗಳ ಉಪಟಳವಳಿದು ಸ್ಥಿರವಾದ ಮಹಾಜ್ಞಾನವು ಅಳವಟ್ಟು ನಿರ್ಮಲ ಹೃದಯದಿಂದ ಪ್ರಕಾಶಿಸುವದೇ ಪ್ರಸಾದಿಸ್ಥಲದ ಲಕ್ಷಣ.

ಪ್ರಾಣಲಿಂಗಿ ಸ್ಥಲ:- ದೇಹದ ಮೇಲಿರುವ ಇಷ್ಟಲಿಂಗವನ್ನು ಅಂತರಂಗಕ್ಕೆ ಪ್ರಾಣದೊಡನೆ ಹೊಂದಿಸುತ್ತ, ದೇಹದ ಗುಣಗಳೆಲ್ಲವನ್ನು ಕೆಡಿಸಿ, ಕರಣಗಳ ಗುಣ ಗಳನ್ನು ಅಡಗಿಸಿ, ಸಕಲ ವಿಷಯ ಸಮೂಹದೊಡನೆ ಬೆರಸದೇ, ಅಷ್ಟಮದಗಳ ಉಪಟಳವನ್ನು ನಿಲ್ಲಿಸಿ, ಅರಿಷಡ್ವರ್ಗಗಳನ್ನು ತೊಲಗಿಸಿ, ದಶವಾಯು ಗುಣ

CC-0. Jangamwadi Math Collection. Digitized by eGangotri

ಗಳನ್ನು ತಡೆದು, ಲಿಂಗವು ಪ್ರಾಣದಲ್ಲಿ ಒಡಗೂಡುವ ಹಾಗೆ ಪ್ರೀತಿಯೊಡನೆ ಸ್ವಾಯತವ ಮಾಡಲಾಗಿ ಪ್ರಾಣವೆಂಬುದು ಲಿಂಗದಿಂದ ವಿಸ್ತಾರವಾಗಿ ಬಾಹ್ಯ ಗುಣಗಳು ಅಡಗಿ, ನಿರ್ಮಾಯ ಭಾವವು ಅಳವಟ್ಟು, ಸಂಕಲ್ಪ ರಹಿತವಾಗಿರುವುದೆ ಪ್ರಾಣಲಿಂಗಿಯ ಲಕ್ಷಣವು.

**ಶರಣಸ್ಥಲ :–** ಇಂದ್ರಿಯಗಳ ದ್ವಾರಾ ಹುಟ್ಟುವ ವಿಷಯ ಸೌಖ್ಯವು ತನಗೆಂಬ ಭಾವನೆಯನ್ನು ಬಿಟ್ಟು, ಲಿಂಗವೇ ಪತಿ ತಾನೇ ಸತಿ ಎಂಬ ಭಾವವಳವಟ್ಟು ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವಗಳೆಂಬ ಎಂಟು ಸಿದ್ಧಿಗಳನ್ನು ತೃಣ ಸಮಾನವಾಗಿ ಭಾವಿಸಿ; ವಿಷ್ಣು ಬ್ರಹ್ಮೇಂದ್ರರ ಪದವಿಗಳನ್ನು ಲೆಕ್ಕಿಸದೆ ಸ್ವರ್ಗಾದಿಲೋಕಗಳ ಸುಖವನ್ನು ತಿರಸ್ಕರಿಸಿ ಘನಲಿಂಗದಲ್ಲಿ ಬೆರಸಿ ಪರಮ ಸೌಖ್ಯವನ್ನು ಹೊಂದಿ ಪರಿಪೂರ್ಣ ಭಾವದಿಂದ ತಾನು ತಾನಾಗಿ ಸಂಚರಿಸುವಾತನೂ, ತುಂಬಿಯು ಕುಸುಮದೊಳಗಿನ ಪರಿಮಳ ಮಕರಂದವನ್ನು ತನ್ನ ಬಾಯಿಂದ ಸೆಳೆದುಕೊಳ್ಳುವಾಗ ಆ ಕುಸುಮವನ್ನು ನೋಯಿ-ಸಿದ ಹಾಗೆ, ಸಕಲ ಸದ್ಭಕ್ತರ ಮನವು ನೋಯದಂತೆ ಭಿಕ್ಷೆಯನ್ನು ಬೇಡಿ, ಶಾಂತತೆ ಯಿಂದುಂಡು ಲಿಂಗ ಧ್ಯಾನವನ್ನು ಬಿಡದೆ ಸಂಭ್ರಮದಿಂದ ಸಂಚರಿಸುವಾತನೂ, ಅದು ಬೇಕು ಇದು ಬೇಕು ಎನ್ನುವ ಕೆಟ್ಟ ಮನದ ಕುತ್ಸಿತತನವನ್ನು ಬಿಟ್ಟು, ದೇಹಾದಿ ಸುಖಗಳನೆಲ್ಲವನೊದೆದು, ಅಹಂಕಾರ ಮಮಕಾರಗಳನ್ನು ಕಳೆದು, ಅನ್ಯರ ಗುಣವನ್ನು ವಾಕ್ಕುಮನ ಕಾಯಗಳೆಂಬ ತ್ರಿಕರಣಗಳಲ್ಲಿ ಹುಡುಕದ ತನ್ನ ಅಂತರಂಗದಲ್ಲಿ ಚಿನ್ನಿಧಿಯಾದ ಘನಲಿಂಗದ ಜ್ಞಾನವೇ ಅತಿಶಯವಾಗಿ ಬಲಿತು ಸಹೃದಯರಲ್ಲಿ ಗೋಷ್ಠಿಯನ್ನು ಮಾಡುತ್ತಾ ವರ್ತಿಸುತ್ತಿರುವದೇ ಶರಣಸ್ಥಲದ ಲಕ್ಷಣವು.

**ಐಕ್ಯಸ್ಥಲ :–** ದೇಹಧರ್ಮಗಳಾದ ಅಸ್ತಿ (ಇರುತ್ತದೆ), ಜಾಯತೇ (ಹುಟ್ಟು ತ್ತದೆ) ವಿವರ್ಧತೇ, (ಬೆಳೆಯುತ್ತದೆ) ವಿಪರಿಣಮತೆ (ಪರಿಣಮಿಸುತ್ತದೆ) ಉಪಕ್ಷೀಯತೆ (ಕ್ಷೀಣವಾಗುತ್ತದೆ), ವಿನಶ್ಯತಿ (ನಷ್ಟವಾಗುತ್ತದೆ) ಎಂಬೀ ಷಡೂರ್ಮಿಗಳನ್ನು ತ್ಯಜಿಸಿ ಕಾಮಾದ್ಯರಿಷಡ್ವರ್ಗಗಳ ಸುಳುವಿಲ್ಲದೆ, ನೀರು ನೀರಿನಲ್ಲಿ ಹಾಲು ಹಾಲಿನಲ್ಲಿ ಸಮರಸವಾಗಿ ಬೆರೆದ ಹಾಗೆ ಶಿಖಿ ಕರ್ಪೂರಗಳ ಸಂಯೋಗದಂತೆ ಲಿಂಗದಲ್ಲಿ ತಾನು ಸಮರಸವಾಗಿ ಕೂಡಿ, ತಾನೆಂಬುದನ್ನು ಅಳಿದು, ಆ ಮನೋಹರವಾದ ಲಿಂಗಭಾವ ವಳವಟ್ಟು ತನಗೆ ಶಿವಲಿಂಗವೂ ಶಿವಲಿಂಗಕ್ಕೆ ತಾನು ನಿಲುಕಡೆಯ ಸಾಧನವೆಂದು ತಿಳಿದು ಸ್ವಸ್ವರೂಪ ಜ್ಞಾನದಿಂದ ಭೇದ ಪ್ರತೀತಿಯಡಗಿ ಸಕಲ ಜಗತ್ತು ಶಿವಮಯ ವಾಗಿ ತೋರುತ್ತಿರುವದರಿಂದ ಪ್ರಪಂಚವನ್ನು ಬಾಹ್ಯವಾದುದೆಂದು ಪರಿಭಾವಿಸದೆ ನಾನು ನೀನು ಎಂಬ ಭೇದಭಾವವು ಅಳಿದುಹೋಗಿ, ಶಿವತತ್ವ ರೂಪವಾಗಿ ನಿಲ್ಲು-ವದೇ ಐಕ್ಯಸ್ಥಲದ ಲಕ್ಷಣವು.

CC-0. Jangamwadi Math Collection. Digitized by eGangotri

## ಉಪಸಂಹಾರ

ಶಂಕರಾಚಾರ್ಯರ ಅದ್ವೈತ ಸಿದ್ಧಾಂತದಲ್ಲಿ ಬ್ರಹ್ಮವು ನಿರ್ವಿಶೇಷವಾದುದು ಬ್ರಹ್ಮದಲ್ಲಿ ಯಾವ ವಿಶೇಷಣವೂ ಇರುವದಿಲ್ಲ. ಆದುದರಿಂದ ಶಾಂಕರಾದ್ವೈತಕ್ಕೆ ನಿರ್ವಿಶೇಷಾದ್ವೈತವೆಂದು ಹೆಸರು. ಇಂಥ ನಿರ್ವಿಶೇಷಬ್ರಹ್ಮದಿಂದ ಸವಿಶೇಷವಾದ ಜಗತ್ತಿನ ಉತ್ಪತ್ತಿ ಹೇಗೆ ಆಗುವದು? ಎಂಬ ಪ್ರಶ್ನೆ ಬಂದಾಗ ಶಂಕರಾಚಾರ್ಯರು ಮಾಯೆಯನ್ನು ಕಲ್ಪಿಸಿ ಆ ಮಾಯೆಗೆ ಅವಿದ್ಯಾ ಎಂದು ಕರೆದಿರುವರು. ಅವಿದ್ಯಾ ರೂಪವಾದ ಮಾಯೆಯು ಸತ್ ಎಂದಾಗಲಿ, ಅಸತ್ ಎಂದಾಗಲಿ, ಸದಸತ್ ಎಂದಾಗಲಿ ಹೇಳಲಿಕ್ಕೆ ಬಾರದಿರುವದರಿಂದ ಅದಕ್ಕೆ "ಅನಿರ್ವಚನೀಯ" ಎಂದು ಹೇಳುವರು. ಅನಿರ್ವಚನೀಯವಾದ ಮಾಯೆಯೇ ಜಗತ್ತಿಗೆ ಉಪಾದಾನಕಾರಣ ಬ್ರಹ್ಮವು ನಿಮಿತ್ತಕಾರಣ. ಬ್ರಹ್ಮ ಒಂದೇ ಸತ್ಯವಾದುದು. ಜಗತ್ತು ಮಿಥ್ಯವಾದುದು. ಜೀವವು ಸ್ವತಂತ್ರ ವಸ್ತುವಲ್ಲ ಎಂಬುದು ಇವರ ಮತದ ಸೂಕ್ಷ್ಮ ಸ್ವರೂಪ. ಈ ಶಾಂಕರಮತ ಸಿದ್ಧಾಂತಕ್ಕೆ ರಾಮಾನುಜರೇ ಮೊದಲಾದ ವೈಷ್ಣವ ಸಂಪ್ರದಾಯ ದವರು ವಿರುದ್ಧವಾಗಿ ಹೇಳುವರು. ಇವರೆಲ್ಲರ ಮತದಲ್ಲಿ ಬ್ರಹ್ಮವು ಸವಿಶೇಷ-ವಾದುದು, ಮಾಯೆಯು ಬ್ರಹ್ಮದಲ್ಲಿರುವ ಜಗದುತ್ಪತ್ತಿಗೆ ಕಾರಣೀಭೂತವಾದ ಬೀಜಶಕ್ತಿಯು, ಈ ಜಗತ್ತು ಸತ್ಯವಾದುದು ನಿತ್ಯವಾದುದು ಆಗಿದೆ ಎಂದು ಹೇಳುವರು. ವೀರಶೈವ ಸಿದ್ಧಾಂತದಲ್ಲಿ ಪರಶಿವ ಬ್ರಹ್ಮವು ಅವಿನಾಭಾವ ಸಂಬಂಧ ದಿಂದ ಶಕ್ತಿವಿಶಿಷ್ಟವಾದುದರಿಂದ ಸವಿಶೇಷವಾಗಿರುವುದು. ಸವಿಶೇಷವಾದುದ-ರಿಂದಲೇ ಚರಾಚರಾತ್ಮಕವಾದೀಜಗದುತ್ಪತ್ತಿಗೆ ನಿಮಿತ್ತೋಪಾದಾನಕಾರಣವಾಗಿ-ರುವದು. ನಿತ್ಯವಾದ ಪರಶಿವಬ್ರಹ್ಮದಲ್ಲಿ ಅವಿಚ್ಛಿನ್ನವಾಗಿ ಯಾವಾಗಲೂ ಇರುವ ಶಕ್ತಿಯು ನಿತ್ಯವಾದುದೂ ಸತ್ಯವಾದುದೂ ಆಗಿದೆ. ಇಂಥ ಶಕ್ತಿವಿಶಿಷ್ಟಪರಶಿವ-ಬ್ರಹ್ಮದಿಂದುತ್ಪನ್ನವಾದ ಜಗತ್ತೂ ಸಹ ಶಕ್ತಿ ವಿಶಿಷ್ಟವಾಗಿರುವದು. ಈ ಜಗತ್ತಿ-ನಲ್ಲಿರತಕ್ಕ ಪ್ರತಿಯೊಂದು ಪದಾರ್ಥವನ್ನೂ ಪರ್ಯಾಲೋಚಿಸಿದ್ದಾದರೆ, ಪ್ರತಿ ಯೊಂದು ಪದಾರ್ಥದಲ್ಲಿಯೂ ಒಂದೊಂದು ವಿಧವಾದ ಶಕ್ತಿಯಿರುವುದಾಗಿ ಕಂಡು ಬರುವದು. ಪೃಥ್ವಿಯಲ್ಲಿ ಧಾರಣ ಶಕ್ತಿಯೂ, ಜಲದಲ್ಲಿ ಆಪ್ಯಾಯನ ಶಕ್ತಿಯೂ, ತೇಜಸ್ಸಿನಲ್ಲಿ ಜ್ವಲನ ಶಕ್ತಿಯೂ, ವಾಯುವಿನಲ್ಲಿ ಸ್ಪಂದನ ಶಕ್ತಿಯೂ, ಆಕಾಶದಲ್ಲಿ ವ್ಯಾಪನ ಶಕ್ತಿಯೂ, ಆತ್ಮನಲ್ಲಿ ಬುದ್ಧಿಶಕ್ತಿಯೂ, ಇರುವದು. ಮತ್ತು ವೃಕ್ಷಾದಿ ಗಳಲ್ಲಿ ಜಲಾಕರ್ಷಣಾದಿ ಶಕ್ತಿಯೂ, ವನಸ್ಪತಿಗಳಲ್ಲಿ ಮಹಾಮಹಾ ರೋಗಗಳನ್ನು ಗುಣಪಡಿಸುವ ಶಕ್ತಿಯೂ, ಪಾದರಸದಲ್ಲಿ ತಾಮ್ರವನ್ನು ಸುವರ್ಣವನ್ನಾಗಿ ಮಾಡುವ ಶಕ್ತಿಯೂ, ವಜ್ರದಲ್ಲಿ ಕಲ್ಲನ್ನು ಸೀಳುವ ಶಕ್ತಿಯೂ, ಮಣಿಮಂತ್ರಾದಿ ಗಳಲ್ಲಿ ಭೂತಪ್ರೇತಪಿಶಾಚಾದಿಗಳಿಂದುಂಟಾಗುವ ಬಾಧೆಯನ್ನು ಪರಿಹರಿಸುವ ಶಕ್ತಿಯೂ, ಧ್ವನ್ಯಾಕರ್ಷಕ ಯಂತ್ರ (ರೇಡಿಯೋ) ದಲ್ಲಿ ಧ್ವನಿಯನ್ನು ಆಕರ್ಷಿಸಿ

CC-0. Jangamwadi Math Collection. Digitized by eGangotri

ಆವನ್ನು ವಿಸ್ತಾರಗೊಳಿಸುವ ಶಕ್ತಿಯೂ, ವಿದ್ಯುತ್ತಿನಲ್ಲಿ ನಾನಾವಿಧ ಯಂತ್ರಚಲನ ಶಕ್ತಿಯೂ, ಸೂಜಿಗಲ್ಲಿನಲ್ಲಿ ಸೂಜಿಯನ್ನು ಆಕರ್ಷಿಸುವ ಶಕ್ತಿಯೂ, ಶಿಂಗಳೀಕ ಪ್ರಾಣಿಯಲ್ಲಿ ವಿಷವನ್ನು ಪರೀಕ್ಷಿಸುವ ಶಕ್ತಿಯೂ, ಇರುವೆಗಳಲ್ಲಿ ಗಿಡದ ಮೂಲ (ಬೊಡ್ಡೆ) ಯನ್ನು ಆಘ್ರಾಣಿಸಿ ಮರದ ತುದಿಯಲ್ಲಿರುವ ಫಲವನ್ನು ಕಂಡುಹಿಡಿಯುವ ಶಕ್ತಿಯೂ, ಒಂಟಿಯಲ್ಲಿ ಶ್ವಾಸದ್ವಾರಾಹಾರವನ್ನು ಆಕರ್ಷಿಸುವ ಶಕ್ತಿಯೂ ಕಿಂ ಬಹುನಾ, ಇದೇ ರೀತಿಯಾಗಿ ಸಕಲ ಪದಾರ್ಥಗಳಲ್ಲಿಯೂ ಒಂದೊಂದು ವಿಧವಾದ ಶಕ್ತಿಯು ಇರುವದು ಲೋಕದಲ್ಲಿ ಪ್ರತಿಯೊಬ್ಬರಿಗೂ ಪ್ರತ್ಯಕ್ಷವಾಗಿ ಕಂಡುಬರುವದು. ಅರ್ಥಾತ್ ಸಕಲ ಚರಾಚರಾತ್ಮಕವಾದ ಜಗತ್ತು ಶಕ್ತಿವಿಶಿಷ್ಟವಾಗಿರುವದೆಂದೂ, ಇಂಥ ಶಕ್ತಿವಿಶಿಷ್ಟ ಜಗತ್ತನ್ನು ಪ್ರಕಾಶಪಡಿಸಿದ ಪರಶಿವಬ್ರಹ್ಮವು ಶಕ್ತಿವಿಶಿಷ್ಟವಾದು-ದೆಂದು ಸರ್ವರಿಗೂ ಅನುಭವದಿಂದಲೇವೇದ್ಯ ವಾಗುತ್ತಿದೆ. ಸಚ್ಚಿದಾನಂದ ಸ್ವರೂಪ ವಾದ ಪರಶಿವಬ್ರಹ್ಮವು "ಅಸ್ಮಿ, ಪ್ರಕಾಶೇ, ನಂದಾಮಿ" ಅಂದರೆ "ನಾನು ಇದ್ದೇನೆ ಪ್ರಕಾಶಿಸುತ್ತೇನೆ, ಆನಂದಿಸುತ್ತೇನೆ" ಎಂಬ ಅನುಭವದಿಂದ ಕೂಡಿರುವುದಲ್ಲವೇ ? ಈ ಅನುಭವವೇ ಪರಶಿವಬ್ರಹ್ಮದಲ್ಲಿ ವಿಮರ್ಶಶಕ್ತಿಯೂ, ಈ ಅನುಭವವು ಪರಶಿವ ನಲ್ಲಿ ಇರದಿದ್ದರೆ ಆ ಬ್ರಹ್ಮಕ್ಕೆ ಪ್ರಕಾಶರೂಪವಾದ ಸ್ಫಟಿಕಶಿಲೆಯಂತೆ ಜಡವಾದು ದೆಂದು ಹೇಳುವ ಪ್ರಸಂಗ ಬರುವದು. ಸೌಂದರ್ಯವಿಶಿಷ್ಟನಾದ ಕುರುಡನಿಗೆ ತನ್ನ ಸೌಂದರ್ಯವನ್ನು ತಿಳಿಯುವ ಶಕ್ತಿಯಿಲ್ಲದಿರುವದರಿಂದ ಅವನಿಗೆ ಅವನ ಸೌಂದರ್ಯವು ವ್ಯರ್ಥವಾಗುವಂತೆ ಬ್ರಹ್ಮಕ್ಕೆ ತನ್ನ ಸಚ್ಚಿದಾನಂದ ಸ್ವರೂಪವನ್ನು ತಿಳಿಯುವ ಶಕ್ತಿಯಿಲ್ಲದಿದ್ದರೆ ತನ್ನಲ್ಲಿರುವ ಸಚ್ಚಿದಾನಂದ ಸ್ವರೂಪವು ವ್ಯರ್ಥ ವಾಗುವದು. ಆದುದರಿಂದ ಬ್ರಹ್ಮದಲ್ಲಿ ಸಚ್ಚಿದಾನಂದಾನುಭವಶಕ್ತಿಯನ್ನು ಒಪ್ಪಲೇ ಬೇಕು. ಇದರಿಂದ ಬ್ರಹ್ಮವು ಶಕ್ತಿವಿಶಿಷ್ಟವಾದುದೆಂದು ಸಿದ್ಧವಾಗುವದು.

ವೀರಶೈವರು ಮಾಯೆಯನ್ನು ಹೇಳುತ್ತಾರೆ ಆದರೆ ಶಾಂಕರಾದ್ವೈತಿಗಳಂತೆ ಅವಿದ್ಯಾರೂಪವಾದುದೆಂದು ಮಾತ್ರ ಹೇಳುವದಿಲ್ಲ. ವೀರಶೈವರ ಮಾಯೆಯು

ಮಂ ಶಿವಂ ಪರಮಂ ಬಹ್ಮ ಪ್ರಾಪ್ನೋತೀತಿ ಸ್ವಭಾವತಃ ।
ಮಾಯೇತಿ ಪ್ರೋಚ್ಯತೇ ಲೋಕೇ ಬ್ರಹ್ಮನಿಷ್ಠಾ ಸನಾತನೀ ॥

ಎಂಬ ಸಿದ್ಧಾಗಮಪ್ರಮಾಣಾನುಸಾರವಾಗಿ ಪ್ರರಶಿವ ಬ್ರಹ್ಮದಲ್ಲಿರುವ ವಿಮರ್ಶ ಶಕ್ತಿಯ ವಿಕಾಸರೂಪವಾದ ಒಂದು ಶಕ್ತಿಯೇ ಮಾಯೆಯು. ಅದು ಸತ್ಯವಾದುದೂ ನಿತ್ಯವಾದುದೂ ಇರುತ್ತದೆ.

ರಾಮಾನುಜರು "ವಿಶಿಷ್ಟಾದ್ವೈತ" ವನ್ನು ಹೇಳುವರು. ವೀರಶೈವರು "ಶಕ್ತಿ ವಿಶಿಷ್ಟಾದ್ವೈತ" ವನ್ನು ಹೇಳುವರು. ಇವರಲ್ಲಿ ಶಕ್ತಿ ಎಂಬ ಶಬ್ದಮಾತ್ರ ಹೆಚ್ಚಾಗಿದೆ.

CC-0. Jangamwadi Math Collection. Digitized by eGangotri

ಉಳಿದುದೆಲ್ಲ ಎರಡೂ ಸಿದ್ಧಾಂತಗಳಲ್ಲಿ ಒಂದೇ ರೀತಿಯಾಗಿದೆಂದು ಸಾಮಾನ್ಯವಾಗಿ ಭಾಸವಾಗಬಹುದು. ಈ ಎರಡೂ ಸಿದ್ಧಾಂತಗಳಲ್ಲಿ ಭೂಮ್ಯಾಕಾಶದಷ್ಟು ಅಂತರ-ವಿರುವದು, ರಾಮಾನುಜ ಸಿದ್ಧಾಂತದಲ್ಲಿ ಬ್ರಹ್ಮದ ಜೊತೆಗೆ ಜೀವ, ಜಗತ್ ಎರಡೂ ಸತ್ಯವಾದವುಗಳು. ಈ ಜೀವ ಮತ್ತು ಜಗತ್ತುಗಳು ಬ್ರಹ್ಮದ ಅಂಶಗಳು ಬ್ರಹ್ಮವು ಅಂಶೀ ಎನಿಸಿಕೊಳ್ಳುವದು. ಹೀಗೆ ಅಂಶಾಂಶೀಭಾವವನ್ನು ಮಾನಿಸಿದರೆ ಭೌತಿಕ ವಿಕಾರವಾದಾಗ ಅಂಶವಾದ ಅಚಿತ್ತಿನಲ್ಲಿಯೂ ವಿಕಾರ ಉಂಟಾಗುತ್ತದೆ. ಆಗ ಈಶ್ವರನಲ್ಲಿಯೂ ವಿಕಾರವನ್ನು ಹೇಳುವ ಪ್ರಸಂಗ ಬರುವದು. ಮತ್ತು ಅಂಶನಾದ ಜೀವನಲ್ಲಿ ನಾನಾ ದೋಷಗಳಿರುತ್ತವೆ. ಇವು ಅಂಶಿಯಾದ ಈಶ್ವರನಲ್ಲಿ ಉಂಟಾಗಬೇಕಾಗುತ್ತದೆ. ಇದರ ಪರಿಹಾರಕ್ಕಾಗಿ ರಾಮಾನುಜರು ಈಶ್ವರನೊಡನೆ ಚಿತ್ (ಜೀವ) ಅಚಿತ್ (ಭೂತ) ಎಂಬ ಅಂಶಗಳ ಸಂಬಂಧವು ಶರೀರ ಮತ್ತು ಆತ್ಮ ಇವುಗಳ ಸಂಬಂಧದಂತೆ ಎಂದು ಮತ್ತು ರಾಜ-ಪ್ರಜರ ಸಂಬಂಧದಂತೆ ಎಂದು ಹೇಳುವರು. ಆತ್ಮನು ಹೇಗೆ ಶರೀರದೊಳಗಿದ್ದು ಶರೀರದ ಚಲನವಲನಾದಿಗಳನ್ನು ನಿಯಮನ ಮಾಡುವನೋ ಹಾಗೆ ಈಶ್ವರನು ಚಿತ್–ಜೀವ ಅಚಿತ್-ಭೂತ ಇವುಗಳಲ್ಲಿದ್ದು ಅವುಗಳನ್ನು ನಿಯಮನ ಮಾಡುತ್ತಾನೆ. ಅದಕ್ಕಾಗಿಯೇ ಅಂತರ್ಯಾಮಿ ಎನಿಸಿಕೊಳ್ಳುವನು. ಶರೀರದ ಅವಯವವಾಗಲಿ ಇಂದ್ರಿಯಗಳಾಗಲಿ ಲೋಪವಾಗಿ, ಅಂಧ, ಬಧಿರ, ಕುಂಟ ಇತ್ಯಾದಿ ವಿಕಾರವಾದರೂ ಒಳಗಿರುವ ಆತ್ಮನಿಗೆ ಈ ದೋಷಗಳು ಹತ್ತುವದಿಲ್ಲ. ಇದರಂತೆ ಚಿತ್, ಅಚಿತ್ ಇವುಗಳಲ್ಲಿ ದೋಷ ಉಂಟಾದರೂ ಈಶ್ವರನಿಗೆ ಸಂಬಂಧವಾಗುವದಿಲ್ಲ. ಮತ್ತು ಪ್ರಜರಿಗೆ ಸುಖದುಃಖಗಳುಂಟಾಗಬಹುದು. ಆದರೆ ಆ ಸುಖದುಃಖಕ್ಕೆ ರಾಜನು ಹೇಗೆ ಭಾಗಿಯಾಗುವದಿಲ್ಲವೋ ಅದರಂತೆ ಚಿತ್, ಅಚಿತ್‌ಗಳಲ್ಲಿ ಉಂಟಾಗುವ ದುಃಖಗಳು ಈಶ್ವರನಿಗೆ ಸಂಬಂಧವಾಗುವದಿಲ್ಲ ಎಂದು ಸಮಾಧಾನ ಮಾಡುವರು. ಇವರ ದೃಷ್ಟಾಂತದಾರ್ಷ್ಟಾಂತಿಕಗಳು ಎಷ್ಟರಮಟ್ಟಿಗಿವೆ ನೋಡಿರಿ. ರಾಜರಿಗೂ ಪ್ರಜರಿಗೂ ಅಂಶಾಂಶಿಭಾವವಿರುವದೋ ಹೇಗೆ? ಚೇತನವಾದ ಬ್ರಹ್ಮಕ್ಕೆ ಅಚೇತನವಾದ ಅಚಿತ್ (ಭೂತ) ಜಗತ್ ಹೇಗೆ ಅಂಶವಾಗುವದೋ ಅವರೇ ಬಲ್ಲರು. ರಾಮಾನು-ಜರು ಹೇಳುವದು ಅದ್ವೈತ; ಪರಂತು ಅವರು ತೋರಿಸುವದು ದ್ವೈತವೇ, ಏಕೆಂದರೆ ಅವರಲ್ಲಿ ಆತ್ಮ ಒಂದಲ್ಲ ಭಿನ್ನಭಿನ್ನವಾಗಿದೆ. ಪರಸ್ಪರ ಭೇಧವುಳ್ಳ ಅನಂತ ಆತ್ಮರೂ ನಿತ್ಯರು, ಜಗತ್ತು ನಾನಾರೂಪವಾದುದು ಹೀಗೆ ಭಿನ್ನ ಗುಣಧರ್ಮವುಳ್ಳ ಅನಂತ ಆತ್ಮರೂ ನಾನಾ ಪ್ರಕಾರವಾದ ಜಗತ್ತೂ ಆ ಬ್ರಹ್ಮದಲ್ಲಿ ಲೀನವಾಗಿ ಸೂಕ್ಷ್ಮವಾದ ಬೇರೆಬೇರೆ ಸ್ವರೂಪವುಳ್ಳವುಗಳಾಗಿ ಇರುತ್ತವೆ. ಈ ರೀತಿ ಜೀವ, ಜಗತ್ತುಗಳಿಂದ ವಿಶಿಷ್ಟವಾದ ಬ್ರಹ್ಮವು ಒಂದೇ ಇರುತ್ತದೆ ಎಂದು ವಿಶಿಷ್ಟಾದ್ವೈತಕ್ಕೆ ಅರ್ಥ ಹೇಳು-ವರು. ಬ್ರಹ್ಮ, ಜೀವ, ಜಗತ್ತು ಹೀಗೆ ಮೂರು ಪದಾರ್ಥಗಳು ರಾಮಾನುಜರಲ್ಲಿ

CC-0. Jangamwadi Math Collection. Digitized by eGangotri

ನಿತ್ಯವಾದವುಗಳಿರುತ್ತದೆ. ಬ್ರಹ್ಮಕ್ಕೆ ಜೀವ ಮತ್ತು ಜಗತ್ ಶರೀರ ಭಾಗಿವೆ. ಹೀಗೆ ಮೂರು ಪದಾರ್ಥಗಳಿದ್ದರೂ ಅದ್ವೈತವೆಂದು ಹೇಗೆ ಹೇಳಿದರೋ ಅವರಿಗೇ ಗೊತ್ತು. "ತತ್ವಮಸಿ" ಎಂಬ ಮಹಾ ವಾಕ್ಯಾರ್ಥವು ರಾಮಾನುಜರು ಹೇಳುವದು ನೆನಪಿಡತಕ್ಕದ್ದಾಗಿದೆ. ತ್ವಂ ಪದದ ಅರ್ಥವು ಬೇರೆ ಬೇರೆ ಸಿದ್ಧಾಂತಗಳಲ್ಲಿ ಜೀವನನ್ನು ತೋರಿಸುತ್ತದೆ. ರಾಮಾನುಜರಲ್ಲಿ ಹಾಗಿರುವದಿಲ್ಲ. ತತ್ ಅಂದರೆ ಸರ್ವಜ್ಞನಾದ ಜಗತ್ಕಾರಣನಾದ ಈಶ್ವರ, ತ್ವಂ ಅಂದರೆ ಅಚಿದ್ವಿಶಿಷ್ಟ ಜೀವರೂಪ ಶರೀರವುಳ್ಳ ಬ್ರಹ್ಮ ಅರ್ಥಾತ್ ಅಂತರ್ಯಾಮಿ ಈಶ್ವರ ಮತ್ತು ಪ್ರಪಂಚ ನಿರ್ಮಾತೃವಾದ ಈಶ್ವರ ಇವರಿಬ್ಬರ ಏಕತ್ವವು. ಒಂದು ವಿಶೇಷಣದಿಂದ ವಿಶಿಷ್ಟ-ನಾದಂಥ ಈಶ್ವರನಿಗೆ ಮತ್ತೊಂದು ವಿಶೇಷಣದಿಂದ ವಿಶಿಷ್ಟನಾದ ಈಶ್ವರನೊಡನೆ ಅದ್ವೈತ ಏಕತ್ವವೆಂದು ಭಾವವು. ಈ ಅದ್ವೈತದಲ್ಲಿ ಜೀವ ಜಗತ್ತುಗಳು ಸೇರುವದೇ ಇಲ್ಲ. ಅವು ಭಿನ್ನವಾಗಿಯೇ ಉಳಿಯುತ್ತವೆ.

ವೀರಶೈವರ ಶಕ್ತಿವಿಶಿಷ್ಟಾದ್ವೈತವು ಇಂಥಾದ್ದಲ್ಲ. ಅದರಲ್ಲಿ ಎಲ್ಲವೂ ಸಮರಸ ವಾಗಿ ಹಾಲಿನಲ್ಲಿ ಹಾಲು ಕೂಡಿದಂತೆ, ನೀರಿನಲ್ಲಿ ನೀರು ಕೂಡಿದಂತೆ ಏಕಾಕಾರ ವಾಗುತ್ತದೆ.

ವೀರಶೈವರೂ ಅಂಶಾಂಶೀಭಾವವನ್ನು ಹೇಳುತ್ತಾರೆ. ಇವರ ಅಂಶಾಂಶೀ ಭಾವಕ್ಕೂ ರಾಮಾನುಜರ ಅಂಶಾಂಶೀಭಾವಕ್ಕೂ ಅಂತರವಿದೆ. ವೀರಶೈವರು ಅಚೇತನದೊಡನೆ ಅಂಶಾಂಶೀಭಾವವನ್ನು ಹೇಳುವದಿಲ್ಲ.

ವೀರಶೈವರ ಶಿವಯೋಗವು ಯೋಗಗಳಲ್ಲಿ ಶ್ರೇಷ್ಠತೆಯನ್ನೂ ಪೂರ್ಣ ವಿಕಾಸವನ್ನೂ ಪಡೆದಿರುವಂತೆ, 'ವೀರಶೈವ ದರ್ಶನ'ವು ಉಳಿದ ದಾರ್ಶನಿಕ ಸಿದ್ಧಾಂತಗಳಿಗಿಂತ ಪರಿಪೂರ್ಣತೆಯನ್ನು ಪಡೆದಿರುವುದೆಂದು ಹೇಳಬಹುದು.

CC-0. Jangamwadi Math Collection. Digitized by eGangotri

# ಸ್ವಾತ್ಮವಿಮರ್ಶೆ—ತನ್ನನ್ನು ತಾನು ಪರಿಶೀಲಿಸಿಕೊಳ್ಳುವದು

ಶ್ರೀ. ಜಿ. ರುದ್ರಪ್ಪ, ಎಂ. ಎ., ಎಲ್ ಎಲ್. ಬಿ., ಬೆಂಗಳೂರು

ಸಮಷ್ಟಿಜೀವನದ ಅಭ್ಯುದಯವು ವ್ಯಕ್ತಿಯ ಪರಿಪೂರ್ಣತೆಯನ್ನವಲಂಬಿಸಿರುತ್ತದೆ. ಆ ಪರಿಪೂರ್ಣತೆಯನ್ನು ಪಡೆಯುವದಕ್ಕೆ ಸಾಮಾಜಿಕ ಸೌಲಭ್ಯಗಳು ಸಾಲವು. ಮನುಷ್ಯಕಲ್ಪಿತವಾಗಿರುವ ಆರ್ಥಿಕ ಪಾರಿಶ್ರಾಮಿಕಾದಿ ಉಪಾಯಗಳು ಸಮರ್ಥವಲ್ಲ, ಬೇರೊಂದು ಉಪಾಯವು ಇದಕ್ಕೆ ಆವಶ್ಯಕ. ಆ ಉಪಾಯ ಅನಾದಿ ಕಾಲದಿಂದಲೂ ಮೂಲರೂಪದಲ್ಲಿ ಒಂದೇ ರೀತಿಯಾಗಿದೆ. ಅದನ್ನು ಬಾಹ್ಯ ಜೀವನದಲ್ಲಿ ನೀತಿ ಧರ್ಮ ಎಂದು ಕರೆಯುತ್ತೇವೆ. ಅದರಲ್ಲಿ ಸ್ಥೈರ್ಯ ಉಂಟಾಗಬೇಕಾಗಿದ್ದರೆ ವ್ಯಕ್ತಿಯ ತಿಳುವಳಿಕೆಯು ಪ್ರಕೃತಿ ವಿಷಯದಲ್ಲಿಯೂ ಅದರ ಪರಿಣಾಮದ ವಿಷಯದಲ್ಲಿಯೂ ತಿಳಿಯಾಗಿರಬೇಕು. ಶಾಸ್ತ್ರೀಯವಾಗ ಇದನ್ನು ಸ್ಥೂಲವಾದ ತಿಳುವಳಿಕೆ ಎನ್ನುತ್ತಾರೆ. ವ್ಯಕ್ತಿಯ ಅಂತರ್ಯವಿಕಾಸವು ವ್ಯಕ್ತಿಗೆ ಮಾತ್ರ ಗೋಚರಿಸುವ ವಿಷಯವಾಗಿದೆ. ಈ ವಿಕಾಸವನ್ನು ಎರಡು ದಾರಿಗಳಿಂದ ಸಾಧಿಸಬಹುದು. ಸ್ವಚ್ಛವಾದ ತಿಳಿವಳಿಕೆಯಿಂದ ಪ್ರಕೃತಿ ಪ್ರಪಂಚದಿಂದ ತಾನು ಬೇರೆಯೆಂಬ ದೃಢಕರವಾದ ನಿಷ್ಠೆ ಏರ್ಪಟ್ಟಲ್ಲಿ ಅದು ಸಾಧ್ಯ. ಇದು ಕಷ್ಟಕರವಾದ ಮಾರ್ಗ. ಇನ್ನು ಎರಡನೆಯದು ಈಶ್ವರನಲ್ಲಿ ಧೃಢವಾದ ಭಕ್ತಿಯಿಂದ ಕೂಡಿ ತನ್ನ ಜೀವನವನ್ನು ವ್ಯವಹಾರ ಪ್ರಪಂಚದಲ್ಲಿ ನೀತಿಯಿಂದ ನಡೆಸುವುದು. ಈ ಭಕ್ತಿಯು ಈಶ್ವರ, ಪ್ರಕೃತಿ, ಜೀವಾತ್ಮ ಇವುಗಳ ತಾರತಮ್ಯದ ತಿಳಿವಳಿಕೆಯನ್ನವಲಂಬಿಸಿದೆ. ಶುದ್ಧವಾದ ನಡತೆಯನ್ನು ಆಧಾರವನ್ನಾಗಿಟ್ಟುಕೊಂಡಿದೆ. ಇಷ್ಟೆ ಸಾಲದು. ಶೀಘ್ರವಾಗಿ ತನ್ನ ಗುರಿಯನ್ನು ಮುಟ್ಟಲು ಆತ್ಮವಿಕಾಸಕ್ಕೆ ಬೇಕಾಗುವ ಸಾಧನಾಭ್ಯಾಸಗಳು ಬೇಕು. ಈ ಅಭ್ಯಾಸಗಳನ್ನು ವ್ಯಕ್ತಿಯ ಯೋಗ್ಯತೆಗನುಸಾರವಾಗಿ ಗುರೂಪದೇಶದಿಂದ ಅರಿಯಬೇಕು. ಒಂದುವೇಳೆ ಶಿಷ್ಯನು ಕರ್ಮಪರಿಪಾಕದಿಂದ ವಿಕಾಸವನ್ನು ಪಡೆದಿದ್ದರೆ ಅಧ್ಯಯನದಿಂದಲೋ, ಗುರೂಪದೇಶದಿಂದಲೋ, ಸಂತ್ಸಂಗದಿಂದಲೋ, ಭಾವನೆಯಿಂದಲೋ ಪರಮಾರ್ಥವನ್ನು ಅರಿಯುವನು. ತಾನು ಎಷ್ಟರಮಟ್ಟಿಗೆ ಈ ಸಾಧನಾಭ್ಯಾಸಗಳಲ್ಲಿ ಮುಂದುವರಿದಿದ್ದೇನೆಂದು ತಿಳಿಯಲು ಸ್ವಾತ್ಮವಿಮರ್ಶೆ ಬೇಕು.

ತಾತ್ವಿಕ ದೃಷ್ಟಿಯಿಂದ ವಿವರಿಸುವದಾದರೆ ನಾವು ಯಾವ ರೀತಿಯಾಗಿ ನಮ್ಮನ್ನು ತಿದ್ದಿಕೊಳ್ಳಬೇಕಾದರೂ ನಮ್ಮ ಭಾವನೆಯನ್ನು ನಾಲ್ಕು ಬಗೆಯಾಗಿ ವಿಂಗಡಿಕೊಳ್ಳಬೇಕು. ಇದನ್ನೇ ಕಾಶ್ಮೀರ ಶೈವ ಸಂಪ್ರದಾಯದವರು ಪರಿಶೀಲನ,

CC-0. Jangamwadi Math Collection. Digitized by eGangotri

ಅನುಶೀಲನ, ಅನುಸಂಧಾನ, ಪರಾಮರ್ಶನೆಂದು ಕರೆದಿರುತ್ತಾರೆ. ಬೇರೆ ಬೇರೆಯಾಗಿರುವ ವಿಷಯುಗಳನ್ನು ಮತ್ತು ವ್ಯಕ್ತಿಗಳನ್ನು ನಿಷ್ಕೃಷ್ಟವಾಗಿ ತಿಳಿಯುವಿಕೆಯೇ ಪರಿಶೀಲನ ಈ ಭೇದಾವಸ್ಥೆಗಳಲ್ಲಿ ಅನುಸ್ಯೂತನಾಗಿರುವ ಆಧಾರಭೂತ ಧರ್ಮ (ಚೈತನ್ಯ)ವನ್ನು ಗುರುತಿಸುವಿಕೆಯೇ ಅನುಶೀಲನ. ಭೇದವ್ಯವಹಾರಗಳು ನಡೆಯುತ್ತಿರುವಾಗಲೂ ಅಭಿನ್ನವಾದ, ಪ್ರಶಾಂತವಾದ ಸ್ವರೂಪದಲ್ಲಿ ಗಮನವಿರುವಿಕೆಯೇ ಅನುಸಂಧಾನ. ಭೇದಜ್ಞಾನಗಳಿಂದ ಆಕರ್ಷಿಸಲ್ಪಟ್ಟಿದ್ದರೂ ತನ್ನ ಮೂಲ ಸ್ವರೂಪವನ್ನು ಬಾರಿಬಾರಿಗೂ ನೆನಪಿಗೆ ತಂದುಕೊಳ್ಳುವುದೇ ಪರಾಮರ್ಶ.

ನಮ್ಮ ಅನುಭವದ ತಿಳಿವಳಿಕೆಗಳೆಲ್ಲಾ ಬಗೆಬಗೆಯಾದ ಸ್ಥಿತಿಗಳನ್ನು ಹೊಂದುತ್ತಿರುತ್ತವೆ. ಇವುಗಳನ್ನು ವಿಕಲ್ಪಗಳೆಂದು ಕರೆಯುತ್ತಾರೆ. ಈ ವಿಕಲ್ಪಗಳು ಲೆಕ್ಕವಿಲ್ಲದಷ್ಟು ಹುಟ್ಟಿ ನಾಶವಾಗುತ್ತಿರುತ್ತವೆ. ಭೇದ ಜ್ಞಾನವಿಲ್ಲದೆ ವಿಕಲ್ಪಗಳಿಲ್ಲ. ಈ ವಿಕಲ್ಪಗಳ ಮಹಿಮೆಯಿಂದಲೇ ನಾನು ನನ್ನದು ನಾನು ಬೇರೆ ಎಂಬ ಭಾವನೆಗಳು ನಿಂತಿರುತ್ತವೆ. ಶಾಸ್ತ್ರಜ್ಞರು ದೇಶ, ಕಾಲ, ಆಕಾರ ಈ ಮೂರು ಅಂಶಗಳಿಗೆ ಒಳಪಟ್ಟಿರುವುದೆಲ್ಲಾ ವಿಕಲ್ಪಗಳೆಂದೂ, ಅದಿಲ್ಲದ ಸ್ಥಿತಿಯು ನಿರ್ವಿಕಲ್ಪವೆಂದೂ ಹೇಳುತ್ತಾರೆ ಈ ವಿಕಲ್ಪ ಪ್ರವಾಹದಿಂದಲೇ ಶಕ್ತಿ ಸಂಕೋಚವಾಗಿ ಬದ್ಧಾವಸ್ಥೆಯುಂಟಾಗಿದೆ. ಈ ಅವಸ್ಥೆಯಲ್ಲಿ ವಿಕಲ್ಪ ಪ್ರಭಾವವು ರಾಗದ್ವೇಷಗಳಿಗೂ, ಸುಖದುಃಖಗಳಿಗೂ ಕಾರಣವಾಗಿದೆ ಈ ವಿಕಲ್ಪಗಳಿಗೆ ಅತಿಶಯವಾದ ಸಾಮರ್ಥ್ಯವಿದೆ. ಒಂದು ವಿಕಲ್ಪದಿಂದ ಇನ್ನೊಂದು ಸಮಾನವಾದ ವಿಕಲ್ಪವು ಹುಟ್ಟುತ್ತದೆ. ಅನೇಕ ವಿಕಲ್ಪಗಳಿಂದ ಒಂದು ವಿಕಲ್ಪ ಹುಟ್ಟುವುದೂ ಉಂಟು. ಈ ವಿಕಲ್ಪ ಸಂತಾನವು ಒಂದು ವಿಚಿತ್ರ ಸಂತತಿಯಾಗಿದೆ. ಇದರ ಬೆಳವಣಿಗೆ ಇದ್ದಹಾಗೆ ಇದರ ನಾಶವೂ ಆಶ್ಚರ್ಯಕರವಾಗಿದೆ. ಒಂದು ವಿಕಲ್ಪವು ಅದಕ್ಕೆ ವಿರುದ್ಧವಾದ ವಿಕಲ್ಪದಿಂದ ನಾಶವಾಗುತ್ತದೆ. ಅಥವಾ ತನ್ನ ತೀವ್ರತೆಯನ್ನು ಕಳೆದುಕೊಳ್ಳುತ್ತದೆ. ಒಂದು ವಿಕಲ್ಪದಿಂದ ಇನ್ನೊಂದು ವಿಕಲ್ಪವು ಸಂಸ್ಕರಿಸಲ್ಪಟ್ಟು ರೂಪಾಂತರಗಳನ್ನು ಪಡೆಯುವದೂ ಉಂಟು.

ವಿಕಲ್ಪಗಳ ಹೊಯ್ದಾಟದಿಂದ ಕಲ್ಪಿಸಿಕೊಳ್ಳುವುದಕ್ಕೆ ಮಾಡುವ ಪ್ರಯತ್ನಗಳು ವಿಕಲ್ಪರೂಪವಾಗಿಯೇ ಇದ್ದರೂ ಅವು ಶುದ್ಧ ವಿದ್ಯಾ ವಿಕಲ್ಪಗಳು. ಈ ವಿಧವಾದ ವಿಮರ್ಶೆಯು ಸಾಧಕನಿಗೆ ಹುಟ್ಟಬೇಕಾದರೆ ಸತ್ತರ್ಕ, ಸದಾಗಮ, ಸದ್ಗುರೂಪದೇಶ ಇವುಗಳು ಬೇಕು. ಸತ್ತರ್ಕವೆನ್ನುವುದು ಇವನಿಗೆ ತಿಳಿವಳಿಕೆಯಲ್ಲಿ ಸ್ವಸ್ವರೂಪವನ್ನುಂಟುಮಾಡುವ ಕ್ರಮವನ್ನು ನಿರ್ಣಯಿಸುತ್ತದೆ. ಬಾರಿಬಾರಿಗೂ ವಿಮರ್ಶೆ ಮಾಡುವವರಿಗೆ ಸ್ಫುಟವಾದ ಸಾಕ್ಷಾತ್ಕಾರವೇರ್ಪಡುತ್ತದೆ. ಬದ್ಧದೆಶೆಯಲ್ಲಿ ವಿಕಲ್ಪಗಳಿಗಾಶ್ರಯವಾಗಿರುವುದು ಚಿತ್ತು. ಚಿತ್ತದಿಂದುಟಾಗುವ ವಿಕಲ್ಪಗಳಿಂದ

CC-0. Jangamwadi Math Collection. Digitized by eGangotri

ಜೀವನಯಾತ್ರೆಯು ನಡೆಯುತ್ತಿರುವುದು ಎಲ್ಲರ ಅನುಭವದಲ್ಲಿಯೂ ಇದೆ. ಈ ವಿಕಲ್ಪಗಳನ್ನು ಪ್ರತ್ಯಾಹಾರ, ಧಾರಣ, ಧ್ಯಾನಗಳಿಂದ ಹದಗೊಳಿಸಬೇಕು. ಹಾಗೆಯೇ ಅವುಗಳ ಅಧಿಕಾರವನ್ನು ಕಡಿಮೆ ಮಾಡಬೇಕು. ಒಂದು ಮುಖದಲ್ಲಿ ವಿಕಲ್ಪಗಳನ್ನು ಸಂಸ್ಕರಿಸುವುದು, ಇನ್ನೊಂದು ಮುಖದಲ್ಲಿ ನಿರ್ವಿಕಲ್ಪ ಭೂಮಿಯಲ್ಲಿ ಸ್ಥೈರ್ಯವನ್ನು ಸಂಪಾದಿಸುವುದು. ವಿಕಲ್ಪಗಳನ್ನು ಸಂಸ್ಕರಿಸುವುದಕ್ಕೆ ನಾವು ಉಪಯೋಗಿಸುವ ಸಾಧನೆಗಳು ಭೇದರೂಪವಾಗಿವೆ. ನಿರ್ವಿಕಲ್ಪ ಭೂಮಿಯಲ್ಲಿ ನಾವು ಸ್ಥೈರ್ಯವನ್ನು ಸಂಪಾದಿಸುವ ಸಾಧನೆ ಅಭೇದದೃಷ್ಟಿ. ಇದು ಪರಮಾರ್ಥ ತತ್ವವನ್ನು ಮನಸ್ಸಿನಿಂದಲೇ ಧ್ಯಾನ ಮಾಡುತ್ತಾ ಸಾಧಕನು ಸಮಾವೇಶವನ್ನು ಪಡೆಯುವುದೇ ಆಗಿದೆ. ಇದೊಂದು ಆತ್ಮೋನ್ನತಿಯನ್ನು ಪಡೆಯುವ ಉಪಾಯ.

ಚಿನ್ಮಾತ್ರನೆನಿಸಿ ಜ್ಞಾನ ಸ್ವರೂಪನಾದ ಜೀವನು ಅಖ್ಯಾತಿ ದೆಶೆಯಿಂದ ತಾನಾಗಿ ಕಲ್ಪಿಸಿಕೊಂಡು ವಿಕಲ್ಪಗಳಿಂದ ತನ್ನ ಶಕ್ತಿಗಳನ್ನು ಕುಗ್ಗಿಸಿಕೊಂಡು ಸಂಸಾರಕ್ಕೊಳಗಾಗಿದ್ದಾನೆ. ಯಾವ್ಯಾವ ಪ್ರತಿಬಂಧಕ ಅಥವಾ ಭ್ರಾಂತಿಯಿಂದ ಈ ವಿಕಲ್ಪಗಳಿಗೆ ಸಿಕ್ಕಿದ್ದಾನೋ ಅವುಗಳ ವಿಮರ್ಶೆಯಿಂದ ತನ್ನ ನಿಜ ಸ್ವರೂಪವನ್ನು ತಿಳಿಯುವನಾಗುತ್ತಾನೆ. ಕೆಲವರು ದೇಹವೇ ತಾನೆಂದು ಎಣಿಸಿ ಶರೀರಕ್ಕೆ ಸಂಬಂಧಪಟ್ಟ ಕೃಶತ್ವ, ಸ್ಥೂಲತ್ವ, ಅಂದ-ಚಂದ ಮುಂತಾದವುಗಳ ದೆಶೆಯಿಂದ ದೇಹವೇ ಆತ್ಮವೆಂದು ತಿಳಿಯುತ್ತಾನೆ. ಮತ್ತೆ ಕೆಲವರು ತಾವು ಬುದ್ಧಿವಂತರೆಂದು ಭಾವಿಸಿ ದೇಹ ಜಡ ಇಲ್ಲಿಯೇ ಲಯವಾಗತಕ್ಕದ್ದು, ಅದು ಆತ್ಮ ಹೇಗಾದೀತು, ಹಸಿವು, ಬಾಯಾರಿಕೆ ಅನುಭವಿಸುವ ನಾನು ಆತ್ಮ ಎಂದು ಪ್ರಾಣದ ಗುಣವನ್ನೇ ಆತ್ಮನಲ್ಲಿ ಆರೋಪಿಸಿ ಆತ್ಮನನ್ನು ಕಂಡಂತೆ ಭಾವಿಸುವರು. ಬೇರೆ ಕೆಲವರು ದೇಹವೂ ಜಡ, ಪ್ರಾಣವೂ ಜಡ ಅವುಗಳನ್ನು ಆತ್ಮನೆಂದು ಎಣಿಸುವುದು ಸಾಧ್ಯವಲ್ಲ. ಸುಖದುಃಖಗಳನ್ನನುಭವಿಸುವ ನಾನು ಆತ್ಮ ಎಂದು ಬುದ್ಧಿವಿಕಲ್ಪಗಳಿಂದುಟಾದ ಸುಖದುಃಖಗಳನ್ನು ಆತ್ಮನಲ್ಲಿ ಆರೋಪಿಸಿ ನಿಶ್ಚಯವನ್ನು ಕಂಡಂತೆ ತೃಪ್ತರಾಗುವರು. ಮತ್ತೆ ಕೆಲವರು ದೇಹ ಪ್ರಾಣ ಬುದ್ಧಿ ಧರ್ಮಗಳು ಎಲ್ಲಿ ಗೋಚರ ವಾಗುವದಿಲ್ಲವೋ ಅದೇ ಆತ್ಮ ಎಂದು ಶೂನ್ಯವನ್ನು ಆತ್ಮನನ್ನಾಗಿ ಎಣಿಸಿ ಸಂತೋಷಪಡುವರು. ಆತ್ಮನು ರೇಷ್ಮೆಹುಳವು ತನ್ನ ಬಾಯಿಂದಲೇ ಹೊರಟ ದಾರದಿಂದ ತನ್ನ ಸುತ್ತಲೂ ಬಲವಾದ ಕೋಶಾವರಣವನ್ನು ಕಲ್ಪಿಸಿಕೊಂಡು ಹೊರಗೆ ಬರಲಾಗದಂತೆ ಒಳಗೆ ಸಿಲುಕುವ ರೀತಿ ಆತ್ಮನೆಂದು ಶಾಸ್ತ್ರಗಳು ಹೇಳುವವು. ರೇಷ್ಮೆ ಹುಳವು ತಾನೇ ಕಲ್ಪಿಸಿಕೊಂಡ ಕೋಶಾವರಣದಿಂದ ಕೆಲವು ಕಾಲದಮೇಲೆ ಆವರಣವನ್ನು ತಾನೇ ಕತ್ತರಿಸಿಕೊಂಡು ಚಿಟ್ಟೆಯ ರೂಪದಲ್ಲಿ ಬಂದುಬಿಡುವಂತೆ ಜೀವನೂ ಸ್ವಾತ್ಮಜ್ಞಾನ ಪ್ರಕಾಶದಿಂದ ಶಿವಾನುಗ್ರಹವನ್ನು ಸಂಪಾದಿಸಿ ತಾನು ದೇಹ, ಪ್ರಾಣ, ಬುದ್ಧಿ, ಶೂನ್ಯ ಮೊದಲಾದ ವಿಮರ್ಶಣೆಯಿಂದ ಶಿವಸಾಕ್ಷಾತ್ಕಾರವನ್ನು ಹೊಂದುವನು.

CC-0. Jangamwadi Math Collection. Digitized by eGangotri

ಸರ್ಪಭೂಷಣ ಶಿವಯೋಗಿಗಳು ವ್ಯಕ್ತಿಯ ಪರಿಶೀಲನೆಗನುಕೂಲಿಸುವ ಹಾಗೆ ಈ ಕೆಳಗಿನ ಹಾಡಿನಲ್ಲಿ ಉಪದೇಶಿಸಿರುವರು.

ಬಿಡು ಬಾಹ್ಯದೊಳು ಡಂಬವ ಮಾನಸದೊಳಗೆಡವಿಡದಿರು ಶಂಭುವ
ಒಡಲೊಳು ವಂಚಿಸಿ ಹೊರಗೆ ನೀ ಕೀರ್ತಿಯ ಪಡೆದರೇನುಂಟು
ಜನಮೆಚ್ಚಿದರೇನುಂಟು? ಮನಮೆಚ್ಚಿನಡಕೊಂಬುವುದೇ ಚಂದವು,
ಜನರೇನುಬಲ್ಲರು ಒಳಗಾಗೊ ಕೃತ್ಯವ ಮನವರಿಯದ ಕಳ್ಳತನವಿಲ್ಲವಲ್ಲ.
ಜನಮೆಚ್ಚಿ ನಡೆದರೆ ಶಿವ ನಿನ್ನ ಕೈಲಾಸಕೊಯ್ವನೆ ಮನಮೆಚ್ಚಿ ನಡೆದರೆ
ಶಿವ ನಿನ್ನ ಕೈಬಿಡುವನೆ ಮರುಳೆ!

ಶಿವಯೋಗಿಗಳ ಉದ್ದೇಶವಿಷ್ಟೆ– ಆತ್ಮಸಾಕ್ಷಿಯಾಗಿ ತಾನು ವರ್ತಿಸಬೇಕು.

ಇನ್ನೊಂದು ರೀತಿಯಲ್ಲಿ ಅವರ ಹಿತೋಕ್ತಿಯನ್ನು ನಾವು ವಿವರಿಸಬಹುದು. ತ್ರಿಕರಣಶುದ್ಧಿ "ಕರಣತ್ರಯಸಾರೂಪ್ಯಂ ಸೌಖ್ಯರಸಾಯನಂ" ಮನಸಾ, ವಾಚಾ, ಕರ್ಮಣಾ ನಾವು ಒಂದೇ ರೀತಿಯಾಗಿರಬೇಕು. ಪ್ರತಿಯೊಬ್ಬ ವ್ಯಕ್ತಿಯೂ ಈ ಉಪಾಯದಿಂದ ತನ್ನನ್ನು ತಾನು ಅಳೆದುಕೊಳ್ಳಬಹುದು. ಇದು ಮಾನವನ ಆಧ್ಯಾತ್ಮಿಕ ಜೀವನದಲ್ಲಿ ಮೊದಲನೆ ಮೆಟ್ಟಲು. ಈ ರೀತಿಯಾದ ಪರಿಶೀಲನೆಯಿಂದ ಸಾಮಾನ್ಯ ವ್ಯಕ್ತಿಯೂ ತನ್ನ ಲೋಪದೋಷಗಳನ್ನು ತಿದ್ದಿಕೊಳ್ಳಬಹುದು. ಶಿವನಲ್ಲಿ ದೃಢವಾದ ಭಕ್ತಿಯಿಂದ ಕೂಡಿ ತನ್ನ ವ್ಯವಹಾರವನ್ನು ನಡೆಸುತ್ತಾ ಹೋದವನನ್ನು ಶಿವನು ಎಂದೂ ಕೈ ಬಿಡುವದಿಲ್ಲವೆಂಬ ನಂಬಿಕೆ ಬೇಕು. ತಾನು ತಪ್ಪುದಾರಿ ಹಿಡಿದರೆ ಶಿವನು ಮೆಚ್ಚುವದಿಲ್ಲವೆಂಬ ತಿಳಿವಳಿಕೆಯೂ, ಭಯವೂ ಇರಬೇಕು.

ಶಿವನೊಳಗೆ ವಿಶ್ವಾಸ, ಶಿವನೊಳಗೆ ನಂಬಿಕೆಯು, ಶಿವನೊಳಗೆ ಮೋಹವಿರೆ ತಾನೆ ಶಿವನು, ಎಂಬುವ ಮುಪ್ಪಿನ ಷಡಕ್ಷರಿಯವರ ವಚನವನ್ನೂ "ನಂಬು ನಂಬೆಲೆ ಬರಿದೆ ಹಂಬಲಿಸದಿರು, ನಂಬುಗೆಯು ಕಾರಣವು ಸಾಂಬನೊಲಿವುದಕೆ." "ನಂಬಿ ಕರೆದರೆ ಓ ಎನ್ನನೆ ಶಿವನು? ನಂಬಲರಿಯರು ನಚ್ಚಲರಿಯರು ಬರಿದೆ ಕರೆವರು" ಎಂಬ ಬಸವೇಶ್ವರ ವಚನವನ್ನು ಪಾಲಿಸುತ್ತಾ ಬಂದರೆ ಶಿವನು ಎಂದಿಗೂ ಕೈ ಬಿಡುವದಿಲ್ಲವೆಂಬ ದೃಢವಾದ ನಂಬಿಕೆಯು ಬೇಕು. ಬಲವಾದ ವಿಶ್ವಾಸ ಬೇಕು. ಆಧ್ಯಾತ್ಮ ಜೀವನದಲ್ಲಿ ಈ ರೀತಿಯಾದ ದೃಢಭಕ್ತಿಯು ಮುಖ್ಯವಾದ ಸಾಧನವಾಗಿದೆ ಶೈವ ಸಂಪ್ರದಾಯದಲ್ಲಿ ತನ್ನನ್ನು ತಾನು ವಿಮರ್ಶೆ ಮಾಡಿಕೊಂಡು ಈಶಾವೇಶವನ್ನು ಸಂಪಾದಿಸುವುದೇ ಮುಖ್ಯ ಗುರಿ. ಶಾಸ್ತ್ರತಃ ಗುರುತಃ ಸ್ವತಃ ಎಂಬಂತೆ ಶಾಸ್ತ್ರ, ಗುರು, ಸ್ವಪ್ರಯತ್ನ ಮೊದಲಾದ ಎಲ್ಲ ಉಪಾಯಗಳಿಂದಲೂ ಗುರಿಯನ್ನು ಸಾಧಿಸಬೇಕು.

CC-0. Jangamwadi Math Collection. Digitized by eGangotri

# ವೀರಶೈವ ಸಮಾಜವು-ಎಂತು, ಎತ್ತ-ಸಾಗಿದೆ ?

**ಶ್ರೀ ಎಸ್. ಬಿ. ಹಿರೇಮಠ ವಕೀಲರು, ಹಾವೇರಿ**

ವೀರಶೈವ ಸಮಾಜದ ಸಮಸ್ಯೆಗಳು ಬಹುವಾಗಿಯೂ, ಬಹುಮುಖವಾಗಿಯೂ ಇರುತ್ತವೆ. ಆಧ್ಯಾತ್ಮಿಕ ವಿಚಾರ ದೃಷ್ಟಿಯಿಂದ ನೋಡಿದರಂತೂ ಬಿಕ್ಕಟ್ಟಿನಲ್ಲಿ ಅಕ್ಕಳಿಸುವ ಪ್ರಸಂಗ. ಮತ್ತು ಈಗಿನ ಪ್ರಸಂಗ-ಪರಸ್ಥಿತಿಗೆ ಅದು ಒಗ್ಗುವದೂ ಅಲ್ಲದು. ಭೌತಿಕ ಅಥವಾ ಆದಿಭೌತಿಕವಾಗಿ ಅಂದರೆ ಈಗ್ಯೆ ಅವಶ್ಯವಾಗಿ ಬೇಕಾಗಿರುವ ಸಾಮಾನ್ಯ ಸಾಮಾಜಿಕ, ಶೈಕ್ಷಣಿಕ, ಸಾಂಪತ್ತಿಕ, ವ್ಯವಹಾರಿಕ ವಿಚಾರದಿಂದ ಪರಶೀಲಿಸಿ ಮುನ್ನಡೆಯ ಬಗೆಗೆ ಹೇಳುವದು ಬೇಕಾಗಿದೆ.

ಸ್ವಾಭಾವಿಕವಾಗಿ ವೀರಶೈವ ಸಮಾಜವು ಒಮ್ಮೈರಿಯ ಒಂದು ಕುಟುಂಬ-ವಂತಿರಬೇಕಾಗಿದ್ದರೂ ಹಿಂದೂ ಸಮಾಜದಲ್ಲಿ ಅನೇಕ ಪಕ್ಷ-ಪಂಗಡಗಳಿರುವ ಕಾರಣದಿಂದ ಭಿನ್ನತೆಯು ಕಾಣುತ್ತಿರುವಂತೆ ಈ ಸಮಾಜದಲ್ಲಿಯೂ ಜಾತಿ ಒಳಜಾತಿಗಳೆಂದು ಕಾನಿಕಾಸಿಯಾಗಿ ಹಾಗೇ ಸಾಗುತ್ತಿರುವದರಿಂದ ಸಾಮಾನ್ಯ-ವಾಗಿರಬೇಕಾದ ಐಕ್ಯತೆಯು ಶಾಂತಿ, ಸಮಾಧಾನ, ಸೌಹಾರ್ದ ಭಾವನೆಗಳಿಗೆ ಆಗಾಗ್ಗೆ ಬಿರುಕು ಹೊಡೆಯುತ್ತಿರುವದರಿಂದ ಶಕ್ತಿ, ಸಾಮರ್ಥ್ಯ, ಗೌರವಗಳಿಗೆ ಚ್ಯುತಿ-ಯುಂಟಾಗುತ್ತದೆ. ಗುರುವರ್ಗವು ಮನುಷ್ಯನ 'ಬುದ್ಧಿ' ಸ್ವರೂಪದಲ್ಲಿ ಸಮಾಜದ ಯೋಗಕ್ಷೇಮ ಸುಖ-ಶಾಂತಿಗಳನ್ನು ಕಾಯಬೇಕಾದರೂ— ಆ ವರ್ಗವು ತಮ್ಮ ಸಾಧನದಲ್ಲಿಯೇ ಮಡಗುತ್ತಾರೆ. ಭಕ್ತಿ ಸಮುಚ್ಚಯ ಕಂಡರೆ, ಅದರ ಸದ್ವಿನಿ-ಯೋಗದಿಂದ ಸಮಾಜಾಭಿವೃದ್ಧಿಗೊಳಿಸದೇ ಇನ್ನೂ ಮಿರುಗು ಮೆರವಣಿಗೆ ಯೆನ್ನುತ್ತಾರೆ. ಇನ್ನು ಅನಾಸಕ್ತ ಭಾವನೆಯಿಂದ ಸಮಾಜದ 'ಮನಸ್ಸು' ರೂಪ ದಲ್ಲಿರುವ ವಿರಕ್ತವರ್ಗವು ಒಳ್ಳೆಯ ರೀತಿಯಿಂದ ಸಮಾಜದ ಮನಸ್ಸನ್ನು ಸ್ವಚ್ಛತೆ ಯಲ್ಲಿಡತಕ್ಕವರು; ಅವರಾದರೂ ತಮ್ಮ ಸ್ಥಾನಮಾನಕ್ಕನುಗುಣವಾಗಿ ಶ್ರಮಿಸುತ್ತಿ-ರುವದಿಲ್ಲ. ಅಡಾಗುಡಿ ಹೇಳಬೇಕೆಂದರೆ ಕೆಲಕೆಲವು ವಿರಕ್ತಪೀಠದವರೇ ಸ್ಕೂಲು, ಹಾಯಸ್ಕೂಲು, ಕಾಲೇಜು, ಬೋರ್ಡಿಂಗುಗಳನ್ನು ಸ್ಥಾಪಿಸಿ ಕೆಲಮಟ್ಟಿಗಿನ ಪ್ರಗತಿಗಾದರೂ ಕಾರಣರಾಗಿದ್ದಾರೆಯೇ ಹೊರ್ತು, ಗುರು ಸಿಂಹಾಸನದವರು ಇದನ್ನು ಮೀರಿಸಬೇಕಾದರೂ ಆ ಮಟ್ಟಕ್ಕೆ ಏರುವದಿಲ್ಲ. ದುರ್ದೈವದಿಂದ ಏರುವ ಶುಭ ಲಕ್ಷಣಗಳೂ ಕಾಣುವದಿಲ್ಲ.

ಹೀಗೆ ಸಮಾಜದ ಹೊಟ್ಟೆ ನೆತ್ತಿ (ಯೋಗಕ್ಷೇಮ) ಯನ್ನು ಸರಿಯಾಗಿ ನೋಡುವವರ ಅಭಾವವಿರುವದನ್ನೇ ಮುಂಗಂಡು ಈಗಿನ ಪ್ರವೃತ್ತಿಗನುಸರಿಸಿ

CC-0. Jangamwadi Math Collection. Digitized by eGangotri

ಸುಮಾರು ೬೦ ವರುಷದ ಹಿಂದೆ ಕೆಲವು ಸಮಾಜದ ಪ್ರಮುಖರ ಸಹಾಯ ಸಹ-ಕಾರಗಳಿಂದ (ನಾನು ಕೇಳಿದಂತೆ) ಲಿಂಗೈಕ್ಯ ಶ್ರೀ ಹಾನಗಲ್ಲ ಮಹಾಸ್ವಾಮಿಗಳವರು ಶ್ರೀಮದ್ವೀರಶೈವ ಮಹಾಸಭೆಯನ್ನು ಸ್ಥಾಪಿಸಿ ಅದರ ಮುಖಾಂತರ ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಅವಕಾಶವಾಗುವಂತೆ ಮಾಡಿದರು. ಗುರು ಸಿಂಹಾಸನಗಳೂ ಬೇಡ, ವಿರಕ್ತಪೀಠಗಳೂ ಬೇಡ, ಈ ಮಹಾಸಭೆಯ ಅಧಿವೇಶನ ಗಳ ಮೂಲಕ ಸಮಾಜದ ಮಹಾಜನರ ಉತ್ಸಾಹ ಶಕ್ತಿಗಳು ಕವಿದುಕ್ಕಿ ಸಮಾಜದ ಪ್ರಗತಿಯು ಭರದಿಂದ ಸಾಗಲೆಂಬುದೇ ಆ ಮಹಾ ಸಭಾನಿರ್ಮಾಪಕರ ಅಪೇಕ್ಷೆ-ನಿರೀಕ್ಷೆಯಿದ್ದಿತು! ಆದರೆ ಸಮಾಜದ ಅನುತ್ಸಾಹ-ತಾತ್ಸಾರಗಳ ಮೂಲಕ ಈ ಷಟ್‌ದಶಕಾವಧಿಯಲ್ಲಿ ೧೭ ಮಹಾಸಭೆಗಳು ಜರುಗಬೇಕಾದರೆ ಕುರಿಕೋಣ ಬಿದ್ದು ಹೋದಂತಾಗಿದೆ! ಏನಿಲ್ಲೆಂದರೂ ಲಿಂಗೈಕ್ಯ ಹಾನಗಲ್ಲ ಮಹಾಸ್ವಾಮಿಗಳ ಗುರು ವಿರಕ್ತಮಠ ಪೀಠಗಳಿಗೆ ತಕ್ಕಂತೆ ಪುಣೆಯ "ಸರ್ವಂಟ್ಸ್ ಆಫ್ ಇಂಡಿಯಾ" ಸಂಸ್ಥೆಯ ದರತಿಯ ಮೇಲೆ ಪೂರ್ವಕಾಲದ ಋಷ್ಯಾಶ್ರಮದ ಸ್ವರೂಪದಲ್ಲಿ ಒಂದು ಆಶ್ರಮ ಸ್ಥಾಪಿಸಬೇಕೆಂದವರು ಶ್ರೀ ಶಿವಯೋಗಮಂದಿರವನ್ನು ಸ್ಥಾಪಿಸಿದ್ದು ಈಗ ಅದು ತೃಪ್ತಿಕರ ಸಾಗಿದೆ. ಮತ್ತೂ ಮಹಾಸ್ವಾಮಿಗಳು ದೂರದೃಷ್ಟಿಯಿಂದ ಒಂದು ಬ್ಯಾಂಕನ್ನೂ, ಒಂದು ಅಚ್ಚುಕೂಟವನ್ನೂ, ಧರ್ಮಗ್ರಂಥ ಪ್ರಸಾರಕ ಸಂಸ್ಥೆ-ಯನ್ನೂ, ಒಂದು ನೂಲು ನೇಯುವ ಗಿರಣಿಯನ್ನೂ ಸಹ ಸ್ಥಾಪಿಸಬೇಕೆಂದು ನಿರ್ಧರಿಸಿದರು. ಕೆಲವುಗಳ ಬಗ್ಗೆ ಹೊಳೆವನ್ನೂ ಹಾಕಿದರು. ಆದರೆ ಸಮಾಜ-ದವರ ಅನಾಸ್ಥೆಯ ಮೂಲಕ ಅವು ಯಾವೂ ಮುಂದುವರೆಯದಾದವು. ಇಷ್ಟೆಲ್ಲ ಮಹಾ ಪ್ರಯತ್ನಗಳು ನಡೆದುದು ಮೊದಲಿನ ೬-೭ ಅಧಿವೇಶನ (೧೯೧೨) ಗಳೊಳ ಗಾಗಿಯೇ. ಮುಂದೆ ಶ್ರೀ ಚಿತ್ರಕಲ್ಲುದುರ್ಗದ ಜಗದ್ಗುರುಗಳ ವರಪ್ರಭಾವದಿಂದ ಅವರ ಸನ್ನಿಧಿಯಲ್ಲಿ ದಾವಣಗೇರಿ ಅಧಿವೇಶನದಲ್ಲಿ ಶಾಶ್ವತಧನ ನಿಧಿಯು ಕೂಡಿ ಮುಂದೆ ಸುಸೂತ್ರವಾಗಿ ಮಹಾಸಭೆಗಳನ್ನು ಕೂಡಿಸಲು ನೀರಲ್ಲಿ ಕಲ್ಲನ್ನೆತ್ತುವ ಹಾಗೆ ಮಹಾಸನ್ನಿಧಿಯವರು ಹಗುರು ಮಾಡಿಕೊಟ್ಟರೂ ಸಮಾಜದಲ್ಲಿಯ ಮತ್ತೂ ನಿರುತ್ಸಾಹ ಉಪೇಕ್ಷೆಗಳ ಮೂಲಕ ಮುಂದಿನ ಅಧಿವೇಶನಗಳೂ ಸರಿಯಾಗಿ ಜರುಗಲಿಲ್ಲ. ಜರುಗಿದ ಮಹಾಸಭೆಯ ಅಧಿವೇಶನಗಳಿಂದ ಯಾವ ವಿಧಾಯಕ ಕಾರ್ಯಗಳೂ ಜರುಗುತ್ತಿಲ್ಲವೆಂದು ದುಃಖದಿಂದ ಹೇಳಬೇಕಾಗಿದೆ. ಹಿಂದಿನ ಮಹಾಸಭೆಯ ಅಧ್ಯಕ್ಷರಾದ ವಿಧಾಯಕ ಕರ್ಮವೀರ ಶ್ರೀ ಬಂಥನಾಳ ಸ್ವಾಮಿಗಳು ಮಹಾಸಭೆಯ ಚಟುವಟಿಕೆಯನ್ನು ಹೆಚ್ಚಿಸಬೇಕೆಂದರೂ ಮಹಾಜನರ ಅನಾಸ್ಥೆಯ ಮೂಲಕ ಅವರ ಬಯಕೆಯಲ್ಲಿಯೇ ಕಾರ್ಯಗಳು ಲೀನಗೊಂಡು ಹೋದುದಕ್ಕಾಗಿ ಅವರು ಬಹುಸಾರೆ ಹಳಹಳಿಸಿದ್ದು ಬಹುಜನರ ಲಕ್ಷ್ಯಕ್ಕೆ ಬಂದುದಾಗಿದೆ.

ಕಟ್ಟಕಡೆಗೆ ಈ ಹೋದ ಅಧಿವೇಶವು ಮಹಾಸಭೆಯ ಉತ್ಪಾದಕರಲ್ಲೊಬ್ಬರಾದ

CC-0. Jangamwadi Math Collection. Digitized by eGangotri

ಲಿಂಗೈಕ್ಯ ಹಾನಗಲ್ಲು ಮಹಾಸ್ವಾಮಿಗಳ ಪವಿತ್ರ ಭೂಮಿಯಲ್ಲಿಯೇ ಅವರೆದುರು ಸದರಿನಲ್ಲಿಯೇ ಬೆಳೆದು ಸಜ್ಜಿತರಾದ ಅನೇಕ ಮಹಾಸ್ವಾಮಿಗಳ ಕಾರ್ಯ-ಕಲಾಪ ಗಳೊಂದಿಗೆ ಮತ್ತು ಪ್ರಖ್ಯಾತ ಶಿಕ್ಷಣ ತಜ್ಞರಾದ ಶ್ರೀ ರ್‍ಯಾಂಗಲರ ಸಾವಟಿಯವರ ಅಧ್ಯಕ್ಷತೆಯಲ್ಲಿ ಕೂಡುವುದಾದುರಿಂದ ಬಹು ಜನರು ಬಹು ವಿಧವಾದ ವಿಧಾಯಕ ಕಾರ್ಯಗಳು ಮುಂದುವರೆಯುವವೆಂದು ಅಪೇಕ್ಷಿಸಿದುದೇನಾಶ್ಚರ್ಯವಲ್ಲ. ಇಂಥ ಅಪರೂಪ ಸಂದರ್ಭದಲ್ಲಿ ಕೂಡಿದ ಅಧಿವೇಶನದಲ್ಲಿ ಕೆಲಮಟ್ಟಿಗೆ ವಿಧಾಯಕ ಕಾರ್ಯ ರೂಪದ ಗೊತ್ತುವಳಿಗಳು ಮನ್ನಿಸಲ್ಪಟ್ಟರೂ ಅದರಲ್ಲಿ ಯಾವವೂ ಇನ್ನೂ ಮೂರ್ತ ಸ್ವರೂಪಕ್ಕೆ ಬಾರದೇ ಆ ಗೊತ್ತುವಳಿಗಳು ಗೊತ್ತುವಳಿಗಳ ಮಟ್ಟಿಗೇ ನಿರ್ಬಂಧಿ-ಸಲ್ಪಟ್ಟಂತೆ ಕಾಣುವದು. ಹೀಗೆ ನಡೆದಿರುವವು ನಮ್ಮ ಸಾರ್ವಜನಿಕ ಸಾಂಘಿಕ ಕಾರ್ಯಗಳು !

ಮತ್ತೊಂದು ಬಾಧೆಯೆಂದರೆ ಈಗಿನ ಅಧಿಕಾರಾರೂಢ ಪಕ್ಷವಾದ ಕಾಂಗ್ರೆಸ್ ರಾಜ್ಯದಲ್ಲಿ ನಿರ್ಜಾತೀಯ (Secular) ತತ್ವಾಚರಣೆ ನಡೆದಿರುವದು. ನಮ್ಮವ ರಲ್ಲಿ ತುಸು ಮುಂದುವರಿದವರೆಲ್ಲ ಕಾಂಗ್ರೆಸ್ ಮುಂದಾಳುಗಳಾಗಿರುವರು. ಅವರಿಗೆ ಈ ಸಮಾಜದ (ಜಾತಿಯ) ಹೆಸರು ಅಥವಾ ವಿಷಯ ಎತ್ತುವದೇ ಅಸಥ್ಯ! ವಿಷಪ್ರಾಯ ! ಅಂದರೆ ಕಾಂಗ್ರೆಸ್ ಮಂದಿಯನ್ನೆಲ್ಲ ಬಿಟ್ಟು ಲೆಕ್ಕ ನೋಡಿದರೆ ಉಳಿದವರಲ್ಲಿ ಸಾರ್ವಜನಿಕ ಚಟುವಟಿಕೆದಾರರೇ ಕಡಿಮೆ. ಶಿಕ್ಷಿತರು ಪದವೀಧರರು ಒಂದೊಂದು ರೀತಿಯಿಂದ ಗುಂಪುಗಟ್ಟಿ ಮುಂದಾಗಿ ಬಂದು ಸಮಾಜಾಭಿವೃದ್ಧಿಯ ಯೋಜನೆಯನ್ನು ಮಾಡಿ ಕೆಲಸಗಳನ್ನು ಕೈಕೊಂಡು ದುಡಿಯುವುದು ಬೇಕಾಗಿದೆ. ಮತ್ತು ಅದು ಅವಶ್ಯ. ಆದರೆ ಅವರಲ್ಲಿ ಎಷ್ಟೋ ಜನರಿಗೆ ಇತ್ತ ಆಸಕ್ತಿಯಿಲ್ಲದಂತಾ-ಗಿರುವದು ದುರ್ದೈವ !

ಇನ್ನೊಂದು ವಿಸಂಗತ ಪರಿಸ್ಥಿತಿಯೇನೆಂದರೆ ನಮ್ಮ ಬಹು ಜನ ವಿದ್ಯಾವಂತರು ಲಿಂಗಾಯತರೆಂದು ಅದರ ಲಾಭ ಪಡೆಯುತ್ತಿದ್ದರೂ ಅವರಿಗೆ ಲಿಂಗವೇ ಭರ್ಷಣ; ಲಿಂಗಧಾರಣವೇ ಇಲ್ಲ. "ಅದರಲ್ಲೇನಿದೆ? ಲಿಂಗಧಾರಣದಲ್ಲೇನಿದೆ ?" ಎಂದರೂ ಎನ್ನಬಹುದು. ಧಾರ್ಮಿಕ ವಿಚಾರವು ಹೋಗಲಿ. ಲೌಕಿಕ ವಿಚಾರದಿಂದಲೂ ಕೆಡುಕು. ಮುಂದೆ ತುಸು ದಿನ ಉರುಳಿದರೆ ಲಿಂಗವಂತರೆಂಬ ಅಭಿಮಾನವು ಕಳೆಗುಂದುವ ಭಯ ! ಲಿಂಗವಂತಿಕೆಯು ಕಡಿಮೆಯಾಗುವ ಭಯ ! ಇದು ಸಾಮಾನ್ಯವಾಗಿಯೂ ಮತ್ತೂ ಮಹಾಸ್ವಾಮಿಗಳಿಗೆ ಗೊತ್ತಿದ್ದ ಮಾತಾದರೂ ಅವರು ಕಲಿತವರಿಗೆ ಅಥವ ರಾಜಕೀಯ ಮುಂದಾಳುಗಳಿಗೆ ಏನೂ ಪಿಟ್ಟೆನ್ನದಂತೆ ಇರುವರು. ಲಿಂಗವಂತರಿಗೆ ಮೊದಲನೇ ಲಕ್ಷಣವಾದ ಲಿಂಗಧಾರಣವನ್ನೇ ಅನು-ಸರಿಸದಿದ್ದರೆ ಅಥವಾ ಅದನ್ನು ಧರಿಸಲಿಕ್ಕಾಗದಿದ್ದರೆ ಆದ ಪರಿಣಾಮ ಹೇಗೆಂಬ

CC-0. Jangamwadi Math Collection. Digitized by eGangotri

ಬಗೆಗೆ ಅವರು ಆಳವಾಗಿ ವಿಚಾರಿಸಬೇಕು. ಇಂಥ ಪರಿಸ್ಥಿತಿಯಲ್ಲಿ ಲಿಂಗಧಾರಣೆ-ಯಿಲ್ಲದಿದ್ದರೂ ಎಷ್ಟೋ ಮಹಾಸ್ವಾಮಿಗಳು ಅವರಿಗೆ ಕೇವಲ ಸತ್ಕಾರಗಳಿಂದ ಗೌರವಿಸುವರೇ ಹೊರತು ಅದೊಂದು ಸಣ್ಣ ಮಂತ್ರೋಪದೇಶದ ಮೂಲಕ ಲಿಂಗವಂತರನ್ನು ಮಾಡಿಬಿಡುವ ಧೈರ್ಯ ತಾಳಲಿಕ್ಕಾಗುವದಿಲ್ಲ. ಈಗ ನಡೆ ನುಡಿ ನಡೆದಿರುವಂತೆ ಕೆಲದಿನ ಹೀಗೆ ಸಾಗಿದರೆ ಮುಂದೆ 'ಅಲಿಂಗಿ' ಲಿಂಗವಂತರೆಂಬ ಮತ್ತೊಂದು ಒಳ-ಪಂಗಡವೂ ಹುಟ್ಟುವ ಭಯ !

ಈ ರೀತಿಯಿಂದ ಅನಾಸ್ಥೆಯಿಂದ ಕೆಲವರು, ಉಪೇಕ್ಷೆ ದುರ್ಲಕ್ಷ್ಯದಿಂದ ಕೆಲವರು, ಕಾಂಗ್ರೆಸಿನ ನಿರ್ಜಾತೀಯ ತತ್ವಾಚರಣೆಯ ಮುಕಾಡ (ಮುಖವಾಡು-ಮುಖ ಕಟ್ಟುವದು) ದಿಂದ ಕೆಲವರು ಹೀಗೆ ಬಾಯಿಗೆ ಬಿಗಿ, ನಾಲಿಗೆಗೆ ಮುಳ್ಳು ಅಂಟಿಸಿಕೊಳ್ಳುತ್ತಿರುವದರಿಂದ ಸಮಾಜದ ಪ್ರಗತಿಯ ಕಡೆಗೆ ಬಹಿರಂಗವಾಗಿಯೇ ಲಕ್ಷಿಸುವವರೇ ಇಲ್ಲದಾಗಿದೆ. ಅಂಜುತ್ತ ಅಳುಕುತ್ತ ಹಿನ್ನೆಲೆಯಿಂದ ಹಣಿಕಿ ಹಾಕುತ್ತ ಮಾಡುವದರಿಂದ ಆಗುವದೆಷ್ಟು, ಹೋಗುವದೆಷ್ಟು ? ಶಿಕ್ಷಣಾಲಯ ಪ್ರವೇಶದ ಬಗೆಗೂ ಸರಕಾರದ ಅನೇಕ ಶಾಖಾಶೇವೆ (ನವಕರಿ) ಯ ಬಗೆಗೂ ಹಿಂದುಳಿದ ವರ್ಗಗಳಿಗೆ ಅವಕಾಶ ಕಲ್ಪಿಸಿ ಸಮುಷ್ಟಿಗೊಳಿಸಬೇಕೆಂದು ರಾಜ್ಯ ಸಂವಿಧಾನ (ಘಟನೆ) ದಲ್ಲಿ ರೂಪಿಸಿರುವ ಮೂಲಕ ಅದರಂತೆ ವೀರಶೈವ ಸಮಾಜವು ಸ್ಥಾನೀಕೃತ-ವಾಗಿರುವ ರಾಜ್ಯ ರಾಜ್ಯಭಾಗದ ಪ್ರಭುತ್ವದವರು ಅದರಂತೆ ಅವರಿಗೆ (ಹಿಂದುಳಿದ-ವರಿಗೆ) ವಿಶಿಷ್ಟವಾಗಿ ಸೌಕರ್ಯ ಸೌಲಭ್ಯ (Special Concession) ಗಳನ್ನು ತೋರಿಸುವ ನಿಯಮ ನಿರ್ಣಯಗಳನ್ನು ಮಾಡಿಕೊಳ್ಳುತ್ತಿರುವರು. ಅದರಂತೆ ಹಳೆಯ ಮೈಸೂರ ಪ್ರಾಂತ ಸರಕಾರವು ಮೊದಲೇ ಹೊಂದಿಕೆ ಮಾಡಿಕೊಂಡು ವೀರಶೈವರನ್ನು ಹಿಂದುಳಿದ ವರ್ಗದಲ್ಲಿ ಹಾಕಿ ನಡೆಯುತ್ತಿದ್ದಿತು. ಅಲ್ಲದೆ ಮುಂಬಯಿ ಕರ್ನಾಟಕ, ಹೈದರಾಬಾದ ಕರ್ನಾಟಕಗಳಲ್ಲಿಯೂ ಕೆಲಮಟ್ಟಿಗೆ ಕೆಲ ಸೌಲಭ್ಯಗಳ ಅವಕಾಶವಿದ್ದಿತು. ಈಗ ಹೊಸ 'ಮೈಸೂರು' (ಕರ್ನಾಟಕ) ಪ್ರಾಂತವಾಗಿ ಕೆಲಮಟ್ಟಿಗೆಯಾದರೂ ಲಿಂಗಾಯತರೇ ಅಧಿಕಾರ ಸ್ಥಾನದಲ್ಲಿದ್ದರೂ ತುಪ್ಪಕ್ಕೆ ಅರ್ಹನಾದ ಗಂಡನು ತುಪ್ಪ ಕೇಳಿದರೂ ಗಂಡು ಬೀರಿ ಹೆಂಡತಿಯ ಬೆದರಿಕೆಗೆ ಆ 'ಗಂಡು' ಗಂಡನು "ತುಪ್ಪ ಕೇಳಲಿಲ್ಲ. ಉಫ್ ಎಂದೆನೆ" ಎಂದು ಸಮಾಧಾನ ಪಡುವ ಸಂಕುಚಿತ ಮೆಟ್ಟಿಗೆ ಬಂದಿದ್ದೇವೆ. ನಾಗನಗೌಡ ಸಮಿತಿಯು ಪ್ರಾಸ್ತಾವಿಕ ಕ್ರಮವಾಗಿ ಲಿಂಗಾಯತರನ್ನು ಅವರ ಯಥಾತಥ್ಯ ಸ್ಥಿತಿಯ ಮೇಲಿಂದ ಹಿಂದುಳಿದ ವರ್ಗದ ಕಾಸಿ (ವರ್ಗ) ಯಲ್ಲಿರಿಸಬೇಕಾದುದು ಕ್ರಮಪ್ರಾಪ್ತವೆಂಬುವ ಮಾತು ಗೊತ್ತಿದ್ದು ವೀರಶೈವರು ಮುಂದುವರೆದವರೆಂದು ಬೀಸಾಟ್ಟಿರುವದಾದರೂ 'ಅದಲ್ಲ' ವೆಂದು ಪ್ರಾತಿನಿಧಿಕವಾಗಿ ಅಂಕೆ ಸಂಖ್ಯೆಗಳಿಂದ ಸಿದ್ಧಮಾಡಿ ನಮಗೆ ಸಿಗತಕ್ಕ ಲಾಭವನ್ನು ಪಡೆಯುವ ಸಾಮರ್ಥ್ಯ ಸಾಹಸವನ್ನು ಯಾರೂ ಸರಿಯಾಗಿ

CC-0. Jangamwadi Math Collection. Digitized by eGangotri

ಮಾಡುತ್ತಿಲ್ಲ. 'ಹೊಲಿ ಮೊರಿದ ಮೇಲೆ ಬಂಟ ಹೆಣಗಿದನು' ಎಂಬಂತೆ ಮಾಡುವ ಚಾಳಿ ನಮ್ಮದು ! ಮೂಲ ಕರ್ತವ್ಯವಾಗಿರಿಸಿಕೊಳ್ಳಬೇಕಾದ ಗುರು ವಿರಕ್ತಪೀಠದವರು ತುಟಿ ಎರಡು ಮಾಡುತ್ತಿಲ್ಲ. ವೀರಶೈವ ಮಹಾಸಭಾಧಿಕಾರಿಗಳು ಆಕಳಿಸುತ್ತಾ, ತೂಕಡಿಸುತ್ತಾ ಇದ್ದಾರೆ. ರಾಜಕೀಯ ಮುಂದಾಳುಗಳು ಇದೆಲ್ಲಿಯ 'ಜಾತೀಯ ಇಂಜಾನ' ವೆಂದು ಮೂಗು ಮುಚ್ಚಿಕೊಳ್ಳುತ್ತಿದ್ದಾರೆ.

ಹೀಗೆ ಒಂದಲ್ಲ–ಎರಡಲ್ಲ ಅನೇಕ ರೀತಿಯ ವಿಚಾರಗಳಿಂದ ಸಮಾಜವು ಗತಸ್ಥಾನ ಸ್ಥಿತಸ್ಥಾನದಲ್ಲಿಯೂ ನಿಲ್ಲದೇ ಅಧಃಪತನವಾಗುವ ದುರ್ಲಕ್ಷಣಗಳು ಸಾರ್ವತ್ರಿಕವಾಗಿ ಎದ್ದು ಕಾಣುತ್ತಿವೆ. ಸಮಾಜದ ಹಿತಚಿಂತಕರು, ಮುಂದಾಳುಗಳು ಇತ್ತ ಆದಷ್ಟು ಗಡ ನೆದರಿಡುವದು ಪಾಡ. ಕಳೆದುಕೊಂಡು ಮಿಡುಕುವ ನಮ್ಮ ಚಾಳಿ ಒಳ್ಳೆಯದಲ್ಲ. ಯಥಾತಥ್ಯ ಲಭ್ಯವಾಗಬಹುದಾದ ಸೌಲಭ್ಯಾಂಶಗಳನ್ನು ಪ್ರಭುತ್ವದವರಿಂದ ದೊರಕಿಸುವದು ಅನ್ಯಾಯವಲ್ಲ-ಪಾಪವಲ್ಲ. ಕಾಂಗ್ರೆಸಿನ ಮುಂದಾಳುಗಳು ಮುಟ್ಟಿದರೆ ಮೈಲಿಗೆಯಾದೀತೆಂಬ ಅಂಜು ಅಳಕುಗಳಿಂದ ಒರೆ ಮಿಕಿ ಮಿಕಿ ನೋಡಿ ಲೊಚಗುಟ್ಟುವದು ಲೇಸಲ್ಲ. ಮಂತ್ರಕ್ಕೆ ಮರದ ಮನಸ್ಸು ಮರಗುವದೇ ?

ವೀರಶೈವ ಮಹಾಸಭಾಧಿಕಾರಿಗಳಂತೂ ತಮ್ಮದ್ದೇ ಆದ ಈ ಕರ್ತವ್ಯಕರ್ಮಗಳ ಕಡೆಗೆ ಲಕ್ಷ್ಯ ಹಾಕುತ್ತಿರಬೇಕು. ಅಧಿವೇಶನವು ಕೂಡಿದಾಗ ಆದ ಗೊತ್ತುವಳಿಗಳ ಮಟ್ಟಿಗೇ ಕೆಲಸವನ್ನು ನಿರುಕಿಸಬಾರದು. ಅದರಂತೆ ಗುರು ವಿರಕ್ತ ಪೀಠಾಧಿಪತಿಗಳು ಸಹ ತಮ್ಮ ಈಗಿನ ಉಪೇಕ್ಷೆಯ ದೃಷ್ಟಿಯನ್ನು ಬಿಟ್ಟು ತಾವು ಮಾಡುವದನ್ನು ಮಾಡಿ ಅನ್ಯರಿಂದಾಗುವದನ್ನಾಗಿಸಿ ಸಮಾಜದ ಪ್ರಗತಿಯ ಪುಣ್ಯ ಕಟ್ಟಿಕೊಳ್ಳಬೇಕು.

CC-0. Jangamwadi Math Collection. Digitized by eGangotri

# ವಚನ ಸಾಹಿತ್ಯದಲ್ಲಿ ನೀತಿ

ಶ್ರೀ ವೀರಭದ್ರಪ್ಪ ಗಂಗಪ್ಪ ಕೋರಿಶೆಟ್ರ, ಬಿ. ಕಾಮ್.

ಮಾನವನು ಪ್ರಗತಿ, ಉನ್ನತಿಯನ್ನು ಹೊಂದಬೇಕಾದರೆ ಧರ್ಮ ಮಾರ್ಗವು ಅವಶ್ಯ ಬೇಕು. ಅದರಲ್ಲಿ ನೈತಿಕ ಮಟ್ಟ ಇಲ್ಲದ ರಾಜಕೀಯವಾಗಲಿ, ಸಾಮಾಜಿಕ ಜೀವನವಾಗಲಿ ನಡೆಯಲಾರದು. ನೈತಿಕಮಟ್ಟವಿಲ್ಲವೆಂದು ಈಗಿನ ರಾಜ್ಯದಲ್ಲಿ ಲಂಚಗುಳಿತನ, ಸ್ವಾರ್ಥಮಯ ಅಧಿಕಾರ ಲಾಲಸೆ, ಒಂದೇ, ಎರಡೇ ಹೀಗೆ ಅನೇಕ ತರಹದ ಕೋಲಾಹಲಗಳೆದ್ದಿವೆ. ಇವೆಲ್ಲವೂ ನಾಶವಾಗಿ, ಮಾನವನ ಏಳ್ಗೆ ಅಥವಾ ರಾಷ್ಟ್ರದ ಏಳ್ಗೆಯಾಗಬೇಕಾದರೆ ಜನಸಾಮಾನ್ಯರಲ್ಲಿ ನೈತಿಕ ಮಟ್ಟ ಬೆಳೆದು ಬರಬೇಕು. "ಸತ್ಯಂ ವದ ಧರ್ಮಂ ಚರ" ಎಂಬ ವೇದವಾಣಿಯು ಅದನ್ನೇ ಸಮರ್ಥಿಸುವದು.

"गुणा गुणज्ञेषु गुणा भवन्ति ।
ते निर्गुणं प्राप्य भवन्ति दोषाः ।।"

"गुणेषु न च लिंगं न च वयः" ಸದ್ಗುಣವಂತನು ಜಗತ್‌ಪೂಜ್ಯನಾಗುವನೆಂಬ ತಾತ್ಪರ್ಯವು. ಅದರಲ್ಲಿಯೂ ನಮ್ಮ ಶಿವಶರಣರು ಅಚ್ಚಗನ್ನಡ ಮಾತಿನಲ್ಲಿ ಅನೇಕ ನೀತಿ-ಬೋಧಕ ವಚನಗಳನ್ನು ಉದಹರಿಸಿದ್ದಾರೆ.

ಯಾವ ಸಮಾಜದಲ್ಲಿಯೇ ಆಗಲಿ, ಯಾವ ಧರ್ಮದಲ್ಲಿಯೇ ಆಗಲಿ, ದುರಾಚಾರಕ್ಕೂ ಅನೀತಿಗೂ ಪ್ರೋತ್ಸಾಹವಿರುವದಿಲ್ಲ. ಸಮಾಜ ಹಿತಚಿಂತನೆ ಧರ್ಮದ ಒಂದು ಮುಖ್ಯ ಭಾಗ. ಮಾನವನು ಸ್ವಾರ್ಥ ಇಚ್ಛಿಸಬಾರದು. ತನ್ನನ್ನು ಇತರರು ಹೇಗೆ ಕಾಣಬೇಕೆಂದು ಬಯಸುವನೋ ಹಾಗೆಯೇ ತಾನೂ ಇತರರನ್ನು ಕಾಣಬೇಡವೆ? ಆದುದರಿಂದ ಸಮಾಜ ತನ್ನ ಸದಸ್ಯರ ನಡಾವಳಿಗೆ ಒಂದು ಕಟ್ಟು ಪಾಡನ್ನು ವಿಧಿಸುತ್ತದೆ. ಈ ಕಟ್ಟು ಪಾಡನ್ನು ಯಾರೂ ಮೀರಬಾರದೆಂದೇ ಗೊತ್ತುಮಾಡಿರುತ್ತದೆ. ಮೀರಿದಲ್ಲಿ ಸಮಾಜವು ಬಹಿಷ್ಕಾರಾದಿಗಳಿಂದ ದಂಡನೆ ವಿಧಿಸುತ್ತದೆ, ಆದರೆ, ಕೆಲವು ನೀತಿಗಳನ್ನು ಇತರರಿಗೆ ತಿಳಿಯದಂತೆ ವ್ಯಕ್ತಿ ಉಲ್ಲಂಘಿಸಬಹುದು. ಅಥವಾ ತಾನು ಬಲಿಷ್ಠನಾಗಿರುವದರಿಂದ ಸಮಾಜವನ್ನು ದುರ್ಲಕ್ಷಿಸಬಹುದು. ಆದುದರಿಂದ ದಂಡನೆ ಇಹಲೋಕದಲ್ಲಿ ಆಗದಿದ್ದರೂ ಪರಲೋಕದಲ್ಲಿ ಆಗುತ್ತದೆಂದು ಆಸ್ತಿಕರು ಹೇಳುತ್ತಾರೆ. ಅವರಂತೆ ಒಳ್ಳೇ ಕೆಲಸಕ್ಕೆ ಫಲ ಇಹದಲ್ಲಿ ದೊರೆಯದಿದ್ದರೆ, ಪರದಲ್ಲಿ ಕಾದಿರುತ್ತದೆ ಎಂದು ನಂಬುತ್ತಾರೆ. ಆದುದರಿಂದ ಸ್ವರ್ಗ ನರಕಗಳೆಂಬುದರ ಕಲ್ಪನೆಗಳಿವೆ.

CC-0. Jangamwadi Math Collection. Digitized by eGangotri

ಪರಮಾತ್ಮನನ್ನು ಒಲಿಸುವದು ಧರ್ಮದಲ್ಲಿ ಮುಖ್ಯವಾಗಿರುವದರಿಂದ ಪರಮಾತ್ಮನ ಕಟ್ಟಳೆಯನ್ನು ಮೀರದಿರುವದು ಹಾಗೆಯೇ ಒಲಿಸುವದಕ್ಕೆ ಮುಖ್ಯವಾದ ಮಾರ್ಗ. ಆದುದರಿಂದ ಎಲ್ಲರೂ ಸದಾಚಾರ ಸದ್ವರ್ತನೆಗಳಿಂದ ಇರತಕ್ಕದ್ದು. ಅಂತರಂಗ, ಬಹಿರಂಗ ಶುದ್ಧಿ ಪಡೆಯತಕ್ಕದ್ದು ಎಂಬುದು ವಚನಕಾರರ ಮತ. "ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ; ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ; ಇದೇ ನಮ್ಮ ಕೂಡಲಸಂಗನ ಒಲಿಸುವ ಪರಿ." ಎಂದು ಬಸವಣ್ಣನವರು ಹಾಡಿ ಹರಸಿದ್ದಾರೆ. ಇವೇ ಮಾತನ್ನು ನಾವೆಲ್ಲರೂ ಕ್ರಿಯಾರೂಪದಲ್ಲಿ ಪರಿವರ್ತನೆಗೊಳಿಸುವದರಿಂದಲೇ ಸಮಾಜೋದ್ಧಾರ, ಅದರಿಂದಲೇ ರಾಷ್ಟ್ರೋದ್ಧಾರ.

"ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹೊಲಸು ತಿಂದು ಹೊಲೆಯನಾದ" ಎಂಬುದಾಗಿ ಬಸವವಾಣಿ. ಜಾತಿ-ಮತಗಳು ಕರ್ಮದ ಮೇಲಿಂದ, ಜನತೆಯ ಉದ್ಯೋಗದ ಮೇಲಿಂದ ಬಂದವುಗಳು. ಶರಣರ ದೃಷ್ಟಿಯಲ್ಲಿ ಎಲ್ಲರೂ ಸರಿಸಮಾನರು. ನೋಡಿರಿ ಎಷ್ಟೊಂದು ವಿಶಾಲ ಮನೋಭಾವನೆ ಅವರದು! ಇಂಥ ವಿಶಾಲ ಭಾವನೆ ಪ್ರತಿಯೊಬ್ಬರಲ್ಲಿ ಬೆಳೆದು ಬರುವದು ಅತ್ಯವಶ್ಯ. ಮೇಲು ಕೀಳುಗಳೆಂಬ ಭಾವನೆ ನಾಶವಾಗಬೇಕು.

ವಚನ ವಾಙ್ಮಯವು ವಿಶಾಲವಾದುದು. ಅದನ್ನು ಅಭ್ಯಸಿಸಿದರೆ ಪ್ರತಿಯೊಬ್ಬನಿಗೂ ಪ್ರೇರಣೆ ಹುಟ್ಟುವದು. ಶರಣನಾಗುವದೆಂತು ? ಶರಣನಾರು ? He who is conscious of his origin is a SHARANA; He who is unconscious of his origin is the worldly man. ಎಂದು ಶ್ರೀ ಕುಮಾರ ಸ್ವಾಮಿಗಳು ಹೇಳಿದ್ದಾರೆ. "ಅರಿದಡೆ ಶರಣ ಮರೆದಡೆ ಮಾನವ" ಕಾಮವ ತೊರೆದಾತ, ಹೇಮವ ತೊರೆದಾತ, ಭಾನುವಿನ ಉದಯಕ್ಕೆ ಒಳಗಾಗದಾತ ಶರಣನು. ಆವಾಗಲೂ ನಿಮ್ಮ ಮಾಣಸೇ ನೆನೆವರ ಮನೆಯಲು ಶ್ವಾನವಾಗಿರಿಸು. ಎಂದು ಮನಬಿಚ್ಚಿ ಹೇಳಿದ್ದಾರೆ. ಇಂಥ ಶರಣರ ಸಂಗ ಅತ್ಯವಶ್ಯ. ಸಜ್ಜನರ ಸಂಗ ಹೆಜ್ಜೇನು ಸವಿದಂತೆ.

ಯಾರು ಭಕ್ತರಾಗಬೇಕೆಂದು ಬಯಸುವರೋ ಅವರು ಅದಕ್ಕೆ ತಕ್ಕ ನಡತೆಯುಳ್ಳವರಾಗಬೇಕು. ಇಲ್ಲದಿದ್ದರೆ ಅದು ಆತ್ಮವಂಚನೆಯಲ್ಲಿ ಆರಂಭವಾಗಿ ಆಷಾಢಭೂತಿಯಂತೆ ಪರರ ವಂಚನೆಯಲ್ಲಿ ಮುಕ್ತಾಯವಾಗುತ್ತದೆ. ಆದುದರಿಂದ ಇಂಥ ವೇಷಧಾರಕರಿಗೆ ಪರಮಾತ್ಮನೊಲಿಯುವದಿಲ್ಲ.

"ಅರ್ಥವಗಡದು, ಕ್ರೋಧ ತೊಲಗದು, ಕ್ರೂರ ಕುಹಕ ಭಾಷೆ ಬಿಡದನ್ನಕ್ಕ,

CC-0. Jangamwadi Math Collection. Digitized by eGangotri

ನೀನೆತ್ತ ಶಿವನೆತ್ತ ಹೋಗತ್ತ ಮರುಳೇ ! ಭವರೋಗವೆಂಬ ತಿಮಿರ ತಿಳಿಯದನ್ನಕ್ಕ ಕೂಡಲಸಂಗಯ್ಯನೆತ್ತ ನೀನೆತ್ತ ಮರುಳೇ ?"

ಮನುಷ್ಯನು ದೈನಂದಿನಿಕ ಜೀವನದಲ್ಲಿ ಯಾವ ರೀತಿ ವರ್ತಿಸಬೇಕು ಎಂಬ ಬಗ್ಗೆ ಒಂದು ಸದಾಚಾರ ಸ್ಮೃತಿಯೇ ಆಗಿದೆ. ಯಾವ ಪಾಪಕ್ಕೂ ಸಾಮಾನ್ಯವಾಗಿ "ಆಶೆಯೇ"ಮೂಲವಾಗಿರುತ್ತದೆ. ಆಸೆಯನ್ನು ತೃಪ್ತಿಪಡಿಸುವದು ಸಾಧ್ಯವಿಲ್ಲ. "ಆಶೆಯೆಂಬುದು ಅರಸಿಂಗಲ್ಲದೆ ಶಿವಶರಣರಿಗುಂಟೆ" ಎಂದು ಹಾಡಿದ್ದಾರೆ. ಆಸೆಗೆ ಅಡ್ಡಿ ಬಂದಾಗ ರೋಷ ಹುಟ್ಟುತ್ತದೆ. "ರೋಷವೆಂಬುದು ಯಮದೂತ ರಿಗೆ, ಅಜಾತರಿಗಿನ್ನುಂಟೇ ?" ಕಾರಣ ಯಮದೂತರಾಗದೇ ಈ ಭವಬಂಧನದಿಂದ ಮುಕ್ತರಾಗಬೇಕು. "ಆಶೆಯೇ ದಾಸತ್ವ, ನಿರಾಶೆಯೇ ಈಶತ್ವ" "ಆಶೆಯುಳ್ಳಾತ ಒಬ್ಬರಾಧೀನದಲ್ಲಿಪ್ಪನು. ಆಶೆಯ ಮನದ ಕೊನೆಯನರಿದಾತ ಕೈಲಾಸದಾಚೆಯಲ್ಲಿಪ್ಪ ನೆಂದಾತ ನಮ್ಮ ಅಂಬಿಗರ ಚೌಡಯ್ಯ" "ಆಶೆಯುಳ್ಳನ್ನಕ್ಕರ ಒಬ್ಬರ ಆಶ್ರಯಿ-ಸುವದು, ಆಶ್ರಯದಾಸೆ ಕಷ್ಟಕಾಣಿರಯ್ಯ, ಆಶೆಯೇ ದಾಸತ್ವ ನಿರಾಶೆಯೇ ಈಶತ್ವ, ದಾಸತ್ವದ ಈಶತ್ವದ ಈ ಅಸುವ ವಿಚಾರಿಸಿ ನಿರಾಶೆಯಾಗಿಪ್ಪುದೇ ಈಶಪದವಯ್ಯಾ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರ" ಎಂದು ಅನೇಕ ರೀತಿಯಿಂದ ದುರಾಶೆಯನ್ನು ತುಚ್ಛೀಕರಿಸಿದ್ದಾರೆ. ಕೆಲವರು ತಮ್ಮಲ್ಲಿ ಆ ಆಶೆ ತುಂಬಿರುವದನ್ನು ತಿಳಿದು-ಕೊಳ್ಳದೇ ಹೊನ್ನು, ಹೆಣ್ಣು, ಮಣ್ಣು ಮಾಯಾಸ್ವರೂಪಗಳೆಂದು ಅವು ತಮ್ಮನ್ನು ಮೋಹಗೊಳಿಸುವವೆಂದೂ ಹೇಳುತ್ತಾರೆ. ಬೆಂಕಿಗೆ ತುಪ್ಪ ಕರಗುವದು ಸಹಜ-ವಲ್ಲವೇ? ಹಾಗೆಯೇ ನಮ್ಮ ಅವುಗಳಿಂದ ಮನಸ್ಸು ಕರಗುವದೆಂದು ಹೇಳುವ ವಾದ ವೂ ಒಂದು ಇದೆ. ಆದರೆ ವಚನಕಾರರು ಅವು ಮಾಯೆಯಲ್ಲ ಎಂದು ಹೇಳುತ್ತಾರೆ.

"ಹೊನ್ನು ಮಾಯೆಯೆಂಬರು, ಹೆಣ್ಣು ಮಾಯೆಯೆಂಬರು, ಮಣ್ಣು ಮಾಯೆಯೆಂಬರು
ಹೊನ್ನು ಮಾಯೆಯಲ್ಲ, ಹೆಣ್ಣು ಮಾಯೆಯಲ್ಲ, ಮಣ್ಣು ಮಾಯೆಯಲ್ಲ;
ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರಾ"

ಆದುದರಿಂದ ಈ ಆಶೆಯನ್ನು ನಿರ್ಮೂಲ ನಾಶಮಾಡಿ ಪರಧನ, ಪರಸ್ತ್ರೀ ಮುಂತಾದವುಗಳಿಗೆ ಎಳಸ ಮಾಡಬಾರದು. "ನೋಡಲಾಗದು, ನುಡಿಯಲಾಗದು, ಪರಸ್ತ್ರೀಯರ ಬೇಟ ಬೇಡ ಕಾಣಿರೋ, ತಗರ ಬೆನ್ನಿನಲ್ಲಿ ಹರಿವ ಸೊಣಗನಂತೆ ಬೇಡ ಕಾಣಿರೋ, ಒಂದಾಸೆಗೆ ಸಾಸಿರ ನರಕದಲ್ಲಿಕ್ಕುವ ಕೂಡಲಸಂಗಮದೇವಯ್ಯ" "ಗಂಡನುಳ್ಳವ್ಮನ ಗೌರಿ ಎಂದು ಕಂಡಡೆ ಭೂಮಂಡಲಕ್ಕೆ ಅರಸಾಗಿ ಪುಟ್ಟುವ-ನಾತನು. ಗಂಡನುಳ್ಳವ್ಮನ ಕಂಡು ಒಡವೆರೆದಾತ ನರಕದಲ್ಲಿ ದಿಂಡುಗೆಡದಿಪ್ಪನೇ ರಾಮನಾಥಾ" ಪರಸ್ತ್ರೀ ಬೇಟವೆಂಬುದು ಮಹಾಪಾತಕ. "ಅಸುರನೈಶ್ವರ್ಯವ-ನೆಣಿಸುವರೆ ? ಸೀತೆಗೆ ಸರಿಮಿಗಿಲೆನಿಸುವರೆಂಟುಕೋಟಿ ಮತಿವಂತೆಯರು, ಶಿರಃ

CC-0. Jangamwadi Math Collection. Digitized by eGangotri

ಪ್ರಧಾನರೆಂಟುಕೋಟಿ, ಲೆಕ್ಕವಿಲ್ಲದ ದಳವು, ಲಕ್ಷಕುಮಾರರು, ದಿಕ್ಪಾಲಕರವನ ಮನೆಯ ಬಂಧನದಲ್ಲಿಪ್ಪರು, ಸುರಸತಿಯರನೆಲ್ಲರನಾತ ಸೆರೆಮಾಡಿ ಆಳಿದ. ಶಿವನೇ ನೀನು ಕರುಣಿಸದಂತಿರದೇ ಪರವಧುವಿನ ಬೇಟವವನ ಪ್ರಾಣವ ಕೊಂಡಿತ್ತು. ಇದನರಿತು ಪರವಧುವಿಗೆಳಸುವವರ ಕಂಡು ಗರುಡನ ಕಂಡ ಸರ್ಪ ಧರೆಗೆಳೆವಂತೆ ಅಡೆಗಿಪ್ಪೆನೈ ಕೂಡಲಸಂಗಮದೇವಾ."

"ಕನ್ನಡಿಯ ನೋಡುವ ಅಣ್ಣಗಳಿರಾ, ಜಂಗಮವ ನೋಡಿರೋ" ಎಂದು ಕಾಯ ವ್ಯಾಮೋಹವನ್ನು ಕಟುವಾಗಿ ಟೀಕಿಸಿದ್ದಾರೆ. ಕಾಯ ಅಸ್ಥಿರ, ಮಾಂಸದ ಹೊದಿಕೆ; ಮೂತ್ರದ ಹಡಿಕೆ, ಅಮೇಧ್ಯದ ಕುಡಿಕೆ ಎಂಬುದಾಗಿ ಅಕ್ಕನು ಅಸಹ್ಯ ಶರೀರ ಸ್ಥಿತಿ ಕಂಡು ಮೂಗು ಮುರಿದಿದ್ದಾಳೆ. ಅಂದಮೇಲೆ ನಮ್ಮ ಹೃದಯ ಕನ್ನಡಿಯಲ್ಲಿ ಆ ಹೃದಯೇಶ್ವರನಿಗಾಗಿ ಪರಿತಪಿಸಬೇಕು.

ಪ್ರಾಣ ಹಿಂಸೆ ಮಾಡಬಾರದು. ಸಕಲ ಜೀವಿಗಳಲ್ಲಿ ದಯೆಯನ್ನು ತೋರಬೇಕು. "ದಯವಿಲ್ಲದ ಧರ್ಮವಾವುದಯ್ಯ, ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ. ದಯವೇ ಧರ್ಮದ ಮೂಲವಯ್ಯ, ಕೂಡಲಸಂಗಯ್ಯ ನಂತಲ್ಲದೊಲ್ಲನಯ್ಯ." ಒಡಲಿಚ್ಛೆಗಾಗಿ ಪ್ರಾಣಿಗಳನ್ನು ಕೊಂದು ಅಡಗನ್ನು ತಿನ್ನುವದು ಮಹಾಪಾಪ. "ಅಹಿಂಸಾ ಪರಮೋ ಧರ್ಮಃ" ಎಂದು ಗಾಂಧೀಜಿಯವರು ಹೇಳಿದ್ದಾರೆ. ಎಲ್ಲರನ್ನು ತನ್ನಂತೆ ತಿಳಿಯಬೇಕು. ಪರರ ಹಿತ ಬಯಸಬೇಕು. ಇದೆಲ್ಲಕ್ಕೂ ಆಧ್ಯಾತ್ಮ ಬಲ ಮುಖ್ಯ. ಈ ಆಧ್ಯಾತ್ಮ ಬಲ ಬೆಳೆಯುವದು 'ಅಹಂ'ದ ಅನುಸಂಧಾದದಿಂದ. ಇಂಥ ಬಲವಿದ್ದರೆ ಬಾಳು, ನಡೆ ನುಡಿಗಳಲ್ಲಿ ಮೇಳವಿರಬೇಕು. ಇದುವೇ ನೈತಿಕ ಬಲ. ಧಾರ್ಮಿಕ ಪ್ರವೃತ್ತಿ ನಮ್ಮಲ್ಲಿ ಬೆಳೆದು ಬರಬೇಕು "ಧರ್ಮವೆಂದರೆ ಶುದ್ಧ ಶೀಲ ಸಂಪಾದನೆ." ಅಂದರೇನೆ ಭಗವದಭಿಮುಖ (Godward tendancy) ಪ್ರವೃತ್ತಿ ದೊರಕುವದು. ದಯಾ ಹಾಗೂ ಶಾಂತಿ ಇವೆರಡೂ ಮನಸ್ಸಿನ ಮಾಲಿನ್ಯ ತೊಳೆಯುವ ಸಾಧನೆಗಳು. ಶಾಂತಿಯು ಅಹಿಂಸೆಯ ನೆರಳಾಗಿ ಹಿಂಬಾಲಿಸುತ್ತದೆ. ಅಹಿಂಸೆ, ಸತ್ಯ, ದಯ ಶಾಂತಿ, ಪ್ರೇಮ ಮುಂತಾದವುಗಳಿಂದಲೇ ಆತ್ಮಾನಾತ್ಮ ವಿವೇಕ ಸಾಧ್ಯ. "ಪ್ರೇಮವೆಂಬುದು ಸ್ವರ್ಗ, ಆ ಸ್ವರ್ಗವೇ ಪ್ರೇಮ. ದೇವನಿರುವನು ಪ್ರೇಮ ರೂಪದಲ್ಲಿ, ಪ್ರೇಮದಿಂದಲೇ ವಿಶ್ವರೂಪ ತಾಳಿತು ಮತ್ತೆ ಈ ಲೋಕ ಭುವನದಲ್ಲಿ." ಎಂದು ಹಾಡಿ ಹರಸಿದ್ದಾರೆ. ಹೀಗೆ ಆತ್ಮನನ್ನು ಭಜಿಸುವದು ಅನಾತ್ಮನನ್ನು ತ್ಯಜಿಸುವದು ನಂತರ ತಾದಾತ್ಮ್ಯ ಹೊಂದುವದು.

ಲೋಭಿಯಾಗಿರದೆ, ಸ್ವಾರ್ಥ ಬಯಸದೇ, ದಾನ ಮಾಡಿ ಇತರರ ಕಷ್ಟ-ನಷ್ಟಗಳಲ್ಲಿ ನೆರವಾಗಿ ಪರರಿಗೆ ಉಪಕಾರ ಮಾಡಬೇಕೆಂದು ಶಿವಶರಣರ ಅಭಿಪ್ರಾಯ.

CC-0. Jangamwadi Math Collection. Digitized by eGangotri

ಗಳಿಸಿ ಹೊಳಟ್ಟು ಹೋಗುವದರಲ್ಲಿ ಫಲವೇನು ? "ಉಂಬಾಗಳಿಲ್ಲೆನ್ನ, ಉಡುವಾಗಳಿಲ್ಲೆನ್ನ, ಬಂಧುಗಳು ಬಂದಾಗಳಿಲ್ಲೆನ್ನ, ಲಿಂಗಕ್ಕೆ ಇಲ್ಲೆಂಬ, ಜಂಗಮಕ್ಕೆ ಇಲ್ಲೆಂಬ, ಬಂದ ಪುರಾತನರಿಗೆ ಇಲ್ಲೆಂಬ, ಸಾವಾಗ ದೇಹವನು ದೇಗುಲಕೆ ಒಯ್ಯೆಂಬ, ದೇವರಿಗೆ ಹೆಣ ಬಿಟ್ಟೆ ಹೇಳಿತ್ತೆ ಕೂಡಲಸಂಗಮದೇವಾ." ಆದೇಕೆ ಇಷ್ಟು ದುರಾಶೆ ? ಅದು ಕೇವಲ ಸ್ವಾರ್ಥ. "ಮಡದಿ-ಮಕ್ಕಳು, ಪಡೆದ ದ್ರವ್ಯವು ಎನ್ನೊಡವೆ ಎಂದು ನೆಚ್ಚಬೇಡಿರೋ ! ಎಲೆ ಹುಚ್ಚು ಮಾನವರಿರಾ ಅವು ನಿಮ್ಮೊಡವೆಯಾದೊಡೆ ನೀವು ಮಡಿದು ಹೋಗುವಾಗ್ಗೆ ನಿಮ್ಮೊಡನೆ ಬಪ್ಪವೇ ಹೇಳಿರೋ ? ಇದನರಿದು ತಡೆಯದೆ ಮೃಡನ ಸೇವೆಯೊಳು ತೊಡಗಿದರೆ, ಕಡೆಮೊದಲಿಲ್ಲದ ಪದವು ದೊರಕೊಂಬುದು ನೋಡಾ ನಮ್ಮ ಅಖಂಡೇಶ್ವರ ಲಿಂಗದಲ್ಲಿ" ಆದುದರಿಂದ ಸತ್ಪಾತ್ರವರಿತು ದಾನಮಾಡು. ಈ ತಿಳುವಳಿಕೆಯನ್ನು ಯಾರು ಕೊಟ್ಟರೂ ಲೋಭಿ ಕೇಳುವದಿಲ್ಲ. ಲೋಭಿಗೆ ಬುದ್ಧಿ ಬರಬೇಕಾದರೆ ದ್ರವ್ಯ ನಾಶವಾಗಿ ಬಡತನ ಬಂದಾಗ, ತಾನು ಉಣಲಿಲ್ಲ; ಪರರಿಗೆ ಕೊಡಲಿಲ್ಲ, ತನಗೆ ಇಹವಿಲ್ಲ ಪರವಿಲ್ಲ ಎಂದು ಗೋಳಾಡುವನು. "ನಿಲ್ಲಿಸಬಹುದಯ್ಯಾ ಒಂದೇ ಮಂತ್ರದಿಂದ ಕಾಳೋರಗವ. ನಿಲ್ಲಿಸಬಹುದಯ್ಯ ಒಂದೇ ಮಂತ್ರದಿಂದ ಹಾರುವ ಪಕ್ಷಿಯ. ನಿಲ್ಲಿಸಬಹುದಯ್ಯ ಒಂದೇ ಮಂತ್ರದಿಂದ ಹೆಬ್ಬುಲಿಯ. ನಿಲ್ಲಿಸಬಹುದಯ್ಯ ಮೃತ್ಯುವೆಂಬ ಹೆಮ್ಮಾರಿಯ. ಲೋಭವೆಂಬ ಗ್ರಹ ಹಿಡಿದವರ ಏತರಿಂದಲೂ ಬಿಡಿಸಲಾಗದು. ಈ ಲೋಭಕ್ಕೆ ದರಿದ್ರವೇ ಔಷಧ. ಹೇಳಿದರೆ ಕೇಳರು. ತಾವೂ ತಿಳಿಯರು. ಶಾಸ್ತ್ರವ ನೋಡರು. ಭಕ್ತಿಯ ಹಿಡಿಯರು. ಇಂಥ ಗೊಡ್ಡು ಮೂಳ ಹೊಲೆಯರಿಗೆ ಕರ್ಮವೆಂಬ ಶರಧಿಯಲ್ಲಿ ಬಿದ್ದು ಉರುಳಾಡುವದೇ ಸತ್ಯವೆಂದಾತ ನಮ್ಮ ಅಂಬಿಗರ ಚೌಡಯ್ಯ" ಐಶ್ವರ್ಯ ಈ ಜನ್ಮದಲ್ಲಿ ಲಭಿಸಿದ್ದರೆ ಅದನ್ನು ಕೊಟ್ಟಿರುವವನು ದೇವರು. ಆದುದರಿಂದ ಐಶ್ವರ್ಯವಿದ್ದಾಗ ದಾನ ಮಾಡಿ "ಶಿವನೊಡವೆಯ ಶಿವನಿಗೊಪ್ಪಿಸಿ" ಎಲ್ಲವೂ ಪರಮಾತ್ಮನ ಅನುಗ್ರಹವೆಂದು ಭಾವಿಸಿ ನಡೆಯಬೇಕು.

ಮಾತಿನಲ್ಲಿ ನಯ ವಿನಯಗಳಿಂದ ಪರಮಾತ್ಮನೊಲುಮೆಯಾಗುವದು. "ಏನು ಬಂದಿರಿ, ಹದುಳವಿದ್ದಿರಿ, ಎಂದರೆ ನಿಮ್ಮ ಮೈಸಿರಿ ಹಾರಿ ಹೋವುದೇ ? ಕುಳ್ಳಿರಿ ಎಂದರೆ ನೆಲಕುಳಿ ಹೋವುದೇ ? ಒಡನೆ ನುಡಿದರೆ ಶಿರಹೊಟ್ಟೆ ಒಡೆವುದೇ ? ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿದ್ದರೆ ಮೂಗ ಕೊಯ್ಯದೆ ಮಾಬ್ಬನೇ ಕೂಡಲ ಸಂಗಯ್ಯ" ಅಳಿವುದು, ಉಳಿವುದು ತನ್ನ ವಚನದಿಂದಲೇ, ಅನ್ಯರಿಂದಲ್ಲ. ಎಂಬ ಮಾತನ್ನು ಶರಣರು ಮಾರ್ಮಿಕವಾಗಿ ಹೇಳಿದ್ದಾರೆ.

ಒಟ್ಟಿನ ಮೇಲೆ, ಶಿವಶರಣರ ವಚನ ಸಾಹಿತ್ಯ ವಿಶ್ವಸಾಹಿತ್ಯ. ಎಲ್ಲವನ್ನು ಸಮನ್ವಯ ದೃಷ್ಟಿಯಿಂದ ಅಭ್ಯಸಿಸಬೇಕು. ದೇವನು ಮಾಡಿ ಉಣ್ಣುವದಕ್ಕೆ ಮತಿ

CC-0. Jangamwadi Math Collection. Digitized by eGangotri

ಯನ್ನು ಕೊಟ್ಟಿರುವನು 'ಮಾನವನಿಗೆ ಮತಿಯೇ ಗತಿ.' 'ನಿರ್ಮಲವಾದ ಭಕ್ತಿಯೇ ಮುಕ್ತಿಗೆ ಕಾರಣ.' 'ದ್ವೇಷವನ್ನು ಪ್ರೇಮದಿಂದ ಗೆಲ್ಲಬೇಕು.' 'ಭೋಗವನ್ನು ತ್ಯಾಗದಿಂದ ಜಯಿಸಬೇಕು.' 'ಕಿಂಕರನಾಗದೇ ಮಾನವ ಶಂಕರನಾಗಲಾರ.' 'ಕರ್ಮ ಭೂಮಿ ಧರ್ಮ ಭೂಮಿಯಾಗಬೇಕು.' 'ತಾಳ್ಮೆ, ಧೈರ್ಯ, ವಿವೇಕ ಈ ಮೂರು ಗುಣಗಳ ಮುಪ್ಪುರಿಯೇ ನಮ್ಮ ಜೀವನ' ಇವೇ ಶಿವಶರಣರ ಸಂದೇಶ ಗಳು. ಇವೆಲ್ಲಕ್ಕೂ ಶ್ರದ್ಧೆ ಅತ್ಯವಶ್ಯ. "Faith is the searchlight for finding God. Faith makes impossible possible. Supraine love comes only by the grace of God. Grace of God will make you stick to the spiritual faith." ಇದುವೇ ಮಹಾತ್ಮರ ಸಂದೇಶ. ಕಾರಣ ಮಹಾತ್ಮರ ಸಂದೇಶದಲ್ಲಿ ಶ್ರದ್ಧೆಯನ್ನಿಟ್ಟು ಅದರಂತೆ ಆಚರಿಸಬೇಕಲ್ಲದೇ ಇತರರಿಗೆ ಉಪದೇಶ ಮಾಡದೇ ತಮ್ಮ ತಮ್ಮ ಯೋಗಕ್ಷೇಮ ನೋಡಿಕೊಳ್ಳುವದು ಮುಖ್ಯ ಕರ್ತವ್ಯ. (Advice is thankless) "ಲೋಕದ ಡೊಂಕು ನೀವೇಕೆ ತಿದ್ದುವಿರಿ, ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ. ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ; ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ ಕೂಡಲಸಂಗಮದೇವಾ" ಪ್ರತಿಯೊಬ್ಬರೂ ತಮ್ಮ ಡೊಂಕನ್ನು ಸರಿಪಡಿಸಿಕೊಂಡರೆ ಎಲ್ಲಿಯದು ಡೊಂಕು! ಆದುದರಿಂದ ಮಾನವನು ತನ್ನನ್ನು ತಾನು ಸುಧಾರಿಸಬೇಕು. ಬುದ್ಧಿವಂತನಾಗಬೇಕು. ಮಾನವನಲ್ಲಿ ಸಾತ್ವಿಕ ಬುದ್ಧಿ ಅರಳಬೇಕು. ಇಂದಿನ ವಿಜ್ಞಾನದ ವೈಭವ ಎಂದರೆ ಮಾನವನ ಬುದ್ಧಿಯ ವೈಭವ. ಬುದ್ಧಿಯ ಜೊತೆಗೆ ಭಾವವೂ ವಿಕಸಿತವಾಗಬೇಕು. "ಭಕ್ತರ ಭಾವದಲ್ಲಿ ಪರಮಾತ್ಮ ಇದ್ದಾನೆ." ನಮ್ಮ ಜೀವನದಲ್ಲಿ ಬೆಲೆ ಬರುವದು ನಮ್ಮ ಉದಾತ್ತವಾದ ಸದ್ಭಾವನೆ-ಗಳಿಂದ. ಕಾರಣ ಮಾನವನು ಶುದ್ಧ ಶೀಲಸಂಪನ್ನನಾಗಬೇಕು. ಅಂದರೆ ವಿಶಾಲಭಾವನೆ ಒಡಮೂಡುವದು. ವಿಶಾಲತ್ವಕ್ಕೆ ಸೂತಕವಿಲ್ಲ. ಶರಣರ ದೈನಂದಿನಿಕ ಜೀವನದಲ್ಲಿ ವಿಶಾಲತೆ ಕಂಡುಬರುವದು. ಒಮ್ಮೆ ಲಿಂ. ಶ್ರೀ ಮ. ನಿ. ಪ್ರ. ಹಾನಗಲ್ಲ ಕುಮಾರ ಮಹಾಸ್ವಾಮಿಗಳ ಪ್ರಕೃತಿಯ ಅಸ್ವಾಸ್ಥ್ಯ ಇದ್ದಾಗ ಲಿಂ. ಶ್ರೀ ಮ. ನಿ. ಪ್ರ. ಹಾವೇರಿ ಶಿವಬಸವ ಮಹಾಶ್ರೀಗಳು ಅವರ ಪ್ರಕೃತಿಯ ಬಗ್ಗೆ ವಿಚಾರಿಸಿದಾಗ "ನನ್ನ ಪ್ರಕೃತಿ ಏನು ಮಾಡುವಿರಿ? ಸಮಾಜ ನೋಡಿರಿ, ಸಮಾಜೋ ದ್ಧಾರ ಮಾಡಿರಿ." ಎಂದು ಉತ್ತರಿಸಿದರಂತೆ. ಆಹಾ! ಶರಣರ ವಿಶಾಲದೃಷ್ಟಿ ಎಂತಹದು! ಸಮಾಜದ ಕಳಕಳಿ ಎಷ್ಟು!.

ಶರಣರ ವಚನ ಸಾಹಿತ್ಯದಲ್ಲಿ ಹಾಗೂ ಅವರ ದೈನಂದಿನಿಕ ಜೀವನದಲ್ಲಿ ಕಲಿಯತಕ್ಕ ಮಾತುಗಳು ಒಂದೇ! ಎರಡೇ!! ಮಾನವನು ಮಾನವನಾಗ-ಬೇಕಾದರೆ ಒಳ್ಳೆಯದನ್ನು ಮಾಡಲು ಪ್ರಯತ್ನಿಸಬೇಕು. "Be good and

CC-0. Jangamwadi Math Collection. Digitized by eGangotri

Do good." ಕಾಯಕವೇ ಕೈಲಾಸ (Work is worship) ಎಂದು ತಿಳಿದು ಶರಣರ ಪಥವನ್ನು ಅನುಸರಿಸಬೇಕು. God is short-form of goodness ಎಂದು ಕುಮಾರ ಶ್ರೀಗಳು ಅಂದಂತೆ ಕಲ್ಯಾಣವೇ ದೇವರ ಸ್ವರೂಪ.

ಈ ಕಲ್ಯಾಣ ಸ್ವರೂಪನಾದ ಪರಮಾತ್ಮನ ಚಿತ್ರಕಾಶದಲ್ಲಿ ಮಾನವರಾದ ನಾವೆಲ್ಲರೂ ಏಕವಾಗಿ ಬೆರೆಯಬೇಕು. ಈ ದಾರಿಯ ಸುಗಮತೆಗೆ ಸುಭಗ ಮಾರ್ಗ ಮತ್ತು ಸಾಮಾನ್ಯನೂ ಅನುಸರಿಸಬಹುದಾದ ಶರಣ ಧರ್ಮದಂತೆ ಪಂಚ ಪುರುಷಾರ್ಥಗಳಲ್ಲಿ ಒಂದಾದ ಭಕ್ತಿ ಮಾರ್ಗವೇ ಸರಿಯಾದ ದಾರಿ. ಈ ಭಕ್ತಿ ಮಾರ್ಗದ ಜೀವನಾಡಿಯಾದ ಆಚಾರ (ನೀತಿ) ಶುದ್ಧತೆಯು ಅತ್ಯವಶ್ಯ. ಇಂದಿನ ಮಾನವ ಜನಾಂಗ, ಕೀಳು ಆಶೆ ಆಮಿಷಗಳಿಗೆ ಒಳಗಾಗಿ ಬಾಂಬಿನೊಡನೆ ನೆಣಸು-ತ್ತಿರುವಾಗ, ತನ್ನ ನಾಶಕ್ಕೆ ತಾನೇ ಔತಣ ಕೊಡುವಾಗ, ಈ ನೀತಿ ಮಾರ್ಗ ಅನಿವಾರ್ಯವೆನಿಸುತ್ತದೆ. ನೀತಿರಹಿತ ಧರ್ಮವೇ ಆಗಲಿ, ಸಮಾಜವೇ ಆಗಲಿ ಶಾಶ್ವತವಲ್ಲ. ಈ ರೀತಿಯಾದ ಆಚಾರ(ನೀತಿ) ಪ್ರಧಾನ ಧರ್ಮವನ್ನು ಬಾಳಿ ಜಗತ್ತಿಗೇ ಅತ್ಯಮೂಲ್ಯವಾದ ತತ್ವವನ್ನಿತ್ತ ಶರಣರ ಧರ್ಮ ಉನ್ನತಮಯ-ವಾದುದು. ಅವರ ದಾರಿ ಶ್ರೇಷ್ಠತಮವಾದುದು. ಆ ದಾರಿಯಲ್ಲಿ ನಾವೆಲ್ಲ ನಡೆದು ನಿಜಮಾನವರಾಗಿ ಬಾಳೋಣ.

CC-0. Jangamwadi Math Collection. Digitized by eGangotri

# ಶಿವಯೋಗ

ಪಂ. ವೈ. ನಾಗೇಶ ಶಾಸ್ತ್ರಿಗಳು, 'ಸರ್ವದರ್ಶನತೀರ್ಥ', ಬಳ್ಳಾರಿ.

ಶ್ರೀ. ನಿ. ಪ್ರ. ಲಿಂ. ಪರಮಪೂಜ್ಯ ಶಿವಬಸವಮಹಾಸ್ವಾಮಿಗಳವರು, ಹುಕ್ಕೇರಿಮಠ ಹಾವೇರಿ ಇವರು ಲಿಂಗಾಂಗಸಂಯೋಗರೂಪವಾದ ಶಿವಯೋಗದಿಂದ ತಮ್ಮ ಜೀವನವನ್ನು ಶಿವಮಯಜೀವನವನ್ನಾಗಿ ಮಾಡಿಕೊಂಡು ಭಕ್ತೋದ್ಧಾರ ಕಾಯಕದಲ್ಲಿ ತೊಡಗಿ ವಿರಾಜಿಸುತ್ತಿದ್ದರು. ಆದುದರಿಂದ ಈ ಶಿವಯೋಗಿಪುಂಗವರ ಸ್ಮಾರಕಗ್ರಂಥದಲ್ಲಿ ಶಿವಯೋಗಸ್ವರೂಪದ ವಿವರಣೆಗೆ ಮುಖ್ಯಸ್ಥಾನವಿರುವದೆಂದು ಬಗೆದು ಬರೆದ 'ಶಿವಯೋಗ' ವಿಷಯಕವಾದ ಸಂಕ್ಷಿಪ್ತಲೇಖನವಿದಾಗಿರುವುದು:

ಭಾರತೀಯ ಮತಗಳಲ್ಲಿ ಮತದ ಪುರುಷಾರ್ಥವಾದ ಮೋಕ್ಷವನ್ನು ಪಡೆವ ಸಾಧನಗಳಲ್ಲಿ ಯೋಗಕ್ಕೆ ಮುಖ್ಯ ಸ್ಥಾನವಿರುವದು. ಆದುದರಿಂದ, ಮತಗಳ ಧಾರ್ಮಿಕವಾಙ್ಮಯದಲ್ಲಿ ಯೋಗವಿಚಾರದ ವ್ಯಾಪ್ತಿಯು ಅತ್ಯಧಿಕವಾಗಿರುವುದು. ಭಾರತೀಯ ಮತಧರ್ಮಗಳಿಗೆ ವೇದಾಗಮಗಳು ಪರಮ ಪ್ರಮಾಣಗಳೆನಿಸಿರುವುವು. ವೇದಗಳ ಅಂತರ್ಭಾಗಗಳಾದ ಉಪನಿಷನ್ಮತಗಳ ಸಿದ್ಧಾಂತವನ್ನು ಸ್ಥಾಪಿಸುವ ಮತಾಚಾರ್ಯರು ತಮ್ಮ ಅದ್ವೈತಾದಿ ಉಪನಿಷನ್ಮತಗಳ ಸ್ಥಾಪನೆಗೆ ಪ್ರಮಾಣಗಳನ್ನಾಗಿ ಅಂಗೀಕರಿಸುವ ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆಯೆಂಬ ಪ್ರಸ್ಥಾನತ್ರಯಗಳಲ್ಲಿ ಒಂದಾದ ಭಗವದ್ಗೀತೆಯು ಯೋಗಪ್ರತಿಪಾದಕ ಗ್ರಂಥವೆಂಬುದು ಸರ್ವಸಮ್ಮತವು. ಇನ್ನು ಆಗಮಗಳಲ್ಲಿ ಮುಖ್ಯವಾಗಿರುವ ಶೈವಾಗಮಗಳಲ್ಲಿ ಯೋಗ ಪ್ರತಿಪಾದಕ ಭಾಗವೇ ಪ್ರತ್ಯೇಕವಾಗಿರುವುದು. ಆಗಮಕರ್ತೃವಾದ ಪರಶಿವನೇ ಪ್ರಥಮದಲ್ಲಿ ಯೋಗಮಾರ್ಗವನ್ನು ವಾಮದೇವಾದಿ ಮುನೀಶ್ವರರಿಗೆ ಉಪದೇಶಿಸಿರುವನೆಂದು ಆಗಮಾನುಯಾಯಿಗಳು ನಂಬಿರುವರು; ಮತ್ತು ಷಡ್ದರ್ಶನಗಳೆಂದು ಪ್ರಸಿದ್ಧಿಯನ್ನು ಪಡೆದಿರುವ ದರ್ಶನಗಳಲ್ಲಿ ಯೋಗಕ್ಕೆ ಮೀಸಲಾಗಿರುವ ಪಾತಂಜಲ ಯೋಗದರ್ಶನವೂ ಒಂದಾಗಿರುವುದು. ಪುರಾಣಾದಿಗಳಲ್ಲಿಯೂ ಯೋಗವಿಷಯದ ಪ್ರತಿಪಾದನೆಯು ವಿಸ್ತಾರವಾಗಿರುವುದು. ಸ್ವತಂತ್ರವಾದ ಯೋಗಗ್ರಂಥಗಳೂ ಬಹಳವಾಗಿರುವವು. ಹೀಗೆ ಯೋಗವಿಚಾರವು ಭಾರತೀಯರಲ್ಲಿ ಪುರಾತನಕಾಲದಿಂದಲೂ ಮುಖ್ಯವಾಗಿದ್ದಿತೆಂಬುದು ನಿರ್ವಿವಾದ.

ಆದರೆ, ಯೋಗಸ್ವರೂಪದ ಪ್ರತಿಪಾದನೆಯೂ, ಯೋಗಸಾಧನಕ್ರಮವೂ ಮೊದಲಿನಿಂದಲೂ ಒಂದೇ ವಿಧವಾಗಿರದೇ, ಕಾಲಕಾಲಕ್ಕೆ ಪ್ರಗತಿಯನ್ನು ಪಡೆದು

CC-0. Jangamwadi Math Collection. Digitized by eGangotri

ಮುಂದುವರಿದಿರುವುದೆಂಬುದನ್ನು ಯೋಗವಾಙ್ಮಯವನ್ನು ವಿಚಾರ ಮಾಡಿದವರಿಗೆ ಹೊಳೆಯದಿರಲಾರದು. ಈ ದೃಷ್ಟಿಯಿಂದ ಇತರ ಯೋಗಮಾರ್ಗಗಳಿಗಿಂತಲೂ ಲಿಂಗಾಂಗ ಸಾಮರಸ್ಯಪ್ರದವಾದ ಶಿವಯೋಗಮಾರ್ಗವು ಪ್ರಗತಿಯಲ್ಲಿ ಪೂರ್ಣತೆ-ಯನ್ನು ಪಡೆದಿರುವುದು. ಪ್ರಸ್ತುತ ಲೇಖನವಲ್ಲಿ ಪೂರ್ಣತೆಯನ್ನು ಪಡೆದ ಶಿವಯೋಗದ ಸಂಕ್ಷಿಪ್ತಸ್ವರೂಪವು ಪ್ರತಿಪಾದಿತವಾಗಿರುವುದು.

ವೀರಶೈವ ಸಿದ್ಧಾಂತವು ಭಾರತೀಯ ಸಿದ್ಧಾಂತಗಳ ಸಾರಸರ್ವಸ್ವವಾಗಿರುವಂತೆ, ವೀರಶೈವರ ಶಿವಯೋಗವೂ ಭಾರತೀಯ ಯೋಗಮಾರ್ಗಗಳ ಸಾರವಾಗಿರುವುದು. ಈಗ ಉಪಲಬ್ಧವಿರುವ ಯೋಗಮಾರ್ಗಗಳನ್ನು ಸೂಕ್ಷ್ಮದೃಷ್ಟಿಯಿಂದ ವಿಮರ್ಶಿ-ಸಿದರೆ ಹಠಯೋಗಾದಿಗಳಾದ ಕೆಲವು ಯೋಗಮಾರ್ಗಗಳು ಕಷ್ಟಸಾಧ್ಯವಾಗಿಯೂ, ಇನ್ನುಳಿದವುಗಳು ಸುಲಭಸಾಧ್ಯವಾಗಿಯೂ ಇರುವವೆಂಬುದು ಗೊತ್ತಾಗುವುದು. ಇದರಿಂದ ಕಾಲಾನುಕ್ರಮವಾಗಿ ಯೋಗಮಾರ್ಗವು ಪ್ರಗತಿಪಥದಲ್ಲಿ ಮುಂದುವರಿ-ದಿರುವುದೆಂದು ಸ್ಫುಟವಾಗುವುದು. ಈ ಪ್ರಗತಿಯು ಲಿಂಗಾಂಗಸಂಯೋಗರೂಪವಾದ ಶಿವಯೋಗದಲ್ಲಿ ಪೂರ್ಣತೆಯನ್ನು ಪಡೆದಿರುವುದು. ಶಿವಯೋಗದ ವಿಷಯದಲ್ಲಿ 'ಶಿವಯೋಗ ಪ್ರದೀಪಿಕೆ' ಎಂಬ ಗ್ರಂಥದಲ್ಲಿ ಬಂದಿರುವ ಉಕ್ತಿಗಳನ್ನು ಇನ್ನುಳಿದ ಶಿವಯೋಗಿಗಳಲ್ಲಿ ಕೆಲವರ ಉಕ್ತಿಗಳನ್ನು ನೋಡಿದಾಗ ಶಿವಯೋಗ-ದಲ್ಲಿಯೂ ಹೇಗೆ ಪ್ರಗತಿಯು ಮುಂದುವರಿದು ಪೂರ್ಣತೆಯನ್ನು ಪಡೆದುದೆಂಬುದು ವ್ಯಕ್ತವಾಗುವುದು.

'ಶಿವಯೋಗ ಪ್ರದೀಪಿಕೆ' ಯಲ್ಲಿ ಉತ್ತರೋತ್ತರ ಶ್ರೇಷ್ಠತೆಯುಳ್ಳ ಮಂತ್ರ-ಯೋಗ, ಲಯಯೋಗ, ಹಠಯೋಗ, ರಾಜಯೋಗವೆಂಬ ನಾಲ್ಕು ಯೋಗಗಳ ಲಕ್ಷಣವು ಪ್ರತಿಪಾದಿತವಾಗಿರುವುದಲ್ಲದೆ, ರಾಜಯೋಗಕ್ಕೆ ಮಿಗಿಲೆನಿಸಿದ ಶಿವ-ಯೋಗದ ಸ್ವರೂಪವೂ ಹೇಳಲ್ಪಟ್ಟಿರುವುದು. ಶಿವಯೋಗದಲ್ಲಿ ಶಿವಪೂಜೆಯೇ ಮುಖ್ಯವು. ಶಿವಪೂಜೆಯು ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವವ್ರತವೆಂಬೀ ನಾಲ್ಕನ್ನು ಗರ್ಭೀಕರಿಸಿಕೊಂಡಿರುವುದು ಹೀಗಿರುವುದೇ ಶಿವಯೋಗದ ಲಕ್ಷಣ ವೆಂದು ನಿರೂಪಿಸಿ, ಈ ಶಿವಯೋಗಕ್ಕೆ ಹಠಯೋಗಾದಿಗಳು ಸಾಧನವೆಂದು ಉಕ್ತವಾಗಿದೆ ಮತ್ತು ಅಷ್ಟಾಂಗಯೋಗಾಚರಣೆಯೇ ಭಕ್ತಾದಿ ಐಕ್ಯಾಂತವಾದ ಷಟ್‌ಸ್ಥಲಾಚರಣೆಯೆಂದೂ ಈ ಅಷ್ಟಾಂಗಯೋಗವೇ ಶಿವಪೂಜಾಂಗವೆಂದೂ ಶಿವ-ಯೋಗವೇ ಷಟ್‌ಸ್ಥಲಸ್ವರೂಪವಾಗಿರುವದೆಂದೂ ನಿರೂಪಿಸಿ, ಷಟ್‌ಸ್ಥಲಾಚರಣ ದಲ್ಲಿ ಶಿವಯೋಗದ ಸಮನ್ವಯು ಮಾಡಲ್ಪಟ್ಟಿರುವುದು. 'ಶಿವಯೋಗ ಪ್ರದೀಪಿಕೆ' ಯನ್ನು ವಿಮರ್ಶಕ ದೃಷ್ಟಿಯಿಂದ ನೋಡಿದಾಗ, ಗ್ರಂಥಕರ್ತನು ಶಿವಯೋಗಕ್ಕೂ ರಾಜಯೋಗಕ್ಕೂ ಭೇಧವಿಲ್ಲವೆಂಬ ದೃಷ್ಟಿಯಿಂದ ರಾಜಯೋಗವನ್ನೇ ವಿಸ್ತಾರವಾಗಿ

CC-0. Jangamwadi Math Collection. Digitized by eGangotri

ಪ್ರತಿಪಾದಿಸಿರುವನೆಂಬುದು ಗೊತ್ತಾಗುವುದು. ಹೀಗೆ ಪ್ರತಿಪಾದಿತವಾದ ರಾಜಯೋಗದ ಉಪಯೋಗವು ಲಿಂಗಾಂಗಸಂಯೋಗರೂಪವಾದ ಶಿವಯೋಗದಲ್ಲಿ ಸ್ವಲ್ಪಮಟ್ಟಿಗಿರುವುದು. ರಾಜಯೋಗದಲ್ಲಿ ಬಂದಿರುವ ದಿವ್ಯಲಿಂಗಸ್ಥಲದ ವಿಷಯ, ಶಾಂಭವೀಮುದ್ರಾಸ್ವರೂಪ ಇವೇ ಮೊದಲಾದ ಕೆಲವು ವಿಷಯಗಳು ಮಾತ್ರ ಲಿಂಗಾಂಗಯೋಗಕ್ಕೆ ಉಪಯೋಗವಾಗಬಹುದು. ಉಳಿದ ಭಾಗವೆಲ್ಲವೂ ಶಿವಸಮಾನತೆಯನ್ನು ಪಡೆಯುವ ಶೈವರ ಸಂಬಂಧವಾದ ಶಿವಯೋಗಕ್ಕೆ ಹೆಚ್ಚಾಗಿ ಉಪಯೋಗವೆನಿಸುವುದು. ಈ ವಿಷಯವು ಮುಂದೆ ಉದಾಹರಿಸಿದ ಇತರ ಶಿವಯೋಗಿಗಳ ಉಕ್ತಿಗಳಲ್ಲಿ ವಾಚಕರಿಗೆ ಗೊತ್ತಾಗುವುದು. ಪ್ರಕೃತದಲ್ಲಿ 'ಶಿವಯೋಗಪ್ರದೀಪಿಕೆ' ಯ ಶಿವಯೋಗದ ಅರ್ಥವು ಎಷ್ಟರ ಮಟ್ಟಿಗೆ ಪ್ರಗತಿಯಲ್ಲಿದ್ದಿತೆಂಬುದನ್ನು ತಿಳಿದುಕೊಳ್ಳುವುದಾಗಿದೆಯಷ್ಟೆ.

### ಇತರ ಶಿವಯೋಗಿಗಳ ಉಕ್ತಿಗಳು

ಲಿಂಗಾಂಗ ಯೋಗವೇ ಶಿವಯೋಗವೆಂದು ತಿಳಿದು, ಷಟ್‌ಸ್ಥಲಾಚರಣೆಯಲ್ಲಿ ನಿರತರಾದ ಶಿವಯೋಗಿಗಳು ಮಂತ್ರಜಪವೇ ಮುಖ್ಯಸಾಧನವಾದ ಮಂತ್ರಯೋಗವನ್ನು ಒಪ್ಪುತ್ತಾರೆ ಆದರೆ, ಮಂತ್ರಗಳಲ್ಲಿ ಷಡಕ್ಷರ ಮಂತ್ರವನ್ನು, ಮಂತ್ರಾಧಿದೇವತೆಗಳಲ್ಲಿ ಇಷ್ಟಲಿಂಗವೇ ಮಂತ್ರಾಧಿದೇವತೆಯೆಂಬುದನ್ನೂ ಮಾತ್ರ ತಮ್ಮ ಲಿಂಗಾಂಗಯೋಗಕ್ಕೆ ಅಂಗೀಕರಿಸುತ್ತಾರೆ. ಇದರಂತೆ ಧ್ಯೇಯವಸ್ತುವಿನಲ್ಲಿ ಮನೋಲಯವೇ ಮುಖ್ಯವೆಂದು ಹೇಳುವ ಲಯಯೋಗ ಪದ್ಧತಿಯನ್ನು ಅನುಮೋದಿಸಿದರೂ ಆ ಧ್ಯೇಯವಸ್ತುವೂ ಆ ಇಷ್ಟಲಿಂಗವಲ್ಲದೆ ಬೇರಿಲ್ಲ; ಆ ಇಷ್ಟಲಿಂಗದಲ್ಲಿಯೇ ಮನವನ್ನು ಲಯಗೊಳಿಸಬೇಕೆಂದು ಲಿಂಗಾಂಗ ಯೋಗಿಗಳು ಹೇಳುವರು. ಮತ್ತು ಅವರು ಹಠಯೋಗದ ವಾಯುಜಯವೂ ಬೇಕೆನ್ನುವರು; ಆದರೆ, ಹಠಯೋಗದಲ್ಲಿ ಉಕ್ತವಾದ ಕಷ್ಟಸಾಧ್ಯವಾದ ಪ್ರಾಣಾಯಾಮಾದಿಗಳಿಂದ ವಾಯುವನ್ನು ನಿಗ್ರಹಿಸದೆ; ಕರಗತವಾದ ಇಷ್ಟಲಿಂಗದಲ್ಲಿ ದೃಷ್ಟಿಯನ್ನು ನಿಲ್ಲಿಸುವ ದೃಷ್ಟಿಯೋಗದಿಂದ ಸುಲಭವಾಗಿ ವಾಯುವನ್ನು ಜಯಿಸು ಮಾರ್ಗವನ್ನು ಕಂಡುಕೊಂಡಿರುವರು. ಈ ದೃಷ್ಟಿಯೋಗದಿಂದ ಕೇವಲ ವಾಯುಜಯವೊಂದಲ್ಲದೆ, ಲಯಯೋಗದ ಮನೋಲಯವೂ ಸುಲಭವಾಗಿ ಪ್ರಾಪ್ತವಾಗುವುದು. ಈ ಯೋಗದಿಂದ ಮನೋಮಾರುತಗಳೆರಡೂ ಸುಲಭವಾಗಿ ವಶವಾಗುವುದಲ್ಲದೆಯೇ ದೇಹಕ್ಕೆ ಬುದ್ಧಿ-ಬಲ-ತೇಜಗಳನ್ನುಂಟುಮಾಡುವ ಬಿಂದುವಿನ ನಿಗ್ರಹವೂ ಆಗುವುದೆಂದು ವಿರತಾಗ್ರೇಸರನಾದ ಚಾಮರಸನು 'ಪ್ರಭುಲಿಂಗಲೀಲೆ' ಯ ಸಾಧಕಾಂಗಗತಿಯಲ್ಲಿ ಕೆಳಗಿನಂತೆ ಬೋಧಿಸಿರುವನು :

"ಆದೊಡಾಲಿಸು ಕೇಳು ಭಕ್ತಿಯ
ಹಾದಿಗೊಂದೇ ಕೀಲು ದಿಟ ಬೇ-
ಕಾದುದೀ ತನು, ತನುವಿಡಿದು ಕಾಂಬುದು ಸಮಸ್ತವನು ||೧೩||"

CC-0. Jangamwadi Math Collection. Digitized by eGangotri

ಎಂದರೆ– ಷಟ್‌ಸ್ಥಲದ ಭಕ್ತಿಮಾರ್ಗಕ್ಕೆ ಶರೀರವು ಮುಖ್ಯವಾದುದು; ಈ ಶರೀರವನ್ನು ಹಿಡಿದೇ ಸಮಸ್ತ ಫಲಪದಂಗಳನ್ನು ಕಾಣಬೇಕು. ಹೀಗೆಂದು ಶರೀರದ ಅವಶ್ಯಕತೆಯನ್ನು ಬೋಧಿಸಿ :

"ಹೇಳುವಡೆ ಮನವೆಂಬ ಹಕ್ಕಿಗೆ
ಕಾಲುಗಳೆಲ್ಲೈ ತೊಳಲುತಿಹ ಕ
ಣ್ಣಾಲಿಗಳು ದಿಟವದಕೆ ಪಕ್ಕಗಳೀಡೆ ಪಿಂಗಳದ
ಗಾಳಿಯಾಗಿಹುದಂತುಕಾರಣ–
ವಾಲಿಯೇ ಸಾಧನಕೆ ಸಾಧನ
ಮೂಲವನು ನಿಲಿಸುವನೆ ಭಕ್ತನು ಬಸವ ಕೇಳೆಂದ ||೬೧||

ಆಲಿ ನಿಂದೊಡೆ ಸುಳಿದು ಸೂಸುವ
ಗಾಳಿ ನಿಲುವುದು ಗಾಳಿ ನಿಲೆ ಮನ
ಮೇಲೆ ನಿಲುವುದು ಮನವು ನಿಂದೊಡೆ ಬಿಂದು ನಿಂದಿಹುದು.
ಲೀಲೆಯಿಂದಾ ಬಿಂದು ನಿಂದೊಡೆ
ಕಾಲಕರ್ಮವ ಗೆದ್ದು ಮಾಯೆಯ
ಹೇಳಹೆಸರಿಲ್ಲೆನಿಸಬಹುದೈ ಬಸವ ಕೇಳೆಂದ ||೨೨||"

ಈ ಪದ್ಯಗಳ ಭಾವಾರ್ಥವು ಹೀಗಿರುವುದು : ಮನವೆಂಬುದು ಪಕ್ಷಿಯು ಚಲಿಸುವ ಎರಡು ದೃಷ್ಟಿಗಳೇ ಆ ಪಕ್ಷಿಯ ಕಾಲುಗಳು. ಮೂಗಿನ ಎಡ-ಬಲ ಭಾಗದ ರಂಧ್ರಗಳಲ್ಲಿ ಶ್ವಾಸೋಚ್ಛ್ವಾಸರೂಪವಾಗಿ ಚರಿಸುವ ಗಾಳಿಯೇ ಆ ಪಕ್ಷಿಯು ರೆಕ್ಕೆಗಳು. ಕಾಲುಗಳನ್ನು ಹಿಡಿದರೆ, ರೆಕ್ಕೆಯಾಡಿಸದೆ ಪಕ್ಷಿಯು ವಶವಾಗುವದು. ಆದುದರಿಂದ, ಷಟ್‌ಸ್ಥಲಾಚರಣೆಗೆ ಮೂಲಸಾಧನವಾದ ಮನವೆಂಬ ಪಕ್ಷಿಯ ಕಾಲಿನಂತಿರುವ ದೃಷ್ಟಿಯನ್ನು ನಿಲ್ಲಿಸುವವನೇ ಭಕ್ತನು. ದೃಷ್ಟಿಯನ್ನು ನಿಲ್ಲಿಸುವದು ಹೇಗೆಂದರೆ– ಇಷ್ಟಲಿಂಗದಲ್ಲಿ ರೆಪ್ಪೆ ಹಾಕದಂತೆ ದೃಷ್ಟಿಯನ್ನು ನಿಲ್ಲಿಸಿ, ತಲ್ಲಿಂಗನಿರೀಕ್ಷಣೆಯನ್ನು ಮಾಡುತ್ತ ಲಿಂಗವನ್ನು ಧ್ಯಾನಿಸುವ ಅಭ್ಯಾಸವನ್ನು ಮಾಡಿದರೆ ದೃಷ್ಟಿ ಸ್ಥಿರವಾಗುವುದು. ಹೀಗೆ ದೃಷ್ಟಿ ನಿಲ್ಲಲು, ಮೂಗಿನಲ್ಲಿ ಸುಳಿದು ಸೂಸುವ ಗಾಳಿ ನಿಲುವುದು. ಈ ಗಾಳಿಯು ನಿಂತೊಡನೆಯೇ ಮನವು ತನ್ನಷ್ಟಕ್ಕೆ ತಾನೇ ನಿಂತು ಬಿಡುವುದು, ಏಕಾಗ್ರತೆಯನ್ನು ಪಡೆಯುವುದು. ಮನಸ್ಸಿನ ಏಕಾಗ್ರತೆಯಿಂದ ಬಿಂದುನಿಗ್ರಹವಾಗುವುದು. ಹೀಗೆ ಚಾಮರಸನು ದೃಷ್ಟಿ-ವಾಯು-ಮನ ಈ ಮೂರರ ಸ್ಥಿರತೆಯಿಂದ ತಾನಾಗಿಯೇ ಬಿಂದುನಿಗ್ರಹವಾಗಿ ಶರೀರರಕ್ಷಣೆಯಾಗುವುದೆಂದು ಬೋಧಿಸುತ್ತಾ ಇಷ್ಟಲಿಂಗದಿಂದ ಸಾಧಿಸುವ ದೃಷ್ಟಿಯೋಗದ ಸ್ವರೂಪವನ್ನು ಹೃದಯಂಗಮವಾಗಿ ಚಿತ್ರಿಸಿರುವನು. ಲಿಂಗಾಂಗಯೋಗದಲ್ಲಿ ಈ ದೃಷ್ಟಿಯೋಗವು ಬಹು ಮುಖ್ಯ

CC-0. Jangamwadi Math Collection. Digitized by eGangotri

ಭಾಗವಾಗಿರುವುದು. ಇನ್ನು ಹಠಯೋಗದ ಕರ್ಮಮಯಾಷ್ಟಾಂಗಗಳಾದರೂ, ರಾಜಯೋಗದ ಜ್ಞಾನಮಯಾಷ್ಟಾಂಗಗಳಾದರೂ ಆಯಾ ಯೋಗಮಾರ್ಗಗಳಿಗೆ ಬೇಕು. ಲಿಂಗಾಂಗಸಂಯೋಗರೂಪವಾದ ಶಿವಯೋಗಕ್ಕೆ ಮಾತ್ರ ಮೊದಲಿನ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರವೆಂಬ ಐದಂಗಗಳನ್ನು ಬಿಟ್ಟು ಧ್ಯಾನ, ಧಾರಣ, ಸಮಾಧಿಗಳೆಂಬ ಉತ್ತರದ ಮೂರಂಗಗಳು ಸಾಕೆಂದು ಮೊಗ್ಗೆಯ ಮಾಯಿದೇವರು ತಮ್ಮ ಶಿವಾಧವ ಶತಕದ ೫೦ನೆಯ ಪದ್ಯದಲ್ಲಿ ತಿಳಿಸಿರುವರು. ಮತ್ತು ಅದೇ ಶತಕದ ೫೩ನೆಯ ಪದ್ಯದಲ್ಲಿ ಧ್ಯಾನ-ಧಾರಣ-ಸಮಾಧಿ ಇವುಗಳ ಸ್ವರೂಪವನ್ನು ಹೀಗೆ ವಿವರಿಸಿರುವರು:

"ಧ್ಯಾನಮದಿಷ್ಟಲಿಂಗಮನಹರ್ನಿಶಮುಂ ನೆನೆವೇಕನಿಷ್ಠೆ ತದ್
ಜ್ಞಾನಪರಾಯಣಾಮಳ ಮನೋಲಯಮೇ ಸುಸಮಾಧಿತಲ್ಲಯ
ಸ್ಥಾನಮೆನಿಪ್ಪ ಲಿಂಗಮನನಾರತಮಂಗದ ಮೇಲೆ ಭಕ್ತಿ ಸ-
ನ್ಮಾನ ವಿಧಾನದಿಂ ಧರಿಸೆ ಧಾರಣಮೆಂಬ ಪದಂ ಶಿವಾಧವಾ."

ಹಗಲಿರುಳೂ ಇಷ್ಟಲಿಂಗಸ್ಮರಣೆಯ ನಿಷ್ಠೆಯಿಂದಿರುವುದೇ ಧ್ಯಾನಯೋಗ. ಆ ಇಷ್ಟಲಿಂಗದ ಅರಿವಿನಲ್ಲಿ ಎರಕವಾಗಿ, ಮನಸ್ಸನ್ನು ಲಯಗೊಳಿಸುವುದೇ ಸಮಾಧಿ-ಯೋಗವು. ಆ ಮನಸ್ಸಿನ ಲಯಕ್ಕೆ ಆಶ್ರಯಸ್ಥಾನವಾದ ಇಷ್ಟಲಿಂಗವನ್ನು ಭಕ್ತಿ-ಕ್ರಿಯೆಯನ್ನಾಚರಿಸುತ್ತಾ, ಯಾವಾಗಲೂ ಲಿಂಗದ ಮೇಲೆ ಧರಿಸುವುದೇ ಧಾರಣ ಯೋಗವು. ಹೀಗೆ ಮೂರಂಗಗಳ ಅರ್ಥವೂ ಲಿಂಗಾಂಗಯೋಗಕ್ಕೆ ಅನುಗುಣವಾಗಿ ಪರಿಣಮಿಸಿರುವುದನ್ನು ಗಮನಿಸಬೇಕು. ಮೊದಲಿನ ಐದಂಗಗಳಲ್ಲಿ ಯಮನಿಯಮ ಗಳು ಸದ್ಗುಣಸಂಪತ್ತಿಗೆ ಸೇರಿರುವುವು. ಆ ಗುಣಸಂಪತ್ತಿಯು ಪಂಚಾಚಾರಗಳ ಮೂಲಕ ಸಮನಿಸುವುದರಿಂದ ಯಮ-ನಿಯಮಾಂಗಗಳೆರಡನ್ನು ಬಿಟ್ಟಿರುವರು. ದೇಹಕ್ಕೆ ಸ್ಥಿರತೆಯನ್ನು ಒದಗಿಸುವ ಆಸನವೂ, ವಾಯುಸ್ಥಿರತೆಯನ್ನೊದಗಿಸುವ ಪ್ರಾಣಾಯಾಮವೂ ಇಷ್ಟಲಿಂಗಕ್ಕೆ ಸಂಬಂಧಿಸಿದ ದೃಷ್ಟಿಯೋಗದಿಂದಲೇ ಸಂಭವಿ-ಸುವುದರಿಂದ ಆ ಆಸನ-ಪ್ರಾಣಾಯಾಮಗಳ ನಿರ್ಬಂಧವು ಶಿವಯೋಗಕ್ಕಿರುವುದಿಲ್ಲ. ವಿಷಯಗಳಿಂದ ಇಂದ್ರಿಯಗಳನ್ನು ಹಿಂದಿರುಗಿಸುವ ಪ್ರತ್ಯಾಹಾರವೆಂಬಂಗವು ಪ್ರಸಾದಿಸ್ಥಲದಲ್ಲಿ ಬೇಕಾಗಿರುವುದರಿಂದ- ಎಂದರೆ, ಇಂದ್ರಿಯಗಳು ವಿಷಯಗಳನ್ನು ವಿಷಯರೂಪದಿಂದ ಗ್ರಹಿಸದೆ, ಪ್ರಸಾದರೂಪದಿಂದ ಗ್ರಹಿಸಿದರೆ, ಆ ವಿಷಯ ಗಳಿಂದ ಇಂದ್ರಿಯಗಳನ್ನು ಹಿಂದಿರುಗಿಸುವುದು ಅನವಶ್ಯಕವೆಂಬ ಕಾರಣದಿಂದ ಪ್ರತ್ಯಾಹಾರವನ್ನು ಬಿಟ್ಟಿರುವರು. ಈ ಕಾರಣದಿಂದಲೇ ಶಿವಯೋಗದಲ್ಲಿ ಮೊದಲಿನ ಯಮಾದ್ಯೈದಂಗಗಳು ಬಿಡಲ್ಪಟ್ಟಿರುವವು. ಆದರೆ, ಕೆಲವರು ಮೊದಲಿನ ಐದಂಗ-ಗಳಿಗೂ ಶಿವಯೋಗಪರವಾದ ಅರ್ಥವನ್ನು ಹೇಳಿ ಅವುಗಳನ್ನು ಅಂಗೀಕರಿಸಿ-

CC-0. Jangamwadi Math Collection. Digitized by eGangotri

ರುವುದೂ ಉಂಟು. ಈ ವಿಚಾರದಿಂದ ಶಿವಯೋಗಿಗಳಲ್ಲಿ ಶಿವಯೋಗದ ಪ್ರಗತಿಯು ಹೇಗೆ ಮುಂದುವರಿದಿರುವುದೆಂಬುದು ಲಕ್ಷಿಸತಕ್ಕದಾಗಿದೆ.

## ಎಡೆಯೂರ ತೋಂಟದ ಸಿದ್ಧಲಿಂಗ ಶಿವಯೋಗಿಗಳು

ಇವರು ತಮ್ಮ ವಚನಗಳಲ್ಲಿ ಲಿಂಗಾಂಗಯೋಗಕ್ಕೆ ದೂರವಾದ ಇತರ ಯೋಗ ಮಾರ್ಗಗಳನ್ನು ಕೆಳಗಿನಂತೆ ತಿರಸ್ಕರಿಸಿರುವರು :

"ಲಂಬಿಕಾಯೋಗಿಗಳ ಡೊಂಬರಿಗೆ ಸರಿಯೆಂಬೆ.
ಹಠಯೋಗಿಗಳ ಆಟಮಟಕಾರರೆಂಬೆ.
ಅಷ್ಟಾಂಗಯೋಗಿಗಳ ಕಷ್ಟಕರ್ಮಿಗಳೆಂದೆಂಬೆ.
ಪವನಯೋಗಿಗಳ ಪ್ರಪಂಚಿಗಳೆಂಬೆ.
ಲಯಯೋಗಿಗಳ ನಾಯಿಗಿಂತ ಕಡೆಯೆಂಬೆ.
ಅದೇನುಕಾರಣವೆಂದರೆ– ಲಯಯೋಗವೆಂಬುದು
ನಾನಾದರುಶನದಲ್ಲಿ ವರ್ತಿಸುವದಾಗಿ,
ಅದನು ಶಿವಯೋಗಿಗಳು ಒಲ್ಲರು.

ಮಂತ್ರಯೋಗವೆಂಬುದು ಸಮಸಂದೇಹಕ್ಕಿಕ್ಕಿ ಕೊಲುತಿರ್ಪುದು
ಅದೇನು ಕಾರಣವೆಂದರೆ–

ಮಂತ್ರವೇ ಲಿಂಗ, ಲಿಂಗವೇ ಮಂತ್ರವೆಂದರಿದು
ಲಿಂಗನೆನಹ ಸಂಬಂಧಿಸಿಕೊಳಲರಿಯದೆ,
ಲಿಂಗವಿರಹಿತರಾಗಿ ಮಾಡುತಿರ್ಪದಾಗಿ,
ಅದನು ಅಂಗಲಿಂಗಸಂಬಂಧಿಗಳು ಮೆಚ್ಚರು ನೋಡಾ !

ಅದೇನು ಕಾರಣವೆಂದರೆ–
ಕೆಲರು ಶೈವರುಗಳು ಮಾಡುವರಾಗಿ;
ಇನ್ನು ರಾಜಯೋಗವೆಂಬುದು
ಗಾಜು–ಗೋಜು ನೋಡಾ !
ಅದನು ಲಿಂಗವಿರಹಿತವಾಗಿ
ಜ್ಞಾತೃ-ಜ್ಞಾನ-ಜ್ಞೇಯ ಒಂದಾದಲ್ಲಿಯೇ
ಯೋಗವೆನುತಿಪ್ಪರಾಗಿ,
ಇವು ಒಂದೂ ಲಿಂಗಾಂಗಯೋಗದ ಪೂಜೆಯಲ್ಲಿ,........"

[ಸಿದ್ಧೇಶ್ವರ ವಚನ-ಪ್ರಾಣಲಿಂಗಿಸ್ಥಲ-ವಚನ : ೫]

CC-0. Jangamwadi Math Collection. Digitized by eGangotri

ಹೀಗೆ ಇತರ ಯೋಗಗಳನ್ನು ತಿರಸ್ಕರಿಸಿ, ಶಿವಯೋಗದ ವಿಷಯವಾಗಿ :

"ಇನ್ನು ವೀರಮಾಹೇಶ್ವರರುಗಳ
ಲಿಂಗಾನುಸಂಧಾನವು ಎಂತೆಂದಡೆ-
ಬ್ರಹ್ಮರಂಧ್ರದಲ್ಲಿ ಇಪ್ಪನಾದ
ಚೈತನ್ಯವಪ್ಪ ಪರಮ ಚಿತ್ಕಳೆಯನೇ
ಭಾವ-ಮನ-ಕರದಲ್ಲಿ ಶ್ರೀಗುರು
ತಂದು ಸಾಹಿತ್ಯವ ಮಾಡಿದನಾಗಿ,
ಭಾವದಲ್ಲಿ ಸತ್‌ಸ್ವರೂಪವಪ್ಪ ಭಾವಲಿಂಗವೆನಿಸಿ,
ಪ್ರಾಣದಲ್ಲಿ ಚಿತ್‌ಸ್ವರೂಪವಪ್ಪ ಪ್ರಾಣಲಿಂಗವೆನಿಸಿ,
ಕರಸ್ಥಲದಲ್ಲಿ ಆನಂದಸ್ವರೂಪವಪ್ಪ ಇಷ್ಟಲಿಂಗವೆನಿಸಿ,
ಒಂದೇ ವಸ್ತು ತನು-ಮನ-ಭಾವಂಗಳಲ್ಲಿ
ಇಷ್ಟ-ಪ್ರಾಣ-ಭಾವವಾದ ಭೇದವನರಿದು
ಇಷ್ಟಲಿಂಗದ ದೃಷ್ಟಿಯಿಂದ ಗ್ರಹಿಸಿ,
ತೃಪ್ತಿ (ಭಾವ) ಲಿಂಗವ ಭಾವಜ್ಞಾನದಿಂದ ಗ್ರಹಿಸಿ,
ಈ ಲಿಂಗತ್ರಯವಿಡಿದು ಆಚರಿಸಿ,
ಲಿಂಗದೊಡನೆ ಕೂಡಿ, ಆ ಲಿಂಗವೇ ತಾನು ತಾನಾಗಿ
ವಿರಾಜಿಸುತ್ತಿಪ್ಪುದೀಗ ಶಿವಯೋಗ ನೋಡಾ!
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ!

[ಸಿ. ವ; ಪ್ರಾಣಲಿಂಗಿ ಸ್ಥಲ, ವ. ೩೨]

ಎಂದು ಸರ್ವರೂ ತಿಳಿಯುವಂತೆ ಶಿವಯೋಗದ ಸ್ವರೂಪವನ್ನು ಬೋಧಿಸಿರುವರು. ಇವರ ಬೋಧೆಯಿಂದ ಇಷ್ಟ-ಪ್ರಾಣ-ಭಾವಲಿಂಗಗಳ ಉಪಾಸನೆಯೇ ಶಿವಯೋಗವೆಂಬುದು ಒಡೆದು ಕಾಣುತ್ತಿರುವುದು.

## ನಿಜಗುಣ ಶಿವಯೋಗಿಗಳು

ಇವರು ತಮ್ಮ 'ಕೈವಲ್ಯಪದ್ಧತಿ'ಯ ಯೋಗಪ್ರತಿಪಾದನ ಸ್ಥಲದಲ್ಲಿ:

ಪರತರ ಶಿವಲಿಂಗವೆಳಸಿ ನೀನಾಗಿ ।
ಕರಕಂಜದೊಳು ಕಾಣಿಸಿತು ಯೋಗಿ ಯಜಿಸು ॥

ಎಂಬ ಹಾಡಿನಿಂದ ಇಷ್ಟಲಿಂಗಾನುಸಂಧಾನವನ್ನು ನಿರೂಪಿಸಿ, ಮತ್ತು

ಪ್ರಾಣಲಿಂಗವಿದನು ಗುರುವಿ-
ನಾಣತಿಯೊಳು ಕೇಳಿ ನೋಡಿ ।

CC-0. Jangamwadi Math Collection. Digitized by eGangotri

ಮಾಣದೇಕಚಿತ್ತದಿಂದ
ಜಾಸಿಪನೆ ಕೃತಾರ್ಥನು ||

ಎಂಬ ಹಾಡಿನಲ್ಲಿ ಪ್ರಾಣಲಿಂಗಾನುಸಂಧಾನವನ್ನೂ,
ಭಾವಲಿಂಗವನೆ ಬಿಡದೆ ಪರಿ-
ಭಾವಿಸು ಭೇಧವಿಲ್ಲದೆ ಯೋಗಿ ||

ಎಂಬ ಹಾಡಿನಲ್ಲಿ ಭಾವಲಿಂಗಾನುಸಂಧಾನವನ್ನೂ ಪ್ರತಿಪಾದಿಸಿರುವರು. ಶಿವಯೋಗಕ್ಕೆ ಸಂಬಂಧಿಸಿದ ಈ ವಿಧವಾದ ತ್ರಿವಿಧಲಿಂಗಾನುಸಂಧಾನ ನಿರೂಪಣವು 'ಶಿವಯೋಗ ಪ್ರದೀಪಿಕೆ'ಯ ಶಿವಯೋಗಸ್ವರೂಪ ಪ್ರತಿಪಾದನದಲ್ಲಿ ಬಂದಿರುವುದಿಲ್ಲ ವೆಂಬುದನ್ನು ನಾವು ಗಮನಿಸಬೇಕು.

## ಸರ್ಪಭೂಷಣ ಶಿವಯೋಗಿಗಳು

ಇವರು ತಮ್ಮ 'ಕೈವಲ್ಯ ಕಲ್ಪವಲ್ಲರಿ' ಯಲ್ಲಿ—
"ಕರದೊಳು ಕಾಣಿಪುದು ವರವಸ್ತುವಿದನರಿಯು !
ದರೆಮರುಳರೋಳಗರಸಿ ತೊಳಲಿ ಬಳಲುವರು ||"

ಎಂಬ ಹಾಡಿನಲ್ಲಿ ಇಷ್ಟಲಿಂಗಾನುಸಂಧಾನವನ್ನೂ "ಲಿಂಗಪೂಜೆಯ ಮಾಡಿರೋ ನಿಮ್ಮೊಳು ಪ್ರಾಣಲಿಂಗ ಪೂಜೆಯ ಮಾಡಿರೋ" ಎಂದು ಪ್ರಾಣಲಿಂಗಾನುಸಂಧಾನ ವನ್ನೂ, "ಭಾವಲಿಂಗದ ನಿಜವನು ಪೂರ್ಣಮಯನಾಗಿ ಭಾವಿಸಿ ಪೂಜೆಗೈವನೆ ದಿವ್ಯಯೋಗಿ" ಎಂಬ ಹಾಡಿನಿಂದ ಭಾವಲಿಂಗಾನುಸಂಧಾನವನ್ನೂ ನಿರೂಪಿ-ಸಿರುವರು. ಮತ್ತು "ಯೋಗಮಾರ್ಗನಿಯೋಗದೊಳಿಹ ಶಿವ। ಯೋಗಿಗೆ ನಮಿಸುವೆನು" ಎಂಬಲ್ಲಿ ಲಿಂಗಾಂಗಯೋಗರೂಪವಾದ ಶಿವಯೋಗವು ಬಂಧ-ಲಕ್ಷ್ಯಾದಿಗಳ ಸಾಧನೆಯ ಕಷ್ಟಕ್ಕೊಳಗಾಗದಿರುವುದೆಂಬುದನ್ನು ತಿಳಿಸಿ—

"ನಾಡೆ ಗುರುಸಿದ್ಧೇಶನೊಲವಿಂದೆ। ತತ್ವೋಪದೇಶವ
ಮಾಡೆ ಹೊಳೆವಜರಂಧ್ರದೆಡೆಯಿಂದೆ। ಸದ್ಭಾವ ಮನಗಳೊ
ಳಾಡಿ ಹಸ್ತಕೆ ಬಂದು ನೆರೆ ನಿಂದ। ತದ್ಬ್ರಹ್ಮತೇಜವ
ನೋಡಿ ಹರುಷವ ಸೂಡಿ ಪುಳಕವು। ಮೂಡಿ ಪೂಜೆಯ ಮಾಡಿ ನಲಿನಲಿ
ದಾಡಿ ನಮಿಸುತೆ ಹಾಡಿ ಮುಕುತಿಯ। ಬೇಡಿ ಭಾವದೆ ಕೂಡಿ ಸುಖಿಸುವ"

ಎಂಬ ಕೊನೆಯ ನುಡಿಯಲ್ಲಿ— ಶ್ರೀಗುರು ದೀಕ್ಷೆಗೈದು ಶಿಷ್ಯನ ಬ್ರಹ್ಮರಂಧ್ರಸ್ಥಾನ-ದಲ್ಲಿರುವ ಚಿತ್ಕಳೆಯನ್ನೇ ಅವನ ಭಾವಮನಗಳಲ್ಲಿ ಸುಳಿದಾಡಿಸಿ, ಕರಸ್ಥಲದಲ್ಲಿ ಇಷ್ಟ ಲಿಂಗರೂಪದಿಂದಿರಿಸಿ, ಲಿಂಗಾಂಗ ಸಾಮರಸ್ಯದ ತತ್ತ್ವವನ್ನುಪದೇಶಿಸಲಾಗಿ, ಆ ತತ್ವಕ್ರಮಕ್ಕನುಸರಿಸಿ, ಶಿಷ್ಯನು ಕರಗತಲಿಂಗವನ್ನು ದೃಷ್ಟಿಯೋಗದಿಂದ ನಿರೀಕ್ಷಿಸಿ,

CC-0. Jangamwadi Math Collection. Digitized by eGangotri

ಹೆರುಷವ ಸೂಡಿ, ಪುಳಕವು ಮೂಡುತ್ತಿರಲು ಪೂಜೆಯ ಮಾಡಿ ಪಾಡಿ, ಕೊನೆಯಲ್ಲಿ ಭಾವಲಿಂಗದಲ್ಲಿ ಒಂದುಗೂಡುವುದೇ ಶಿವಯೋಗವೆಂದು ವ್ಯದು ಮಧುರ ಶಬ್ದಗಳಲ್ಲಿ ಒಡಮೂಡಿಸಿರುವರು.

ಮೇಲಿನ ಉಕ್ತಿಗಳ ಅಭಿಪ್ರಾಯಕ್ಕನುಸರಿಸಿ–

" ಅಥಾಷ್ಟಾರ್ಚನಂ ಕುರ್ಯಾದಿಷ್ಟಲಿಂಗಸ್ಯ ಪೂಜನಂ ।
ತಲ್ಲಿಂಗಂ ಮನುತೇ ಯಸ್ತು ಪ್ರಾಣಲಿಂಗಸ್ಯ ಪೂಜನಂ ।
ಮನೋಲಯಂ ತು ನಿರ್ಲೇಪಂ ಭಾವಲಿಂಗಸ್ಯ ಪೂಜನಂ ॥ "

ಎಂದು 'ಶಿವರಹಸ್ಯ'ದಲ್ಲಿಯೂ ಉಕ್ತವಾಗಿರುವುದು. ಈ ಉಕ್ತಿಗಳಿಂದ ಇಷ್ಟ-ಲಿಂಗದ ಪೂಜೆ, ಧ್ಯಾನ, ಧ್ಯಾನಮಗ್ನತೆ ಇವು ಮೂರು ಕ್ರಮವಾಗಿ ಇಷ್ಟ, ಪ್ರಾಣ, ಭಾವ ಇವು ಮೂರು ಲಿಂಗಗಳಲ್ಲಿ ಆಚರಿಸುವ ಶಿವಯೋಗಕ್ರಿಯೆಗಳಾಗಿರು-ವವೆಂದು ನಿಶ್ಚಿತವಾಗಿರುವುದು.

ಇನ್ನು ಇಷ್ಟಲಿಂಗದ ಪೂಜಾದಿಕ್ರಿಯೆಯು ಷಡ್ಲಿಂಗಗಳಿಗೆ ಸಂಬಂಧಿಸಿ ಕೆಳಗಿನಂತೆ ಷಡ್ಭಾಗವನ್ನೂ ಹೊಂದುವುದು :

(೧) ಇನ್ನು ಇಷ್ಟಲಿಂಗದ ಪೂಜೆಯ ಪ್ರಾರಂಭದಲ್ಲಿ ಸ್ನಾನಾದಿಗಳಿಂದೆ ತನುಕರಣಗಳನ್ನು ಶುಚಿ ಮಾಡಿಕೊಂಡು ಪೂಜಾಸ್ಥಾನವನ್ನು ಪೂಜಾಸಾಮಗ್ರಿ ಗಳನ್ನೂ ಮಂತ್ರಪೂರ್ವಕವಾಗಿ ಶುದ್ಧೀಕರಿಸಿಕೊಂಡು, ಆಸನದಲ್ಲಿ ಕುಳಿತು, ಭಸ್ಮ ರುದ್ರಾಕ್ಷಿಗಳನ್ನು ವಿಧಿವತ್ತಾಗಿ ಧರಿಸಿ, ನ್ಯಾಸಗಳನ್ನು ಮಾಡಿ, ಪೂಜೆಗೆ ಪ್ರಾರಂಭಿಸು ವುದೇ ಆಚಾರಲಿಂಗಕ್ಕೆ ಸಂಬಂಧಿಸಿದ ಕ್ರಿಯೆಯೆನಿಸುತ್ತಿದೆ

(೨) ವಿಧ್ಯುಕ್ತವಾಗಿ ಮಂತ್ರವನ್ನು ಜಪಿಸುವುದೇ ಮಂತ್ರಮೂರ್ತಿಯಾದ ಗುರುಲಿಂಗಕ್ಕೆ ಸಂಬಂಧಿಸಿದ ಕ್ರಿಯೆಯು.

(೩) ದೃಷ್ಟಿ ಚಲಿಸದಂತೆ ಧ್ಯಾನಪೂರ್ವಕವಾಗಿ ಇಷ್ಟಲಿಂಗವನ್ನು ನೀರೀಕ್ಷಿ ಸುವುದೇ ನಿರೀಕ್ಷಣಮೂರ್ತಿಯಾದ ಶಿವಲಿಂಗಕ್ಕೆ ಸಂಬಂಧಿಸಿದ ಕ್ರಿಯೆಯು.

(೪) ಇಷ್ಟಲಿಂಗಕ್ಕೆ ಮಾಡುವ ಅರ್ಚನ, ಅರ್ಪಣ, ಸದ್ಭಾವ ( ಸದ್ಭಕ್ತಿ ) ವೆಂಬ ತ್ರಿವಿಧ ಕ್ರಿಯೆಯೇ ಯಜನಮೂರ್ತಿಯಾದ ಜಂಗಮಲಿಂಗಕ್ಕೆ ಸಂಬಂಧಿಸಿದ ಕ್ರಿಯೆಯು.

(೫) ಪೂಜಾನಂತರದಲ್ಲಿ ಪ್ರಸಾದಪ್ರಾಪ್ತಿಗಾಗಿ ಮಾಡುವ ಇಷ್ಟಲಿಂಗದ ಸ್ತೋತ್ರವೇ ಸ್ತೋತ್ರಮೂರ್ತಿಯಾದ ಪ್ರಸಾದಲಿಂಗಕ್ಕೆ ಸಂಬಂಧಿಸಿದ ಕ್ರಿಯೆಯು

CC-0. Jangamwadi Math Collection. Digitized by eGangotri

(೬) ಪೂಜಾ ಫಲವಾದ ಪ್ರಸಾದವನ್ನು ಭೋಗಿಸಿ, ಲಿಂಗ ಭೋಗೋಪ ಭೋಗಿಯಾಗಿ, ಪ್ರಸಾದ ಕಾಯನಾದೆನೆಂಬ ಜ್ಞಾನಾನಂದದಲ್ಲಿ ಸಾಮರಸ್ಯವನ್ನು ಹೊಂದುವುದೇ ಜ್ಞಾನಮೂರ್ತಿಯಾದ ಮಹಾಲಿಂಗಕ್ಕೆ ಸಂಬಂಧಿಸಿದ ಕ್ರಿಯೆಯು. (ಮೊಗ್ಗೆಯ ಮಾಯಿದೇವರ ವಿಶೇಷಾರ್ಥ ಪ್ರಕಾಶಿಕೆಯಲ್ಲಿ ಈ ಷಡ್ಲಿಂಗ ಕ್ರಿಯಾ ಸ್ವರೂಪವು ಉಕ್ತವಾಗಿರುವುದು.) ಹೀಗೆ ಉಕ್ತವಾದ ಷಡಂಗ ಲಿಂಗಯೋಗಕ್ಕೆ ಸಂಬಂಧಿಸಿದ ಕ್ರಿಯೆಯನ್ನು ವಚನವಾಙ್ಮಯದಲ್ಲಿ ಅರ್ಚನ, ಅರ್ಪಣ, ಅನುಭವ ವೆಂದು ಮೂರು ಭಾಗವಾಗಿ ವಿಭಾಗಿಸಿ ವಿವರಿಸಿರುವುದುಂಟು. ಅರ್ಚನಕ್ಕೆ ಸಂಬಂಧಿಸಿದ ಜಪ-ಧ್ಯಾನಗಳ ಮತ್ತು ಅರ್ಪಣಕ್ಕೆ ಸಂಬಂಧಿಸಿದ ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣಾದಿಗಳ ವಿಚಾರವು ವಿಸ್ತೃತವಾಗಿರುವುದು. ಲೇಖನ ವಿಸ್ತಾರ ಭಯದಿಂದ ಆ ವಿಚಾರವನ್ನು ಇಲ್ಲಿ ನಿರೂಪಿಸಿಲ್ಲ.

ಮೇಲೆ ವಿವರಿಸಿದ ಷಡಂಗಯೋಗಕ್ರಿಯೆಯಿಂದ ಆತ್ಮನ ಮತ್ತು ಅವನ ತನು ಕರಣಾದಿಗಳ ದುಷ್ಟ ಸಂಸ್ಕಾರವು ದೂರವಾಗುವುದು. ಆ ಮೇಲೆ ಅಂಗದಲ್ಲಿ (ಆತ್ಮನಲ್ಲಿ) ಲಿಂಗಕಳಾಪ್ರಕಾಶವು ಬೆಳಗುವುದು ಹೀಗಾಗುವುದನ್ನೆ ಸರ್ವಾಂಗ ಲಿಂಗ ಸ್ಥಿತಿಯೆಂದು ಕರೆಯುವರು. ಈ ಸ್ಥಿತಿಯಲ್ಲಿ ಆತ್ಮನ ಭೂತಕಾಯವು ಪ್ರಸಾದ ಕಾಯವಾಗುವುದು. ಮಾಂಸ ಪಿಂಡವು ಮಂತ್ರ ಪಿಂಡವಾಗುವುದು ಕರಣಗಳು ಲಿಂಗ ಕಿರಣಗಳಾಗುವವು. ಈ ಅವಸ್ಥೆಯಲ್ಲಿ ಆತ್ಮನ ಇಂದ್ರಿಯ, ಶ್ವಾಸ, ರಕ್ತಾದಿ ಧಾತುಗಳೇ ಮೊದಲಾದ ಅಂಗದ ಸರ್ವ ಭಾಗಗಳಲ್ಲಿಯೂ ತಾತ್ವಿಕ ರೀತಿಯಿಂದ ಷಡ್ಲಿಂಗಗಳ ಮತ್ತು ಷಡಕ್ಷರಗಳ ಸಂಬಂಧವು ವಿವರಿಸಲ್ಪಟ್ಟಿರುವುದು. ಈ ವಿವರಣೆಯಲ್ಲಿ ಸರ್ವಾಂಗ ಲಿಂಗಸ್ಥಿತಿಗೆ ಉದಾಹರಣೆಯಾಗಿ:-

ವಿಲಸಿತಾಚಾರಲಿಂಗವೇ ದೇಹವಾಗಿ ನಿ-
ಶ್ಚಲತರದ ಗುರುಲಿಂಗವೇ ಆತ್ಮವಾಗಿ ನೆರೆ
ಸುಲಭದಿಂ ಶಿವಲಿಂಗವೇ ಪ್ರಾಣವಾಗಿ ಚರಲಿಂಗದಿಂದ್ರಿಯಗಳಾಗಿ ||
ವಿಲಸತ್ಪ್ರಸಾದಲಿಂಗವೇ ವಿಷಯ ಕುಲವಾಗಿ
ತೊಳಗುವ ಮಹಾಲಿಂಗವೇ ಸಂತತಂ ಮಹೋ
ಜ್ಜ್ವಲ ತೃಪ್ತಿಯಾಗಿಯೂ ತೃಪ್ತಿಯಿಂದಿತರೇತರವನರಿಯದೊಪ್ಪಿರ್ದನು ||

ಎಂದು ಶ್ರೀ ವಿರಕ್ತ ತೋಂಟದಾರ್ಯನು ತನ್ನ 'ಸಿದ್ಧೇಶ್ವರ ಪುರಾಣ'ದ ೨೧ ನೆಯ ಸಂಧಿಯ ೨೮ ನೆಯ ಪದ್ಯದಲ್ಲಿ ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗೀಶ್ವರನ ಸರ್ವಾಂಗಲಿಂಗ ಸ್ಥಿತಿಯನ್ನು ವರ್ಣಿಸಿರುವುದನ್ನು ನೋಡಬೇಕು. ಮೇಲಿನ ಪದ್ಯದ ತಾತ್ಪರ್ಯವು ಹೀಗಿದೆ: ಲಿಂಗಾಂಗ ಯೋಗಾಚರಣೆಯಲ್ಲಿ ನಿರತನಾದ

CC-0. Jangamwadi Math Collection. Digitized by eGangotri

ಶಿವಯೋಗಿಯ ದೇಹ, ಆತ್ಮ, ಪ್ರಾಣ, ಇಂದ್ರಿಯಗಳು, ಈ ಇಂದ್ರಿಯಗಳಿಗೆ ಭೋಗ್ಯವಾದ ವಿಷಯಗಳು, ವಿಷಯಾನುಭವದಿಂದುಂಟಾಗುವ ತೃಪ್ತಿ ಈ ಆರು ಕ್ರಮವಾಗಿ– ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದ ಲಿಂಗ, ಮಹಾಲಿಂಗವೆಂಬ ಆರು ಲಿಂಗಗಳ ಸ್ವರೂಪವಾಗಿರುವುವು. ಈ ಷಡ್ಲಿಂಗಗಳ ಸ್ವರೂಪವೇ ಷಟ್‌ಸ್ಥಲಬ್ರಹ್ಮರೂಪವು. ಈ ರೂಪವನ್ನು ಪಡೆಯು ವುದೇ ಸರ್ವಾಂಗಲಿಂಗಸ್ಥಿತಿಯು. ಇವರ ವಿಚಾರವು ಹೀಗಿದೆ: ಲಿಂಗಾಂಗ ಯೋಗಾಚರಣೆಗೆ ಪ್ರಸಾದಭೋಗ, ಅದರಿಂದುಂಟಾಗುವ ತೃಪ್ತಿ ಇವೆರಡೇ ಫಲಗಳು. ಜಗತ್ತಿನ ಸಕ್ಷಪದಾರ್ಥಗಳೆಲ್ಲವೂ ಪ್ರಸಾದವಾಗಿ ಪರಿಣಮಿಸಬೇಕು. ಆತ್ಮನು ಆ ಪ್ರಸಾದವನ್ನು ಭೋಗಿಸಿ ತೃಪ್ತನಾಗಬೇಕು. ಆ ತೃಪ್ತಿಯು ನಿತ್ಯ-ವಾದುದು ಲಿಂಗಾನಂದರೂಪವಾದುದು. ಇದೇ ಲಿಂಗಭೋಗೋಪಭೋಗಜನ್ಯವಾದ ಶಿವಸುಖವು. ಇದನ್ನು ಪಡೆದವನು ಮುಕ್ತಾತ್ಮನು ಶಿವಯೋಗಿಯು ಈ ಸ್ಥಿತಿಯನ್ನು ಪಡೆಯುವದೇ ಲಿಂಗಾಂಗ ಯೋಗಾಚರಣೆಯ ಗುರಿಯು.

ಜಗತ್ತಿನ ಪದಾರ್ಥಗಳು ಪ್ರಸಾದರೂಪವಾಗಿ ಗೋಚರಿಸಬೇಕಾದರೆ– ದೇಹ, ಆತ್ಮ, ಪ್ರಾಣ, ಇಂದ್ರಿಯಗಳು ಮೊದಲು ಶುದ್ಧವಾಗಬೇಕು, ಲಿಂಗರೂಪ ವಾಗಬೇಕು. ಆದ್ದರಿಂದ ಲಿಂಗಾಂಗಯೋಗಾಭ್ಯಾಸಿಯು ಸದಾಚಾರಿಯಾಗಬೇಕು. ಸದಾಚಾರದಿಂದ ಭೂತಕಾಯವಳಿದು ಲಿಂಗಕಾಯವಾಗುವುದು ಈ ಕಾಯವನ್ನೇ ಆಚಾರ ಲಿಂಗಸ್ವರೂಪವಾದುದೆಂದು ಹೇಳುವರು. ಗುರುಬೋಧೆಯಿಂದ ಆತ್ಮನು ಅಹಂಕಾರ ಮಮಕಾರ ರೂಪವಾದ ಭ್ರಾಂತಿಯನ್ನು ತ್ಯಜಿಸಿ ಲಿಂಗ ಜ್ಞಾನಯುಕ್ತ ನಾದರೆ ಅವನು ಗುರುಲಿಂಗ ಸ್ವರೂಪನಾಗುವನು. ಇದರಂತೆ ಆತ್ಮನ ಪ್ರಾಣವು ವಾಯುರೂಪವಾಗಿರದೆ ಲಿಂಗಮಯ ಪ್ರಾಣವಾದರೆ ಅದು ಶಿವಲಿಂಗ ಸ್ವರೂಪ ವಾಗುವುದು, ಮತ್ತು ಆತ್ಮನ ಇಂದ್ರಿಯಗಳ ಚಂಚಲತ್ವವಡಗಿ ವಿಷಯ ಭೋಗವನ್ನು ಬಿಟ್ಟು, ಲಿಂಗಪ್ರಸಾದ ಭೋಗಕ್ಕೆ ಆ ಇಂದ್ರಿಯಗಳು ತಕ್ಕವುಗ ಳಾಗಬೇಕು. ಆಗ ಅವು ಜಂಗಮಸ್ವರೂಪಗಳಾಗುವವು. ಈ ಸ್ಥಿತಿಯನ್ನು ಪಡೆದ ಲಿಂಗಾಂಗಯೋಗಿಗೆ ಜಗತ್ತಿನ ಪದಾರ್ಥಸಮೂಹವು ಶಿವಪ್ರಸಾದರೂಪ ವಾಗಿ ಕಾಣುವದು. ಈ ರೀತಿಯಿಂದ ಗೋಚರಿಸುವ ಪ್ರಸಾದವೇ ಪ್ರಸಾದಲಿಂಗವು. ಈ ಪ್ರಸಾದ ಭೋಗದಿಂದ ಜನಿಸಿದ ತೃಪ್ತಿಯೇ ಮಹಾಲಿಂಗವು. ಈ ರೀತಿಯ ಮಹಾಲಿಂಗದಲ್ಲಿ (ತೃಪ್ತಿಯಲ್ಲಿ) ಸಮರಸ ಹೊಂದಿದ ಲಿಂಗಾಂಗ ಯೋಗಿಯು ಷಟ್‌ಸ್ಥಲ ಬ್ರಹ್ಮಮೂರ್ತಿಯಾಗಿ ಕಂಗೊಳಿಸುವನು. ಇದೇ ಸರ್ವಲಿಂಗಸ್ಥಿತಿಯು. ಇದೇ ಲಿಂಗಾಂಗಯೋಗರೂಪವಾದ ಶಿವಯೋಗದ ನಿಜಸ್ವರೂಪವು.

ಹೀಗೆ ಶಿವಯೋಗವು ಸರ್ವಯೋಗಗಳ ಸಾರವಾಗಿರುವದಲ್ಲದೆ, ಲಿಂಗಾಂಗಿ ಗಳೆಲ್ಲರಿಗೂ ಸುಲಭವಾಗಿ ಆಚರಿಸಲು ಸಾಧ್ಯವಾದ ಪ್ರಗತಿಯನ್ನು ಹೊಂದಿ ಮುಂದು

CC-0. Jangamwadi Math Collection. Digitized by eGangotri

ಪರಿದಿರುವುದೆಂಬುದನ್ನು ನಾವು ಗ್ರಹಿಸಬೇಕು. (ಶಿವಯೋಗದ ವಿಸ್ತೃತ ವಿಚಾರವನ್ನು ವಾಚಕರು ಅಖಿಲ ಭಾರತ ಶಿವಾನುಭವ ಸಂಸ್ಥೆಯವರು ಪ್ರಕಟಿಸಿರುವ 'ಶಿವಯೋಗ' ವೆಂಬ ಗ್ರಂಥದಲ್ಲಿ ನೋಡಿಕೊಳ್ಳಬೇಕು.)

ಶಿವಯೋಗಿ ಪುಂಗವರ ಪರಂಪರೆಗೆ ಸೇರಿದ ಶ್ರೀ ನಿ. ಪ್ರ. ಲಿಂ. ಪೂಜ್ಯ ಶಿವಬಸವ ಮಹಾ ಶಿವಯೋಗಿಗಳ ಪಾದದಲ್ಲಿ ಈ ಲೇಖನ ಪುಷ್ಪವನ್ನು ಅರ್ಪಿಸಿ ಆ ಮಹಾ ಮಹಿಮರ ಮಂಗಲಾಶೀರ್ವಾದವು ಯಾವಾಗಲೂ ನನ್ನ ಬೆಂಗಾವಲಾಗಿರಲೆಂದು ಬೇಡುವೆನು.

CC-0. Jangamwadi Math Collection. Digitized by eGangotri

# ಜೀವನ ಮತ್ತು ಕಲೆ

ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳು ಶಿಗ್ಗಾಂವಿಮಠ, ಹುಬ್ಬಳ್ಳಿ

### ವಿಷಯದ ವ್ಯಾಪಕತೆ

ಕತ್ತಲೆಯಲ್ಲಿ ದಾರಿಕಾಣಲು ಬೆಳಕು ಬೇಕು. ಹಸಿದವನಿಗೆ ಒಳ್ಳುಣಿಸು ಬೇಕು. ಜೀವನದ ದುಃಖ-ದುಮ್ಮಾನಗಳನ್ನು ಮೀರಿಸಿ ನಿಲ್ಲಲು ಅರಿವು ಬೇಕು. ಮರೆತ ಮಾನವನಾಗುವದಕ್ಕಿಂದ ಅರಿತ ಶರಣನಾಗುವದು ಶ್ರೇಯಸ್ಕರ ಮಾರ್ಗ ವೆಂಬುದನ್ನು ಶರಣರು ವಚನಿಸಿದ್ದಾರೆ. ಈ ಪ್ರಜ್ಞೆಸದೋದಿತ ಜಾಗ್ರತವಾಗಿದ್ದರೆ, ವಸ್ತುಪೌಲ್ಯ ವಿವೇಕ ಉಂಟಾಗಿ ಜೀವನದಲ್ಲಿ ಭರವಸೆ, ಸಂತೃಪ್ತಿ; ಸಂತಸ ಗಳೊಡನೆ ಕ್ಷೇಮವೂ ಉಂಟಾಗುತ್ತದೆ. ಬಳ್ಳಿ ಸಾರಗ್ರಾಹಿಯಾಗಿ ಮೊಗ್ಗು ಬಿಟ್ಟು, ಹೂ ಅರಳಿಸುತ್ತಲೂ ಪರಿಮಳವನ್ನು ಬೀರುತ್ತದೆ. ಆಗ ಅದನ್ನು ಸುಮಂಗಲೆಯರು ಮುಡಿಯುತ್ತಾರೆ. ಇದರಂತೆ ಜೀವನ ಕುಸುಮವು ಸಹ ಸುತ್ತಲಿನ ಪರಿಸರಕ್ಕೆ ಹೊಂದಿಕೊಂಡು ಅರಳಿ "ತಾನು ಬದುಕಿ ಉಳಿದವರಿಗೂ ಬದುಕಗೊಡಬೇಕು." ಇದರಲ್ಲಿಯೇ ಜೀವನದ ಸಾರ್ಥಕತೆ, ಹಾಗೂ ಧನ್ಯತೆ, ಅಡಗಿದೆ.

ಪ್ರಣತಿ, ತೈಲ, ಬತ್ತಿಗಳ ಸಹಕಾರದಿಂದ ಜ್ಯೋತಿ ಬೆಳಗುವಂತೆ, ತತ್ವ ಜ್ಞಾನ, ಸಾಹಿತ್ಯ, ಕಲೆಗಳ ಆಸರೆಯಿಂದ ಜೀವನ ಪುಟವಿಕ್ಕಿದ ಚಿನ್ನದಂತೆ ಆಗುತ್ತದೆ. ಕಳೆಗೊಳ್ಳುತ್ತದೆ.

### ಕಲೆ

ಇಲ್ಲಿ ವಿಚಾರಿಸುತ್ತಿರುವುದು 'ಕಲೆ' ಯ ಬಗೆಗೆ ಮಾತ್ರ.

'ರಸೋದ್ದಿಷ್ಟಾ ಕಲನಾ ಕಲಾ; ಅಂದರೆ– ರಸೋದ್ದಿಷ್ಟವೂ, ಸೌಂದರ್ಯಮಯವೂ; ಸುಗಠಿತವೂ; ಮಧುರ ಶಬ್ದರೂಢವಾದ ಆಂಶಿಕ ಅಭಿವ್ಯಕ್ತಿಯೇ 'ಕಲೆ'ಯೆಂದು ಹೇಳಬಹುದು. ಇಲ್ಲಿ ಅಭಿವ್ಯಕ್ತಿಯೇ ಮುಖ್ಯ. ತಿಳಿದವರು– ಯಾವುದೇ ಗುಣ ಹಾಗೂ ಕೌಶಲದಿಂದಾಗಿ ವಸ್ತುವಿನಲ್ಲಿ ವಿಶೇಷವಾದ ಉಪಯೋಗತೆ, ಮತ್ತು ಸುಂದರತೆಯುಂಟಾಗುತ್ತದೆ. ಆಗ ಆ ವಸ್ತು ಕಲಾತ್ಮಕವಾಗುತ್ತದೆ ಎಂದು ಹೇಳುವುದುಂಟು. ಸ್ವಲ್ಪದರಲ್ಲಿ ಹೇಳುವದಾದರೆ; ಸಂಸಾರದ ವಿವಿಧ ವೈಚಿತ್ರ್ಯ ಪೂರ್ಣ ನದಿ—ನದ, ವನ—ಉಪವನ; ತರು—ಲತೆ; ಪಲ್ಲವ—ಪುಷ್ಪ; ಮಧು—ಮಕರಂದ; ಶುಕ—ಪಿಕ; ಶೈಲ—ಶಿಲೋಚ್ಚಯ; ಚಂದನ—ಚಂದ್ರಿಕೆ; ಸಾಹಿತ್ಯ—ಸಂಗೀತ; ಮತ್ತು ಮಾನವಾದಿ ರೂಪ—ರಸ-ಗಂಧ—ಸ್ಪರ್ಶ ಮತ್ತು

CC-0. Jangamwadi Math Collection. Digitized by eGangotri

ಶಬ್ದದ ಆಕರ್ಷಕ ಹಾಗೂ ಕೌತೂಹಲ ಜನಕವಾದ ಅಸಂಖ್ಯ ರೂಪಗಳಲ್ಲಿ ಅನಂತ ಐಶ್ವರ್ಯಮಯನಾದ ಪರಮೇಶ್ವರನ ಅತರ್ಕ್ಯ ಮಹಿಮೆಯನ್ನು ಖಂಡಶಃ ಅಭಿವ್ಯಕ್ತಗೊಳಿಸುವ ಮಹಾನ್ ಉದ್ದೇಶ ಸಾಧನೆಯಲ್ಲಿ ನಿರತವಾದ ಕೌಶಲವಿಶಿ ಕ್ರಿಯಾಶಕ್ತಿಯ ರೂಪದಲ್ಲಿ ಕಲೆಯ ದರ್ಶನವನ್ನು ಮಾಡಬಹುದು. ಯಾವ ಕಲೆ ಸತ್—ಚಿತ್ ಹಾಗೂ ಆನಂದಮಯವಾದ ಮಹಾ ಸತ್ತೆಯ ಬಗೆಗೆ ಜನ ಜೀವನವನ್ನು ಜಾಗ್ರತಗೊಳಿಸುವದಿಲ್ಲವೋ ಅದು ಕಲೆಯಲ್ಲ, ಕೊಲೆ. ಕಲೆಯ ಸೋಗು ಮಾತ್ರ.

ಮೂಲದಲ್ಲಿ ಕಲೆಗಳು ಹದಿನಾರು, ಮುಂದೆ ಅವು ೬೪ ಕಲೆಗಳಲ್ಲಿ ವಿಸ್ತೃತ ಗೊಳ್ಳುತ್ತವೆ. ಸಂಕ್ಷೇಪವಾಗಿ ಕಲೆಯಲ್ಲಿ ಎರಡು ವಿಭಾಗಗಳನ್ನಾಗಿ ಮಾಡಬಹುದು. ಒಂದು ಉಪಯೋಗಿ ಕಲೆ, ಇನ್ನೊಂದು ಲಲಿತ ಕಲೆ. ಉಪಯೋಗಿ ಕಲೆಯಲ್ಲಿ ಕಂಬಾರಿಕೆ, ಕುಂಬಾರಿಕೆ, ನೆಯ್ಗಾರಿಕೆ ಮುಂತಾದ ವ್ಯವಸಾಯಗಳು ಸಮ್ಮಿಲಿತ ವಾಗಿವೆ. ಲಲಿತ ಕಲೆಯಲ್ಲಿ ಮಾತ್ರ ವಾಸ್ತುಕಲೆ, ಮೂರ್ತಿಕಲೆ; ಚಿತ್ರಕಲೆ; ಸಂಗೀತಕಲೆ; ಮತ್ತು ಕಾವ್ಯಕಲೆ ಎಂದು ೫ ಭೇದಗಳನ್ನು ಮಾಡಬಹುದು.

ಒಟ್ಟಿನಲ್ಲಿ ಎಲ್ಲ ಕಲೆಗಳ ಗುರಿ ಮನುಷ್ಯತ್ವದ ಸರ್ವತೋಮುಖ ಬೆಳ ವಣಿಗೆಯ ವಿಕಾಸದ, ಮಂಗಲಕರವಾದ ಪ್ರಜೋದನೆಯೇ ಆಗಿದೆ ಎಂದು ಹೇಳಿದರೆ ತಪ್ಪಾಗಲಾರದು.

## ಜೀವನ

ಗ್ರೀಸ್ ದೇಶದ ಇತಿಹಾಸದಲ್ಲಿ ಒಬ್ಬ ದಾರ್ಶನಿಕನ ಘಟನೆ ಬರುತ್ತದೆ. ಒಂದು ದಿವಸ ಅವನು ದಿನದ ೧೨ ಘಂಟೆಗೆ ಕೈಯಲ್ಲಿ ಲಾಂದ್ರ (ಲಾಟನು) ಹಿಡಿದು ಮನೆಯಿಂದ ಹೊರಬಿದ್ದು ಬಜಾರದಲ್ಲಿ ತಿರುಗಾಡ ಹತ್ತಿದ. ಕೆಲ ಜನರು ಇದನ್ನು ಆಶ್ಚರ್ಯದಿಂದ ನೋಡ ಹತ್ತಿದರು. ಕೆಲವರಂತೂ ದಾರ್ಶನಿಕರು ಅರೆ ಹುಚ್ಚರಾಗಿರುತ್ತಾರೆ. ಇವನೂ ಅವರಲ್ಲೊಬ್ಬನಿರಬೇಕೆಂದರು. ಆ ದಾರ್ಶನಿಕನು ಬಜಾರದಿಂದ ಹೊರಟು, ನಗರದಿಂದ ಹೊರಬಿದ್ದು ಅಡವಿಯ ಕಡೆಗೆ ನಡೆದನು. ಉರಿಯುತ್ತಿರುವ ಲಾಂಧ್ರವನ್ನು ಹಿಡಿದು, ಕೆಳಗೆ ಮುಖ ಮಾಡಿ ಏನನ್ನೋ ಕಳೆದುಕೊಂಡವರು ಹುಡುಕವಂತೆ ನಡೆದಿದ್ದನು. ಕೆಲವರು ಸಾಹಸಮಾಡಿ ಕೇಳಿದರು-ನೀವು ಬಹು ದೊಡ್ಡ ವಿದ್ವಾಂಸರಾಗಿದ್ದೀರಿ. ಪ್ರಕಾಶಮಾನವಾದ ಇಂಥ ಉರಿ ಬಿಸಿಲಿನಲ್ಲಿ ಏನನ್ನೋ ಕಳೆದುಕೊಂಡವರಂತೆ ಏನನ್ನು ಹುಡುಕುತ್ತಿದ್ದೀರಿ ? ಎಂದು ಆಗ ದಾರ್ಶನಿಕ ಈ ಪ್ರಶ್ನೆ ಕೇಳಿ ನಸುನಕ್ಕು ನಂತರ ಗಂಭೀರವದನನಾಗಿ ಹೇಳಿದ—

CC-0. Jangamwadi Math Collection. Digitized by eGangotri

"ಓ! ಎಥೆನ್ಸವಾಸಿಗಳೇ! ನಾನು ಮನುಷ್ಯನನ್ನು ಹುಡಕುತ್ತಿದ್ದೇನೆ" ಆಗ ನೆರೆದ ಜನರಲ್ಲಿ ಒಬ್ಬ ತೀಕ್ಷ್ಣವಾಗಿಯೇ ಕೇಳಿದ– 'ಅಂದರೆ ನಾವು ಮನುಷ್ಯರಲ್ಲವೇನು ?' ಎಂದು.

ದಾರ್ಶನಿಕ ಧೃಢವಾದ ಸ್ವರದಿಂದ ಹೇಳಿದ :– "ಇಲ್ಲ. ನೀವು ಮನುಷ್ಯರಲ್ಲ" ಒಬ್ಬ ತರುಣ ಅಧೀರನಾಗಿ ಕೇಳಿದ– "ಹಾಗಾದರೆ ನಾವು ಯಾರು ?"

ದಾರ್ಶನಿಕ- "ನಿಮ್ಮಲ್ಲಿ ಕೆಲವರು ಅಂಗಡಿಕಾರರಾಗಿದ್ದೀರಿ. ಕೆಲವರು ಸರಕಾರಿ ಅಧಿಕಾರಿಗಳು, ಅಥವಾ ನೌಕರರು, ಕೆಲವರು ಒಕ್ಕಲಿಗರು ಮತ್ತು ಕೆಲವರು ಅಧ್ಯಾಪಕರು, ಕೆಲವರು ವಿದ್ಯಾರ್ಥಿಗಳು, ಹಲವರು ಸ್ತ್ರೀಯರು, ಮತ್ತು ಹಲವರು ಪುರುಷರು, ಕೆಲವರು ತಾಯಿಗಳಾದರೆ ಕೆಲವರು ತಂದೆಗಳು. ಆದರೆ ದುಃಖದ ಮಾತೆಂದರೆ ನಿಮ್ಮಲ್ಲಿ ಯಾರೂ ಮನುಷ್ಯರು ಇಲ್ಲವೆಂಬುದು."

ಗ್ರೀಕದಾರ್ಶನಿಕನ ಆ ಮಾತು ಇಂದಿಗೂ ಅಕ್ಷರಶಃ ಸತ್ಯವಾಗಿದೆ. ಇಂದು ನಾವು ವೈಜ್ಞಾನಿಕರಾಗಿದ್ದೇವೆ. ರಾಜಕಾರಣಿಗಳಾಗಿದ್ದೇವೆ. ವ್ಯಾಪಾರಿಗಳಾಗಿದ್ದೇವೆ. ಅಧಿಕಾರಿಗಳಾಗಿದ್ದೇವೆ. ಪ್ರಧಾನ ಮಂತ್ರಿಗಳಾಗೀದ್ದೇವೆ. ರಾಷ್ಟ್ರಪತಿಗಳಾಗಿದ್ದೇವೆ. ಗೃಹಸ್ಥರಾಗಿದ್ದೇವೆ. ಸಾಧು–ಸನ್ಯಾಸಿಗಳಾಗಿದ್ದೇವೆ. ಆದರೆ "ಮನುಷ್ಯರಾಗಿದ್ದೇವೆಯೆ ?" ಈ ಯಕ್ಷ ಪ್ರಶ್ನೆ ಮಾನವ ಕುಲದ ಎದುರು ನಿತ್ಯ ನೂತನವಾಗಿ ಘರ್ಜಿಸುತ್ತದೆ.

ಮಾನವನ ಮೇಲೆ ಎಷ್ಟು ಮಹತ್ತರವಾದ ಹೊಣೆ ಇದೆ ಎಂಬ ಬಗೆಗೆ ವಿಶ್ವಕವಿ ರವೀಂದ್ರನಾಥ ಠಾಕೂರರ ಒಂದು ಸುಂದರವಾದ ಕವಿತೆಯನ್ನು ಇಲ್ಲಿ ಉದಾಹರಿಸುತ್ತೇವೆ "ಹೂವಿಗೆ ಇತ್ತ ಪರಿಮಳ, ಬಣ್ಣಗಳನ್ನು ದೇವರು ಅದರಿಂದ ಅಪೇಕ್ಷಿಸುತ್ತಾನೆ. ಕೋಗಿಲೆಯು ಕೂವೂ–ಕೂವೂ ಶಬ್ದವನ್ನು ತನಗೆ ಅರ್ಪಿಸಲು ಕೇಳುತ್ತಾನೆ. ವೃಕ್ಷಗಳು ತನಗೆ ಮಧುರ ಫಲಗಳನ್ನು ಕೊಡಬೇಕೆಂದು ಇಚ್ಛಿಸುತ್ತಾನೆ. ಆದರೆ ಮನುಷ್ಯನಿಗಾಗಿ ಅವನ ನಿಯಮಗಳು ಬೇರೆ ಇವೆ. ದುಃಖದೊಳಗಿಂದ ಮನುಷ್ಯನು ಸುಖವನ್ನು ಪಡೆಯಬೇಕೆಂದು ಆಶಿಸುತ್ತಾನೆ. ಕತ್ತಲೆಯೊಳಗಿಂದ ಬೆಳಕು ನಿರ್ಮಿಸಲು ಹೇಳುತ್ತಾನೆ. ಮನುಷ್ಯ ಸಾಯುವ ಪ್ರಾಣಿ 'ಮರಣದಲ್ಲಿ ಅಮೃತತ್ವವನ್ನು ಪಡೆ.' ಎಂದು ಹೇಳಿದ್ದಾನೆ. ಸುತ್ತು ಮುತ್ತಲೆಲ್ಲಾ ಕೆಸರು ಹಬ್ಬಿದೆ, ಸುಳ್ಳು ಸುಳಿಯುತ್ತಿದೆ. ಈ ಸುಳ್ಳಿನಲ್ಲಿ ಸತ್ಯ ಕಾಣಲು, ವಿಷದಲ್ಲಿ ಅಮೃತವನ್ನು ದೊರಕಿಸಲು, ಹೊಲಸಿನಲ್ಲಿ ಹೊನ್ನ ಪಡೆಯಲು ಹೇಳುತ್ತಾನೆ ಮಾನವನಿಗೆ ದೇವರು. ಮಾನವನ ಮೇಲೆ ಇಷ್ಟು ಹೊಣೆ ಏಕೆ ? ಇಡಿ ಸೃಷ್ಟಿಯಲ್ಲಿ ಮಾನವನು ಶ್ರೇಷ್ಠನೆಂದು ಅವನು ಭಾವಿಸಿದ್ದಾನೆ. ಅವನಿಂದಲೆ ಇವೆಲ್ಲವು

CC-0. Jangamwadi Math Collection. Digitized by eGangotri

ಗಳನ್ನು ಅಪೇಕ್ಷಿಸದೇ ಮತ್ತಾರಿಂದ ಅಪೇಕ್ಷಿಸಬೇಕು. ? ಇವರಲ್ಲಿ ಮಾನವನ ಗೌರವವಿದೆ. ಮಾನವನಿಂದ ಕ್ಷುದ್ರ ವಸ್ತುಗಳನ್ನು ಅಪೇಕ್ಷಿಸುವದೆಂದರೆ ಅದು ಅವನ ಅಪಮಾನವಾಗುವದು. ತನ್ನ ಮುದ್ದು ಮಗ ಮಾನವನಿಗೆ ಇವನ್ನೆಲ್ಲ ನೆರವೇರಿಸಲು ಸಾಧ್ಯವೆಂದು ಅವನ ಆಶೆ. ಎಂಬತ್ನಾಲ್ಕು ಲಕ್ಷ ಯೋನಿಗಳನ್ನು ದಾಟಿ ಹುಟ್ಟಿದ ಹಿರಿದಾದ ಪ್ರಾಣಿ ಮಾನವ. ದೇವರ ಇಡೀ ಸೃಷ್ಟಿಯ ಮುಕುಟ ಮಣಿ. ಇವನೇ ನನ್ನ ಆಶೆ. ಇವನು ನನ್ನನ್ನು ನಿರಾಶೆ ಮಾಡಲಿಕ್ಕಿಲ್ಲ ವೆಂಬ ನಂಬಿಗೆಯು ದೇವರಿಗೆ ಇದೆ. ಎಂಥ ಉದಾತ್ತ ಹಾಗೂ ಸುಂದರ ಕಾವ್ಯವಿದು! ಇದಕ್ಕಾಗಿಯೇ ಮಹರ್ಷಿ ಟಾಲಸ್ಟಾಯ ಹೇಳುತ್ತಾರೆ "ಎಲ್ಲ ಶಾಸ್ತ್ರಗಳ ಅಭ್ಯಾಸ ವನ್ನು ನಿಲ್ಲಿಸಿರಿ. ಮೊದಲು ಮನುಷ್ಯರು ಒಬ್ಬರೊಡನೆ, ಇನ್ನೊಬ್ಬರು ಹೇಗೆ ನಡೆದುಕೊಳ್ಳಬೇಕೆಂಬ ಶಾಸ್ತ್ರವನ್ನು ಸಿದ್ಧಗೊಳಿಸಿರಿ" ಎಂದು ಈ ಜಾಡಿನಲ್ಲಿ ಜೀವನದ ಅರ್ಥವಾಗಬೇಕು. ಉದ್ದೇಶದ ಅರಿವಾಗಬೇಕು.

## ಜೀವನ ಕಲೆ

ಹೀಗಾಗಲು ಜೀವನದಲ್ಲಿ ಕಲೆಯ ಅವತಾರವಾಗಬೇಕು. ಜೀವನ ಮತ್ತು ಕಲೆಗಳ ಕೂಡಲಸಂಗಮವಾದಾಗ ಎಲ್ಲ ಕಲೆಗಳಲ್ಲಿ ಶ್ರೇಷ್ಠವಾದ ಜೀವನ ಕಲೆಯ ಜನನವಾಗುತ್ತದೆ. "ಒಂದು ಸುಂದರವಾದ ಚಿತ್ರವನ್ನು ಬರೆದಾಗಲೀ, ಒಂದು ಚಲುವಿನ ಮೂರ್ತಿಯನ್ನು ಕಲ್ಲಿನಲ್ಲಿ ಕೊರೆದಾಗಲೀ, ಸೌಂದರ್ಯವನ್ನು ರೂಪಿಸುವದು ಒಂದು ಕಲೆ. ಆದರೆ ನಾವು ಜೀವಿಸುವ ಸೃಷ್ಟಿಯಲ್ಲಿ ನಮ್ಮ ಇರುವಿಕೆಯಿಂದ ಸುತ್ತಲಿನ ವಾತಾವರಣವನ್ನೇ ಸುಖಮಯವಾಗಿಡುವದು ಇವೆಲ್ಲಕ್ಕೂ ಮಿಗಿಲಾದ ಕಲೆ." ಎಂದು ಹೇನ್ರಿ ಥೋರೆ ಬಹು ಸೊಗಸಾಗಿ ಬಣ್ಣಿಸಿದ್ದಾನೆ. ಆಳವಾದ, ವಿಶಾಲವಾದ, ಉದಾತ್ತವಾದ; ಐಕ್ಯ ಮಾಂಗಲ್ಯಗಳಿಂದ ಕೂಡಿದ ಚಿನ್ನದಂಥಹ ಜೀವನಕ್ಕೆ, ಸುಂದರತೆ ಹಾಗೂ ಕೌಶಲಗಳಿಂದ ಕೂಡಿದ ಕಲೆಯ ಪುಟದೊರೆತರೆ ಜೀವನ ಪುಟವಿಕ್ಕಿದ ಚಿನ್ನದಂತಾಗುತ್ತದೆ. ಮಾನವೀಯ ಅಂತಃಕರಣದ ಉದ್ಘಾಟನೆಯಾಗುತ್ತದೆ. ಆಗ ಅಂತಃಕರಣದಲ್ಲಿ ಸುಪ್ತವಾದ-ಅಡಗಿರುವ ಮೂಲ ಪ್ರವೃತ್ತಿಗಳಾದ ಮಾನವನ ಸೊತ್ತಾದ ಪ್ರೀತಿ, ವಿಶ್ವಾಸ-ದಯೆ-ಕರುಣೆ ಪರೋಪಕಾರ ಮುಂತಾದ ಸದ್ಗುಣಗಳು ಶಿವನ ಜಡೆಯಿಂದ ಹೊರಹೊಮ್ಮಿದ ಗಂಗೆಯಂತೆ ಚಿಮ್ಮಿ ಬರುತ್ತವೆ. ಆಗ ಪ್ರಪಂಚದ ಅಶಾಂತಿಗೆ ಕಾರಣಗಳಾದ ಅಜ್ಞಾನ, ಅಹಂಕಾರ, ಮಮಕಾರ, ಕ್ರೌರ್ಯಗಳು ಜೀವನ ಕಲೆಯ ಪಾವನ ಗಂಗೆಯಲ್ಲಿ ಕೊಚ್ಚಿ ಹೋಗುತ್ತವೆ. ಅಣ್ಣಬಸವಣ್ಣನವರು ಹೇಳಿದ "ಸಕಲ ಜೀವಾತ್ಮರಿಗೆ ಲೇಸನೇ ಬಯಸುವ" ಮಂಗಲ ಪರಂಪರೆ ಬೆಳೆದು ಬಂದು ಸುಖ-ಶಾಂತಿ ಸಮೃದ್ಧಿ ಸಮರಸಗಳು ನೆಲಿಸುತ್ತವೆ. ಸಮರಸವೇ ಜೀವನ. ವಿರಸ ಮರಣ ಅಲ್ಲವೆ?

CC-0. Jangamwadi Math Collection. Digitized by eGangotri

## ಕಲಾ ನಿಪುಣರು

ಪ್ರಪಂಚದ ಇತಿಹಾಸದಲ್ಲಿ ಜೀವನ ಕಲೆಯನ್ನು ಆರಾಧಿಸಿ, ಅಂಗವಿಸಿಕೊಂಡ ದಿವ್ಯ (ದೇವ) ಜೀವನಗಳ ಚರಿತ್ರೆಗಳು ಹೇರಳವಾಗಿ ಸಿಗುತ್ತವೆ. ಅವುಗಳಲ್ಲಿ ಕೆಲವನ್ನು ಮಾತ್ರ ಉದಾಹರಿಸಬಹುದು.

ಮಧ್ಯರಾತ್ರಿಯ ಸಮಯ, ಜಗದಣ್ಣ ಬಸವಣ್ಣನವರ ಮಹಾ ಮನೆಯಲ್ಲಿ ಕಳ್ಳ ಪ್ರವೇಶಿಸುತ್ತಾನೆ. ಕಾಯಕ ತತ್ವಾಚಾರ್ಯನ ಮನೆಯಲ್ಲಿ ದೊರೆಯುವ ದಾವರೂ ಏನು? ಸಂಗ್ರಹವಿದ್ದರಲ್ಲವೆ? ಏನೂ ದೊರೆಯದಾಗಲು ಕಳ್ಳ ಹತ್ತಿರ ದಲ್ಲಿಯೇ ಮಲಗಿದ್ದ ನೀಲಮ್ಮನವರ ಬಳೆಗಳಿಗೆ ಕೈಯಿಕ್ಕುತ್ತಾನೆ. ಎಲ್ಲರಿಗೂ ಎಚ್ಚರವಾಗುತ್ತದೆ. ಕಳ್ಳ ಸಿಕ್ಕುಬೀಳುತ್ತಾನೆ. ಆಗ ಅಣ್ಣನವರು "ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದರೆ ಅವನು ಕೂಡಲ ಸಂಗಮ ದೇವನಲ್ಲದೇ ಮತ್ತಾರೂ ಅಲ್ಲ"ವೆಂದು ಹೇಳಿ ಬಳೆ ಕೊಡಲು ನೀಲಮ್ಮನವರಿಗೆ ತಿಳಿಸುತ್ತಾರೆ. ಇದನ್ನು ನೋಡಿ ಕಳ್ಳನ ಕರುಳು ಕರಗುತ್ತದೆ. ಇಂಥ ಉನ್ನತ ಜೀವನದೆದುರು; ತನ್ನ ಕಿರಿತನದ ಅರಿವಾಗುತ್ತದೆ. ಅರಿತರೆ ಶರಣನಲ್ಲವೆ? ಹಾಗಾಗುತ್ತಾನೆ.

ಮಹಾರಾಷ್ಟ್ರದ ಸಂತ ಏಕನಾಥರ ಮನೆಗೆ, ಒಬ್ಬ ಅತಿಥಿ ಅವರನ್ನು ಸಿಟ್ಟಿಗೆಬ್ಬಿಸಿದರೆ ಅವನಿಗೆ ೨೦೦ ರೂಪಾಯಿಗಳನ್ನು ಕೊಡುವದಾಗಿ ಹೇಳಿದ ಕುಹ-ಕರ ಮಾತಿನಿಂದ ಬರುತ್ತಾನೆ. ಆಗ ಊಟದ ಸಮಯ ಏಕನಾಥರೂ ಅತಿಥಿಯನ್ನು ಹತ್ತಿರ ಕುಳ್ಳಿರಿಸಿಕೊಳ್ಳುತ್ತಾರೆ. ಅವರ ಹೆಂಡತಿ ಗಿರಿಜಾಬಾಯಿ ಊಟಬಡಿಸಲು ಆರಂಭ ಮಾಡುತ್ತಾರೆ. ಅತಿಥಿ ಸಿಟ್ಟಿಗೆಬ್ಬಿಸುವ ಉಪಾಯ ಹೂಡುತ್ತಾನೆ. ಸರಿ, ನೀಡಲು ಬಾಗಿದ ಗಿರಿಜಾಬಾಯಿಯ ಬೆನ್ನ ಮೇಲೆ ಜಿಗಿದು ಹತುತ್ತಾನೆ. ಅದನ್ನು ನೋಡಿದ ಏಕನಾಥರು ಗಿರಿಜಾ! ಅತಿಥಿ ಬಿದ್ದು ಮೊಣಕಾಲು ಒಡೆದುಕೊಂಡಾನು ಜ್ಯೋಕೆ! ಎಂದು ಹೇಳುತ್ತಾರೆ. ಅದಕ್ಕೆ ಗಿರಿಜಾಬಾಯಿ ಮಗನನ್ನು ಬೆನ್ನಮೇಲೆ ಹೊತ್ತು ಅಭ್ಯಾಸವಿದೆ. ಈ ಮಗನನ್ನೂ ಕೆಡಹುವದಿಲ್ಲ ಎಂದು ಹೇಳಿದಾಗ, ಅತಿಥಿಗೆ ಮಾನವತೆಯ ಅರಿವಾಗುತ್ತದೆ. ಕಾಲಿಗೆರಗುತ್ತಾನೆ.

ಸಿಲುಬೆಯ ಮೇಲೇರಿದ ಕ್ರೈಸ್ತ, ಸಿಲುಬೆಗೇರಿಸಿದವರ ಬಗೆಗೆ ದೇವರೇ! ಅವರನ್ನು ಕ್ಷಮಿಸು, ಅವರಿಗೆ ತಿಳವಳಿಕೆ ಕೊಡು "Father, forgive them for they know not what they do." ಎಂದು ಪ್ರಾರ್ಥಿಸುತ್ತಾನೆ.

ಸಭೆಗೆ ಹೋಗುವ ದಾರಿಯಲ್ಲಿ ಅಮೇರಿಕೆಯ ಅಧ್ಯಕ್ಷ ಅಬ್ರಾಹಿಮ ಲಿಂಕನ್, ಒಂದು ಹಂದಿಯ ಮರಿ ಕೆಸರಿನಲ್ಲಿ ಒದ್ದಾಡುವದನ್ನು ನೋಡಿ ಹೊರ

CC-0. Jangamwadi Math Collection. Digitized by eGangotri

ತೆಗೆಯುತ್ತಾನೆ. ಅವನ ಹೊಲಸಾದ ಬಟ್ಟೆಗಳನ್ನು ಕಂಡು ಜನ ಕೇಳಿದಾಗ, "ಏನು ಮಾಡಲಿ! ಒದ್ದಾಡುವ ಮರಿಯನ್ನು ನೋಡಿ ನನ್ನ ಅಂತಃಕರಣಕ್ಕೆ ತಡೆಯಲಾಗಲಿಲ್ಲ!" ಎಂದು ಮರುಕ ಗೊಳ್ಳುತ್ತಾನೆ.

ಹೀಗೆ–ದೇಶ ಸೇವೆಯಲ್ಲಿ ರೋಗಿಗಳ ಶುಶ್ರೂಷೆಯಲ್ಲಿ; ಬಡವರ ಹಿತಚಿಂತನೆ ಯಲ್ಲಿ; ದುಃಖಿಗಳು–ಆರ್ತಾರನ್ನು ಸಂತೈಸುವಲ್ಲಿ; ಜ್ಞಾನದಾನದಲ್ಲಿ, ತಾನು ಉರಿದು ಇತರರಿಗೆ ಬೆಳಕನ್ನು ನೀಡುವ ದೀಪದಂತೆ, ತೊಳಗಿ ಬೆಳಗಿದ ಅಸಂಖ್ಯ ಜೀವನಕಲಾ ತರುಣರನ್ನು ಚರಿತ್ರೆಯಲ್ಲಿ ಕಂಡುಕೊಳ್ಳಬೇಕು. ಇಂದು ಮಾನವತೆ ಜೀವಂತವಾಗಿ ಉಳಿದಿದ್ದರೆ, ಅಂಥ ತ್ಯಾಗ ಜೀವಿಗಳಿಂದಲೇ ಎಂಬುದು ಸೂರ್ಯ ಪ್ರಕಾಶದಷ್ಟು ಸ್ಪಷ್ಟ ಸತ್ಯಾವಾಗಿದೆ.

ಇಂಥ ಪುಣ್ಯ ಜೀವಿಗಳ ಜೀವನ ಕಲೆಯನ್ನು ಅರಿತು, ಮನನ ಮಾಡಿ ಆರಾಧಿಸಿ– ಆಚರಿಸುವ ಸದಾಚಾರ ಸಂಪನ್ನತೆ ಬೆಳೆದು ಬಂದದಿನವೆ ಮಾನವಕುಲ ಸುಖ–ಶಾಂತಿಗಳ ಸುಗ್ಗಿಯನ್ನು ಕಾಣುತ್ತದೆ ಇದುವೇ ಜೀವನಕಲೆಯ ಗುಟ್ಟು.

CC-0. Jangamwadi Math Collection. Digitized by eGangotri

# ಕಲ್ಯಾಣ ಜ್ಯೋತಿ ಬಸವಣ್ಣನವರು

**ಶ್ರೀ. ಎಸ್: ಡಿ. ಇಂಚಲ,** ಬಿ.ಎ., ಬಿ.ಟಿ.
ಮುಖ್ಯಾಧ್ಯಾಪಕರು ಜಿ. ಎ. ಹಾಯಸ್ಕೂಲ, ಬೆಳಗಾಂವ

ಮಾನವನನ್ನು ಹೆತ್ತು ಹೊತ್ತಿರುವ ಈ ವಿಶಾಲವಾದ ಪ್ರಪಂಚವೇ ಇಂದು ಸುತ್ತಲೂ ಆವರಿಸಲ್ಪಟ್ಟ ಅಂಧಃಕಾರದ ಸುಳಿಗೆ ಸಿಕ್ಕು ದಿಕ್ಕುಗಾಣದೆ ಭ್ರಮಿಸುತ್ತದೆ. ಮತಿಹೀನವಾದ ಮೌಢ್ಯವೇ ಬಲಾಢ್ಯವಾಗುತ್ತಿರುವ, ಕ್ರೌರ್ಯವೇ ಕುಠಾರವಾಗುತ್ತಿರುವ, ಅತೃಪ್ತಿ–ಅಶಾಂತಿಗಳೇ ಆವರಿಸುತ್ತಿರುವ, ಆಶೆ–ಆಮಿಷಗಳೇ ಬೀಡು ಬಿಡುತ್ತಿರುವ, ಇಂದಿನ ವಿಚಿತ್ರವಾದ ಪ್ರಪಂಚದಲ್ಲಿ ಮಾನವನ ಗತಿ ಅಧೋಗತಿಯಾಗಿದೆ ದ್ರುತಗತಿಯಿಂದ ಸಾಗಿ ಬರುತ್ತಿರುವ ವಾಸ್ತವ ಲೋಕದ ಪ್ರಗತಿಯು ದುರ್ಗತಿಯಾಗಿ ಪರಿಣಮಿಸುತ್ತಲಿದೆ. ಅನಾದಿಯಿಂದಲೂ ರೂಡಿಗೊಂಡು ಮೂಡಿ ಬಂದ ಸಂಸ್ಕೃತಿಯ ಸಾರವನ್ನೆಲ್ಲ ಹೀರಿಕೊಂಡು ಅರಳಿದ ಇಂದಿನ ಮಾನವನು ಮುಂದೊರೆಯುವದರ ಬದಲು ಹಿಂದೆ ಸರಿಯುತ್ತಿದ್ದಾನೆ. ವಿಜ್ಞಾನದ ವಿವಿಧ ಶೋಧಗಳ ವಿದ್ಯುತ್ ಪರಿಣಾಮದಿಂದಾಗಿ ಭೌತಿಕ ಜೀವನದ ಸುಖ ಸಂಪತ್ತುಗಳಿಗೆ ಸೌಕರ್ಯಗಳು ಹೆಚ್ಚುತ್ತಿವೆಯಾದರೂ, ವಿಜ್ಞಾನ ರಾಕ್ಷಸನ ವಿಘಾತುಕವಾದ ವಿಚಿತ್ರ ಧೋರಣೆಯಿಂದ ಈ ಧಾರುಣಿಯು ಸಹಿಸಲಸಾಧ್ಯವಾದ ವಿಪತ್ತನ್ನು ಎದುರಿಸುತ್ತಿರುವದೆಂಬ ಅರಿವೂ ಕೂಡ ಪ್ರಗತಿಯ ಪತಾಕೆಯನ್ನೆತ್ತಿರುವನೆಂದೂ ಹೇಳಿಕೊಳ್ಳುತ್ತಿರುವ ಆಧುನಿಕ ಮಾನವನಿಗೆ ಇಲ್ಲದಾಗಿರುವದು ಖಂಡಿತವಾಗಿ ಶೋಚನೀಯ. ವಿಶ್ವವು ಇಂದು ವಾಸ್ತವಿಕವಾಗಿ ಎಷ್ಟೋ ಸನಿಹಕ್ಕೆ ಬಂದಿದ್ದರೂ, ಬರುತ್ತಿದ್ದರೂ ವಿಶ್ವದ ಹೃದಯದಲ್ಲಿ ಶಾಂತಿಯ ಬದಲು ಕ್ರಾಂತಿಯೇ ಹೊಗೆಯಾಡುತ್ತಿದೆ. ವಿಶ್ವ ಶಾಂತಿಯು ಬಿಸಿಲುಗುದುರೆಯಾಗಿದೆ. ವಿಶ್ವದ ಎಲ್ಲ ಹೃದಯಗಳೂ ತಿಳಿಯಾಗಿ ತೀರ ಹತ್ತಿರಕ್ಕೆ ಬರದ ವಿನಃ, ಒಂದಾಗದ ವಿನಃ, ವಿಶ್ವದಲ್ಲಿ ನೆಮ್ಮದಿ ನೆಲಿಸಲಾರದು. ಈ ಹೃದಯದ ಐಕ್ಯವನ್ನು ಸಾಧಿಸುವಂತೆ ಜಾಗತಿಕ ಜೀವನದಲ್ಲಿ ಇಂದು ಮಹತ್ತರವಾದ ಬದಲಾವಣೆಯಾಗುವದು ಅನಿವಾರ್ಯ. ಮಾನವನ ವಿಶ್ವಕುಟುಂಬದ ಕನಸು ನನಸಾಗಬೇಕಾದರೆ ಮಾನವ ಕಲ್ಯಾಣಕ್ಕೆ ಪೋಷಕವಾದ ವಿಶ್ವಬಾಂಧವ್ಯ, ವಿಶ್ವಧರ್ಮ ಸೇರ್ಪಡಬೇಕು. ಆಧುನಿಕ ಮಾನವನ ತಲೆಯಲ್ಲಿ ತುಂಬಿದ ಮೌಢ್ಯವನ್ನು ತೊಲಗಿಸುವ 'ಕರುಣಾಳು ಬೆಳಕು' ಇಂದು ನಮ್ಮ ಜೀವನದಲ್ಲಿ ತುಳುಕಿ ಬರಬೇಕಾಗಿದೆ. ಬಸವ ಜಯಂತಿ ಈ ಶುಭ ಸಂದರ್ಭದಲ್ಲಿ ಮಹಾನುಭಾವರಾದ ಬಸವಣ್ಣನವರು ಎಂಟುನೂರು ವರ್ಷಗಳ ಹಿಂದೆಯೇ ಉದಾತ್ತವಾದ ಬಾಳನ್ನು ಬದುಕಿ ಜನತೆಯನ್ನು ಬದುಕಿಸಿ

CC-0. Jangamwadi Math Collection. Digitized by eGangotri

ವಿಶ್ವ ಬಾಂಧವ್ಯವನ್ನು ದಿವ್ಯವಾದ ಜೀವನದ ಆದರ್ಶವನ್ನು ಎತ್ತಿ ತೋರಿಸಿದ್ದಾರೆಂಬುವದನ್ನು ನಾವಿಂದು ಮತ್ತೊಮ್ಮೆ ತಿಳಿದುಕೊಳ್ಳಬೇಕಾಗಿದೆ. ಅವರ ಸಂದೇಶವನ್ನು ಕಿವಿಯಿಟ್ಟು ಕೇಳಬೇಕಾಗಿದೆ. ಅವರು ಕಟ್ಟಿತೋರಿಸಿದ ಇಂದಿಗೂ ಆದರ್ಶವಾಗಬಹುದಾದ ನವಸಮಾಜದ ರೂಪರೇಷೆಗಳನ್ನು ಅವಲೋಕಿಸಬೇಕಾಗಿದೆ. ಮಾನವ ಕಲ್ಯಾಣವನ್ನು ಸಾಧಿಸಲು ಆಜನ್ಮ ಹೋರಾಡಿದ ಜಾಗತಿಕ ಮಹಾನುಭಾವರ ದಿವ್ಯ ಮಾಲಿಕೆಯಲ್ಲಿ ಕನ್ನಡ ನಾಡಿನ ಪುಣ್ಯನಗರವಾಗಿದ್ದ ಕಲ್ಯಾಣದ ಬಸವಣ್ಣನವರೂ ಒಬ್ಬರಾಗಿದ್ದಾರೆ. ಅವರು ಬಿಟ್ಟ ಬೆಳಕು ದಿಗಂತದಲ್ಲಿ ಮಿಂಚುತ್ತಿದೆ. ಅದು ನಮಗಿಂದು ದಾರಿ ದೀಪವಾಗಬೇಕು. ಇದೀಗ ನಮ್ಮ ಬಲವಾದ ಆಶೆ.

ಮಾನವ ಕುಲದೀಪರಾದ ಬಸವಣ್ಣನವರ ಉಜ್ವಲವಾದ ಬದುಕಿನಲ್ಲಿ ಲೌಕಿಕ ಮತ್ತು ಅಲೌಕಿಕ ಸಂಪತ್ತುಗಳೆರಡೂ ಸಮರಸವಾಗಿದ್ದುವೆಂಬ ಸಂಗತಿಯು ಮಹತ್ತರವಾದದ್ದು. ಅವರ ದಿವ್ಯದೃಷ್ಟಿಯಲ್ಲಿ ಇಹಪರಗಳೆರಡೂ ಪರಸ್ಪರ ವಿರೋಧವಾಗಿರದೆ ಒಂದಕ್ಕೊಂದು ಪೋಷಕವಾಗಿದ್ದವು. ಅವರು ಏರಿಹೋದ ಆ ಆಧ್ಯಾತ್ಮದ ದಿವ್ಯಧಾಮಕ್ಕೆ ಈಜಗದ ಬದುಕೇ ಸತ್ಯಸೋಪಾನವಾಯಿತು. "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ; ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ" ಎಂಬ ಅವರ ಅಮರವಾದ ದಿವ್ಯ ವಾಣಿಯಲ್ಲಿ ಮಾನವನ ಜೀವನವು ಅವನ ಆಧ್ಯಾತ್ಮ ಜೀವನಕ್ಕೆ ಹೇಗೆ ಆಧಾರವಾಗಿದೆಯೆಂಬ ತತ್ವವನ್ನು ನಿಚ್ಚಳವಾಗಿ ಕಾಣಬಹುದಾಗಿದೆ. ಮನಷ್ಯನು 'ಇಲ್ಲಿ ಸಲ್ಲುವಂತೆ' ಸುಗಮವಾದ, ಸುಂದರವಾದ ಸರಳವಾದ ಶುಚಿಯಾದ ಬಾಳನ್ನು ಬದುಕಬೇಕು. ಬಾಳಿನ ಒಂದೊಂದು ಕಣದಲ್ಲಿ, ಒಂದೊಂದು ಚಣದಲ್ಲಿ ಈ ಬಗೆಯಾದ ಉದಾತ್ತ ಜೀವನವು ಅರಳಿ, ಪರಿಮಳಿಸಿ ಬರಬೇಕು. ಅವನ ನಡೆ ನುಡಿಯಲ್ಲಿ ವೃತ್ತಿ ಪ್ರವೃತ್ತಿಗಳಲ್ಲಿ, ಎಲ್ಲವೂ ಸುವಾಸನೆಯಾಗಿ, ಸುಂವೃತ್ತಿಯಾಗಿ, ಸುಸಂಸ್ಕೃತವಾಗಿ ಹೊರಹೊಮ್ಮಬೇಕು. ಅಂಥ ಶರಣನ ಸಾಧು ಜೀವನದಲ್ಲಿ ಕಾಣುವದೆಲ್ಲವೂ ಪರಮಾತ್ಮನ ಪ್ರತಿರೂಪವು.

"ಕೆರೆ ಹಳ್ಳ ಭಾವಿಗಳು ಮೈದೆರೆದರೆ ಗೊಳ್ಳೆಗೊರಜೆ ಚಿಪ್ಪುಗಳು ಕಾಣಬಹುದು;
ವಾರಿಧಿ ಮೈದೆಗೆದರೆ ರತ್ನಂಗಳು ಕಾಣಬಹುದು! ಕೂಡಲ ಸಂಗನ ಶರಣರು
ಮನದೆರೆದು ಮಾತನಾಡಿದರೆ ಲಿಂಗವೇ ಕಾಣಬಹುದು"

ಹೀಗೆಯೇ ಜೀವನದ ಒಂದೊಂದು ಉಸಿರಿನಲ್ಲಿ ಮಹಾನುಭಾವತೆಯ ದಿವ್ಯ ದರ್ಶನವನ್ನು ಬಸವಣ್ಣನವರ ಬದುಕಿನಲ್ಲಿ ಕಾಣಬಹುದು. ಅವರ ನುಡಿ

CC-0. Jangamwadi Math Collection. Digitized by eGangotri

ಅವರ ಋಷಿ ಜೀವನಕ್ಕೆ ಹಿಡಿದ ಕನ್ನಡಿಯಾಗಿದೆ. ಅನುಭಾವದ ಅವ್ಯಕ್ತರಸದಿಂದ ಬಳುಕುತ್ತದೆ. ಅವರ ಒಂದೊಂದು ಮಾತಿನಲ್ಲಿ ಅವರ ಪ್ರಸಾದ ವಾಣಿಯೇ ಸದಾವಕಾಲವೂ ಕೇಳಿಬರುತ್ತಿದೆ. ಅವಕ್ಕೆ ನಾವಿಂದು ಕಿವಿದೆರೆಯಬೇಕು. ಅವರ ಆ ದಿವ್ಯ ಜೀವನದ ದರ್ಶನಕ್ಕೆ ನಾವಿಂದು ಕಣ್ಣು ತೆರೆಯಬೇಕು. ಆ ಘನತೆಯನ್ನೂ ಆ ಸುಂದರೋಜ್ವಲವಾದ ಶುಭ್ರಪ್ರಭೆಯನ್ನೂ ನಮ್ಮ ಮೈಮನಗಳಲ್ಲಿ ಇಂದು ತುಂಬಿಕೊಳ್ಳಬೇಕಾಗಿದೆ.

ಕೂಡಲ ಸಂಗನ ರಾಜತೇಜದಲ್ಲಿದ್ದ ಭಕ್ತರಾಜ ಬಸವಣ್ಣನವರ ವ್ಯಕ್ತಿತ್ವದ ಘನತೆ ಶುಚಿತ್ವವೇ ಘನೀಭೂತವಾದ ಗೌರೀಶಂಕರದ ಅಮೋಘವಾದ ಘನತೆ! ಅವರ ಎತ್ತರ ಬಿತ್ತರಗಳನ್ನೂ ಅಂದ ಚಂದಗಳನ್ನೂ, ವಿವಿಧತೆ ವೈವಿಧ್ಯತೆಗಳನ್ನೂ, ಕಂಡುಕೊಳ್ಳಲು ಉತ್ತುಂಗ ಸಾಹಸಪಡಬೇಕಾಗುವದು, ತಪಸ್ಸನ್ನಾಚರಿಸಬೇಕಾಗುವದು. ಹಾಗೆ ಮಾಡುವದು ಪವಿತ್ರವಾದ ಜೀವನಯಾತ್ರೆ! ಪವಿತ್ರವಾದ ಪರಿಶುದ್ಧವಾದ ಮೈಮನಗಳಿಂದ ಭಕ್ತಿಯ ಬೆಳಕಿನಲ್ಲಿ ಅದರ ಸುತ್ತಲೂ ಪ್ರದಕ್ಷಿಣೆ ಹಾಕಿ ಪರಿಪರಿಯಿಂದ ಕಾಣುವ ಆ ದಿವ್ಯ ನೋಟದಲ್ಲಿ ಕರಗಿಹೋಗಬೇಕಾಗುವದು ಅವಶ್ಯ ಮತ್ತು ಅನಿವಾರ್ಯ. ಬಸವಣ್ಣನವರ ಜೀವನ ಸಾಗರದ ಆಳದಲ್ಲಿ ಹುದುಗಿದ ಆ ಘನವಾದ, ಅನರ್ಘ್ಯವಾದ ರತ್ನಗಳನ್ನು ನೋಡಬಯಸುವವರು ಭಕ್ತಿಯಿಂದ ಅಲ್ಲಿ ಮುಣಗಹಾಕಿ ತಮ್ಮ ಆತ್ಮಶಕ್ತಿಯಿಂದ ಎತ್ತಿಕೊಂಡು ಎದೆಯ ತಟ್ಟೆಯಲ್ಲಿಟ್ಟು ತರಬೇಕಾಗುವದು. ಆಗ ಮಾತ್ರ ಬಸವಣ್ಣನವರ ದಿವ್ಯ ಜೀವನದ ನಾನಾಬಗೆಯಾದ ಬೆಳಕು ನಾನಾವರ್ಣರಂಜಿತವಾಗಿ ನಮ್ಮ ಬಗೆಗಣ್ಣಿಗೆ ಹೊಳೆಯುವದು. ಭಕ್ತಿ ಭಾಂಡಾರಿಯಾಗಿ, ಶರಣಕಿಂಕರರಾಗಿ, ಮಹಾನುಭಾವರಾಗಿ, ಶಾಂತಿದೂತರಾಗಿ, ಕ್ರಾಂತಿಕಾರರಾಗಿ, ವಿಶ್ವಧರ್ಮ ಸಂಸ್ಥಾಪಕರಾಗಿ, ಸರ್ವಾಂಗ ಸುಂದರವಾದ ಶೋಷಣೆ ರಹಿತವಾದ ಸರ್ವತಂತ್ರ ಸ್ವತಂತ್ರವಾದ ಜಾತ್ಯಾತೀತವಾದ ಶಿವಾಚಾರ ಮಂಡಿತವಾದ ನವಸಮಾಜ ರಚನೆಯ ಮೂಲ ಪ್ರವರ್ತಕರಾಗಿ, ಜೀವ ದೇವರ ಸಾಮರಸ್ಯ ಸಾಧಕರಾಗಿ, ಅಖಿಲಮಾನವ ಕಲ್ಯಾಣ ಸಾಧನೆಯ ಸುಲಭವಾದ ಮಾರ್ಗವನ್ನು ತೆರೆದು, ಆದರ್ಶವನ್ನು ಎತ್ತಿ ತೋರಿಸಿದ ನವೀನ ಧರ್ಮ ಪ್ರಚಾರಾಚಾರ್ಯರಾಗಿ, ಸತ್ಯ ಅಹಿಂಸೆಗಳನ್ನು ಅಮೂಲಾಗ್ರವಾಗಿ ಆಚರಿಸಿ ಅನುಭಾವದ ಅಮರ ಸಂದೇಶವನ್ನು ಬೀರುವ ಋಷಿ ಜೀವನವನ್ನು ಕೃಷಿಗೈದು ಸಾರಿದ ರಸ ಋಷಿಯಾಗಿ, ಮಾನವ ಕಲ್ಯಾಣ ಕ್ಷೇಮಕ್ಕೆ ರಕ್ಷಾಮಣಿಯಾಗಿ, ನಿತ್ಯನೂತನವಾದ ಬದುಕನ್ನು ಬಾಳಿದ ದಿವ್ಯ ಮಾನವರಾಗಿ......ಹೀಗೆ ಅನಂತ ಮುಖವಾಗಿ, ಬಸವಣ್ಣನವರ ಬಾಳಿನ ಘನತೆ ಘನೀಭೂತವಾದ ಅನುಭಾವದ ರಸಗಟ್ಟಿಯಾಗಿದೆ. ಹಸಿರು ಹುಲ್ಲಿನ ಗರಿಯನ್ನಲಂಕರಿಸಿದ ಮಂಜಿನ ಹನಿಯಲ್ಲಿ

CC-0. Jangamwadi Math Collection. Digitized by eGangotri

ವಿಶ್ವದ ವಿಶಾಲ ಚಿತ್ರವು ಕನ್ನಡಿಸಲ್ಪಡುವಂತೆ ಬಸವಣ್ಣನವರ ಒಂದೊಂದು ವಚನವು ಅವರ ಭವ್ಯ ಜೀವನವನ್ನು ಪ್ರದರ್ಶಿಸುವ ಸ್ಫಟಿಕಮಣಿಯಾಗಿದೆ.

ಬಸವಣ್ಣನವರ ಜೀವನವೆಂದರೆ ಒಂದು ಮಹಾಕ್ರಾಂತಿಯ ಜೀವನ. ಅದರ ಸಮಗ್ರ ಮಂಥನದಿಂದ ಹುಟ್ಟಿದುದು ಶಾಂತಿಯ ನವನೀತ. ಮಾನವನ ಸುಖಧ ಹೃದಯವಾದ ಈ ಮಹಾಶಾಂತಿಯನ್ನು ಸಾಧಿಸುವದೇ ಅವರ ಬದುಕಿನ ಗುರಿಯಾಗಿತ್ತು. ಮಾನವನನ್ನು ಮಹಾದೇವನನ್ನಾಗಿಸುವ ದಿವ್ಯ ಮಾರ್ಗವನ್ನು ತೆರೆಯುವದಾಗಿತ್ತು. ಅನ್ಯಾಯವನ್ನು ಎದುರಿಸಿ ನ್ಯಾಯವನ್ನು ಸ್ಥಾಪಿಸುವದಾಗಿತ್ತು. ಅಧರ್ಮವನ್ನು ಹೊಡೆದೋಡಿಸಿ ಸತ್ಯಧರ್ಮವನ್ನು ಸಾಧಿಸುವದಾಗಿತ್ತು. ಅತೃಪ್ತಿಯನ್ನು ಸೋಲಿಸಿ, ಸಂತೃಪ್ತಿಯನ್ನು ಸೂಸುವದಾಗಿತ್ತು. ಅನೇಕ ರಂಗಗಳಲ್ಲಿ ನಡೆದುಕೊಂಡು ಬರುತ್ತಿದ್ದ ಸನಾತನವಾದ ಡಾಂಭಿಕಾಚಾರಗಳನ್ನೂ, ಮತಮತಗಳ ಮೌಢ್ಯಭಾವನೆಗಳನ್ನೂ, ಕರ್ಮಕಾಂಡವನ್ನೇ ನಂಬಿದ ಕರ್ಮಠರ ಕುರುಡುತನವನ್ನೂ ಹೋಗಲಾಡಿಸಿ, ಜನಸಾಮಾನ್ಯರ ಹೃದಯದಲ್ಲಿ ಒಂದು ಅತುಲವಾದ ನಂಬುಗೆಯನ್ನು ಹುಟ್ಟಿಸಿ ಸಾತ್ವಿಕವಾದ ಸಾಧನಮಾರ್ಗಗಳನ್ನು ಬೋಧಿಸಿ, ಬಹುಸಂಖ್ಯಾಕರಾದ ಗತಿಹೀನರಾದ ಅವರನ್ನು ಸದ್ಧರ್ಮಸಿದ್ಧಿಯ ಹಾದಿಗೊಯ್ಯುವ ಘನವಾದ ಸಾಹಸವೇ, ಮಾನವ ಕಾರುಣ್ಯವೇ ಮೈದಾಳಿದಂತಾಗಿದ್ದ ಬಸವಣ್ಣನವರ ಜೀವನವು ಕ್ರಾಂತಿಮುಖವಾಗಬೇಕಾಯಿತು. ಅವರ ಜೀವನವೇ ಸನಾತನ ನೂತನಗಳ ನಡುವೆ ನಡೆದ ತುಮುಲ ಹೋರಾಟವೆಂದರೂ ಸಲ್ಲುವದು.

೧೨ ನೆಯ ಶತಮಾನದಲ್ಲಿದ್ದ ಕನ್ನಡ ನಾಡಿನ ವಾತಾವರಣವನ್ನು ಅವಲೋಕಿಸಿದರೆ ಬಸವಣ್ಣನವರ ಕ್ರಾಂತಿ ಜೀವನದ ಹಿನ್ನೆಲೆಯು ಗೋಚರಿಸುವದು. ಅವರು ಮುಟ್ಟಬೇಕೆಂದ ಗುರಿಯ ಸಾಧ್ಯಾಸಾಧ್ಯತೆಯ ಅರಿವು ನಮಗಾಗುವದು. ದೇಶದಲ್ಲಿ ನೆಮ್ಮದಿ ಇಲ್ಲವಾಗಿ, ಕಷ್ಟಕಾರ್ಪಣ್ಯಗಳು, ಅತೃಪ್ತಿ ಅನ್ಯಾಯಗಳು, ಕುರುಡು ಆಚಾರಗಳು, ನಗ್ನನೃತ್ಯದಲ್ಲಿ ತೊಡಗಿದ್ದವು. ಕಾರುಣ್ಯನಿಧಿಯಾದ ಬಸವಣ್ಣನವರು ಇದೆಲ್ಲವನ್ನು ನೋಡಿದರು; ಮರುಗಿದರು. ಬಾಲ್ಯದಲ್ಲಿಯೇ ಕ್ರಾಂತಿ ಪತಾಕೆಯನ್ನು ಎತ್ತಿದರು. ಮೊಳಕೆಯಲ್ಲಿಯೇ ಬೆಳೆಯ ಸಿರಿಯನ್ನು ಕಾಣುವಂತೆ ಬಸವಣ್ಣನ ಬಾಲ್ಯದಲ್ಲಿಯೇ ಅವರ ಭಾವೀ ಜೀವನದಲ್ಲಿ ಸಾಧಿಸಿದ ಅಸಾಧ್ಯವಾದ ಕ್ರಾಂತಿಯನ್ನು ಮುಂಗಾಣಬಹುದು. ಹಡೆದ ತಂದೆ ತಾಯಿಗಳನ್ನು ತೊರೆದು ಬಂದು, ಸತ್ಯಸಾಕ್ಷಾತ್ಕಾರಕ್ಕಾಗಿ ಒಂದು ತತ್ವ ಸಾಧನೆಗಾಗಿ ದಂಗೆಯೇಳುವದೆಂದರೆ ಅದೇನು ಸಾಮಾನ್ಯವಲ್ಲ. ಅದು ಬಸವಣ್ಣನವರ ಜಾಗ್ರತವಾದ ಪೂರ್ವಸಂಸ್ಕಾರವೆಂದೇ ಊಹಿಸಬಹುದು. ಅವರ ಬಾಲ್ಯ ಜೀವನವು ಅವರ ಭವ್ಯ

CC-0. Jangamwadi Math Collection. Digitized by eGangotri

ಸಾಧನೆಯ ಭರವಸೆಯನ್ನು ನೀಡುವಂತಿದೆ. "ಕರ್ಮಲತೆಯಂತಿರ್ದ ಜನ್ನಿವಾರವಂ ಕಳೆದು ಬಿಸುಟ" ತಂದೆಯ ಮನೆಯನ್ನು ತೊರೆದು, ತಾಯಿಯ ಪ್ರೇಮವನ್ನು ಮರೆದು, ಜಗದ ತಂದೆತಾಯಿಯಾದ ಕೂಡಲಸಂಗನ ಕರುಣೆಯ ಕಂದನಾಗಿ ಅವನ 'ಮಹಾಮನೆ'ಯನ್ನು ಸೇರಿದನು. ಧರ್ಮದಾನಿ ಬುದ್ಧನಂತೆ ಸಾಧನೆಯನ್ನು ಮಾಡಿ, ಬೋಧೆಯನ್ನು ಪಡೆದು ಸಿದ್ಧಿಯನ್ನು ಸಾಧಿಸಿದರು. ಕರಣಿಕನ ವೃತ್ತಿಯಿಂದ ಆರಂಭಮಾಡಿ ಮಂತ್ರಿಪದವಿ ಸೇರಿದರು. ರಾಜಮನ್ನಣೆ ಲೋಕ-ಮನ್ನಣೆಗೆ ಪಾತ್ರರಾದರು. "ನ್ಯಾಯ ನಿಷ್ಟುರಿ, ದಾಕ್ಷಿಣ್ಯಪರನು ನಾನಲ್ಲ; ಲೋಕ ವಿರೋಧಿ ಶರಣನು ಯಾರಿಗೂ ಅಂಜುವನಲ್ಲ; ಕೂಡಲಸಂಗಮದೇವರ ರಾಜ ತೇಜದಲ್ಲಿಪ್ಪನಾಗಿ" ಎಂದು ಸತ್ಯ ನಿಷ್ಟುರರಾಗಿ ತತ್ವನಿಷ್ಟರಾಗಿ ಉಜ್ವಲವಾದ ಜೀವನ ವನ್ನು ಜೀವಿಸಿದರು. ಏನು ಮಾಡಿದರೂ ಶಿವನ ಸೇವೆಯೆಂದೂ, ಏನನ್ನುಗಳಿ-ಸಿದರೂ ಜಂಗಮ ದಾಸೋಹಕ್ಕೆಂದೂ, ಏನನ್ನು ಪಡೆದರೂ ಅದೆಲ್ಲವೂ ಅವನ ದೆಂದೂ ಧೃಡವಾಗಿ ನಂಬಿದರು. "ನಾನು ಆರಂಭ ಮಾಡುವೆನಯ್ಯಾ ಗುರು ಪೂಜೆಗೆಂದು, ನಾನು ಬೆವಹಾರ ಮಾಡುವೆನಯ್ಯಾ ಲಿಂಗಾರ್ಚನೆಗೆಂದು, ನಾನು ಪರಸೇವೆ ಮಾಡುವೆನಯ್ಯಾ ಜಂಗಮದಾಸೋಹಕ್ಕೆಂದು ನಾನಾವಾವ ಕರ್ಮಂಗಳ ಮಾಡಿದರೆಯೂ ಆ ಕರ್ಮಫಲಭೋಗವ ನೀ ಕೊಡುವೆಯೆಂಬುದು ನಾ ಬಲ್ಲೆನು. ನೀಕೊಟ್ಟ ದ್ರವ್ಯ ನಿಮಗಲ್ಲದೆ ಮತ್ತೊಂದ ಕ್ರೀಯ ಮಾಡೆನು; ನಿಮ್ಮ ಸೊಮ್ಮಿಂಗೆ ಸಲಿಸುವೆನು, ನಿಮ್ಮಾಣೆ, ಕೂಡಲಸಂಗಮದೇವಾ" ಎಂದು ತಮ್ಮ ತನುಮನಧನ ಗಳನ್ನು ಗುರುಲಿಂಗ ಜಂಗಮಕ್ಕೆ ಸಲಿಸಿ ಭಕ್ತಿಭಾಂಡಾರಿಯಾದರು. ಸಮಾಜದಲ್ಲಿ ನವಶಕ್ತಿಯನ್ನು ತುಂಬಿದರು. ಇದೆಲ್ಲವೂ ಬಸವಣ್ಣನವರ ಕ್ರಾಂತಿಜೀವನದ ದೃಶ್ಯ.

ತಾವುಕಂಡ ಸತ್ಯಮಾರ್ಗವನ್ನು ಅಜ್ಞಾನದಲ್ಲಿ ದುಃಖಿಸುತ್ತಿರುವ ಜನ-ಸಾಮಾನ್ಯರಾದ ಅಣ್ಣತಮ್ಮಂದಿರಿಗೆ ಅಕ್ಕತಂಗಿಯರಿಗೆ ಅಭೇದಬಾವದಿಂದ ಬೋಧಿ-ಸುವ ಮಹಾಕಾರ್ಯಕ್ಕೆ ಕೈ-ಹಾಕಿದರು. 'ಸಕಲ ಜೀವಾತ್ಮರಿಗೆ ಲೇಸನೇ ಬಯ ಸುವದು' ಅವರ ಅಮರ ಧ್ಯೇಯ. ಅದನ್ನು ಸಾಧಿಸಲು ಪ್ರಾಪಂಚಿಕರಾದರು. ಜನ ಜಂಗುಳಿಯ ಮಧ್ಯದಲ್ಲಿಯೇ ಉಳಿದರು. ಸಂಸಾರ ಹೂಡಿದರು. ಸಂಸಾರ ದಿಂದ ಓಡಿಹೋಗದೆ ಸಂಸಾರದಲ್ಲಿಯೇ ಇದ್ದು, ಸಂಸಾರದಿಂದಲೇ ಸದ್ಗತಿಯೆಂದು ನಡೆದು ತೋರಿಸಿದರು. ಸಾಮಾನ್ಯ ಮಾನವನು ತನ್ನ ಭಕ್ತಿಯಿಂದ ಸಾಧನೆ ಮಾಡಿ ಸಿದ್ಧಿಪಡೆದು ದೇವತ್ವಕ್ಕೇರಿದ ಉದಾಹರಣೆಯನ್ನು ಬಸವಣ್ಣನವರ ಜೀವನ ದಲ್ಲಿ ಕಾಣುತ್ತೇವೆ. ಇದು ಅತ್ಯಂತ ಮಹತ್ವದ ಮಾತು. ಮಾನವನ ಉದ್ಧಾರ ವನ್ನು ಮಾನವನೇ ಮಾಡಿಕೊಳ್ಳಬೇಕಲ್ಲದೆ ಇನ್ನಾರೂ ಅಲ್ಲ ಎಂಬುದು ಅವರ ತತ್ವ. ಇದು ನಿತ್ಯ ನೂತನವಾದ ತತ್ವ. ಇದು ಇಂದಿನ ನಮಗೆ ದಾರಿ ದೀಪವಾಗ ಬೇಕಾಗಿದೆ. 'ತನ್ನ ಅರಿವೇ ತನ್ನ ಗುರು' ಎಂಬುದು ಅತಿಮುಖ್ಯ. "ಲೋಕದ

CC-0. Jangamwadi Math Collection. Digitized by eGangotri

ಡೊಂಕವನ್ನೇಕೆ ತಿದ್ದುವಿರಿ, ನಿಮ್ಮ ಮನವ ಸಂತಯಿಸಿಕೊಳ್ಳಿ, ನಿಮ್ಮ ತನುವ ಸಂತಯಿಸಿಕೊಳ್ಳಿ" ಎಂದು ಬಸವಣ್ಣನು ಕಳಕಳಿಯಿಂದ ಬಿನ್ನವಿಸಿವರು. ಅದಕ್ಕಾಗಿ ಒಂದು ವಿಶಾಲವಾದ ತತ್ವದ ತಳಹದಿಯ ಮೇಲೆ ವಿಶ್ವ ಧರ್ಮವನ್ನು ಬೋಧಿಸಲು ಮುಂದೆ ಬಂದರು. ನೈಜ ಧರ್ಮದ ಹೃದಯವಾದ ನೀತಿಗೆ ಹೆಚ್ಚಿನ ಮಹತ್ವವನ್ನು ಕೊಟ್ಟರು. "ದಯವಿಲ್ಲದ ಧರ್ಮವಾವುದಯ್ಯಾ? ದಯವೇ ಬೇಕು ಸಕಲ ಪ್ರಾಣಿಗಳಲ್ಲಿ. ದಯವೇ ಧರ್ಮದ ಮೂಲವಯ್ಯಾ!" ಎಂದು ಧರ್ಮದ ಹೃದಯವನ್ನು ತೆರೆದು ತೋರಿಸಿದರು. ನೈತಿಕ ಬಲದಿಂದಲೇ ಬಾಳಿನ ರೀತಿ ಸುಗಮವಾಗುವದೆಂದು ನಿಜವಾದ ನೀತಿಮಾರ್ಗವನ್ನು ಅತ್ಯಂತ ಸುಲಭವಾದ ರೀತಿಯಲ್ಲಿ ಹೇಳಿದರು.

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ; ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ; ತನ್ನ ಬಣ್ಣಿಸಬೇಡ, ಇದಿರು ಹಳಿಯಲು ಬೇಡ. ಇದೇ ಅಂತರಂಗ ಶುದ್ಧಿ. ಇದೇ ಬಹಿರಂಗ ಶುದ್ಧಿ. ಇದೇ ನಮ್ಮ ಕೂಡಲ ಸಂಗಮದೇವರನೊಲಿಸುವ ಪರಿ." ಎಂದು ದೇವಕಾರುಣ್ಯವನ್ನು, ಗಳಿಸುವ ಅತ್ಯಂತ ಸುಲಭ ಮಾರ್ಗವನ್ನು ತೋರಿಸಿದರು.

"ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿ ಭೋ! ಸತ್ಯನ ನುಡಿವುದೇ ದೇವಲೋಕ! ಮಿಥ್ಯವ ನುಡಿವುದೇ ಮರ್ತ್ಯಲೋಕ! ಆಚಾರವೇ ಸ್ವರ್ಗ! ಅನಾಚಾರವೇ ನರಕ!" ಎಂದು ದೇವಲೋಕವನ್ನು ಮಾನವ ಲೋಕದಲ್ಲಿಯೇ ಕಂಡರು, ಕಾಣಲು ಭೋಧಿಸಿದರು.

ಸ್ವಾತಂತ್ರ್ಯ ಸಮಾನತೆಗಳ ತಳಹದಿಯ ಮೇಲೆ ವಿಶ್ವಬಂಧುತ್ವವನ್ನು ವಿಶಾಲವಾದ ರೀತಿಯಲ್ಲಿ ಪ್ರಸ್ಥಾಪಿಸಲು ಹೆಣಗಿದ ಬಸವಣ್ಣನವರು ಮಾನವ ಧರ್ಮಕ್ಕೆ ನೀತಿಯೇ ನೆಲಗಟ್ಟು ಎಂದರುಹಿ ನೈತಿಕ ಬಲವನ್ನು ಹೆಚ್ಚಿಸಿಕೊಂಡು ಆತ್ಮ ಶ್ರೀಯನ್ನು ಬೆಳಗಿಕೊಳ್ಳಬೇಕೆಂದು ಒಳ್ಳೆ ಮಾರ್ಮಿಕವಾಗಿ ಹೇಳಿದರು. "ಎನ್ನ ನಡೆಯೊಂದು ಪರಿ, ಎನ್ನ ನುಡಿಯೊಂದು ಪರಿ; ಎನ್ನೊಳಗೆ ಶುದ್ಧವಿಲ್ಲ ನೋಡಯ್ಯಾ.! ನುಡಿಗೆ ತಕ್ಕ ನಡೆಯ ಕಂಡೊಡೆ ಕೂಡಲ ಸಂಗಮ ದೇವನೊಳಗಿಪ್ಪನಯ್ಯಾ" ಎಂದು ನಡೆ ನುಡಿಗಳ ಮೇಲೆ ನೀತಿಯನ್ನೂ ಜಾತಿಯನ್ನೂ ನಿರ್ಣಯಿಸಲು ಭೋಧಿಸಿದರು. 'ಮಾತಿನಂತೆ ಮನವಿಲ್ಲದ ಜಾತಿ ಡೊಂಬರ'ನ್ನು ಕಟುವಾಗಿ ಟೀಕಿಸಿ, ನುಡಿದಂತೆ ನಡೆಯಬೇಕೆಂದು ಒತ್ತಿ ಹೇಳಿದರು. "ಕೊಲುವನೆ ಮಾದಿಗ. ಹೊಲಸು ತಿಂಬುವವನೇ ಹೊಲೆಯ. ಕುಲವೇನೋ ಆವಂದಿರ? ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜ"ರೆಂದು ಹೇಳಿ ಸಕಲ ಪ್ರಾಣಿಕೋಟಿಯ ಕಲ್ಯಾಣವನ್ನು ಸಾಧಿಸಲು ಬೋಧಿಸಿದರು. ಸ್ನೇಹಪರವಾದ ಸಹಾನುಭೂತಿಯುತವಾದ

CC-0. Jangamwadi Math Collection. Digitized by eGangotri

ಈ ಧೋರಣೆಯೇ ಮಾನವೀಯತೆಯ ಲಕ್ಷಣವು. ಮಾನವ ಸೇವೆಯೇ ಮಹಾ ದೇವನ ಸೇವೆಯೆಂಬ ಭಾವದಿಂದ ಸೇವಾವೃತ್ತಿಯನ್ನು ಕೈಕೊಂಡರು. ಬಿಜ್ಜಳನ ರಾಜ್ಯದಲ್ಲಿ ಮುಖ್ಯ ಮಂತ್ರಿಯ ಉಚ್ಚತಮ ಅಧಿಕಾರ ತಮ್ಮ ಕೈಯಲ್ಲಿದ್ದರೂ ಗರ್ವಪಡದೆ ತನಗಿಂತ ಕಿರಿಯರಿಲ್ಲೆಂದು ತಮ್ಮ ಹಿರಿಯತನವನ್ನು ತೋರಿಸಿ ವಿನಯಶೀಲರಾಗಿದ್ದರು. ಸದುವಿನಯವೇ ಸದಾಶಿವನ ಒಲುಮೆಯೆಂದು ನಂಬಿ ನಡೆದರು

ಆಗ ಅಣ್ಣನ ಮನೆ ಮಹಾಮನೆಯಾಯಿತು, ಅನುಭಾವದ ನಿಲಯವಾಯಿತು. ಆತ್ಮಾನುಭೂತಿಯ ಆಧ್ಯಾತ್ಮಕೇಂದ್ರವಾಯಿತು. ಕಲ್ಯಾಣವೆಂಬ ಪ್ರಣತಿಯಲ್ಲಿ ಬಸವಣ್ಣನ ಆತ್ಮ ಜ್ಯೋತಿಯು ಪರಂಜ್ಯೋತಿಯಾಗಿ ಇಹಪರಗಳನ್ನು ಬೆಳಗಿತು. ನಾಡಿನ ಮೂಲೆ ಮೂಲೆಗಳಿಂದ ಶರಣರನ್ನು ಆಕರ್ಷಿಸಿತು. ಕಲ್ಯಾಣದಲ್ಲಿ ಶಿವಾನು ಭವಿಗಳ ಸಂಗೋಷ್ಠಿಗೆ ಮೊದಲಾಯಿತು. ಅನುಭವ ಮಂಟಪದ ಶೂನ್ಯ ಸಿಂಹಾ-ಸನದ ಹೃದಯದಿಂದ ಅನುಭಾವದ ಹಾಲು-ಹೊಳೆ ನಾಡಿಗೆಲ್ಲ ಹರಿದು ಬರು-ವಂತಾಯಿತು. ಧಾರ್ಮಿಕ ಈ ಭವ್ಯವಾದ ಕ್ರಾಂತಿಗೆ ಬಸವಣ್ಣನವರೇ ಯುಗ ಪ್ರವರ್ತಕರಾಗಿ, ಸಹಸ್ರ ಬಾಹುಗಳಿಂದ ನಾಡನ್ನೇ ಎತ್ತಿ ಹಿಡಿದು ಪವಾಡ ಪುರುಷ ರೆಂದು ಮೆರೆದರು. ಸಮಾಜದ ವಿಚಾರ ದೃಷ್ಟಿಯಲ್ಲಿ ನವಕ್ರಾಂತಿಯನ್ನುಂಟು ಮಾಡಿದರು.

ನವೋನವವಾದ ಅಂದಿನ ಆ ಧರ್ಮ ಜಾಗ್ರತಿಯ ದಿವ್ಯ ತಳಹದಿಯ ಮೇಲೆ ನವಸಮಾಜವು ರೂಪಗೊಂಡಿತು. ಅದುವೇ ಬಸವಣ್ಣನವರು ಸಾಧಿಸಿದ ಸಾಮಾ ಜಿಕ ಕ್ರಾಂತಿ. ಈ ಧಾರ್ಮಿಕ ಪುನರುಜ್ಜೀವನದ ಕನ್ನಡಿಯಲ್ಲಿ ಸರ್ವೋದಯ ಸಮಾಜದ ಸುಂದರ ಚಿತ್ರ ಕಾಣಬರುತ್ತದೆ. ಅಂದು ರಚನೆಗೊಂಡ ಆ ಬಸವ ಸಮಾಜದ ರೂಪುರೇಷೆಗಳು ಇಂದಿಗೂ ಸರ್ವಮಾನ್ಯವಾಗಿವೆಯೆಂದು ಹೇಳಿದರೆ ಅದು ಕೇವಲ ಹೆಮ್ಮೆಗಾಗಿ ಆಡಿದ ಮಾತಲ್ಲ ಸತ್ಯವನ್ನು ಸಮರ್ಥಿಸುವ ನೈಜ-ನುಡಿಯು! ವ್ಯಕ್ತಿಗಿಂತ ಸಮಾಜ ದೊಡ್ಡದೆಂಬ ಭಾವ ಬಲಗೊಂಡಿತು. ತಾನು ಸಮಾಜಕ್ಕಾಗಿ ಸಮಾಜ ತನಗಾಗಿ ಎಂಬ ನೀತಿ ಜನಸಾಮಾನ್ಯರ ನಡೆನುಡಿಯಲ್ಲಿ ರೂಪುಗೊಂಡಿತು. ಇದುವೇ ಸರ್ವೋದಯ ಸಮಾಜದ ಮೊದಲ ಸೂತ್ರ. 'ಕಾಗೆ ಒಂದಗುಳ ಕಂಡರ ಕರೆಯದೇ ತನ್ನ ಬಳಗವೆಲ್ಲವ? ಕೋಳಿ ಒಂದು ಗುಟುಕು ಕಂಡರೆ ಕರೆಯದೆ ತನ್ನ ಕುಲವನೆಲ್ಲವ?' ಎಂಬ ವಚನದಲ್ಲಿ ಬಸವಣ್ಣನವರು ಸಮಾಜದ ಸಮತಾನೀತಿಯನ್ನು ತೋರಿಸಿದ್ದಾರೆ. ಸಮಾಜದ ಉತ್ಕರ್ಷಕ್ಕಾಗಿ ವ್ಯಕ್ತಿಯು ತನ್ನ ಸ್ವಾರ್ಥವನ್ನು ಬಿಟ್ಟುಕೊಡಬೇಕು. ತನ್ನ ಜೀವನದ ಉದಾತ್ತ ಕಾಣಿಕೆಯನ್ನು ವ್ಯಕ್ತಿಯು, ಸಮಾಜಕ್ಕೆ ಸಲ್ಲಿಸಬೇಕು. ಅಂದರೆ ಸಮಾಜದಲ್ಲಿ

CC-0. Jangamwadi Math Collection. Digitized by eGangotri

ಸಮನಾದ ಆರ್ಥಿಕ ವ್ಯವಸ್ಥೆಯುಂಟಾಗಿ ಶಾಂತಿ ಸಂತೃಪ್ತಿಗಳು ಜನಜೀವನದಲ್ಲಿ ನೆಲೆಗೊಳ್ಳುವವು. ಬಸವಣ್ಣನದು ಅಂಥ ಆದರ್ಶ ಸಮಾಜವಾಗಿತ್ತು. ಅಲ್ಲಿ ಸಣ್ಣತನವಿಲ್ಲ, ಶೋಷಣೆಯಿಲ್ಲ, ಗುಣಕ್ಕೆ ಗೌರವಕೊಡುವ, ನೀತಿಗೆ ಪ್ರಾಧಾನ್ಯ-ವಿರುವ ಸಹಕಾರ ಸಹಾನುಭೂತಿಗಳಿಗೆ ಅಗ್ರಸ್ಥಾನವಿರುವ ಅಣ್ಣನ ಸಮಾಜವು ವಿಶ್ವ ವಿಶಾಲವಾಗಿತ್ತು. ಸರ್ವರಿಗೂ ಸಮಾನ ಹಕ್ಕುಂಟು. ಜನ್ಮಸಿದ್ಧ ಹಕ್ಕುಗಳಿಗೆ ಅಲ್ಲಿ ಸ್ಥಾನವಿರಲಿಲ್ಲ. ಮಾನ ಮರ್ಯಾದೆಗಳು ನಡೆನುಡಿಗಳಿಂದ ಲಭಿಸುವಂಥವು. ಕಾಯಕವೇ ಕೈಲಾಸವೆಂಬ ಕಾಯಕ ನೀತಿಯನ್ನು ಬೋಧಿಸಿದ ಅಣ್ಣನ ಸಮಾಜ ದಲ್ಲಿ ದುಡಿಯದವನಿಗೆ ಪಡೆಯುವದಕ್ಕೆ ಎಡೆಯಿದ್ದಿಲ್ಲವೆಂಬುದು ಅತ್ಯಂತ ಮುಖ್ಯ ವಾದುದು. ಗುರುವಾದರೂ ಕಾಯಕ ನಿರತನಾಗಬೇಕೆಂಬ ಕಟ್ಟು ಇತ್ತು. ಮಾನವ ಸಹಜವಾದ ಹಕ್ಕುಗಳನ್ನು ಸಮಾಜದಲ್ಲಿ ಕೇವಲ ಕೆಲವರು ಮಾತ್ರ ಅನುಭವಿಸಿದರೆ ಅಲ್ಲಿ ವೈಷಮ್ಯ ತಪ್ಪದು. ಘರ್ಷಣೆ ತಪ್ಪದು. ಮೇಲು ಕೀಳು, ಜಾತಿ ವಿಜಾತಿ, ಅನೀತಿ ಅನ್ಯಾಯ ಮೊದಲಾದ ಭೇದಭಾವಗಳು ಸಮಾಜದಲ್ಲಿ ತೊಲಗಿ, ಅದು ಸತ್ಯಪ್ರೇಮ, ಭಕ್ತಿ, ತಿಳುವಳಿಕೆ, ಸಹಕಾರ ಮತ್ತು ಸಹಾನುಭೂತಿಗಳಿಂದ ನಿರಾಡಂಬರವಾದ ಬದುಕಾಗಿ ಸಮಾಜ ಜೀವನದಲ್ಲಿ ಮೂಡಿ ಬರುವಂತೆ ಬಸವಣ್ಣ ನವರು ಎಚ್ಚರಿಕೆ ವಹಿಸಿದ್ದರು. ಅವರ ಈ ಆದರ್ಶ ದೃಷ್ಟಿಗೆ ನಾವಿಂದು ಅಚ್ಚರಿ ಪಡುವಂತಾಗಿದೆ.

"ತನುಮನ ಬಳಲದೆ ಉದ್ದಂಡ ವೃತ್ತಿಯಲ್ಲಿ ಧನವ ಗಳಿಸಿ ದಾಸೋಹವ ಮಾಡಿ ಭಕ್ತರಾದೆವೆಂಬುವರ ಮುಖವ ತೋರಿಸದಿರಯ್ಯಾ ಎನಗೆ" ಎಂದು ಬಸವಣ್ಣನವರು ಖಂಡತುಂಡಾಗಿ ಪ್ರತಿಭಟಿಸಿ ಸಮಾಜದಲ್ಲಿ ಶೋಷಕರ ಹುಟ್ಟಡಗಿ ಸಿದರು. ಪರಿಶುದ್ಧವಾದ ಕಾಯಕದಿಂದ ಗಳಿಸಿದ ಧನ ಪವಿತ್ರವಾಗುವದು. ಅದರ ಬಳಕೆ ಸಾರ್ಥಕವಾಗುವದು. ''ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದು'' ಎಂದು ನಿಷ್ಠುರವಾಗಿ ಖಂಡಿಸಿದರು. ಹೀಗೆ ಮರೆಮೋಸ, ಪಾಪ ಕೋಪ, ಅಧಿಕಾರ ಅಹಂಕಾರಗಳಿಂದ ಧನವನ್ನು ಗಳಿಸಿ ಬದುಕನ್ನು ನಡೆಯಿಸಿ ಸಮಾಜ ಕಂಟಕರಾಗಿ ಬದುಕುವದು ಪರಮ ಪಾತಕವೆಂದು ಗಂಡೆದೆಯಿಂದ ಹೇಳಿದರು. ಆದರಿಂದ ಕಾಯಕ ನೀತಿ ಮೇಲಾಯಿತು. ಮೋಳಿಗೆಯ ಮಾರಯ್ಯ, ನುಲಿಯ ಚಂದಯ್ಯ, ಡೋಹರ ಕಕ್ಕಯ್ಯ, ಮಾದರ ಚನ್ನಯ್ಯ ಮೊದಲಾದ ಶಿವಶರಣರು ಸಮಾಜದಲ್ಲಿ ಗಣ್ಯರಾಗಿ ಸಮಾನ ಗೌರವಕ್ಕೆ ಪಾತ್ರರಾಗಿದ್ದರು. ಉದ್ಯೋಗ ವ್ಯವಸಾಯಗಳಿಂದ ಜಾತಿಯನ್ನು ನಿರ್ಣಯಿಸದೆ ಅವರ ನೀತಿಯಿಂದ ನಿರ್ಣಯಿ ಸಿದರು. "ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ ....ಇದು ಕಾರಣ....ಲಿಂಗಸ್ಥಲವನರಿದವನೆ ಕುಲಜನು '' ಎಂದು ಎಚ್ಚರಿಸಿ– 'ಜಾತಿ ವಿಡಿದು ಸೂತಕವನರಿಸುವರೇ, ಜ್ಯೋತಿ ವಿಡಿದು ಕತ್ತಲೆಯನರಸುವರೇ'

CC-0. Jangamwadi Math Collection. Digitized by eGangotri

ಎಂದು ಕಳವಳಪಟ್ಟರು. "ಕುಲಕ್ಕೆ ತಿಲಕ ನಮ್ಮ ಮಾದರ ಚನ್ನಯ್ಯ, ಕೂಡಲ ಸಂಗಮದೇವಾ, ನಿಮ್ಮಿಂದ ಅಧಿಕ" ಎಂಬ ಬಸವಣ್ಣನವರ ಉದ್ಗಾರವು ಅವರ ನೈತಿಕ ದೃಷ್ಟಿಯನ್ನೂ ಜಾತ್ಯಾತೀತ ಭಾವನೆಯನ್ನೂ ವಿಶ್ವಬಂಧುತ್ವದ ನಿಲವನ್ನು ತೋರಿಸುವದು. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಈ ನೀತಿಯ ತಳಹದಿಯ ಮೇಲೆ ಅಂತರ ಜಾತಿಯ ವಿವಾಹವನ್ನು ಮಾಡಿ ಹೊಸ ಸಮಾಜದ ಕ್ರಾಂತಿ ಪತಾಕೆಯನ್ನು ಎತ್ತಿದರು. ಇಂಥ ನೀತಿ ಬಂಧುರವಾದ ಸರ್ವ ಸುಂದರವಾದ ಒಂದು ಸಮಾಜವನ್ನು ನಿರ್ಮಿಸಲು ಬಸವಣ್ಣನವರು ಎಂಟು ನೂರ ವರ್ಷಗಳ ಹಿಂದೆಯೇ ಹವಣಿಸಿದ್ದು ಅದರ ಅದ್ಭುತವಾದ ದೂರದೃಷ್ಟಿಗೂ ಮಾನವ ಪ್ರೇಮಕ್ಕೂ ಸಾಕ್ಷಿಯಾಗಿದೆ. ಅವರ ಆದರ್ಶವೇ ಇಂದಿನ ನಮ್ಮ ನವ ಭಾರತದ ಹೊಸ ಸಮಾಜ ನಿರ್ಮಾಣದ ಅಂದರೆ ಸರ್ವೋದಯ ಸಮಾಜದ ಆದರ್ಶವಾಗಿದೆ. ಇದು ಬಸವಣ್ಣನವರ ವಿಶ್ವವಿಶಾಲವಾದ ಧರ್ಮ ದೃಷ್ಟಿಯ ನಿತ್ಯ ನೂತನತೆಯನ್ನು ಸಾರುವಂತಿದೆ. ಇಂದು ಆದರ್ಶವನ್ನು ಆಚರಣೆಗೆ ಇಳಿಸಿ ನವಸಮಾಜದ ಅಸ್ತಿಭಾರವನ್ನು ಹಾಕುವದರಿಂದಲೇ ನಮ್ಮ ಇಂದಿನ ಕಲ್ಯಾಣ ರಾಜ್ಯದ ಕನಸು ನನಸಾಗಬಲ್ಲದು. ಎಚ್ಚತ್ತ ಭಾರತವು ಬಸವಣ್ಣನವರ ಈ ಆದರ್ಶವನ್ನು ಜಾಗ್ರತೆಯಿಂದ ಅವಲೋಕಿಸಿ ಅಳವಡಿಸಿಕೊಳ್ಳುವದು. ಅತ್ಯಂತ ಆವಶ್ಯವೆಂದು ಹೇಳಬೇಕಾಗಿಲ್ಲ.

ಹೀಗೆ ನವಯುಗದ 'ಪ್ರೇರಕ ಶಕ್ತಿಯಾದ' ಬಸವಣ್ಣನವರ ತತ್ವಗಳು ನಿತ್ಯನೂತನವಾಗಿ ಎಂದೆಂದೂ ಹೊಂದಿಕೊಳ್ಳುವವೆಂಬುದನ್ನು ನಾವಿಂದು ಗ್ರಹಿಸಬೇಕಾಗಿದೆ. ಭಕ್ತಿ, ಜ್ಞಾನ, ವೈರಾಗ್ಯಗಳ ಸುಗಮ ಶಕ್ತಿಯಾಗಿದ್ದ ಅವರು ಕೂಡಲ ಸಂಗನ ಕರುಣೆಯ ಕಂದರಾಗಿ ಬಾಳಿ ಕರುಣೆಯ ಕಡಲಾದ ತಮ್ಮ ಅನುಭವ ಸಂಪತ್ತನ್ನು ವಚನಗಳ ರೂಪದಿಂದ ಬಿಟ್ಟು ಹೋಗಿದ್ದಾರೆ. ವಚನ ವಾಙ್ಮಯದ ಅನಂತಾಕಾಶದಲ್ಲಿ ಅನುಭಾವದ ಭಾನುವಿನಂತೆ ಬೆಳಗುತ್ತಿದ್ದಾರೆ.

"ಭಕ್ತಿಯೆಂಬ ಪೃಥ್ವಿಯಮೇಲೆ ಗುರುವೆಂಬ ಬೀಜವಂಕುರಿಸಿ,
ಲಿಂಗವೆಂಬ ಎಲೆಯಾಯಿತ್ತು,
ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹೂವಾಗಿತ್ತು;
ಆಚಾರವೆಂಬ ಕಾಯಾಗಿತ್ತು;
ನಿಷ್ಪತ್ತಿಯೆಂಬ ಹಣ್ಣಾಯಿತು, ನಿಷ್ಪತ್ತಿಯೆಂಬ ಹಣ್ಣು ತೊಟ್ಟು
ಬಿಟ್ಟು ಕಳಚಿ ಬೀಳುವಲ್ಲಿ ಕೂಡಲ ಸಂಗಮ ದೇವ ತನಗೆ
ಬೇಕೆಂದು ಎತ್ತಿಕೊಂಡ."

ಭಕ್ತಿಭಾಂಡಾರಿ ಬಸವಣ್ಣನವರ ದಿವ್ಯ ಘನತೆಯ ಭವ್ಯದರ್ಶನವಿದು. ಭಕ್ತಿಯ

CC-0. Jangamwadi Math Collection. Digitized by eGangotri

ಪ್ರತೀಕವಾದ ವ್ಯಕ್ತಿತ್ವ ಕ್ರಮೇಣವಾಗಿ ರೂಪಗೊಂಡು ಲಿಂಗಾಂಗ ಸಾಮರಸ್ಯದ ಸಾಫಲ್ಯವನ್ನು ಸಂಧಿಸಿದ ಕ್ರಮ ಇಲ್ಲಿ ಕಂಡುಬರುವಂತಿದೆ. ಅವರ ಕಾಯವೇ ದಿವ್ಯ ದಂಡಿಗೆಯಾಗಿ, ಶಿರವೇ ಸೋರೆಯಾಗಿ, ನರವೇ ತಂತಿಯಾಗಿ. ಬೆರಳೇ ಕಡ್ಡಿಯಾಗಿದೆ, ಕೂಡಲ ಸಂಗನೇ ಒಲುಮೆಯ ವೈಣಿಕನಾಗಿ ಮಿಡಿಯಲು ಸೂಸಿದ ಬಸವಣ್ಣನ ಮಂಗಳಮಯವಾದ ಜೀವನದ ಉಸಿರೇ ಸತ್ಯ ಸಂಗೀತವಾಗಿ ಅಂದಿನಿಂದ ಇಂದಿನವರೆಗೆ ವಿಶ್ವವನ್ನು ತುಂಬುತ್ತಿದೆ. ಬಸವಣ್ಣನವರ ಆ ಮಧುರ ಜೀವನ ದಿವ್ಯ ಸಂದೇಶದ ಸಾನಂದ ಸಂಗೀತದ ಮಂಗಳ ಪ್ರವಾಹದಲ್ಲಿ ಇಂದಿನವರಾದ ನಾವು ನಮ್ಮ ಮೈಮನಗಳನ್ನು ತೇಲಿಸಿ ಪಾವನಗೊಳಿಸೋಣ. ಆಧ್ಯಾತ್ಮ ರಂಜಿತವಾದ ಭಾರತೀಯ ಸಂಸ್ಕೃತಿಯ ಸವಿಗಣ್ಣಿನಂತಿದ್ದ ಬಸವಣ್ಣನವರ ಬದುಕು ಭಾರತದ ಭಾವೀ ಜನ ಜೀವನದಲ್ಲಿ ಮತ್ತೊಮ್ಮೆ ಮೂಡಿ ಬಂದು ಅರಳಿನಿಂದು ಅದರ ಪರಿಮಳವು ವಿಶ್ವ ಹೃದಯವನ್ನು ತಣಿಸುವಂತಾಗಲೆಂದು ಹಾರೈಸೋಣ.



CC-0. Jangamwadi Math Collection. Digitized by eGangotri

# ಲಿಂ. ಹಾವೇರಿ ಶ್ರೀಗಳವರ ಶಿಷ್ಯಸಂಪತ್ತು

## ( ಅನುಗ್ರಹ-ಅಧಿಕಾರ ಹೊಂದಿದವರು )

೧. ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳವರು, ಮೂರುಸಾವಿರಮಠ, ಹುಬ್ಬಳ್ಳಿ.
೨. ಶ್ರೀ. ನಿ. ಪ್ರ. ಸಿದ್ಧಬಸವ ಮಹಾಸ್ವಾಮಿಗಳವರು, ಜಡೇ
೩. ,, ರುದ್ರಮುನಿ ಸ್ವಾಮಿಗಳವರು, ಕಪನಳ್ಳಿ ಆಶ್ರಮ
೪. ,, ಶಿವಮೂರ್ತಿಸ್ವಾಮಿಗಳವರು, ಕಲಬುರ್ಗಿಮಠ ಹುಬ್ಬಳ್ಳಿ
೫. ,, ಶಿವಮೂರ್ತಿಸ್ವಾಮಿಗಳು ಚರಂತಿಮಠ, ಬಾಗಲಕೋಟೆ
೬. ,, ಕಲ್ಯಾಣದ ಜಡೇ ಶ್ರೀಗಳವರು
೭. ,, ಗುರುಮೂರ್ತಿಸ್ವಾಮಿಗಳು ಕುಮಾರಮಠ, ಅಥಣಿ
೮. ,, ಅಪ್ಪಯ್ಯ ಮಹಾಸ್ವಾಮಿಗಳು ಕಲ್ಮಠ, ಸವದತ್ತಿ
೯. ,, ಮೃತ್ಯುಂಜಯ ಮಹಾಸ್ವಾಮಿಗಳವರು (ಮುಧೋಳ)
೧೦. ,, ನೀಲಲೋಚನ ಸ್ವಾಮಿಗಳು ಕೋಡಿಮಠ, ಹಾರ್ನಳ್ಳಿ
೧೧. ,, ಕುಮಾರ ಸ್ವಾಮಿಗಳು ಕಲ್ಮಠ, ಸವದತ್ತಿ

## ( ಅನುಗ್ರಹ ಪಡೆದವರು )

೧. ಶ್ರೀ. ನಿ. ಪ್ರ. ಬಸವಲಿಂಗ ಸ್ವಾಮಿಗಳವರು, ನವಿಲಗುಂದ
೨. ,, ಚನ್ನಬಸವ ಮಹಾಸ್ವಾಮಿಗಳವರು, ಕೊಪ್ಪದಾಶ್ರಮ
೩. ,, ಶಿವಲಿಂಗ ಸ್ವಾಮಿಗಳವರು ಹುಕ್ಕೇರಿಮಠ, ಹಾವೇರಿ
೪. ,, ನೀಲಕಂಠ ಸ್ವಾಮಿಗಳವರು, ಕಡಕೋಳ
೫. ,, ನಿರಂಜನ ದೇಶಿಕರು
೬. ,, ಕೆಂಚಬಸವ ಶಿವಾಚಾರ್ಯರು, ಹಿರೇಮಠ ಕಲಬುರ್ಗಿ
೭. ಶ್ರೀ. ಮ. ಚ. ಶಂಬುಲಿಂಗ ಶಿವಾಚಾರ್ಯರು ಟೆಂಗಿನಮಠ, ಮೊರಬ
೮. ,, ಶಾಂತವೀರ ಪಟ್ಟಾಧ್ಯಕ್ಷರು ಹಿರೇಮಠ, ಸಿಂದಗಿ
೯. ,, ನಿಜಗುಣ ಪಟ್ಟಾಧ್ಯಕ್ಷರು, ಗೊಗ್ಗಿಹಳ್ಳಿ ಸಂಸ್ಥಾನಮಠ
೧೦. ಶ್ರೀ ಚನ್ನಬಸಯ್ಯಾ ಮಾಸ್ತರ, ಹಿರೇಮಠ ಜೇಕಿನಕಟ್ಟಿ
೧೧. ಲಿಂ. ಬಸವಲಿಂಗ ಶಾಸ್ತ್ರಿಗಳು, ದ್ಯಾವಾಪೂರ
೧೨. ,, ಚನ್ನವೀರ ಶಾಸ್ತ್ರಿಗಳು ಹಿಡ್ಕಿಮಠ, ಗದಗ
೧೩. ,, ಬಸವಲಿಂಗಯ್ಯನವರು ಶಿವಪ್ಪಯ್ಯನಮಠ, ಸತ್ತಿಗೇರಿ

CC-0. Jangamwadi Math Collection. Digitized by eGangotri

೧೪. ಶ್ರೀ ಚಂದ್ರಶೇಖರ ಶಾಸ್ತ್ರಿಗಳು, ಘತ್ರದಹೆಳ್ಳಿ
೧೫. ,, ಗುರಸಂಗಯ್ಯ ಹಿರೇಮಠ, ಬೈಲಹೊಂಗಲ
೧೬. ,, ಶಿವಯೋಗಪ್ಪನವರು ಕರಜಗಿಶೆಟ್ರು, ಗದಗ
೧೭. ,, ಹಾಲಪ್ಪಶೆಟ್ರು, ಷಿಕಾರಿಪೂರ
೧೮. ,, ಹೊನ್ನಶೆಟ್ರು, ಷಿಕಾರಿಪೂರ
೧೯. ,, ವೀರಯ್ಯನವರು ಮರೋಳ

## ಲಿಂ| ಶಿವಬಸವ ಪ್ರಕಾಶ ಸ್ಮಾರಕ-ಗ್ರಂಥ ಪ್ರಕಟನೆಗೆ ಸಹಾಯ ಸಲ್ಲಿಸಿದ ಮಹಾ ಪೋಷಕರು, ಪೋಷಕರು ಮತ್ತು ಸಹಾಯಕರು

| | | |
|---|---|---|
| ೧. | ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮೂರುಸಾವಿರಮಠ, ಹುಬ್ಬಳ್ಳಿ | ೨೦೧—೦೦ |
| ೨. | ,, ಮನ್ಮಮಹಾರಾಜ ನಿರಂಜನ ಜಗದ್ಗುರು ಶ್ರೀ ತೋಂಟ-ದಾರ್ಯ ಮಹಾ ಸ್ವಾಮಿಗಳವರು, ತೋಂಟದಾರ್ಯಮಠ ಗದಗ | ೧೦೧—೦೦ |
| ೩. | ,, ಮನ್ಮಮಹಾರಾಜ ನಿರಂಜನ ಜಗದ್ಗುರು ಶ್ರೀ ಸಚ್ಚಿದಾನಂದ | ೧೦೧—೦೦ |
| | ಮಹಾಸ್ವಾಮಿಗಳವರು ಆನಂದಪುರಂ | ೧೦೧—೦೦ |
| ೪. | ಶ್ರೀ ನಿ. ಪ್ರ. ಅನ್ನದಾನ ಮಹಾಸಾಮಿಗಳವರು ಹಾಳಕೇರಿ | ೧೦೧—೦೦ |
| ೫. | ,, ಬಸವಲಿಂಗ ಮಹಾಸ್ವಾಮಿಗಳವರು ನವಿಲಗುಂದ | ೧೦೧—೦೦ |
| ೬. | ,, ಸದಾಶಿವ ಮಹಾಸ್ವಾಮಿಗಳು ಹಾನಗಲ್ಲ | ೧೦೧—೦೦ |
| ೭. | ,, ಚನ್ನಬಸವ ಮಹಾಸ್ವಾಮಿಗಳವರು ಕೊಪ್ಪದಾಶ್ರಮ | ೧೦೧—೦೦ |
| ೮. | ,, ಶಿವಲಿಂಗ ಸ್ವಾಮಿಗಳವರು ಹುಕ್ಕೇರಿಮಠ ಹಾವೇರಿ | ೧೦೧—೦೦ |
| ೯. | ,, ಮೃತ್ಯುಂಜಯ ಮಹಾಸಾಮಿಗಳವರು ಕಿರೀಟಮಠ ಸೊಲ್ಲಾಪೂರ | ೧೦೧—೦೦ |
| ೧೦. | ,, ಶಿವಮೂರ್ತಿ ಸ್ವಾಮಿಗಳವರು ಕಲಬುರ್ಗಿಮಠ ಹುಬ್ಬಳ್ಳಿ | ೧೦೧—೦೦ |
| ೧೧. | ,, ರುದ್ರಮುನಿ ಸ್ವಾಮಿಗಳವರು ಕಪನಳ್ಳಿ ಆಶ್ರಮ | ೧೦೧—೦೦ |
| ೧೨. | ,, ಸಿದ್ಧರಾಮ ಸ್ವಾಮಿಗಳವರು ಶಿವಲಿಂಗೇಶ್ವರ ಸಂಸ್ಥಾನಮಠ ಸಾವಳಗಿ | ೧೦೧—೦೦ |
| ೧೩. | ಮ. ಚ. ಶಂಭುಲಿಂಗ ಶಿವಾಚಾರ್ಯರು ಮೊರಬ | ೧೦೧—೦೦ |
| ೧೪. | ಶ್ರೀ. ವೇ| ಚನ್ನಬಸವಯ್ಯನವರು ಹಿರೇಮಠ ಜೇಕಿನಕಟ್ಟಿ | ೧೦೧—೦೦ |
| ೧೫. | ಶ್ರೀಮತಿ. ಲಕ್ಷ್ಮೀಬಾಯಿವರು ದೇಸಾಯರು ಎಡಹಳ್ಳಿ | ೧೦೧—೦೦ |
| ೧೬. | ರಾ|| ರಾ|| ಗುರಪ್ಪನವರು ಉಪ್ಪಿನ ಬೆಳಗಾಂವ | ೧೦೧—೦೦ |

CC-0. Jangamwadi Math Collection. Digitized by eGangotri

೧೭. ಶ್ರೀ ಶಿವಲಿಂಗಪ್ಪನವರು ಮೇಟಿ ಜಕ್ಕಲಿ ೧೦೧—೦೦
೧೮. ಶ್ರೀ ನಿ. ಪ್ರ. ಕುಮಾರ ಸ್ವಾಮಿಗಳು ಕಲ್ಮಠ ಸವದತ್ತಿ ಬಿದರಿ ೧೦೧—೦೦
೧೯. ಶ್ರೀ ಅಂದಾನಯ್ಯನವರು ಹಿರೇಮಠ ಇಟಗಿ ೧೦೧—೦೦
೨೦. ಶ್ರೀಮತಿ ಸಿದ್ದಮ್ಮ ಕೋಂ ಬಸೆಟ್ಟೆಪ್ಪ ಬೆಲ್ಲದ ಸಾ|| ನಿಡಗುಂದಿ ೧೦೧—೦೦
೨೧. ಶ್ರೀಮಂತ ಮಲಸರ್ಜ ದೇಸಾಯರು, ಇಟಗಿ ೧೦೧—೦೦
೨೨. ರಾ|| ರಾ|| ಪರಪ್ಪ ಚನ್ನಪ್ಪ ಜಾಬಿನ ಹುಬ್ಬಳ್ಳಿ ೧೦೧—೦೦
೨೩. ಶ್ರೀ ಮ. ಚ. ಕೆಂಚಬಸವ ಶಿವಾಚಾರ್ಯರು ಕಲಬುರ್ಗಿ ೫೧—೦೦
೨೪. ಶ್ರೀ ,, ನಿಜಗುಣ ಪಟ್ಟದ್ದೇವರು ಗೊಗ್ಗಿಹಳ್ಳಿ ೫೧—೦೦
೨೫. ಶ್ರೀ ,, ಶಾಂತವೀರ ಪಟ್ಟಾಧ್ಯಕ್ಷರು ಸಿಂದಗಿ ೨೫—೦೦
೨೬. ಶ್ರೀ. ಮ. ನಿ. ಸಿದ್ದರಾಮ ಸ್ವಾಮಿಗಳವರು ಅಂಗಲಗಿ
ಅಡವಿಸ್ವಾಮಿಮಠ ೨೫—೦೦
೨೭. ಶ್ರೀ. ನಿ. ಪ್ರ. ನೀಲಕಂಠ ಸ್ವಾಮಿಗಳು ಚವಕಿಮಠ ಕಡಕೋಳ ೨೧—೦೦
೨೮. ,, ಗುರುಸಿದ್ಧ ಸ್ವಾಮಿಗಳು ಬಣ್ಣದಮಠ ಶಿರ್ಶಿ ೫೧—೦೦
೨೯. ಶ್ರೀ ಚನಬಸಪ್ಪನವರು ಕುರುಬಗೊಂಡ ಶೆಟ್ರು ದೇವಿಹೊಸೂರ ೫೧—೦೦
೩೦. ,, ಶಿವಪ್ಪ ಮುರಿಗೆಪ್ಪ ಮತ್ತೂರ ೫೧—೦೦
೩೧. ,, ಎಸ್. ಬಿ. ಹಿರೇಮಠ ವಕೀಲರು ಹಾವೇರಿ ೫೧—೦೦
೩೨. ,, ವೀರಪ್ಪನವರು ಕೋಟಿ, ಸಿವ್ಹಿಲ್‌ಜಜ್ಜ, ಮಂಗಳೂರ ೫೧—೦೦
೩೩. ,, ಬಸೆಟ್ಟೆಪ್ಪ ಸಿದ್ಧಲಿಂಗಪ್ಪ ಗುಂಜೆಟ್ಟಿ ೫೧—೦೦
೩೪. ,, ಮಡಿವಾಳಪ್ಪನವರು ಹತ್ತಿ ಶಿವಪ್ಪನವರು ಅರಣಿ ೨೫—೦೦
೩೫. ,, ಸಿದ್ಧರಾಮಪ್ಪ ಮುಷ್ಠಿ ೨೫—೦೦
೩೬. ,, ಚನ್ನಪ್ಪನವರು ಚವಷಷ್ಠಿ ೨೫—೦೦
೩೭. ,, ಚನ್ನವೀರಪ್ಪ ಮತ್ತೂರ ಷಣ್ಮುಖಪ್ಪ ಬೆಳ್ಳಟ್ಟಿ ೨೫—೦೦
೩೮. ,, ಚನಬಸಪ್ಪ ಶಿವಪ್ಪ ಹೇರೂರ ೨೫—೦೦
೩೯. ,, ಸಿದ್ಧಪ್ಪ ಎರೇಸೀಮಿ ೧೫—೦೦
೪೦. ,, ಶಾಂತಪ್ಪನವರು ಮಾಗಾವಿ ೨೫—೦೦
೪೧. ,, ಮಾಡರ್ನ ಟೀ ಕಾಫೀ ಡಿಪೋ ೧೫—೦೦
೪೨. ,, ವಿರುಪಾಕ್ಷಯ್ಯಾ ಮಲ್ಲಿಕಾರ್ಜುನಯ್ಯಾ ಅರಕೇರಿಮಠ ೧೫—೦೦
೪೩. ,, ಶಿವಯೋಗಪ್ಪ ಮಹಾರಾಜಪೇಟೆ ೧೧—೦೦
೪೪. ,, ಕುಮಾರೇಶ್ವರ ಕಾರ್ಡಿಮಂ ಕಂಪನಿ ೧೧—೦೦
೪೫. ,, ಮುರಿಗೆಪ್ಪ ದಾವಣಗೇರಿ ೧೧—೦೦
೪೬. ,, ಫಾಲಾಕ್ಷಯ್ಯನವರು ಸಾಲಿಮಠ ೧೧—೦೦

CC-0. Jangamwadi Math Collection. Digitized by eGangotri

| | | | |
|---|---|---|---|
| ೪೭. | ಶ್ರೀ | ಎಮ್. ಕರಬಸಪ್ಪ | ೧೧—೦೦ |
| ೪೮. | ,, | ವೀರಭದ್ರಪ್ಪ ಆನೂರ | ೧೧—೦೦ |
| ೪೯. | ,, | ಪುಟ್ಟಪ್ಪ ಸಂಗನಬಸಪ್ಪ ಮಾಡ್ಯಾಳ | ೧೧—೦೦ |
| ೫೦. | ,, | ಪುಟ್ಟಪ್ಪ ವೀರಪ್ಪ ತುಪ್ಪದ | ೧೧—೦೦ |
| ೫೧. | ,, | ಶಿವಬಸವ ಕ್ಲಾಥ ಸ್ಟೋರ್ಸ | ೧೧—೦೦ |
| ೫೨. | ,, | ರಾಚಪ್ಪ ಶಿವಪ್ಪ ನಂದಿವಾಡ | ೧೧—೦೦ |
| ೫೩. | ,, | ಬಿ. ಎಸ್. ತಾಂಡೂರ | ೧೧—೦೦ |
| ೫೪. | ,, | ಬಸವರಾಜಪ್ಪನವರು ಆನೂರ ಶೆಟ್ರ | ೧೧—೦೦ |
| ೫೫. | ,, | ಮುರಿಗೆಪ್ಪ ಕಡಗಣ್ಣನವರು | ೧೧—೦೦ |
| ೫೬. | ,, | ವೀರಪ್ಪ ಹೊಗಾರ | ೧೦—೦೦ |
| ೫೭. | ,, | ಚಂಬಣ್ಣಾ ಎರೇಸೀಮಿ | ೧೦—೦೦ |
| ೫೮. | ,, | ಬಿ. ಪುಟ್ಟಪ್ಪನವರು | ೧೦—೦೦ |
| ೫೯. | ,, | ಎಚ್. ಮಹಾದೇವಪ್ಪನವರು | ೧೦—೦೦ |
| ೬೦. | ,, | ಮಲ್ಲಿಕಾರ್ಜುನಪ್ಪ ಯಾದವಾಡ | ೧೦—೦೦ |
| ೬೧. | ,, | ಸಿ. ಸಿ. ನೆರಲಗಿ ವಕೀಲರು | ೧೦—೦೦ |
| ೬೨. | ,, | ವೀರಪ್ಪನವರು ಪುರದ | ೧೦—೦೦ |
| ೬೩. | ,, | ಬಿ. ಎಸ್. ಎರೇಸೀಮಿ | ೧೦—೦೦ |
| ೬೪. | ,, | ಆರ್. ಎಸ್. ಸಂಕಣ್ಣವರ | ೧೦—೦೦ |
| ೬೫. | ,, | ಬಸಪ್ಪ ಕಬ್ಬೂರ ಬ್ಯಾಡಗಿ | ೧೦—೦೦ |
| ೬೬. | ,, | ಶರಣಪ್ಪ ಮುರಿಗೆಪ್ಪ ಅಂಕಲಕೋಟಿ | ೧೦—೦೦ |
| ೬೭. | ,, | ಅಪ್ಪಾಸಾಹೇಬ ಮಾಗಾವಿ | ೧೦—೦೦ |
| ೬೮. | ,, | ಪಿ ಎಸ್. ಮಾಗನೂರ ಆ್ಯಂಡ ಕಂಪನಿ | ೫—೦೦ |
| ೬೯. | ,, | ಗುರಶಿದ್ಧಪ್ಪ ಸಾತೇನಹಳ್ಳಿ | ೫—೦೦ |
| ೭೦. | ,, | ಚನಬಸಪ್ಪ ಯಳವತ್ತಿ | ೫—೦೦ |
| ೭೧. | ,, | ಚನಬಸಪ್ಪ ಯಲ್ಲಪ್ಪ ಅಗಡಿ | ೫—೦೦ |
| ೭೨. | ,, | ಚಂದ್ರಶೇಖರಸ್ವಾಮಿ ಪ್ರಭುಸ್ವಾಮಿ ಮಳಿಮಠ | ೫—೦೦ |
| ೭೩. | ,, | ಎಂ. ಆರ್. ವಾರದ | ೫—೦೦ |
| ೭೪. | ,, | ಭಾರತ ಪ್ರಿಂಟಿಂಗ ಪ್ರೆಸ್ | ೫—೦೦ |
| ೭೫. | ,, | ಈಶ್ವರಪ್ಪ ಬ. ಮಡಿವಾಳರ ಮ್ಯಾನೇಜರ ಪರಚೇಜ ಆ್ಯಂಡ ಸೇಲ ಯುನಿಯನ್ | ೫—೦೦ |
| ೭೬. | ,, | ರುದ್ರಪ್ಪ ಮುರನಾಳ | ೫—೦೦ |

CC-0. Jangamwadi Math Collection. Digitized by eGangotri

| | | |
|---|---|---|
| ೭೭. | ಶ್ರೀ ಶಿವಲಿಂಗಪ್ಪ ಮಾಗನೂರ | ೫—೦೦ |
| ೭೮. | ,, ಆರ್. ಕೆ. ಪಾಟೀಲ ವ ಶೇಖರಪ್ಪ ಹಿತ್ತಲಮನಿ | ೫—೦೦ |
| ೭೯. | ,, ಎಸ್. ಬಿ. ನವಿಲಗುಂದ ವಕೀಲರು | ೫—೦೦ |
| ೮೦. | ,, ವಿರಸಂಗಪ್ಪ ಅಂಕಲಕೋಟಿ | ೫—೦೦ |
| ೮೧. | ,, ನಾಗಪ್ಪ ಹೊರಡಿ | ೫—೦೦ |
| ೮೨. | ,, ಎಸ್. ಎಸ್. ಕೂಡ್ಲಪ್ಪನವರ | ೫—೦೦ |
| ೮೩. | ,, ಕರಿಯಪ್ಪ ಅಂಕಲಗಿ | ೫—೦೦ |
| ೮೪. | ;, ಶಿವಪ್ಪನವರು ಕುಂಬಾರಿ | ೫—೦೦ |
| ೮೫. | ,, ಅಡಿವೆಯ್ಯ ಇಂಚಂಗಿಮಠ ಜನತಾ ಸೋಪ ವರ್ಕ್ಸ | ೫—೦೦ |
| ೮೬ | ,, ಎಂ ಎಸ್. ಇನಾಮದಾರ ಟೀ ಮರ್ಚಂಟ | ೫—೦೦ |
| ೮೭. | ,, ಶರಣಪ್ಪ ಚನಬಸಪ್ಪ ಹುರಳಿಕೊಪ್ಪ | ೫—೦೦ |
| ೮೮. | ,, ಜಿ. ವ್ಹಿ. ನೆಲುಗಲ್ | ೫—೦೦ |
| ೮೯. | ,, ಸಿದ್ಧಲಿಂಗಪ್ಪ ಚವಷಷ್ಠಿ | ೫—೦೦ |
| ೯೦. | ,, ವೀರಪ್ಪ ಮಾಗಾವಿ | ೫—೦೦ |
| ೯೧. | ,, ನಾಗಪ್ಪ ಹೆಂದ್ರಾಳ | ೫—೦೦ |
| ೯೨. | ,, ಚನಬಸಪ್ಪ ಗೋಕಾಪಿ | ೫—೦೦ |
| ೯೩. | ,, ಎಸ್. ಎಮ್. ಹಿರೇಮಠ | ೫—೦೦ |
| ೯೪. | ,, ಮಹಾದೇವಪ್ಪ ನಾಗನೂರ ವ ಶಿವಪ್ಪ ಕಾಲವಾಡ | ೫—೦೦ |
| ೯೫ | ,, ಚನಬಸಪ್ಪ ಗದಿಗೆಪ್ಪ ಮುಕ್ತಾಲಿ | ೫—೦೦ |
| ೯೬. | ,, ಗುರುಪಾದಪ್ಪ ಬಸವಲಿಂಗಪ್ಪ ಎರೇಸೀಮಿ | ೫—೦೦ |
| ೯೭. | ,, ಗಣಪತೆಪ್ಪ ವೀರಪ್ಪ ಗುಂಡನಟ್ಟಿ | ೫—೦೦ |
| ೯೮. | ,, ಶಿವಪ್ಪ ಮಾನಪ್ಪ ತೊಂಡೇಹಾಳ | ೫—೦೦ |
| ೯೯. | ,, ಸಿ. ಸಿ. ಕೋಣನಹಳ್ಳಿ | ೫—೦೦ |
| ೧೦೦. | ,, ಅಜ್ಜಯ್ಯ ಮಟ್ಟಿಮಠ ಬ್ಯಾಡಗಿ ಅಡ್ಕಿ ಕಂಪನಿ | ೫—೦೦ |
| ೧೦೧. | ,, ಮಹಾದೇವಯ್ಯ ಹಾಲಯ್ಯನವರಮಠ | ೫—೦೦ |
| ೧೦೨. | ,, ಮಹಾಬಳೇಶ್ವರಪ್ಪ ಮುರಿಗೆಪ್ಪ ಮಾನವಿ | ೫—೦೦ |
| ೧೦೩. | ,, ಶಿವನಾಗಪ್ಪ ನಾಗಪ್ಪ ತಿಳವಳ್ಳಿ | ೫—೦೦ |
| ೧೦೪. | ,, ಸಿ. ಎಸ್. ಮುಂಡಕ್ಕಿ | ೫—೦೦ |
| ೧೦೫. | ,, ಎಸ್. ಸಿ. ತುರಮುರಿ | ೫—೦೦ |
| ೧೦೬. | ,, ಬಸಪ್ಪ ದುಂಡಪ್ಪ ತುಪ್ಪದ ಸಾ॥ ಅಕ್ಕಿಆಲೂರ | ೫—೦೦ |
| ೧೦೭. | ,, ಸಿದ್ದಪ್ಪ ಹೆಂಚಿನಮನಿ | ೫—೦೦ |

CC-0. Jangamwadi Math Collection. Digitized by eGangotri

೧೦೮. ಶ್ರೀ ಫಕೀರಪ್ಪ ಹಿರಗಣ್ಣವರ ೫—೦೦
೧೦೯. ,, ಶರಣಪ್ಪ ಬಸವಂಣೆಪ್ಪ ಕೊಳಕೋರ ೫—೦೦

### ನರಗುಂದ

೧೧೦. ,, ಫಕೀರಪ್ಪನವರು ಹೆಸಬಿ ೧೫—೦೦
೧೧೧. ,, ರಾಜಶೇಖರಪ್ಪನವರು ಹೊಸಕೇರಿ ೧೫—೦೦
೧೧೨. ,, ಮಹಾದೇವಪ್ಪನವರು ನಂದಿ ೧೫—೦೦
೧೧೩. ,, ವೀರಭದ್ರಪ್ಪನವರು ವಾಳದ ೧೫—೦೦
೧೧೪. ,, ರಾಮಣ್ಣನವರು ಗುಡಿಸಾಗರ ೧೦—೦೦
೧೧೫. ,, ಗಂಗಪ್ಪನವರು ಕೋರಿ ೧೦—೦೦
೧೧೬. ,, ರುದ್ರಪ್ಪನವರು ಗಡಾವ ೫—೦೦
೧೧೭. ,, ರಾಚಪ್ಪನವರು ಕಾಲಚಟ್ಟಿ ೫—೦೦

### ಇಟಗಿ

೧೧೮. ,, ಅಂದಾನಗೌಡ್ರು ಪೋಲೀಸಪಾಟೀಲರು ೭೫—೦೦
೧೧೯. ,, ಬಸಯ್ಯ ಗೊಡಚಯ್ಯ ಮಲ್ಲಾಪೂರ ೨೫—೦೦
೧೨೦. ,, ಅಂದಾನಯ್ಯ ಗೊಡಚಯ್ಯ ಮಲ್ಲಾಪೂರ ೧೫—೦೦
೧೨೧. ,, ಕಳಕಪ್ಪ ಸಕರಪ್ಪ ಗಾಣಿಗೇರ ೧೫—೦೦
೧೨೨. ,, ವೀರಯ್ಯನವರು ಮಲ್ಲಾಪೂರ ೧೧—೦೦
೧೨೩. ,, ಯಮುನಪ್ಪ ಅಮರಾವತಿ ೧೧—೦೦
೧೨೪. ,, ಸಂಗಪ್ಪ ನಾಗಪ್ಪ ಸಜ್ಜನರ ೧೧—೦೦
೧೨೫. ,, ವೀರಪ್ಪ ಮೋಟೆ ೧೧—೦೦
೧೨೬. ,, ಗವಿಸಿದ್ದಯ್ಯ ಸಂಗಯ್ಯ ವಸ್ತ್ರದ ೫—೦೦
೧೨೭. ,, ಚನ್ನಪ್ಪ ಬಸವಂಣೆಪ್ಪ ಆರಳಿ ೫—೦೦
೧೨೮. ,, ಬಸವಲಿಂಗಪ್ಪ ಕೂಡ್ಲೆಪ್ಪ ಮೆಣಶಿನಕಾಯಿ ೫—೦೦
೧೨೯. ,, ಶರಣಪ್ಪ ಶಿವಬಸಪ್ಪ ಅಂಗಡಿ ೨—೦೦

### ಗದಗ

೧೩೦. ,, ಸಂಗಪ್ಪನವರು ಸೂಡಿ ೫೧—೦೦
೧೩೧. ,, ಎಸ್. ಕೆ. ಮೋಟೆ ವಕೀಲರು ೨೫—೦೦
೧೩೨. ,, ರಾಜಶೇಖರ ಶಾಸ್ತ್ರಿಗಳು ಹಿರೇಮಠ ೨೫—೦೦
೧೩೩. ,, ಸಂಗಪ್ಪನವರು ಗೊಜನೂರ ೨೫—೦೦
೧೩೪. ,, ಚನಬಸಪ್ಪನವರು ಬುಳಗುಂದಿ ೨೫—೦೦

CC-0. Jangamwadi Math Collection. Digitized by eGangotri

| | | |
|---|---|---|
| ೧೩೫. | ಶ್ರೀ ದುಂಡಪ್ಪನವರು ಕಲ್ಲೊಳಗಿ ಡಾಕ್ಟರ | ೨೫—೦೦ |
| ೧೩೬. | ,, ಫಕೀರಗೌಡ್ರು ಲಕ್ಕುಂಡಿ | ೨೫—೦೦ |
| ೧೩೭. | ,, ಮಾಹಾದೇವಪ್ಪ ಅಡಿವೆಪ್ಪ ಪಲ್ಲೇದ ಹೆಂಸನೂರ ಮಾಸ್ತರ | ೨೫—೦೦ |
| ೧೩೮. | ,, ಶಿವಪ್ಪನವರು ಜುರ್ಜಾಳ | ೨೫—೦೦ |
| ೧೩೯. | ,, ಅಡಿವೆಪ್ಪನವರು ಗದ್ದಿಗವಡರ | ೨೫—೦೦ |
| ೧೪೦. | ,, ಚಂದ್ರಶೇಖರಪ್ಪನವರು ನೂರಂದಪ್ಪನವರ | ೨೫—೦೦ |
| ೧೪೧. | ,, ವೀರಭದ್ರಪ್ಪನವರು ಮುಧೋಳ | ೨೫—೦೦ |
| ೧೪೨ | ,, ಶಂಕರೆಪ್ಪನವರು ಕೊಣ್ಣೂರ | ೧೫—೦೦ |
| ೧೪೩. | ,, ವೀರಪ್ಪನವರು ಅಂಗಡಿ ಜಯಭಾರತ | ೧೫—೦೦ |
| ೧೪೪. | ,, ರಾಚಪ್ಪನವರು ಹುಣಶೀಮರದ | ೧೫—೦೦ |
| ೧೪೫. | ಶ್ರೀಮತಿ ನಾಗಮ್ಮನವರು ಸಂಸಿಮಠ | ೧೬—೦೦ |
| ೧೪೬. | ಶ್ರೀ ಶಂಕರಪ್ಪನವರು ಅಬ್ಬಿಗೇರಿ | ೧೧—೦೦ |
| ೧೪೭. | ,, ಬಸಪ್ಪನವರು ಅಬ್ಬಿಗೇರಿ | ೧೫—೦೦ |
| ೧೪೮. | ಶ್ರೀಮತಿ ರುದ್ರಮ್ಮನವರು ಹೆಂಪಸಾಗರಮಠ | ೧೧—೦೦ |
| ೧೪೯. | ಶ್ರೀ ವೀರಪ್ಪನವರು ಹೊನಗುಡಿ | ೧೦—೦೦ |
| ೧೫೦. | ,, ಸಂಗಪ್ಪನವರು ಹೆನಮುಸಾಗರ | ೧೫—೦೦ |
| ೧೫೧. | ,, ಸಂಗಪ್ಪನವರು ನಿಲುಗಲ್ಲ | ೧೧—೦೦ |
| ೧೫೨. | ,, ಅಂದಾನೆಪ್ಪ ತೋಟಪ್ಪ ಬುಳ್ಳಾ | ೧೦—೦೦ |
| ೧೫೩. | ,, ತೋಟಪ್ಪನವರು ಬುಳ್ಳಾ | ೧೧—೦೦ |
| ೧೫೪. | ,, ಚನಬಸಪ್ಪ ಮಲ್ಲಪ್ಪ ಪಟ್ಟಣಶೆಟ್ಟಿ | ೧೧—೦೦ |
| ೧೫೫. | ,, ನಿಜಗುಣೆಪ್ಪನವರು ಹೊಸಂಗಡಿ | ೧೧—೦೦ |
| ೧೫೬. | ,, ಶ್ರೀಪಾದಪ್ಪನವರು ಕಾಡಪ್ಪನವರು | ೧೧—೦೦ |
| ೧೫೭. | ,, ಬಿ. ಆರ್. ಉಮ್ಮನಾಬಾದ ಅಡತಿ ಅಂಗಡಿ | ೧೧—೦೦ |
| ೧೫೮. | ,, ಬಸಪ್ಪನವರು ಸೂಗೀರಪ್ಪನವರ | ೧೧—೦೦ |
| ೧೫೯. | ,, ಚನಬಸಪ್ಪನವರು ಮಾಳಶೆಟ್ಟರ | ೧೧—೦೦ |
| ೧೬೦. | ,, ಮಲ್ಲೇಶಪ್ಪನವರು ನಾಲವಾಡದ | ೧೧—೦೦ |
| ೧೬೧. | ,, ಫಕೀರಪ್ಪನವರು ಮಲ್ಲಾಡ | ೧೧—೦೦ |
| ೧೬೨. | ,, ರಾಚಯ್ಯನವರು ಹೀರೇಮಠ | ೬—೦೦ |
| ೧೬೩ | ,, ರುದ್ರಯ್ಯಸ್ವಾಮಿ ಮಾಳೇಕೊಪ್ಪಮಠ | ೫—೦೦ |
| ೧೬೪. | ,, ಗುರಲಿಂಗಯ್ಯನವರು ಬಾಣದಮಠ | ೫—೦೦ |
| ೧೬೫. | ,, ಕೊಟ್ರಪ್ಪನವರು ಮಳ್ಳಿ | ೫—೦೦ |

CC-0. Jangamwadi Math Collection. Digitized by eGangotri

| | | |
|---|---|---|
| ೧೬೬. | ಶ್ರೀ ಮಲ್ಲೇಶಪ್ಪ ಶಿವಪ್ಪ ಕಾಳಗಿ | ೫—೦೦ |
| ೧೬೭. | ಶ್ರೀಮತಿ ಅನ್ನಪೂರ್ಣವ್ವ ಸಂಣಮಾರಿ | ೫—೦೦ |
| ೧೬೮. | ಶ್ರೀ ತೋಟಯ್ಯನವರು ಹುಬ್ಬಳ್ಳಿಮಠ | ೫—೦೦ |
| ೧೬೯. | ಶ್ರೀಮತಿ ಗವರವ್ವ ಧನಶೆಟ್ಟಿ | ೨—೦೦ |
| ೧೭೦. | ,, ಪಾರ್ವತೆವ್ವ ಟೊಪಿಗಿ | ೩—೦೦ |
| ೧೭೧. | ಶ್ರೀ ನಾಗಪ್ಪನವರು ಲಕ್ಕುಂಡಿ | ೫—೦೦ |
| ೧೭೨. | ,, ತೋಟಪ್ಪನವರು ಮಹಾಂತಪ್ಪನವರು ನಾಲವಾಡದ | ೫—೦೦ |

## ಹುಬ್ಬಳ್ಳಿ

| | | |
|---|---|---|
| ೧೭೩. | ಶ್ರೀ ಹೆನುಮಂತಪ್ಪ ಕನ್ಯ್ಯಾಳ ವ ರಾಮಣ್ಣಾ ಜಾಧವ | ೫೧—೦೦ |
| ೧೭೪. | ,, ಅವ್ವಪ್ಪ ಉಳಿವೆಪ್ಪ ಅತ್ತಿಗೇರಿ | ೫೧—೦೦ |
| ೧೭೫. | ,, ಬಿ. ಎಸ್. ಮುನವಳ್ಳಿ | ೫೧—೦೦ |
| ೧೭೬. | ,, ವ್ಹಿ. ಸಿ. ನೂಲ್ವಿ ಆ್ಯಂಡ ಕಂಪನಿ | ೫೧—೦೦ |
| ೧೭೭. | ,, ಎಫ್. ಎಮ್. ಹೆಸಬಿ | ೫೧—೦೦ |
| ೧೭೮. | ,, ಯೋಗಪ್ಪನವರು ಬಬಲೇಶ್ವರ | ೫೧—೦೦ |
| ೧೭೯. | ,, ರಾಜಶೇಖರಯ್ಯ ಹಿರೇಮಠ ದ್ಯಾವಾಪುರ | ೫೧—೦೦ |
| ೧೮೦. | ,, ತಮ್ಮಣ್ಣನವರು ಕೌಸಾಳಿ | ೫೧—೦೦ |
| ೧೮೧. | ,, ಎಸ್. ಕವಳಿ ಆ್ಯಂಡ ಸನ್ಸ | ೫೧—೦೦ |
| ೧೮೨. | ,, ಎಸ್. ಎ. ಶಿರೂರ | ೫೧—೦೦ |
| ೧೮೩. | ,, ಜಿ. ಮಹಾದೇವಪ್ಪ ಆ್ಯಂಡ ಕಂಪನಿ | ೫೧—೦೦ |
| ೧೮೪. | ,, ಚನಬಸಪ್ಪ ಉಳಿವೆಪ್ಪ ಅಳಗವಾಡಿ | ೨೫—೦೦ |
| ೧೮೫. | ,, ರಾಚಯ್ಯನವರು ಹಿರೇಮಠ | ೨೫—೦೦ |
| ೧೮೬. | ,, ಸಂಗಪ್ಪ ಶಾಂತಪ್ಪ ನಿಲೂಗಲ್ | ೨೫—೦೦ |
| ೧೮೭. | ,, ರಾಮಪ್ಪ ಕೊಕಟಿ ಹಾಗೂ ಶಿವಣ್ಣಾ ಕುಬಸದ | ೨೫—೦೦ |
| ೧೮೮. | ,, ಬಸಪ್ಪ ಹೆಬ್ಬಳ್ಳಿ | ೨೫—೦೦ |
| ೧೮೯. | ,, ಪಂಚಪ್ಪ ದೊಡ್ಡಬಸಪ್ಪ ಯಕಲಾಸಪುರ | ೨೫—೦೦ |
| ೧೯೦. | ,, ಮಲ್ಲಪ್ಪನವರು ಶಿರೋಳ | ೨೫—೦೦ |
| ೧೯೧. | ,, ಮಲ್ಲೇಶಪ್ಪ ಮಾಕನೂರ ವ ಓಂಕಾರೆಪ್ಪ | ೨೫—೦೦ |
| ೧೯೨. | , ಆರ್. ಟಿ ಗುಡಿಸಾಗರ | ೨೫—೦೦ |
| ೧೯೩. | ,, ಎಚ್. ಬಸಪ್ಪ ಆ್ಯಂಡ ಬ್ರದರ್ಸ | ೨೫—೦೦ |
| ೧೯೪. | ,, ಗಂಗಾಧರ ಶಾಸ್ತ್ರಿಗಳು ಕಳ್ಳಿಮಠ | ೨೫—೦೦ |
| ೧೯೫. | ,, ಹಿರೇಮನಿ ಜಿಗಳೂರ ಕಂಪನಿ | ೨೫ ೦೦ |

CC-0. Jangamwadi Math Collection. Digitized by eGangotri

| | | |
|---|---|---|
| ೧೯೬. | ಶ್ರೀ ಉಳಿವೆಪ್ಪ ಅಕ್ಕಿ | ೨೫—೦೦ |
| ೧೯೭. | ,, ಜಿ. ವ್ಹಿ. ಸವಣೂರ | ೨೫—೦೦ |
| ೧೯೮. | ,, ಚನಬಸಪ್ಪ ಗುರಪ್ಪ ಐಹೊಳಿ | ೨೫—೦೦ |
| ೧೯೯. | ,, ಮಹಾರುದ್ರಪ್ಪ ಮಹಾಲಿಂಗಪ್ಪ ವಿರ್ಜಿ | ೨೫—೦೦ |
| ೨೦೦. | ,, ಸಿ. ಎಚ್. ಚಿಕ್ಕವೀರಯ್ಯನವರ | ೨೫—೦೦ |
| ೨೦೧. | ,, ಮಹಾಂತಯ್ಯನವರು ಲೂತಿಮಠ | ೨೫—೦೦ |
| ೨೦೨. | ,, ಹೊಸಮನಿ ಮತ್ತು ಕಂಪನಿ | ೨೫—೦೦ |
| ೨೦೩. | ,, ಎಸ್. ಎಸ್. ಮಾಟಲದಿನ್ನಿ ವಕೀಲರು | ೨೫—೦೦ |
| ೨೦೪. | ,, ರಾಜಾಜಿ ಶರೇಮಲ್ | ೧೫—೦೦ |
| ೨೦೫. | ,, ಕೆ. ವ್ಹಿ. ಪರದೇಶಿ | ೧೫—೦೦ |
| ೨೦೬. | ,, ಇಂಗಳಳ್ಳಿ ಕಂಪನಿ | ೧೫—೦೦ |
| ೨೦೭. | ,, ಸಾಯಿಬಾಬಾ ಟ್ರಾನ್ಸಪೋರ್ಟ ಕಂಪನಿ | ೧೫—೦೦ |
| ೨೦೮. | ,, ಹುಚ್ಚಪ್ಪನವರು ಲಕ್ಷ್ಮೇಶ್ವರ | ೧೫—೦೦ |
| ೨೦೯. | ,, ಶಿವಶಂಕರ ಗೂಡ್ಸ ಕಂಪನಿ | ೧೧—೦೦ |
| ೨೧೦. | ,, ಗುರಸಿದ್ದಪ್ಪ ವಾರಕರ | ೧೧—೦೦ |
| ೨೧೧. | ,, ಬಿ. ಎಚ್. ಮುನಿಯಪ್ಪ | ೧೦—೦೦ |
| ೨೧೨. | ,, ಸಂಗಪ್ಪ ಮಾರ್ರ್ಯಾಳ | ೫—೦೦ |
| ೨೧೩. | ,, ಸಿ. ಎಸ್. ತೆಗ್ಗಿನಮನಿ | ೫—೦೦ |

## ಹುನಗುಂದ

| | | |
|---|---|---|
| ೨೧೪. | ,, ದೊಡ್ಡಪ್ಪಣ್ಣನವರು ನಾಗರಾಳ | ೫೧—೦೦ |

## ಬಾಗಲಕೋಟ

| | | |
|---|---|---|
| ೨೧೫. | ,, ಕೆ. ಎಸ್. ಸರದೇಸಾಯಿ ರಕ್ಕಸಗಿ | ೧೦೨—೦೦ |
| ೨೧೬. | ,, ಶಿವಯೋಗಪ್ಪ ಸೋಮಲಿಂಗಪ್ಪ ಸಾಬಾದಿ | ೫೧—೦೦ |
| ೨೧೭. | ,, ಮಹಾಂತಪ್ಪನವರು ನಿಡಗುಂದಿ | ೫೧—೦೦ |
| ೨೧೮. | ,, ಸಂಗಪ್ಪನವರು ರೇವಡಿಗಾರ | ೫೧—೦೦ |
| ೨೧೯. | ,, ಗೂಳನಗೌಡ ಪಾಟೀಲ | ೫೧—೦೦ |
| ೨೨೦. | ,, ಕೆ. ಎಮ್. ಪಟ್ಟಣಶೆಟ್ಟಿ, ಆಯ್.ಎಸ್. ಮಾಸ್ತಿಹೊಳಿಮಠ | ೫೧—೦೦ |
| ೨೨೧. | ,, ಪರಪ್ಪನವರು ಪಲ್ಲೇದ | ೫೧—೦೦ |
| ೨೨೨. | ,, ದಾನಪ್ಪಂಣಾ ತಾಳೀಕೋಟಿ | ೫೧—೦೦ |
| ೨೨೩. | ,, ಬಸೆಟ್ಟೆಪ್ಪನವರು ಹಲಕುರ್ಕಿ | ೨೫—೦೦ |

CC-0. Jangamwadi Math Collection. Digitized by eGangotri

| | | |
|---|---|---|
| ೨೨೪. | ಶ್ರೀ ಬಸವರಾಜಪ್ಪನವರು ಹಾವೇರಿ | ೨೫—೦೦ |
| ೨೨೫. | ,, ನಿಂಗಪ್ಪನವರು ಹಲಕುರ್ಕಿ | ೨೫—೦೦ |
| ೨೨೬. | ,, ರುದ್ರಗೌಡ ಮಲ್ಲನಗೌಡ ಪಾಟೀಲ (ಅನಗವಾಡಿ) | ೨೫—೦೦ |
| ೨೨೭. | ,, ವಿರುಪಾಕ್ಷಪ್ಪನವರು ಸಾಸನೂರ | ೨೫—೦೦ |
| ೨೨೮. | ,, ಚನ್ನಪ್ಪನವರು ಜಿಗಳೂರ | ೨೫—೦೦ |
| ೨೨೯. | ,, ಭೀಮಪ್ಪನವರು ಕಾಖಂಡಕಿ | ೨೫—೦೦ |
| ೨೩೦. | ,, ವೆಂಕಪ್ಪಂಣಾ ಸಕ್ರಿ | ೨೫—೦೦ |
| ೨೩೧. | ,, ಶಿವಲಿಂಗಪ್ಪ ದೊಡ್ಡಲಿಂಗಪ್ಪ ನಿಡೋಣಿ ಹಾಳಕುಸುಗಲ್ಲ | ೨೫—೦೦ |
| ೨೩೨. | ,, ನಾಗಪ್ಪನವರು ಬ್ಯಾಳಿ | ೧೫—೦೦ |

SRI JAGADGURU VISHWARADHYA
JNANA SIMHASAN JNANAMANDIR
LIBRARY
Jangamawadi Math, Varanasi
Acc. No. 638

CC-0. Jangamwadi Math Collection. Digitized by eGangotri

